ಸಮಗ್ರ ದಾಸ ಸಾಹಿತ್ಯ
ಸಂಪುಟ : ೧೦
ಭಾಗ-೪

# ಶ್ರೀ ವಿಜಯದಾಸರ ಸುಳಾದಿಗಳು
## (ಸಂಕೀರ್ಣ)

*ಸಂಪಾದಕರು*
ಡಾ. ಕೆ. ಗೋಕುಲನಾಥ

ಕರ್ನಾಟಕ ಸರ್ಕಾರ
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಬೆಂಗಳೂರು

**SAMAGRA DASA SAHITYA SAMPUTA - 10 :**
Sri Vijaya Dasara Suladigalu (Sankeerna). Edited by Dr. K. Gokulnath and Published by Sri. Y. K. Muddukrishna, Director, Directorate of Kannada and Culture, Kannada Bhavana, J.C. Road, Bangalore - 560 002.

ಪುಟಗಳು : 77 + ೫೫೨


ಪ್ರಥಮ ಮುದ್ರಣ : ೨೦೦೩
ಪ್ರತಿ : ೧೨೫೦

ಬಿಡಿ ಪ್ರತಿ ಬೆಲೆ : ರೂ. ೬೦=೦೦
ಸಮಗ್ರ ಸಂಪುಟಗಳ ಬೆಲೆ : ರೂ. ೨೪೦೦=೦೦

**ಮುದ್ರಣ ನಿರ್ವಹಣೆ :**

ಮೈಸೂರು ಸೇಲ್ಸ್ ಇಂಟರ್‌ನ್ಯಾಷನಲ್ ಲಿಮಿಟೆಡ್
೩೬, ಕನ್ನಿಂಗ್‌ಹ್ಯಾಮ್ ರಸ್ತೆ
ಬೆಂಗಳೂರು – ೫೬೦ ೦೫೨.

**ಮುದ್ರಕರು :**

ಮೆ. ಡಾಟ್ಸ್
೧೨೪, ಸುಲ್ತಾನ್‌ಪೇಟೆ
ಬೆಂಗಳೂರು – ೫೬೦ ೦೫೩

# ಸಮಗ್ರ ದಾಸಸಾಹಿತ್ಯ ಪ್ರಕಟಣ ಯೋಜನೆ

# ಮುನ್ನುಡಿ

ಹರಿದಾಸ ಸಾಹಿತ್ಯ ಕನ್ನಡ ಸಂಸ್ಕೃತಿ ಪರಂಪರೆಯ ಮಹತ್ವಪೂರ್ಣ ಭಾಗವಾಗಿದೆ. ದೇಶೀಯತೆ ಹಾಗೂ ಗೇಯತೆಗಳೆರಡನ್ನೂ ಮೇಳವಿಸಿಕೊಂಡು, ಕನ್ನಡ ಸಾಹಿತ್ಯವಾಹಿನಿಗೆ ಇದು ಹೊಸತನವನ್ನು ನೀಡಿದೆ. ಮನುಜಮತ, ಸಾಹಿತ್ಯಪಥ ಹಾಗೂ ಭಕ್ತಿಸಿದ್ಧಾಂತದ ತ್ರಿವೇಣಿಯಾಗಿರುವ ಈ ಪ್ರಜಾಸಾಹಿತ್ಯವನ್ನು ಪ್ರಜೆಗಳಿಗೆ ಮುಟ್ಟಿಸುವುದು ಪ್ರಜಾಸತ್ತಾತ್ಮಕ ಸರಕಾರದ ಆದ್ಯ ಕರ್ತವ್ಯವಾಗಿದೆ.

ಕನ್ನಡ ಭಾಷಿಕಶಕ್ತಿಯ ವಿವಿಧ ಆಯಾಮಗಳನ್ನು ಸೆಳೆದು ತೋರಿರುವ ಸಾಹಿತ್ಯ–ಸಂಗೀತಗಳ ಸಾಮರಸ್ಯವನ್ನು ಮೆರೆದಿರುವ ಈ ಸಾಹಿತ್ಯ ಕನ್ನಡ ಸಾಹಿತ್ಯಕ್ಕೆ ಜಾಗತಿಕ ಮಹತ್ವವನ್ನು ತಂದುಕೊಟ್ಟಿದೆ ಎಂದರೆ ಅತಿಶಯೋಕ್ತಿಯಾಗಲಾರದು. ಮಾನವಾನುಕಂಪ, ಸಮಾಜಸುಧಾರಣೆ, ಲೋಕದ ಡೊಂಕುಗಳನ್ನು ನಗೆ ವಿಡಂಬನೆಗಳ ಮೂಲಕ ತಿದ್ದುವ ಕೌಶಲ ದಾಸಸಾಹಿತ್ಯದ ಪ್ರಮುಖ ಲಕ್ಷಣವಾಗಿದೆ.

ಆಧ್ಯಾತ್ಮಿಕ ಸಾಧನೆ, ಅನುಭವ – ಅನುಭಾವಗಳು ದಾಸಸಾಹಿತ್ಯದ ಪ್ರಮುಖ ಅಂಶವಾದರೂ, ಸುತ್ತಮುತ್ತಲಿರುವ ಜೀವನದ ಕಡೆಗೆ, ಮಾನವ ಸ್ವಭಾವದ ಕಡೆಗೆ ಕಣ್ಣು ಹರಿಸಿದ ಹರಿದಾಸರು ಸಾತ್ತ್ವಿಕ ಜೀವನ ನಿರ್ವಹಣೆಗೆ, ಮಾನವನ ಮೇಲ್ಮೆಗೆ, ನೈತಿಕ ಆಚರಣೆಗೆ ಒತ್ತು ನೀಡಿದವರು.

ಹರಿದಾಸ ಸಾಹಿತ್ಯ ಅಪಾರವಾದುದು ಹಾಗೂ ವೈವಿಧ್ಯವಾದುದು. ಈ ವಿಪುಲ ಸಾಹಿತ್ಯರಾಶಿಯನ್ನು ಒಂದೆಡೆ ಕ್ರೋಢೀಕರಿಸಿ, ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯವನ್ನು ಕನ್ನಡ ಜನತೆಗೆ ನೀಡುತ್ತಿದೆ.

ಈ ಯೋಜನೆಗೆ ದುಡಿದ ಸಂಪಾದಕ ಮಂಡಳಿಯ ಶ್ರದ್ಧೆ ಹಾಗೂ ಮಾರ್ಗದರ್ಶನವನ್ನು, ವಿವಿಧ ಸಂಪುಟಗಳ ಸಂಪಾದಕರಾಗಿ ನಾಡಿನ ಅನೇಕ ವಿದ್ವಾಂಸರು ತೋರಿರುವ ಆಸಕ್ತಿ ಹಾಗೂ ನೆರವನ್ನು ಮತ್ತು ಈ ಸಂಪುಟದ ಸಂಪಾದಕರ ಶ್ರಮವನ್ನು ಸ್ಮರಿಸುತ್ತ ಕನ್ನಡ ಜನತೆಯ ಕೈಗೆ ಈ ಮೌಲಿಕ ಪ್ರಕಟಣೆಗಳನ್ನು ಸಂತೋಷದಿಂದ ಅರ್ಪಿಸುತ್ತೇನೆ.

**ಎಸ್. ಎಂ. ಕೃಷ್ಣ**
ಮುಖ್ಯಮಂತ್ರಿಗಳು
ಕರ್ನಾಟಕ ಸರ್ಕಾರ

# ಎರಡು ಮಾತು

ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ದಾಸಸಾಹಿತ್ಯವೂ ಒಂದು. ಕರ್ನಾಟಕದ ಸಾಹಿತ್ಯ, ಸಂಗೀತ, ಸಂಸ್ಕೃತಿಗಳನ್ನು ಪ್ರಭಾವಪೂರ್ಣವಾಗಿ ಸಮೃದ್ಧಿಗೊಳಿಸಿದವರು ಹರಿದಾಸರು. ಬದುಕಿನಲ್ಲಿ ನಿಷ್ಠೆ, ಸಾಹಿತ್ಯದಲ್ಲಿ ಬದುಕಿನ ತತ್ತ್ವಗಳನ್ನು ಅಡಗಿಸಿ ಜನಸಾಮಾನ್ಯರನ್ನು ಉನ್ನತ ಜೀವನದತ್ತ ಉದ್ದೀಪಿಸುವ ಮಹಾಕಾಯಕದಲ್ಲಿ ತೊಡಗಿದವರು ಹರಿದಾಸರು. ಕನ್ನಡ ಸಾಹಿತ್ಯಕ್ಕೆ ಅಪೂರ್ವ ಕೊಡುಗೆಯಾಗಿರುವ ಹರಿದಾಸ ಸಾಹಿತ್ಯ ಸಮಾಜದ ಮೌಢ್ಯವನ್ನು ಬಯಲಿಗೆಳೆದು, ಜಾತಿ, ಮತ, ಪಂಥಗಳನ್ನು ಮೀರಿ ನಿಂತ ಮಾನವೀಯ ಮೌಲ್ಯಗಳನ್ನು ಸಾಹಿತ್ಯದ ಮೂಲಕ ಅಭಿವ್ಯಕ್ತಿಸಿತು.

ಹರಿದಾಸ ಸಾಹಿತ್ಯಕ್ಕೆ ಪ್ರೇರಣೆ ಭಕ್ತಿಯಾದರೂ, ಕರ್ನಾಟಕ ಸಂಗೀತಕ್ಕೆ ಸಮೃದ್ಧಿಯನ್ನು ನೀಡಿದವರು ಹರಿದಾಸರು. ಗ್ರಾಮ್ಯ ಮತ್ತು ದೇಶ್ಯ ಶಬ್ದಗಳಿಗೆ ಸಾಹಿತ್ಯದ ಮುದ್ರೆಯನ್ನು ಒತ್ತಿ, ಭಾಷೆಗೊಂದು ಪರಿಪಕ್ವತೆಯನ್ನು ತಂದುಕೊಟ್ಟವರು ಹರಿದಾಸರು. ಇಂಥ ಸಾಹಿತ್ಯ ಸಂಪತ್ತನ್ನು ರಕ್ಷಿಸುವುದು ಮತ್ತು ಪ್ರಸಾರ ಮಾಡುವುದು ನಮ್ಮ ಕರ್ತವ್ಯ. ಈ ದೃಷ್ಟಿಯಿಂದ ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯ ಪ್ರಕಟಣ ಯೋಜನೆಗೆ ಸಮಿತಿಯೊಂದನ್ನು ರಚಿಸಿದ್ದು, ಇದರಲ್ಲಿ ನಾಡಿನ ಅನೇಕ ವಿದ್ವಾಂಸರು ಸಂಪುಟ ಸಂಪಾದಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಈ ಸಂಪುಟಗಳು ಹೊರಬರಲು ಕಾರಣರಾದ

ಸಂಪಾದಕ ಮಂಡಳಿಯ ಸದಸ್ಯರಿಗೆ ಹಾಗೂ ಈ ಸಂಪುಟದ ಸಂಪಾದಕರಿಗೆ ನನ್ನ ಕೃತಜ್ಞತೆಗಳು.

ದಾಸರು ತಮ್ಮ ಸಾಹಿತ್ಯದಲ್ಲಿ ಸಾರ್ವಕಾಲಿಕ ಮೌಲ್ಯಗಳನ್ನು ಉಳಿಸಿ ಹೋಗಿದ್ದಾರೆ. ನಮ್ಮ ಸಾಮಾಜಿಕ ಜೀವನವನ್ನು ರೂಪಿಸುವಲ್ಲಿ ಈ ಕೀರ್ತನೆಗಳು ಮೌಲಿಕವಾದುವು. ಕನ್ನಡ ಜನತೆ ಈ ಕೃತಿಯ ಪ್ರಯೋಜನವನ್ನು ಪಡೆದರೆ ಪಟ್ಟ ಶ್ರಮ ಸಾರ್ಥಕವಾಗುತ್ತದೆ.

**ರಾಣಿ ಸತೀಶ್**

ಕನ್ನಡ ಮತ್ತು ಸಂಸ್ಕೃತಿ ಸಚಿವರು

# ಯೋಜನೆಯನ್ನು ಕುರಿತು

ಕನ್ನಡ ಸಾಹಿತ್ಯ ಚರಿತ್ರೆಯ ಸಿರಿವಂತಿಕೆಯಲ್ಲಿ ಕೀರ್ತನ ಸಾಹಿತ್ಯದ ಕೊಡುಗೆ ವಿಪುಲವಾದುದು ; ವೈಶಿಷ್ಟ್ಯಪೂರ್ಣವಾದುದು. ಈ ಸಮಗ್ರ ಸಾಹಿತ್ಯದ ಸಂಗ್ರಹ ಮತ್ತು ಪ್ರಕಾಶನದ ಕಾರ್ಯ ಪೂರ್ಣವಾಗಿ ಆಗಿರಲಿಲ್ಲ. ಇದನ್ನು ಮನಗಂಡ ಸರ್ಕಾರ ಸಮಗ್ರ ದಾಸ ಸಾಹಿತ್ಯ ಪ್ರಕಟಣೆಯ ಕಾರ್ಯವನ್ನು ಕೈಗೆತ್ತಿಕೊಂಡಿತು.

ಸುಮಾರು ಒಂದು ನೂರ ಮೂವತ್ತೊಂಬತ್ತು ಜನ ದಾಸರ ಸುಮಾರು ಹದಿನಾರು ಸಾವಿರ ಕೀರ್ತನೆಗಳ ಬೃಹತ್ ಸಾಹಿತ್ಯ ಸಾಮಗ್ರಿ ದೊರಕಿತು. ಹೀಗೆ ಸಾಂಪ್ರದಾಯಿಕ ರೀತಿಯಲ್ಲಿ ಸಂಗ್ರಹಿಸಿ, ಸಂಪಾದಿಸಿದ ಕೀರ್ತನ ಸಾಹಿತ್ಯವನ್ನು ಸಂಪುಟಗಳಲ್ಲಿ ಮುದ್ರಿಸುವುದು ಕಷ್ಟವೇನಾಗಿರಲಿಲ್ಲ. ಆದರೆ, ಅದನ್ನು ಮಾಹಿತಿ ತಂತ್ರಜ್ಞಾನದ ಇವತ್ತಿನ ಸಂದರ್ಭದಲ್ಲಿ ಬಹು ಉಪಯೋಗಿ ನೆಲೆಯಲ್ಲಿ ಬಹುಮಾಧ್ಯಮದಲ್ಲಿ ಹೊರತರಬೇಕೆಂಬ ಕನಸು ರೋಮಾಂಚಕಾರಿ ಅನುಭವವೇ ಸರಿ. ಇದನ್ನು ಕೃತಿ ರೂಪಕ್ಕಿಳಿಸುವ ಹಾದಿಯಲ್ಲಿ ಎದುರಾದ ತಾಂತ್ರಿಕ ಸವಾಲು ಬಹು ಕ್ಲಿಷ್ಟಕರವಾಗಿಯೇ ಕಂಡಿತು.

ದಿಟ, ಈ ಸಮಗ್ರ ಸಾಹಿತ್ಯವನ್ನು ಕೇವಲ ಮುದ್ರಣದಲ್ಲಷ್ಟೇ ಅಲ್ಲ ಆಯ್ದ ಕೀರ್ತನೆಗಳನ್ನು ಗಾಯನಕ್ಕೆ ಅಳವಡಿಸಿ, ಸಿಡಿ ಮತ್ತು ಅಂತರ್ಜಾಲದಲ್ಲಿ ಹೊರತರ ಬೇಕೆಂದಾಗ ಬಳಕೆದಾರರ ಅವಶ್ಯಕತೆಯನ್ನು ಆಧರಿಸಿ ತಯಾರಿಸುವ ಅಗತ್ಯ ಇತ್ತು. ಆದರೆ ಇವುಗಳಲ್ಲಿ ಕನ್ನಡ ಮತ್ತು ಇಂಗ್ಲಿಷ್ ಎರಡೂ ಭಾಷೆಗಳಲ್ಲಿ ಸರ್ಚ್ ಎಂಜಿನ್ (ಹುಡುಕುವಿಕೆ) ಇಲ್ಲದಿರುವುದು ಒಂದು ತಾಂತ್ರಿಕ ಸಮಸ್ಯೆಯೇ ಆಯಿತು.

ಈ ರೀತಿಯ ಪ್ರಯತ್ನ ಕನ್ನಡ ಭಾಷೆಯಲ್ಲಿ ಹಿಂದೆಂದೂ ಆಗದಿದ್ದುದರಿಂದ ತಂತ್ರಾಂಶವನ್ನು ಹೊಸದಾಗಿಯೇ ಅಭಿವೃದ್ಧಿ ಪಡಿಸಬೇಕಾದ ಸವಾಲನ್ನು ಕೈಗೆತ್ತಿ ಕೊಳ್ಳಲಾಯಿತು. ಇದಕ್ಕಾಗಿ ಕನ್ನಡ ಗಣಕ ಪರಿಷತ್ತು, ರಾಷ್ಟ್ರೀಯ ಮಾಹಿತಿ ಕೇಂದ್ರ (ಎನ್ಐಸಿ), ಮಾಹಿತಿ ಮತ್ತು ತಂತ್ರಜ್ಞಾನ ಇಲಾಖೆ, ಮಹಾಭಾರತ ಸಂಶೋಧನಾ ಪ್ರತಿಷ್ಠಾನ ಮುಂತಾದ ಹಲವಾರು ತಂತ್ರಾಂಶ ಸಂಸ್ಥೆಗಳೊಂದಿಗೆ ನಿರಂತರ ಸಮಾಲೋಚನೆ, ಚಿಂತನೆಗಳನ್ನು ನಡೆಸಲಾಯಿತು.

ಹೀಗೆ ಸಾಹಿತ್ಯ ಸಂಗ್ರಹ, ಸಂಪಾದನೆ, ಸಂಗೀತ ಸಂಯೋಜನೆ, ಧ್ವನಿಮುದ್ರಣ, ಬಹುಮಾಧ್ಯಮಕ್ಕೆ ಅಳವಡಿಸುವ ತಾಂತ್ರಿಕ ಕುಶಲತೆಯು ನಿರಂತರ ಕಾರ್ಯಾನುಷ್ಠಾನಕ್ಕೆ ಸಂಪಾದಕ ಮಂಡಳಿ ಸದಸ್ಯರು, ಸಂಪುಟ ಸಂಪಾದಕರು, ಇಲಾಖಾ ಅಧಿಕಾರಿಗಳು, ತಂತ್ರಜ್ಞರು, ಕೋರ್ ಸಮಿತಿ ಸದಸ್ಯರು, ಸಂಗೀತ ನಿರ್ದೇಶಕರು, ಗಾಯಕರು – ಈ ಎಲ್ಲರ ಪರಿಶ್ರಮ ಅಗಾಧವಾಗಿ ದೊರಕಿದೆ. ಈ ಶ್ರಮದ ಫಲವಾಗಿ ಬಹುಮಾಧ್ಯಮದಲ್ಲಿ ಸಮಗ್ರ ದಾಸ ಸಾಹಿತ್ಯ ಯೋಜನೆಯ ಬೃಹತ್ ಕಾರ್ಯ ಸಾಕಾರಗೊಂಡಿದೆ.

ಈ ವಿಪುಲ ಸಾಹಿತ್ಯವನ್ನು ಕನ್ನಡ ಅಕ್ಷರಜ್ಞಾನಿಗಳು ಪುಸ್ತಕ ರೂಪದಲ್ಲಿಯೂ, ಬಹುಗಾತ್ರದ ಸಾಹಿತ್ಯವನ್ನು ಕೈ ಅಳತೆಯ ಸಿಡಿ ರೂಪದಲ್ಲಿಯೂ ಈಗ ಪಡೆಯಬಹುದಾಗಿದೆ. ಅಲ್ಲದೆ, ಅಂತರ್ಜಾಲದ ಮೂಲಕ ವಿಶ್ವದ ಯಾವುದೇ ಮೂಲೆಯಲ್ಲಿರುವ ಆಸಕ್ತ ಜನತೆ ಕುಳಿತಲ್ಲಿಯೇ ಆರಾಮವಾಗಿ ವೀಕ್ಷಿಸುವ, ಕೇಳುವ ಹಾಗೂ ಕನ್ನಡ ಅಕ್ಷರ ಜ್ಞಾನವಿರದ ಭಾಷಿಕರು ಸಹಿತ ಸಂಗೀತವನ್ನು ಕೇಳಿ ಆಸ್ವಾದಿಸುವ ಅವಕಾಶವನ್ನು ಏಕಕಾಲದಲ್ಲಿ ಕಲ್ಪಿಸಲಾಗಿದೆ. ಪ್ರಕಾಶನದ ಇತಿಹಾಸದಲ್ಲಿಯೇ ದಾಖಲನೀಯವಾದ ಈ ಕಾರ್ಯ ಮುಂದೆ ಸರ್ಕಾರಿ ಸಂಸ್ಥೆಗಳಿಗಾಗಲಿ ಖಾಸಗಿ ಸಂಸ್ಥೆಗಳಿಗಾಗಲಿ ಮಾದರಿಯಾಗಬಹುದೆಂದು ನಂಬಲಾಗಿದೆ.

ನಮ್ಮ ಸಂಸ್ಕೃತಿಯನ್ನು ಬಿತ್ತರಿಸಲು ನಾಲ್ಕು ಗೋಡೆಗಳೊಳಗಿನ ರಂಗ ಮಂದಿರಗಳು, ವೇದಿಕೆಗಳು ಅಗತ್ಯವಿದೆ ದಿಟ. ಆದರೆ ಭವಿತವ್ಯದಲ್ಲಿ ವಿಶ್ವದ ಜನರನ್ನು ತಲಪಲು ಮತ್ತು ಮುಖ್ಯವಾಗಿ ಯುವಜನಾಂಗಕ್ಕೆ ನಮ್ಮ ಸಾಂಸ್ಕೃತಿಕ ಕ್ಷಿತಿಜದ ವಿಸ್ತಾರವನ್ನು ಪರಿಚಯಿಸಲು ಸೂಕ್ಷ್ಮ ಸಂವೇದನಾಶೀಲವಾದ ಸಾಹಿತ್ಯವನ್ನು ಬಹುಮಾಧ್ಯಮದಲ್ಲಿ ಅಳವಡಿಸುವುದು ಅತ್ಯಾವಶ್ಯಕ. ಈ ನಿಟ್ಟಿನಲ್ಲಿ ಇದೊಂದು ವಿನೂತನ ಪ್ರಯೋಗ; ಈ ಪ್ರಯೋಗದ ಫಲ ಎಲ್ಲರಿಗೂ ಲಭ್ಯವಾಗಲೆಂಬುದು ನಮ್ಮ ಆಶಯ.

**ಸಿ. ಎಸ್. ಕೇದಾರ್**

ಸರ್ಕಾರದ ಕಾರ್ಯದರ್ಶಿ

# ಪ್ರಕಾಶಕರ ಮಾತು

ಕರ್ನಾಟಕದ ಧಾರ್ಮಿಕ, ಸಾಂಸ್ಕೃತಿಕ ಇತಿಹಾಸದಲ್ಲಿ ಹರಿದಾಸರ ಸ್ಥಾನ ವಿಶಿಷ್ಟವಾದದ್ದು. ಸಾವಿರಾರು ವರ್ಷಗಳಿಂದ ಭಾರತದಲ್ಲಿ ಅವಿರತವಾಗಿ ಹರಿದುಬಂದ ಜೀವನಮೌಲ್ಯಗಳನ್ನು ಜನಸಾಮಾನ್ಯರ ಆಡುಭಾಷೆಯಲ್ಲಿ ಮುಟ್ಟಿಸಿ, ಲೌಕಿಕ ವಿಡಂಬನೆಯ ಮೂಲಕ ಅವರ ಮಾನಸಿಕ ವಿಕಾಸವನ್ನು ಯಶಸ್ವಿಯಾಗಿ ಸಾಧಿಸಿದವರು ಹರಿದಾಸರು. ಪಾಂಡಿತ್ಯ, ಲೋಕಾನುಭವಗಳ ಹಿನ್ನೆಲೆಯಿಂದಾಗಿ, ಆಡುಭಾಷೆಯ ಸೊಗಡಿನಿಂದಾಗಿ ಇವರು ಹಾಡಿದ್ದೆಲ್ಲ ಸಾಹಿತ್ಯವಾಯಿತು, ಕಾವ್ಯವಾಯಿತು, ಕೇಳುಗರನ್ನು ಸೆರೆಹಿಡಿಯಿತು. ಗೇಯಗುಣವುಳ್ಳ, ನೃತ್ಯಕ್ಕೆ ಅಳವಡುವ, ಛಂದೋಬದ್ಧವಾದ, ಜನತೆಯ ಮಧ್ಯದಲ್ಲಿಯೇ ಸಂದರ್ಭಾನುಸಾರ ಹುಟ್ಟಿದ ಹರಿದಾಸ ಸಾಹಿತ್ಯ ವೈಶಿಷ್ಟ್ಯಪೂರ್ಣವೆನಿಸಿತು. ಕನ್ನಡ ವಾಙ್ಮಯದಲ್ಲಿ ದಾಸಸಾಹಿತ್ಯ ಒಂದು ವಿಶೇಷ ಸ್ಥಾನ ಪಡೆಯಿತು. ಹೀಗೆ ಸಾಹಿತ್ಯ, ಸಂಗೀತ ಮತ್ತು ಸಾಮಾಜಿಕ ಕ್ಷೇತ್ರಕ್ಕೆ ದಾಸಸಾಹಿತ್ಯದ ಕೊಡುಗೆ ಗಣನೀಯವಾದುದು.

ಸುಮಾರು ನೂರಮುವ್ವತ್ತೊಂಬತ್ತು ಜನ ದಾಸರು ಆಗಿಹೋಗಿದ್ದು, ಅವರ ಕೀರ್ತನೆಗಳ ಸಂಖ್ಯೆ ಸುಮಾರು ಹದಿನಾರು ಸಾವಿರಕ್ಕೂ ಅಧಿಕ. ಈವರೆಗೆ ಕೆಲವು ದಾಸರ ಕೀರ್ತನೆಗಳು ಬಿಡಿ ಬಿಡಿಯಾಗಿ ಪ್ರಕಟವಾಗಿವೆಯಾದರೂ, ಇನ್ನೂ ಅನೇಕ ದಾಸವರೇಣ್ಯರ ಕೀರ್ತನೆಗಳು ಹಸ್ತಪ್ರತಿ ರೂಪದಲ್ಲಿಯೇ ಉಳಿದುಕೊಂಡಿವೆ. ಅವುಗಳನ್ನು ಸಂಗ್ರಹಿಸಿ, ಸಂಪಾದಿಸಿ, ಪ್ರಕಟಿಸಿ, ಸಮಗ್ರ ದಾಸಸಾಹಿತ್ಯವು ಕನ್ನಡಿಗರಿಗೆ ಒಂದೆಡೆ ಲಭ್ಯವಾಗುವಂತೆ ಮಾಡುವ ಉದ್ದೇಶದಿಂದ ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯವು ಸಮಗ್ರ ದಾಸಸಾಹಿತ್ಯ ಪ್ರಕಟಣೆಯ ಬೃಹತ್ ಯೋಜನೆಯನ್ನು ಹಾಕಿಕೊಂಡಿದೆ. ಈ ಉದ್ದೇಶಕ್ಕಾಗಿ ಕಾರ್ಯನಿರ್ವಾಹಕ ಸಂಪಾದಕರಾದ ಡಾ. ಶ್ರೀನಿವಾಸ ಹಾವನೂರ, ಡಾ. ಟಿ. ಎನ್. ನಾಗರತ್ನ, ಪ್ರೊ. ವಸಂತ ಕುಷ್ಟಗಿ, ಸದಸ್ಯರಾದ ಡಾ. ಎಂ. ಎಂ. ಕಲಬುರ್ಗಿ, ಡಾ. ಬಸವರಾಜ ಸಬರದ, ಪ್ರೊ. ಸುಧಾಕರ, ಡಾ. ಕೃಷ್ಣ ಕೊಲ್ಹಾರಕುಲಕರ್ಣಿ, ಡಾ. ಮಂದಾಕಿನಿ (ಈಗ ದಿವಂಗತರು), ಹಾಗೂ ಪ್ರೊ. ಎಂ. ರಾಜಗೋಪಾಲಾಚಾರ್ಯ (ಈಗ ದಿವಂಗತರು) ಅವರನ್ನೊಳಗೊಂಡಂತೆ ಸಂಪಾದಕ ಸಮಿತಿಯನ್ನು ರಚಿಸಲಾಯಿತು. ಇಲಾಖಾ ನಿರ್ದೇಶಕರು ಸಮಿತಿಯ ಸದಸ್ಯ-ಕಾರ್ಯದರ್ಶಿಗಳಾಗಿರುತ್ತಾರೆ. ಇದರಲ್ಲಿ ನಾಡಿನ ಅನೇಕ ವಿದ್ವಾಂಸರ ನೆರವನ್ನು ಬಳಸಿಕೊಳ್ಳಲಾಗುತ್ತಿದೆ.

ಈ ಯೋಜನೆಯನ್ವಯ 'ಸಮಗ್ರ'ವಾಗಿ ದಾಸರ ಕೀರ್ತನೆಗಳನ್ನು ಸಂಗ್ರಹಿಸಿ ಪ್ರಕಟಿಸುವುದಿದ್ದರೂ, ಕೆಲವು ಹರಿದಾಸರ ರಚನೆಗಳು ಬಿಟ್ಟು ಹೋಗಿರುವ ಸಾಧ್ಯತೆ ಇರುತ್ತದೆ. ಅಂಥ ಹರಿದಾಸರ ಕೀರ್ತನೆಗಳು ದೊರೆತಲ್ಲಿ ಮುಂದೆ ಪರಿಷ್ಕರಣ ಸಂದರ್ಭದಲ್ಲಿ ಪ್ರಕಟಿಸಲು ಕ್ರಮಕೈಗೊಳ್ಳಲಾಗುವುದು.

ಸಮಗ್ರ ದಾಸಸಾಹಿತ್ಯ ಯೋಜನೆಯಡಿ ಪ್ರಕಟವಾಗುತ್ತಿರುವ ಆಯಾ ಸಂಪುಟಗಳ ಸಂಪಾದಕರಿಗೆ ಹಾಗೂ ಈ ಕಾರ್ಯದಲ್ಲಿ ನಮ್ಮೊಡನೆ ಸಹಕರಿಸಿದ ಸಂಪಾದಕ ಮಂಡಳಿಯವರಿಗೆ ಹಾಗೂ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಹಿಂದಿನ ನಿರ್ದೇಶಕರಾದ ಶ್ರೀ ಕೆ.ಸಿ. ರಾಮಮೂರ್ತಿ, ಶ್ರೀ ಸಿ. ಸೋಮಶೇಖರ ಅವರಿಗೆ, ಜಂಟಿ ನಿರ್ದೇಶಕರಾದ ಶ್ರೀ ಕಾ.ತ. ಚಿಕ್ಕಣ್ಣ ಅವರಿಗೆ, ಸಹಾಯಕ ನಿರ್ದೇಶಕರಾದ ಶ್ರೀಮತಿ ವೈ.ಎಸ್. ವಿಜಯಲಕ್ಷ್ಮಿ ಹಾಗೂ ಡಾ. ಮಂಜುಳ ಅವರಿಗೆ ಕೃತಜ್ಞತೆಗಳು.

ಹರಿದಾಸರ ಕೀರ್ತನೆಗಳನ್ನು ಆಯ್ದು ಸಂಗೀತಕ್ಕೆ ಆಯ್ಕೆ ಮಾಡಲು ನೆರವಾದ ಶ್ರೀ ವಿನಾಯಕ ತೊರವಿ, ಶ್ರೀ ಮೈಸೂರು ಸುಬ್ರಮಣ್ಯಂ, ಶ್ರೀ ಆರ್. ಕೆ. ಪದ್ಮನಾಭ, ಶ್ರೀ ಬಾನಂದೂರು ಕೆಂಪಯ್ಯ ಹಾಗು ಶ್ರೀಮತಿ ಮಾಲತಿ ಶರ್ಮರವರಿಗೆ, ಸಂಗೀತ ನಿರ್ದೇಶಕರಿಗೆ ಹಾಗೂ ಗಾಯಕರಿಗೆ ಕೃತಜ್ಞತೆಗಳು.

ಸಂಪುಟಗಳನ್ನು ಮುದ್ರಣಕ್ಕೆ ಅನುಗೊಳಿಸುವ ಕಾರ್ಯ ನಿರ್ವಹಿಸಿದ ಪ್ರೊ. ಜಿ. ಅಶ್ವತ್ಥನಾರಾಯಣ, ಡಾ. ಅನಂತ ಪದ್ಮನಾಭರಾವ್ ಮತ್ತು ಪ್ರೊ. ನಾ. ಗೀತಾಚಾರ್ಯ ಇವರಿಗೂ ಸಹ ಕೃತಜ್ಞತೆಗಳು.

ಈ ಸಮಗ್ರ ದಾಸಸಾಹಿತ್ಯ ಸಂಪುಟಗಳ ಮುದ್ರಣ ಕಾರ್ಯವನ್ನು ನಿರ್ವಹಿಸಿದ ಎಂ.ಎಸ್.ಐ.ಎಲ್. ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರಾದ ಶ್ರೀ ಅಶೋಕ್ ವಿ. ಡೇವಿಡ್ ಹಾಗೂ ವಿಶೇಷಾಧಿಕಾರಿಗಳಾದ ಶ್ರೀ ಎಂ. ರವಿಶಂಕರ್ ಅವರಿಗೆ ನನ್ನ ಕೃತಜ್ಞತೆಗಳು. ಸಮಗ್ರ ದಾಸಸಾಹಿತ್ಯವನ್ನು ಪ್ರಕಟಿಸುವುದು ಹರಿದಾಸರಿಗೂ ಕನ್ನಡ ಜನತೆಗೂ ನಾವು ಸಲ್ಲಿಸಬೇಕಾದ ಸೇವೆಯೆಂದು ಭಾವಿಸಿದ್ದೇನೆ. ಪಂಡಿತ ಪಾಮರರನ್ನು ಏಕ ಕಾಲಕ್ಕೆ ಆಕರ್ಷಿಸಬಲ್ಲ ವಿಶಿಷ್ಟ ಸಾಮರ್ಥ್ಯ ದಾಸಸಾಹಿತ್ಯದ್ದು ಎಂದರೆ ತಪ್ಪಾಗಲಾರದು. ಕನ್ನಡ ಜನತೆಯು ಈ ಪ್ರಕಟಣೆಯ ಸದುಪಯೋಗ ಪಡೆದುಕೊಂಡೀತು ಎಂದು ಆಶಿಸಿದ್ದೇನೆ.

**ವೈ. ಕೆ. ಮುದ್ದುಕೃಷ್ಣ**

ನಿರ್ದೇಶಕರು

# ಸಂಪಾದಕ ಮಂಡಳಿಯ ನುಡಿ

ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ದಾಸಸಾಹಿತ್ಯವೂ ಒಂದು. ಓದಲಾರದ ಕನ್ನಡ ಜನಕ್ಕೆ ಪಂಪನಂತಹ ಪ್ರೌಢಕವಿಗಳು ಗೊತ್ತಿರಲಿ ಬಿಡಲಿ, ದಾಸರ ಹಾಡುಗಳು ಗೊತ್ತಿಲ್ಲದವರು ಮಾತ್ರ ಅಪರೂಪ. ಜನರ ಮೇಲೆ ನಿರಂತರ ಪ್ರಭಾವವನ್ನು ಬೀರುವ ಜನಸಮ್ಮುಖತೆ ದಾಸಸಾಹಿತ್ಯದ ಪ್ರಮುಖ ಲಕ್ಷಣಗಳಲ್ಲಿ ಒಂದು. ಇಂತಹ ದಾಸರ ಹಾಡುಗಳು ಜ್ಞಾನಸಂಪದ ಹಾಗೂ ಭಕ್ತಿಸಂಪದಗಳ ಸಾರ್ವತ್ರಿಕ ಹಬ್ಬುಗೆಗೆ ಸಾಧನವಾಗಿ ಪರಿಣಮಿಸಿವೆ.

ಕನ್ನಡ ನಾಡಿನಾದ್ಯಂತ ಎಲ್ಲ ಸ್ತರಗಳಲ್ಲಿ ವರ್ಗ-ವರ್ಣಗಳ ಭೇದವಿಲ್ಲದೆ, ಜನರ ಬಾಯಲ್ಲಿ ಉಳಿದುಕೊಂಡು ಬಂದ ಈ ಸಾಹಿತ್ಯವನ್ನು ಮೊಟ್ಟಮೊದಲಿಗೆ ಪ್ರಕಟಿಸಿದ ಶ್ರೇಯಸ್ಸು ಬಾಸೆಲ್ ಮಿಶನ್ನಿನ ರೆ. ಹರ್ಮನ್ ಮೊಗ್ಲಿಂಗ್‌ರಿಗೆ ಸೇರುತ್ತದೆ. ಇವರು ತಮ್ಮ ಇಲ್ಲಿಯ ವಾಸ್ತವ್ಯದಲ್ಲಿ (೧೮೩೬ರಿಂದ), ನಾಲ್ಕುನೂರಕ್ಕೂ ಮಿಕ್ಕಿದ ದಾಸರ ಪದಗಳನ್ನು ಸಂಗ್ರಹಿಸಿದ್ದರು. ಅವುಗಳಲ್ಲಿಯ ಒಂದು ನೂರು ಪದಗಳ ಸಂಗ್ರಹವನ್ನು 'ದಾಸರ ಪದಗಳು' ಎಂಬ ಹೆಸರಿನಿಂದ ಕ್ರಿ. ಶ. ೧೮೫೦ರಲ್ಲಿ, ಮತ್ತೆ ಕ್ರಿ.ಶ. ೧೮೫೨ರಲ್ಲಿ ೧೭೪ ಪದಗಳುಳ್ಳ ಸಂಕಲನವನ್ನು ಮಂಗಳೂರಿನಲ್ಲಿ ಕಲ್ಲಚ್ಚಿನಲ್ಲಿ ಛಾಪಿಸಿ ಪ್ರಕಟಿಸಿದರು. ಈ ವಿಷಯವನ್ನು ೧೮೭೩ರಲ್ಲಿ ಪ್ರಕಟವಾದ ಇಂಡಿಯನ್ ಎಂಟಿಕ್ವೆರಿಯ 'On the Karnataka Vaishnava Dasas' - ಎಂಬ ತಮ್ಮ ಲೇಖನದಲ್ಲಿ ರೆ. ಕಿಟೆಲ್ಲರು ಕಾಣಿಸಿದ್ದಾರೆ. ಇದರಿಂದ ಕಿಟೆಲ್‌ರಂಥವರು ಕೂಡ ದಾಸರ ಪದಗಳ ಮಹತ್ವವನ್ನು ಮತ್ತು ಜನಪ್ರಿಯತೆಯನ್ನು ಗುರುತಿಸಿದ್ದರು ಎಂಬುದು ಗೊತ್ತಾಗುತ್ತದೆ. ಪ್ರಾಸಂಗಿಕವಾಗಿ ಇದುವೆ ದಾಸಸಾಹಿತ್ಯದ ಕುರಿತಾದ ಮೊದಲ ಲೇಖನವೂ ಆಗಿದೆ.

ಆನಂತರದ ದಿನಗಳಲ್ಲಿ ಈ ಕ್ಷೇತ್ರದಲ್ಲಿ ಹಲವಾರು ಜನರು ಕೆಲಸವನ್ನು ಮುಂದುವರಿಸಿದರು. ರೆ. ಮೊಗ್ಲಿಂಗರ 'ದಾಸರ ಪದಗಳು' ಇದರ ದ್ವಿತೀಯ ಆವೃತ್ತಿಯನ್ನು ೧೮೭೧ರಲ್ಲಿ ಜಾನ್ ಗ್ಯಾರೆಟರ ಸೂಚನೆಯ ಮೇರೆಗೆ ಹೊಳಕಲ್ಲು ನರಸಿಂಹಯ್ಯನವರು ಬೆಂಗಳೂರಿನಿಂದ ಪ್ರಕಟಿಸಿದರು. ೧೮೭೩ರಲ್ಲಿ ಹಿಂದೂ ಭಾಷಾ ಸಂಜೀವಿನೀ ಮುದ್ರಣ ಶಾಲೆಯಲ್ಲಿ 'ಹರಿಭಜನೆ, ಕೀರ್ತನೆ' ಎಂಬ ಸಂಗ್ರಹ ಪ್ರಕಟವಾಯಿತು. ೧೮೯೦ನೆ ದಶಕದಲ್ಲಿ ಬೆಳಗಾವಿಯ ಆಬಾಜಿ ರಾಮಚಂದ್ರ ಸಾವಂತ ಇವರು ದೇವನಾಗರಿ ಲಿಪಿಯಲ್ಲಿ "ದಾಸರ ಪದಗಳ ಸಂಗ್ರಹವು" ಎಂಬುದಾಗಿ ಎರಡು ಭಾಗಗಳಲ್ಲಿ ಪ್ರಕಟಿಸಿದರು. ಆ ದಶಕದಲ್ಲಿಯೇ ಮಡಕಶಿರಾದ ಬಾಲಕೃಷ್ಣರಾಯರು ೧೮೯೪ರಲ್ಲಿ 'ಪುರಂದರ ದಾಸರು ಮೊದಲಾದ ಅಪರೋಕ್ಷ ಜ್ಞಾನಿಗಳ ಪದಗಳು' ಎಂಬ ಪುಸ್ತಕವನ್ನು ತೆಲುಗು ಲಿಪಿಯಲ್ಲಿ ಮುದ್ರಿಸಿದ್ದು ಗಮನಾರ್ಹವಾಗಿದೆ. ಮತ್ತೆ ೧೯೦೮ರಲ್ಲಿ ಅವರೇ ಇನ್ನೊಂದು ಸಂಕಲನವನ್ನೂ ಪ್ರಕಟಿಸಿದ್ದಾರೆ.

ಹೀಗೆ ೧೮೫೦ರಷ್ಟು ಹಿಂದೆಯೇ ಪ್ರಾರಂಭವಾದ ದಾಸರ ಪದಗಳ ಸಂಗ್ರಹ ಹಾಗೂ ಪ್ರಕಟಣೆಯ ಕಾರ್ಯಕ್ಕೆ ಒಂದು ವ್ಯವಸ್ಥಿತ ರೂಪವನ್ನು ಕೊಟ್ಟು, ನಾಡಿನಾದ್ಯಂತ ಹರಿದು ಹಂಚಿಹೋದ, ಜನರ ಬಾಯಲ್ಲಿ ಉಳಿದುಕೊಂಡು ಬಂದ ವಿವಿಧ ದಾಸರ ಪದಗಳನ್ನು ಸಂಗ್ರಹಿಸಿ ಪ್ರಕಟಿಸಲು ಪ್ರಾರಂಭಿಸಿದವರು ಉಡುಪಿಯ ಪಾವಂಜೆ ಗುರುರಾಯರು. ಅವರು ೧೯೧೪ರಲ್ಲಿ ಪ್ರಕಟಿಸಿದ ಮೊದಲ ಸಂಕಲನದ ಹೆಸರು 'ಉದಯರಾಗವು' ಎಂಬುದು. ಅನಂತರದ ದಿನಗಳಲ್ಲಿ ಪುರಂದರದಾಸರ ಕೀರ್ತನೆಗಳನ್ನು ಐದು ಸಂಪುಟಗಳಲ್ಲಿ ಮತ್ತು ಉಳಿದ ದಾಸರ ಕೃತಿಗಳನ್ನು ಬಿಡಿಬಿಡಿಯಾಗಿ ಪ್ರಕಟಿಸಿದರು. ಹೀಗೆ ನಾಡಿನ ದಕ್ಷಿಣದ ಅಂಚಿನ ಉಡುಪಿಯಲ್ಲಿ ಪ್ರಾರಂಭವಾದ ಕೆಲಸವನ್ನು ಉತ್ತರದ ಅಂಚಿನ ಲಿಂಗಸುಗೂರಿನಲ್ಲಿ ಗೊರಾಬಾಳ ಹಣಮಂತರಾಯರು 'ವರದೇಂದ್ರ ಸಾಹಿತ್ಯ ಮಾಲೆ'ಯನ್ನು ಪ್ರಾರಂಭಿಸಿ ತಮ್ಮ ಇಡೀ ಜೀವನವನ್ನೇ ಹರಿದಾಸ ಸಾಹಿತ್ಯದ ಸಂಗ್ರಹ ಮತ್ತು ಪ್ರಕಟಣೆಗೆ ಮೀಸಲಾಗಿರಿಸಿದರು. ಇತ್ತ ಮೈಸೂರು ಭಾಗದಲ್ಲಿ ಸುಪ್ರಸಿದ್ಧ ದಾಸರ ಹಾಡುಗಳನ್ನು ತಕ್ಕಮಟ್ಟಿಗೆ ಶಾಸ್ತ್ರಶುದ್ಧವಾಗಿ ಪ್ರಕಟಿಸಲು ಸುಬೋಧ ರಾಮರಾಯರು ಮುಂದಾದರು. ಇದೇ ಬಗೆಯ ಕೆಲಸವನ್ನು ಧಾರವಾಡ ಪ್ರದೇಶದಲ್ಲಿ ನಾರಾಯಣರಾವ ಕಲಮದಾನಿ, ಹುಚ್ಚರಾವ ಬೆಂಗೇರಿ

ಹಾಗೂ ಬೆಟಗೇರಿ ಕೃಷ್ಣಶರ್ಮರು ಮಾಡಿದರು. ಇದರೊಂದಿಗೆ, ಭಜನೆಯ ದೃಷ್ಟಿಯಿಂದ ಅನುಕೂಲವಾಗುವಂತೆ ನಾಡಿನ ವಿವಿಧ ಭಾಗಗಳಲ್ಲಿ ದಾಸಸಾಹಿತ್ಯಾಸಕ್ತರು ತಮತಮಗೆ ಬೇಕಾದ ಪದಗಳ ಸಂಗ್ರಹವನ್ನು ಪ್ರಕಟಿಸತೊಡಗಿದರು. ಇದರಿಂದಾಗಿ ನಾಡಿನ ಬಹುತೇಕ ಭಾಗಗಳಲ್ಲಿ ಬೇರೆ ಬೇರೆ ದಾಸರು ಇದ್ದುದು ಮತ್ತು ಅವರು ಹಾಡುಗಳನ್ನು ಬರೆದಿದ್ದಾರೆ ಎಂಬುದು ಗಮನಕ್ಕೆ ಬಂದಿತು. ಅದು 'ದಾಸ-ಪೀಳಿಗೆ' ಯನ್ನು ಗುರುತಿಸಲು ಸಹಾಯವಾಯಿತು.

ಶ್ರೀಪಾದರಾಜರಿಂದ ಪ್ರಾರಂಭವಾದ ಕೀರ್ತನೆಗಳ ರಚನೆಯ ಸಂಪ್ರದಾಯವು ಈ ಐದುನೂರು ವರ್ಷಗಳಲ್ಲಿ ಸುಮಾರು ಮುನ್ನೂರು ಜನ ದಾಸರು ಹುಟ್ಟಿ ಮೂವತ್ತು ಸಾವಿರಕ್ಕೂ ಮಿಕ್ಕ ಕೀರ್ತನೆಗಳನ್ನು ರಚಿಸಿದ್ದಾರೆಂದರೆ ಅವುಗಳ ಮಹತ್ವ ಗೊತ್ತಾಗದೇ ಇರದು.

ಇಡಿಯಾಗಿ-ಬಿಡಿಬಿಡಿಯಾಗಿ ವ್ಯಕ್ತಿಗಳಿಂದ, ಸಂಘ ಸಂಸ್ಥೆಗಳಿಂದ ದಾಸರ ಪದಗಳು ಪ್ರಕಟವಾಗುತ್ತ ಬರುತ್ತಿರುವಾಗಲೇ ಪುರಂದರ ಕನಕದಾಸರ ಚತುಃಶತಮಾನೋತ್ಸವ ಸಂದರ್ಭಗಳಲ್ಲಿ ಅವರ ಸಮಗ್ರ ಕೃತಿಗಳು ಸರ್ಕಾರದಿಂದ ಹಾಗೂ ವಿವಿದ ಸಂಘ ಸಂಸ್ಥೆಗಳಿಂದ ಪ್ರಕಟವಾದವು. ಆದರೆ ಸಮಗ್ರ ದಾಸಸಾಹಿತ್ಯದ ಪ್ರಕಟಣೆ ಈವರೆಗೆ ಆಗಲೇ ಇಲ್ಲವೆಂದು ಹೇಳಬಹುದು. ಇಂಥದೊಂದು ಪ್ರಯತ್ನವನ್ನು ಮೂರು ದಶಕಗಳ ಹಿಂದೆ ಮೈಸೂರು ವಿಶ್ವವಿದ್ಯಾನಿಲಯವು ಕೈಗೊಂಡಿತು. ವೈಜ್ಞಾನಿಕ ರೀತಿಯಲ್ಲಿ ಶಾಸ್ತ್ರ ಶುದ್ಧವಾಗಿ ದಾಸಸಾಹಿತ್ಯವನ್ನು ಪ್ರಕಟಿಸುವುದರ ಅಡಿಗಲ್ಲನ್ನು ಹಾಕಿದ ಶ್ರೇಯಸ್ಸು ಆ ಮಾಲೆಯ ಸಂಪಾದಕರಾಗಿದ್ದ ಡಾ. ಜಿ. ವರದರಾಜರಾವ್ ಅವರಿಗೆ ಸಲ್ಲಬೇಕು. ಇದುವರೆಗೆ ಕೆಲವು ಸಂಪುಟಗಳು ಮಾತ್ರ ಬಂದಿವೆ. ಆದರೆ ಹಸ್ತಪ್ರತಿಗಳಲ್ಲಿ ವಿಪುಲ ದಾಸಸಾಹಿತ್ಯವನ್ನು ಸಂಗ್ರಹಿಸಲಾಗಿದೆ. ಅದೇ ರೀತಿಯಲ್ಲಿ ಲಿಂಗಸುಗೂರಿನಲ್ಲಿ, ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಹಾಗೂ ತಿರುಪತಿಯ ದಾಸಸಾಹಿತ್ಯ ಪ್ರೊಜೆಕ್ಟದಲ್ಲಿ ಕೂಡ ವಿಪುಲ ಹಸ್ತಪ್ರತಿಗಳ ಸಂಗ್ರಹವಿದೆ. ಇವರೆಲ್ಲರ ಸಹಕಾರದಿಂದ ಈಗ ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯವನ್ನು ಒಂದೆಡೆ ಸಂಗ್ರಹಿಸಿ ಪ್ರಕಟಿಸುವ ಸಾಹಸದ ಕಾರ್ಯವನ್ನು ಮಾಡುತ್ತಿದೆ.

## ಸಂಪುಟ ಯೋಜನೆ

ದಾಸಸಾಹಿತ್ಯದ ಪರಿಷ್ಕರಣ ಕಾರ್ಯ ತುಂಬ ಜಟಿಲವಾದುದೆಂಬುದು ಸಂಪಾದಕ ಮಂಡಳಿಯ ಪ್ರಥಮ ಸಭೆಯಲ್ಲಿಯೇ ಅನುಭವಕ್ಕೆ ಬಂದಿತು. ಕಳೆದ ಐದು ಶತಮಾನಗಳಿಂದ ನಿರಂತರ ಹರಿದು ಬಂದ ದಾಸಸಾಹಿತ್ಯ ರಚನೆಯಲ್ಲಿಯ ದಾಸರ ಹಾಗೂ ದಾಸರ ಪದಗಳ ಸಂಖ್ಯಾಬಾಹುಳ್ಯವನ್ನು ಗಮನಿಸಿ ಅದಕ್ಕೊಂದು ಕಾಲಮಿತಿಯನ್ನು ಹಾಕಿಕೊಳ್ಳುವುದು ಅನಿವಾರ್ಯವಾಯಿತು. ಹಾಗೆ ದಾಸಸಾಹಿತ್ಯದ ಪ್ರಾರಂಭ ಕಾಲದಿಂದ ೧೯ನೆಯ ಶತಮಾನದ ಅಂತ್ಯದ ವರೆಗೆ ರಚಿತಗೊಂಡ ವೈದಿಕ ಪರಂಪರೆಯ ದಾಸರ ಪದಗಳನ್ನು ಸಂಗ್ರಹಿಸುವುದೆಂದು, ಅದರಲ್ಲಿ ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಪರಂಪರೆಯ ಲಭ್ಯವಿದ್ದ ಹಾಡುಗಳನ್ನು ಸೇರಿಸಿಕೊಂಡು ೩೫ ಸಂಪುಟಗಳಲ್ಲಿ ಪ್ರಕಟಿಸುವುದೆಂದು ನಿರ್ಧರಿಸಲಾಯಿತು.

ಈ ೩೫ ಸಂಪುಟಗಳನ್ನು*, ಸಂಪಾದಕ ಮಂಡಳಿಯ ಸದಸ್ಯರಲ್ಲದೆ ನಾಡಿನ ಹಲವಾರು ವಿದ್ವಾಂಸರನ್ನು ಸಂಪಾದಿಸಿ ಕೊಡಲು ಕೇಳಿಕೊಳ್ಳಲಾಯಿತು.

ಇಂಥದೊಂದು ಬೃಹತ್ ಕಾರ್ಯವನ್ನು ಕೈಗೊಂಡಾಗ ಕೆಲವು ಮಾರ್ಗದರ್ಶಿ ಸೂತ್ರಗಳನ್ನು ಅನುಸರಿಸುವುದು ಅನಿವಾರ್ಯವಾಗುತ್ತದೆ. ಅನ್ಯ ಮತ-ಪಂಥಗಳ ಟೀಕೆಗಳು ಬಂದಿದ್ದರೆ ಅಂಥ ಹಾಡುಗಳನ್ನು ಕೈಬಿಡಬೇಕು. ಒಂದೇ ಹಾಡು ಇಬ್ಬರು ದಾಸರ ಅಂಕಿತದಲ್ಲಿ ಪ್ರಚಲಿತದಲ್ಲಿದ್ದರೆ, ಎರಡೂ ಕಡೆಗೆ ಅವುಗಳನ್ನು ಕೊಟ್ಟು ಕೆಳಗೆ ' ಈ ಕೀರ್ತನೆ . . . . ದಾಸರ ಅಂಕಿತದಲ್ಲೂ ಇದೆ' ಎಂದೂ ಸೂಚಿಸಬೇಕು. ದ್ವೈತ ಸಂಪ್ರದಾಯದ ಕೀರ್ತನೆಗಳನ್ನು ಪ್ರಕಟಿಸುವಾಗ ದೇವ-ಗುರು ತಾರತಮ್ಯವನ್ನು ಪಾಲಿಸಬೇಕು ; ಉಳಿದೆಡೆ ಗಣೇಶ ಪ್ರಾರ್ಥನೆ, ಭಗವಂತನ ನಾಮಸಂಕೀರ್ತನೆ, ಆತ್ಮನಿವೇದನೆ, ಲೋಕನೀತಿ, ತಾತ್ವಿಕ, ಕಥನಾತ್ಮಕ, ಸಂಪ್ರದಾಯ ಹಾಗೂ ವಿಶೇಷ ಹಾಡುಗಳೆಂದು ಮುಂತಾಗಿ ವಿಂಗಡಿಸಿ ಕೊಡಬೇಕು - ಎಂಬುದಾಗಿ ನಿರ್ಧರಿಸಿತು.

---

*ಇವುಗಳಲ್ಲಿ ಕೆಲವುಗಳಿಗೆ ಎರಡು ಮೂರು ಭಾಗಗಳಿವೆ.

ಪ್ರತಿಯೊಂದು ಸಂಪುಟದ ಪ್ರಾರಂಭದಲ್ಲಿ ಹಾಡುಗಳ ಪರಿವಿಡಿಯನ್ನು ಕೊಟ್ಟು ಪ್ರಸ್ತಾವನೆಯಲ್ಲಿ ಆಯಾ ದಾಸರ ಸಂಕ್ಷಿಪ್ತ ಜೀವನ ಚರಿತ್ರೆ, ಕೃತಿಗಳ ಸಮೀಕ್ಷೆ, ಶೈಲಿ ಇತ್ಯಾದಿಗಳನ್ನು ವಿವರಿಸಿ, ಗ್ರಂಥಸಂಪಾದನೆಯ ಆಕರಗಳನ್ನೂ ಕೊಡಲು ಪ್ರಯತ್ನಿಸಲಾಗಿದೆ. ಕೊನೆಯಲ್ಲಿ ಬರುವ ಅನುಬಂಧಗಳಲ್ಲಿ ಕಠಿಣ ಶಬ್ದಗಳ ಅರ್ಥ, ಟಿಪ್ಪಣಿ ಮತ್ತು ವಿಶಿಷ್ಟ ಅಂಕಿತನಾಮಗಳ ಸೂಚಿ ಹಾಗೂ ಹಾಡುಗಳ ಅಕಾರಾದಿಯನ್ನು ಕೊಡಲಾಗಿದೆ.

ಈ ಸಂಪುಟಗಳು ಜನಪ್ರಿಯ ಆವೃತ್ತಿಗಳಾಗಿರುವುದರಿಂದ ಲಭ್ಯವಿರುವ ಪಾಠಾಂತರಗಳಲ್ಲಿ ಯೋಗ್ಯವಾದುದನ್ನು ಸ್ವೀಕರಿಸಿದೆ. ಅನ್ಯ ಪಾಠಗಳನ್ನು ಅಡಿಯಲ್ಲಿ ನಮೂದಿಸಿಲ್ಲ. ಆದರೂ ಇವು ವಿದ್ವಜ್ಜನಪ್ರಿಯ ಆವೃತ್ತಿಗಳೂ ಆಗಬೇಕೆಂಬ ರೀತಿಯಲ್ಲಿ ಈ ಸಂಪುಟಗಳನ್ನು ರೂಪಿಸಲು ಪ್ರಯತ್ನಿಸಿದ್ದೇವೆ.

## ಕೃತಜ್ಞತೆಗಳು

ಕಳೆದ ನೂರೈವತ್ತು ವರ್ಷಗಳಿಂದ ಪಾಶ್ಚಾತ್ಯ ಮಿಶನರಿಗಳಿಂದ ಹಿಡಿದು ಈ ಮೊದಲು ಉಲ್ಲೇಖಿಸಿದ ನಾಡಿನ ಅನೇಕ ವಿದ್ವಜ್ಜನರು, ಸಂಘ ಸಂಸ್ಥೆಗಳು, ವಿಶ್ವವಿದ್ಯಾಲಯಗಳು ದಾಸಸಾಹಿತ್ಯ ಕುರಿತು ನಿರಂತರ ದುಡಿದು ವಿಪುಲ ಸಾಮಗ್ರಿಯನ್ನು ಪ್ರಕಟಿಸಿದ್ದಾರೆ. ಈ ಎಲ್ಲ ವ್ಯಕ್ತಿಗಳಿಗೂ ಸಂಘ ಸಂಸ್ಥೆಗಳಿಗೂ ನಮ್ಮ ಕೃತಜ್ಞತಾಪೂರ್ವಕ ವಂದನೆಗಳು ಸಲ್ಲುತ್ತವೆ.

ಈ ಯೋಜನೆ ಅಸ್ತಿತ್ವಕ್ಕೆ ಬಂದುದೂ ಒಂದು ವಿಶಿಷ್ಟ ಸಂದರ್ಭದಲ್ಲಿ ಎಂಬುದನ್ನು ಇಲ್ಲಿ ನಮೂದಿಸಬೇಕು. ಕರ್ನಾಟಕ ಸರ್ಕಾರವು ನಾಡಿನ ಖ್ಯಾತ ಸಂಶೋಧಕರಾದ ಡಾ. ಎಂ. ಎಂ. ಕಲಬುರ್ಗಿ ಅವರ ಪ್ರಧಾನ ಸಂಪಾದಕತ್ವದಲ್ಲಿ ಸಮಗ್ರ ವಚನಸಾಹಿತ್ಯವನ್ನು ಪ್ರಕಟಿಸಿತಷ್ಟೇ. ಅವರೇ 'ದಾಸಸಾಹಿತ್ಯ' ಯೋಜನೆಯನ್ನು ರೂಪಿಸಿ ಶ್ರೀ ಪೇಜಾವರ ಮಠಾಧೀಶರಾದ ಶ್ರೀ ವಿಶ್ವೇಶತೀರ್ಥರ ಮೂಲಕ ಈ ಯೋಜನೆಯತ್ತ ಸರ್ಕಾರದ ಗಮನ ಸೆಳೆದರು. ಇದನ್ನು ಅರಿತ ಅಂದಿನ ಮುಖ್ಯಮಂತ್ರಿಗಳೂ ಅನಂತರ ಭಾರತದ ಪ್ರಧಾನಮಂತ್ರಿಗಳೂ ಆಗಿದ್ದ ಸನ್ಮಾನ್ಯ ಶ್ರೀ ಹೆಚ್. ಡಿ. ದೇವೇಗೌಡರು ಮುಧೋಳದಲ್ಲಿ (೧೯೯೫) ಜರುಗಿದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಸರ್ಕಾರವು ಸಮಗ್ರ

ದಾಸಸಾಹಿತ್ಯವನ್ನು ಪ್ರಕಟಿಸಲು ಒಪ್ಪಿಕೊಂಡಿದೆ ಎಂದು ಘೋಷಿಸಿದರು. ಅದರಂತೆ ಸರ್ಕಾರವು ಒಂಬತ್ತು ಜನರ ಸಂಪಾದಕ ಮಂಡಳಿಯನ್ನು ರಚಿಸಿತು. ಅದರಲ್ಲಿ ಡಾ. ಶ್ರೀನಿವಾಸ ಹಾವನೂರ, ಡಾ. ಟಿ.ಎನ್. ನಾಗರತ್ನ ಮತ್ತು ಪ್ರೊ. ವಸಂತ ಕುಷ್ಟಗಿ ಅವರನ್ನು ಸಮಿತಿಯ ಕಾರ್ಯನಿರ್ವಾಹಕ ಸಂಪಾದಕರೆಂದು ನಿಯಮಿಸಿತು. ಜೊತೆಗೆ ಈ ಮೊದಲು ಇಂಥ ಕಾರ್ಯವನ್ನು ಯಶಸ್ವಿಯಾಗಿ ಮಾಡಿದ ಅನುಭವಿ ಡಾ. ಎಂ. ಎಂ. ಕಲಬುರ್ಗಿ, ದಾಸಸಾಹಿತ್ಯದಲ್ಲಿ ನುರಿತ ವಿದ್ವಾಂಸರುಗಳಾದ ಪ್ರೊ. ಎಂ. ರಾಜಗೋಪಾಲಾಚಾರ್ಯ, ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿ, ಡಾ. ಮಂದಾಕಿನಿ, ಪ್ರೊ. ಸುಧಾಕರ ಮತ್ತು ಡಾ. ಬಸವರಾಜ ಸಬರದ ಅವರನ್ನು ಸಂಪಾದಕ ಮಂಡಳಿಯ ಸದಸ್ಯರನ್ನಾಗಿ ನಿಯಮಿಸಿತು. ಅವರುಗಳ ನಿರಂತರ ಪರಿಶ್ರಮದ ಫಲವೇ ಈ ಸಮಗ್ರ ದಾಸಸಾಹಿತ್ಯದ ಪ್ರಕಟಣಾ ಕಾರ್ಯ. ಈ ಪ್ರಕಟಣಾ ಕಾರ್ಯದಲ್ಲಿ ಅವರುಗಳೊಂದಿಗೆ ೩೫ ಸಂಪುಟಗಳನ್ನು ಸಿದ್ಧಪಡಿಸುವಲ್ಲಿ ಸರ್ವಶ್ರೀ ಅರಳುಮಲ್ಲಿಗೆ ಪಾರ್ಥಸಾರಥಿ, ಡಾ. ಡಿ. ಆರ್. ಪಾಂಡುರಂಗ, ಡಾ. ಅನಂತಪದ್ಮನಾಭರಾವ್, ಪ್ರೊ. ಬಿ. ಆರ್. ಕುಲಕರ್ಣಿ, ಡಾ. ಕೆ. ಜಿ. ವೆಂಕಟೇಶ್, ಪ್ರೊ. ಜಿ. ಅಶ್ವತ್ಥನಾರಾಯಣ, ಡಾ. ಕೆ. ಗೋಕುಲನಾಥ, ಡಾ. ಕೆ. ಎಂ. ಕೃಷ್ಣರಾವ್, ಶ್ರೀ ಹಣಮಂತ ತಾಸಗಾಂವಕರ್, ಪ್ರೊ. ನಾ. ಗೀತಾಚಾರ್ಯ, ಡಾ. ಸ್ವಾಮಿರಾವ್ ಕುಲಕರ್ಣಿ, ಶ್ರೀ ಹನುಮನಗೌಡ, ಶ್ರೀ ಎ. ಎನ್. ಅನಂತಸ್ವಾಮಿರಾವ್, ಶ್ರೀ ನಾರಾಯಣಾಚಾರ್ಯ ಧೂಳಖೇಡ, ಶ್ರೀ ಶಾಶ್ವತಸ್ವಾಮಿ ಮುಕ್ಕುಂದಿಮಠ, ಶ್ರೀ ಕೆ. ಎಸ್. ವೆಂಕಟೇಶ್ ಮತ್ತು ಶ್ರೀ ಎಚ್. ಎಸ್. ಶ್ರೀನಿವಾಸಮೂರ್ತಿ ಅವರುಗಳು ಹಾಗೂ ಶ್ರೀಮತಿಯರಾದ ನಳಿನಿ ವೆಂಕಟೇಶ್, ಮೀನಾರಾವ್, ಲೀಲಾವತಿ ಎಸ್. ರಾವ್, ಡಾ. ಜಯಲಕ್ಷ್ಮಿ ಮಂಗಳಮೂರ್ತಿ, ಡಾ. ಅಕ್ಕಮಹಾದೇವಿ, ಶೀಲಾ ದಾಸ್, ಡಾ. ರಮಾ ಕಲ್ಲೂರಕರ, ಡಾ. ಸೀತಾ ಗುಡೂರ ಕುಲಕರ್ಣಿ, ಹೆಚ್. ಎಸ್. ಪದ್ಮಾ ಮೂರ್ತಿ, ಮತ್ತು ರುಕ್ಮಿಣಿ ಗಿರಿಮಾಜಿ ಅವರುಗಳು ತುಂಬ ಶ್ರಮವಹಿಸಿ ಸಂಪುಟಗಳನ್ನು ಸಿದ್ಧಪಡಿಸಿಕೊಟ್ಟಿದ್ದಾರೆ. ಅವರುಗಳಿಗೆ ಸಂಪಾದಕ ಮಂಡಳಿಯು ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ಈ ಮಧ್ಯೆ ಸಂಪಾದಕ ಸಮಿತಿಯ ಸದಸ್ಯರಲ್ಲೊಬ್ಬರಾದ ಪ್ರೊ. ಎಂ. ರಾಜಗೋಪಾಲಾಚಾರ್ಯರು ಮತ್ತು ಡಾ. ಮಂದಾಕಿನಿ ಹಾಗೂ ಸಂಪುಟ ಸಂಪಾದಕರಲ್ಲಿ ಒಬ್ಬರಾದ ಶ್ರೀ ಎಚ್. ಎಸ್. ಶ್ರೀನಿವಾಸಮೂರ್ತಿ, ಡಾ. ಕೆ.ಎಂ. ಕೃಷ್ಣರಾವ್, ಶ್ರೀಮತಿ ಪದ್ಮಾ ಮೂರ್ತಿ ಹಾಗೂ ಶ್ರೀ ಹನುಮನಗೌಡ ಮಾನ್ವಿ ಅವರು ನಮ್ಮನ್ನು ಅಗಲಿದ್ದು ದುಃಖದ ವಿಷಯವಾಗಿದೆ.

ಆಯಾ ಕಾಲದಲ್ಲಿ ಈ ಯೋಜನೆಗೆ ಸಹಕರಿಸಿದ ಹಾಗೂ ಈ ಯೋಜನೆಯ ಪರಿಕಲ್ಪನೆ ಯಶಸ್ವಿಯಾಗಿ ಕಾರ್ಯಾನುಷ್ಠಾನಕ್ಕೆ ಬರುವ ದಿಸೆಯಲ್ಲಿ ಸಹಕರಿಸಿದ ಈ ಹಿಂದಿನ ಸರ್ಕಾರದ ಮಾನ್ಯ ಮುಖ್ಯಮಂತ್ರಿಗಳಿಗೆ ಹಾಗೂ ವಿಶೇಷವಾಗಿ ಇಂದಿನ ಮುಖ್ಯಮಂತ್ರಿಗಳಾದ ಸನ್ಮಾನ್ಯ ಶ್ರೀ ಎಸ್. ಎಂ. ಕೃಷ್ಣ ಅವರಿಗೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಚಿವೆ ಶ್ರೀಮತಿ ರಾಣಿ ಸತೀಶ್ ಅವರಿಗೆ, ಇಲಾಖೆಯ ಹಿಂದಿನ ಕಾರ್ಯದರ್ಶಿಗಳಾದ ಶ್ರೀ ಚಂದ್ರಹಾಸ ಗುಪ್ತ ಮತ್ತು ಈಗಿನ ಕಾರ್ಯದರ್ಶಿಗಳಾದ ಶ್ರೀ ಸಿ. ಎಸ್. ಕೇದಾರ್ ಅವರಿಗೆ ನಮ್ಮ ನಮನಗಳು ಸಲ್ಲುತ್ತವೆ. ಈ ಕಾರ್ಯದಲ್ಲಿ ಈ ಯೋಜನೆಗೆ ನೆರವಾದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಹಿಂದಿನ ನಿರ್ದೇಶಕರುಗಳು ಹಾಗೂ ಈಗಿನ ನಿರ್ದೇಶಕರಾದ ಶ್ರೀ ವೈ. ಕೆ. ಮುದ್ದುಕೃಷ್ಣ, ಜಂಟಿ ನಿರ್ದೇಶಕರಾದ ಶ್ರೀ ಕಾ. ತ. ಚಿಕ್ಕಣ್ಣ, ಸಹಾಯಕ ನಿರ್ದೇಶಕರಾದ ಶ್ರೀಮತಿ ವೈ.ಎಸ್. ವಿಜಯಲಕ್ಷ್ಮಿ ಮತ್ತು ಡಾ. ಮಂಜುಳಾ ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ. ಈ ಕಾರ್ಯದಲ್ಲಿ ನೆರವಾದ ಎಂ. ಎಸ್. ಐ. ಎಲ್. ಸಂಸ್ಥೆಯ ಅಧಿಕಾರಿ ಹಾಗೂ ಸಿಬ್ಬಂದಿವರ್ಗಕ್ಕೆ, ವಿಶೇಷವಾಗಿ ಶ್ರೀ ಎಂ. ರವಿಶಂಕರ್, ವಿಶೇಷಾಧಿಕಾರಿ, ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ.

ಇದು ಒಂದು ದೊಡ್ಡ ಯೋಜನೆ. ಇದರ ಸಂಪಾದನೆಯ ಸಮಸ್ಯೆಗಳು ದೊಡ್ಡವು. ಪಾಠಾಂತರ, ರೂಪಾಂತರ, ಪ್ರಕ್ಷಿಪ್ತತೆ ಇತ್ಯಾದಿಗಳ ಗೊಂದಲಕ್ಕೆ ಗುರಿಯಾಗುತ್ತ ಬಂದ ವ್ಯಾಪಕ ಪ್ರಮಾಣದ ಈ ದಾಸಸಾಹಿತ್ಯವನ್ನು ಒಂದೆಡೆ ಸಂಗ್ರಹಿಸುವುದು, ಪುನರುಕ್ತಿಗಳನ್ನು ಗುರುತಿಸುವುದು, ಅಂಕಿತ ಪಲ್ಲಟಗಳನ್ನು ಸರಿಪಡಿಸುವುದು, ಪ್ರಕ್ಷಿಪ್ತಗಳನ್ನು ದೂರೀಕರಿಸುವುದು, ಕೊನೆಯದಾಗಿ ಕೀರ್ತನೆಗಳನ್ನು ಶುದ್ಧೀಕರಿಸುವುದು ಎಂಥವರನ್ನೂ ಧೈರ್ಯಗೆಡಿಸುವ ಕೆಲಸ. ಹೀಗಿದ್ದೂ ದಾಸಸಾಹಿತ್ಯದ ಮೇಲಿನ ಗೌರವ ಪ್ರೀತಿಗಳು ನಮ್ಮಿಂದ ಈ ಕೆಲಸ ಮಾಡಿಸಿದೆ. ನಮ್ಮ ಶಕ್ತಿಗೆ ಮೀರಿ ಉಳಿದಿರಬಹುದಾದ ದೋಷಗಳನ್ನು ಮನ್ನಿಸಬೇಕೆಂದು ಕೋರುತ್ತೇವೆ. ಈ ಮೂವತ್ತೈದು ಸಂಪುಟಗಳನ್ನು ಸಹೃದಯ ಲೋಕಕ್ಕೆ ಅರ್ಪಿಸುತ್ತೇವೆ. ಸಮಗ್ರ ದಾಸಸಾಹಿತ್ಯವು ಸುಲಭ ಬೆಲೆಯಲ್ಲಿ ಕನ್ನಡಿಗರ ಮನೆ–ಮನಗಳಲ್ಲಿ ಬೆಳಗಲೆಂದು ಹಾರೈಸುತ್ತೇವೆ.

ಸಂಪಾದಕ ಮಂಡಳಿ

# ಪರಿವಿಡಿ

# ಪ್ರಸ್ತಾವನೆ

ಸಮಗ್ರ ಹರಿದಾಸ ಸಾಹಿತ್ಯ ಪ್ರಕಟನೆಯ ಯೋಜನೆಯೊಂದನ್ನು ಸರ್ಕಾರದ ಮಂಜೂರಾತಿಗಾಗಿ ಹರಿದಾಸ ಸಾಹಿತ್ಯಾಸಕ್ತರು ಕಳುಹಿಸಿರುವ ಸಂಗತಿ ತಿಳಿದಾಗ ಆಶ್ಚರ್ಯ – ಆನಂದಗಳು ಒಮ್ಮೆಲೇ ಉಂಟಾದವು. ದಾಸ ಸಾಹಿತ್ಯಾಭಿಮಾನಿಗಳ ಸತತ ಪ್ರಯತ್ನದ ಫಲವಾಗಿ ಈ ಯೋಜನೆಗೆ ಮಂಜೂರಾತಿ ದೊರೆತು ನನಗೆ ವಿಜಯದಾಸರ ಸುಳಾದಿಗಳನ್ನು ಸಂಪಾದಿಸಿ ಕೊಡುವ ಜವಾಬ್ದಾರಿಯನ್ನು ವಹಿಸಿದಾಗ ಒಂದು ಕಡೆ ಆನಂದ ಮತ್ತೊಂದು ಕಡೆ ಈ ಕಾರ್ಯವನ್ನು ಸಕಾಲದಲ್ಲಿ ಮಾಡಲು ಸಾಧ್ಯವಾಗದೆಂಬ ಅಂಜಿಕೆ ಉಂಟಾದರೂ ನಾನು ವಿಶೇಷ ಅಧ್ಯಯನಕ್ಕಾಗಿ ವಿಜಯದಾಸರ ಜೀವನ ಮತ್ತು ಕೃತಿಗಳನ್ನು ಆರಿಸಿಕೊಂಡ ಕಾರಣದಿಂದಲೂ ವೈಯಕ್ತಿಕವಾಗಿ ದಾಸ ಸಾಹಿತ್ಯವನ್ನು ಓದುವುದರಲ್ಲಿಯೂ, ಅಧ್ಯಯನ ಮಾಡುವುದರಲ್ಲಿಯೂ ವಿಶೇಷ ಸುಖವೊಂದನ್ನು ಅನುಭವಿಸುವ ಚೈತನ್ಯವಿರುವುದರಿಂದಲೂ ಈ ಕಾರ್ಯಕ್ಕೆ ಒಪ್ಪಿಗೆಯನ್ನು ಕೊಟ್ಟು ಇದೀಗ ವಿಜಯದಾಸರ ಸುಳಾದಿಗಳ ನಾಲ್ಕನೆಯ ಸಂಪುಟವಾದ ಸಂಕೀರ್ಣಭಾಗವನ್ನು ಓದುಗರ ಕೈಗಿಡುತ್ತಿರುವುದಕ್ಕಾಗಿ ಹರ್ಷಿಸುತ್ತಿದ್ದೇನೆ.

ಹರಿದಾಸ ಸಾಹಿತ್ಯ ವಲಯದಲ್ಲಿ ವಿಜಯದಾಸರನ್ನು ಸುಳಾದಿದಾಸರು ಎಂದೇ ಕರೆಯುತ್ತಾರೆ. ಏಕೆಂದರೆ ಇವರು ರಚಿಸಿದಷ್ಟು ಸಂಖ್ಯೆಯಲ್ಲಿ ಸುಳಾದಿಗಳನ್ನು ಇವರ ಹಿಂದಿನ ಅಥವಾ ಮುಂದಿನ ಹರಿದಾಸರು ರಚಿಸಿಲ್ಲ. ಸುಳಾದಿ ಎಂಬುದು ಸಂಗೀತದ ಪಾರಿಭಾಷಿಕ ಶಬ್ದ. ಇದನ್ನು ತಾಳಮಾಲಿಕೆ ಎನ್ನಬಹುದು. ಸಾಮಾನ್ಯವಾಗಿ ಐದು ವಿವಿಧ ತಾಳಗಳಲ್ಲಿ ಒಂದೊಂದು ನುಡಿ ರಚನೆಯಾಗಿ ಕೊನೆಯಲ್ಲಿ ಎರಡು ಸಾಲುಗಳ ಜತೆ/ಜೊತೆ ಎಂಬುದಿರುತ್ತದೆ.

ಪ್ರತಿಯೊಂದು ನುಡಿಯು ಕೊನೆಗೂ ಹರಿದಾಸರ ಅಂಕಿತವಿರುತ್ತದೆ. ಸಾಮಾನ್ಯವಾಗಿ ಐದು ನುಡಿಗಳಿರುವುದನ್ನು ಕಾಣಬಹುದಾದರೂ ಏಳು, ಒಂಭತ್ತು, ಹನ್ನೆರಡು ನುಡಿಗಳಿರುವ ಸುಳಾದಿಗಳೂ ಉಂಟು. ಏಳು ನುಡಿಗಳನ್ನು ಮೀರಿದ ಸಂದರ್ಭಗಳಲ್ಲಿ ತಾಳಗಳು ಪುನರಾವೃತ್ತಿಗೊಳ್ಳುತ್ತವೆ. ಈ ಎಲ್ಲ ನುಡಿಗಳನ್ನು ಒಂದೇ ರಾಗದಲ್ಲಿ ಹಾಡಬೇಕು. ಸಾಮಾನ್ಯವಾಗಿ ರಾಗ ತಾಳಗಳ ನಿರ್ದೇಶನ ಉಂಟು (ಭಗವಂತನು) ಸುಳಿದರೆ ಸುಳಾದಿ : ಭಗವಂತನನ್ನು ಕಾಣಲು ಸುಳುವಾದ (ಸುಲಭವಾದ) ಹಾದಿಯೇ ಸುಳಾದಿ ಎಂಬುದಾಗಿ ಭಾವುಕರು ಹೇಳುವರಾದರೂ ಸುಳಾದಿ ಶಬ್ಧದ ಮೂಲ ರೂಪ ಸೂಡಾದಿ ಎಂದೆನ್ನಬಹುದು. ಹರಿದಾಸರು ಕೀರ್ತನೆಯ ಮೂಲಕ ಭಗವದ್ವಿಚಾರಗಳನ್ನು ಸರಳವಾಗಿ ತಿಳಿಸಿರುವುದಾದರೆ ಸುಳಾದಿಯ ಮೂಲಕ ಪ್ರೌಢಿಮೆಯನ್ನು ಮೆರೆದಿರುವರು. ಸುಳಾದಿಗಳು ಗಾತ್ರದ ದೃಷ್ಟಿಯಿಂದ ಹಿರಿದಾದ ಕಾರಣ ನೆನಪಿನಲ್ಲಿ ಸುಲಭವಾಗಿ ಉಳಿಯುವುದಿಲ್ಲ. ಕಥೆ, ತತ್ವ, ಪ್ರಮೇಯ, ಸಂಸ್ಕೃತದ ಉದ್ಧರಣೆಗಳು ಸುಳಾದಿಯಲ್ಲುಂಟು. ಗೇಯತೆಯ ಕೊರತೆಯನ್ನು ಗದ್ಯತೆಯ ಮೇಲ್ಮೆಯನ್ನು ಸುಳಾದಿಯಲ್ಲಿ ಗುರುತಿಸಬಹುದಾಗಿದೆ. ಆದರೂ ಇವು ಸಂಗೀತಬದ್ಧ ರಚನೆಗಳೇ ಆಗಿವೆ. ಸುಳಾದಿಗಳಲ್ಲಿ ಆದಿ ಪ್ರಾಸವನ್ನು ರಕ್ಷಿಸಲಾಗಿದೆ. ಇದು ನುಡಿ ಬದಲಾದಂತೆ ಬದಲಾಗುತ್ತದೆ.

ವಿಜಯದಾಸರಿಂದ ರಚನೆಗೊಂಡ ಐದುನೂರಕ್ಕೂ ಅಧಿಕ ಸುಳಾದಿಗಳು ದೊರೆತಿದ್ದು ಸಾಮಾನ್ಯವಾಗಿ ಸುಳಾದಿಯ ಗಾತ್ರ ಮೂರು ಪುಟಗಳಿಂದ ಆರು ಪುಟಗಳಿರುವುದರಿಂದ ಇದನ್ನು ಒಂದೇ ಸಂಪುಟದಲ್ಲಿ ಕೊಡುವುದು ಅಸಾಧ್ಯ ಕಾರ್ಯವೆನಿಸಿದ ನಿಮಿತ್ತ ವಿಷಯಾನುಸಾರ ನಾಲ್ಕು ಸಂಪುಟಗಳಲ್ಲಿ ಸಂಪಾದಿಸಿ ಪ್ರಕಟಿಸುವುದು ಉಚಿತವೆನಿಸಿತು. ಈ ಸಂಗತಿಯನ್ನು ಸಮಗ್ರ ದಾಸ ವಾಙ್ಮಯ ಯೋಜನೆ ಪ್ರಕಟನೆ ಕಾರ್ಯ ನಿರ್ವಾಹಕ ಸಂಪಾದಕರಾದ ಡಾ॥ ಟಿ.ಎನ್. ನಾಗರತ್ನ ಅವರಿಗೆ ತಿಳಿಸಿದಾಗ ಅವರು ಸಮಿತಿಯ ಮುಂದೆ ಈ ವಿಷಯವನ್ನಿಟ್ಟು ಒಪ್ಪಿಗೆ ಸೂಚಿಸಿರುವರು. ಇದರ ಫಲವಾಗಿ ಈ ನಾಲ್ಕನೆಯ ಸಂಪುಟ ಪ್ರಕಟವಾಗುತ್ತಿದೆ. ಇದನ್ನು ಸಂಕೀರ್ಣ ಎನ್ನಲಾಗಿದೆ. ಹಿಂದಿನ ಮೂರು ಸಂಪುಟಗಳಲ್ಲಿ ಕಾರಣಾಂತರಗಳಿಂದ ಬಿಟ್ಟುಹೋದ ಸುಳಾದಿಗಳನ್ನು ಹಾಗೂ

ಸೃಷ್ಟಿಗೆ ಸಂಬಂಧಿಸಿದ ಸುಳಾದಿಗಳನ್ನು ಮತ್ತು ಅಪ್ರಕಟಿತ ಸುಳಾದಿಗಳನ್ನು ಈ ಸಂಪುಟದಲ್ಲಿ ಸೇರಿಸಲಾಗಿದೆ. ಸೃಷ್ಟಿ, ಪ್ರಳಯ, ತಾರತಮ್ಯ, ನೈವೇದ್ಯ ಇತ್ಯಾದಿ ವಿಚಾರಗಳನ್ನೊಳಗೊಂಡ ಸುಳಾದಿಗಳು ಇಲ್ಲಿವೆ. ಈ ಸುಳಾದಿಗಳನ್ನು ರಚಿಸಿದ ವಿಜಯದಾಸರ ಜೀವನ ಹಾಗೂ ಈ ಸುಳಾದಿಗಳ ಆಶಯವನ್ನು ತಿಳಿಯೋಣ.

## ವಿಜಯದಾಸರ ಜೀವನ ಪರಿಚಯ

ಉತ್ತರ ಕರ್ನಾಟಕದ ರಾಯಚೂರು ಜಿಲ್ಲೆಯ ಮಾನವಿ ಎಂಬ ತಾಲೂಕಿನ ಬಳಿ ಚೀಕನಪರಿವಿ ಎಂಬ ಗ್ರಾಮ ಇಂದಿಗೂ ಉಂಟು. ಕ್ರಿ.ಶ. ಹದಿನೇಳನೆಯ ಶತಮಾನದಲ್ಲಿ ಶ್ರೀನಿವಾಸಪ್ಪ ಕೂಸಮ್ಮ ಎಂಬ ಬ್ರಾಹ್ಮಣ ಮನೆತನದ ಮಾಧ್ವ ದಂಪತಿಗಳು ಇಲ್ಲಿ ವಾಸವಾಗಿದ್ದರು. ಭಾರದ್ವಾಜಗೋತ್ರದ ಋಕ್ ಶಾಖೆಗೆ ಸೇರಿದ ಈ ವೈಷ್ಣವರು ಬಹು ಬಡವರಾದರೂ ಹರಿಭಕ್ತಿಗೆ ಇವರಲ್ಲಿ ಬಡತನವಿರಲಿಲ್ಲ. ಆದರೆ ಬಹುಕಾಲವಾದರೂ ಇವರಿಗೆ ಪುತ್ರಯೋಗ ಉಂಟಾಗದಿದ್ದುದರಿಂದ ಆ ಚಿಂತೆ ಅವರ ಮನಸ್ಸನ್ನು ಕಾಡುತ್ತಿತ್ತು. ಭಗವದ್ಭಕ್ತರಾಗಿ ಆಸ್ತಿಕರೆನಿಸಿಕೊಂಡ ಈ ದಂಪತಿಗಳು ಸತ್ಪುತ್ರನೊಬ್ಬನನ್ನು ಪಡೆಯಲೆಂದು ಗ್ರಾಮದ ಬಳಿಯಲ್ಲಿಯೇ ಹರಿಯುತ್ತಿದ್ದ ಮಂಗಲಕರವಾದ ತುಂಗಭದ್ರಾ ನದಿಯಲ್ಲಿ ಮಿಂದು ಅಲ್ಲಿಯೇ ಇದ್ದ ಅಶ್ವತ್ಥನಾರಸಿಂಹನ ಸೇವೆಯನ್ನು ಮಾಡಲಾರಂಭಿಸಿದರು. ಶ್ರೀ ನರಸಿಂಹನ ವರ ಪ್ರಸಾದದಿಂದ ಕೆಲಕಾಲದಲ್ಲಿ ಅವರು ಒಬ್ಬ ಮಗನನ್ನು ಶಾಲಿ ವಾಹನ ಶಕ ೧೬೦೪ನೆಯ ರುಧಿರೋದ್ಗಾರಿ ಸಂವತ್ಸರದಲ್ಲಿ ಪಡೆದರು. ಜನಿಸಿದ ಮಗು ಹರಿಭಕ್ತನಾಗಲೆಂದೇ ದಾಸಪ್ಪ ಎಂದು ನಾಮಕರಣ ಮಾಡಿದರು. ಈ ದಾಸಪ್ಪನೆ ಶ್ರೀ ವಿಜಯದಾಸರೆಂದು ಮುಂದೆ ಪ್ರಸಿದ್ಧಿಯಾದರು.

ದಾಸಪ್ಪನ ಜನನದಿಂದ ತಾಯ್ತಂದೆಯರಿಗೆ ಮನಸ್ಸಂತೋಷವಾದರೂ ಅವರ ದಾರಿದ್ರ್ಯವೇನೂ ಬಗೆಹರಿಯಲಿಲ್ಲ. ದಿನ ಕಳೆದಂತೆ ಕಷ್ಟ ಹೆಚ್ಚಾದವು. ಸಂಸಾರ ದೊಡ್ಡದಾಗಿ ಹುಡುಗನಿಗೆ ವಿದ್ಯಾಭ್ಯಾಸವು ಸರಿಯಾಗಿ ದೊರೆಯಲಿಲ್ಲ. ಬಾಲಕನಾದ ದಾಸಪ್ಪ ಬೆಳೆದಂತೆ ಮನೆಯವರ ದಾರಿದ್ರ್ಯವೂ ಬೆಳೆಯಿತು. ಊರಿನಲ್ಲಿ ಇವರ ದಾರಿದ್ರ್ಯವನ್ನು ಕಂಡು ಜನರು ದಾಸಪ್ಪನನ್ನು ತಿರಸ್ಕಾರದಿಂದ

ಕೂಸಿ ಮಗ ದಾಸ ಎಂದು ಅವಹೇಳನೆ ಮಾಡಲಾರಂಭಿಸಿದರು. ಎಷ್ಟು ದುಡಿದರೂ ಹೊಟ್ಟೆ ತುಂಬುವಷ್ಟು ಊಟವಿರಲಿ, ಒಂದು ಸೌಟಿನ ತುಂಬಾ ಗಂಜಿಯೂ ದೊರೆಯದಂತಹ ಪರಿಸ್ಥಿತಿ ಉಂಟಾಯಿತು. ಸಂಜೆತನಕವಿದ್ದು ಸಣ್ಣ ಸೌಟಿನ ತುಂಬಾ ಗಂಜಿ ಕಾಣದೆ ಬಳಲಿದೆನೋ ಎಂದು ವಿಜಯದಾಸರು ತಮ್ಮ ಹಿಂದಿನ ಪರಿಸ್ಥಿತಿಯನ್ನು ಒಂದು ಕೃತಿಯಲ್ಲಿ ಹೇಳಿಕೊಂಡಿದ್ದಾರೆ. ಜೀವನದ ಆರ್ಥಿಕಸ್ಥಿತಿ ಇಷ್ಟು ಮುಗ್ಗಟ್ಟಿನಲ್ಲಿದ್ದರೂ ಕಾಲಕಾಲಕ್ಕೆ ಮಾಡಬೇಕಾದ ಧಾರ್ಮಿಕ ವಿಧಿಗಳನ್ನು ನೆರವೇರಿಸುವುದು ಪ್ರಾಚೀನ ಭಾರತೀಯರ ಸಂಪ್ರದಾಯ ವಾಗಿದ್ದುದರಿಂದ ಯೋಗ್ಯ ವಯಸ್ಸಿನಲ್ಲಿ ಬ್ರಹ್ಮೋಪದೇಶವೂ, ಅನಂತರ ಕೆಲವು ವರ್ಷಗಳಲ್ಲಿ ಅರಳಮ್ಮ ಎಂಬ ಬಾಲಕಿಯೊಡನೆ ದಾಸಪ್ಪನ ವಿವಾಹವೂ ಆಯಿತು. ಆದರೆ ದಾರಿದ್ರ್ಯಕ್ಕೆ ವಿವಾಹ ಎಂದು ತಾನೆ ಮದ್ದಾದೀತು?

ಇದರಿಂದ ದಾರಿದ್ರ್ಯ ಅಧಿಕವಾಯಿತೇ ವಿನಾ ಪರಿಹಾರವಾಗಲಿಲ್ಲ. ಸಂಸಾರವನ್ನು ನೀಗಲಾರದೆಯೋ ಏನೋ ದಾಸಪ್ಪ ಮನೆಯಲ್ಲಿ ಯಾರಿಗೂ ತಿಳಿಸದೆ ತಂದೆ–ತಾಯಿಗಳನ್ನೂ ಕೈಹಿಡಿದ ಪತ್ನಿಯನ್ನೂ ಬಿಟ್ಟು ಮನ ಬಂದಲ್ಲಿಗೆ ತನ್ನ ಹದಿನಾರನೆಯ ವಯಸ್ಸಿನಲ್ಲಿ ಹೊರಟು ಹೋದನು. ಗೊತ್ತು ಗುರಿಗಳಿಲ್ಲದೆ ಮನೆ ಬಿಟ್ಟು ಹೊರಟ ದಾಸಪ್ಪನ ಕಾಲ ಸಂಸ್ಕಾರ ವಶದಿಂದ ತೀರ್ಥಯಾತ್ರಾಟನೆಯ ಕಡೆ ಒಲೈಸಿತು. ಆದರೆ ದುರದೃಷ್ಟಕರವಾದ ಜೀವನವನ್ನು ಎದುರಿಸಬೇಕಾದವರು ಎಲ್ಲಿ ಹೋದರೇನು? ವಿಧಿ ಎಲ್ಲೆಲ್ಲಿಯೂ ಹಿಂಬಾಲಿಸಬಹುದು ರಾಮೇಶ್ವರಕ್ಕೆ ಹೋದರೂ ಶನೀಶ್ವರ ಬಿಡ' ಎಂಬಂತೆ ದಾರಿಯಲ್ಲಿ ಕಳ್ಳರು ದಾಸಪ್ಪನ ಹತ್ತಿರವಿದ್ದ ವಸ್ತ್ರಗಳನ್ನೂ ಕೈಯಲಿದ್ದ ಪದಾರ್ಥಗಳನ್ನು ಬಿಡದೆ ಅಪಹರಿಸಿದರು. ಚೋರರಿಂದ ಇದ್ದ ಪದಾರ್ಥಗಳನ್ನೆಲ್ಲ ಕಳೆದುಕೊಂಡು ದಾಸಪ್ಪ ಭರತ ಖಂಡದ ತೀರ್ಥಕ್ಷೇತ್ರಗಳನ್ನು ಸಂದರ್ಶಿಸಿ ಭಕ್ತನ ವೇಷವನ್ನು ತಾಳಿ ಭಕ್ತರ ಗುಂಪೊಂದನ್ನು ಸೇರಿ ಅವರೊಡನೆ ಅನೇಕ ಕ್ಷೇತ್ರಗಳನ್ನು ಸಂದರ್ಶಿಸಿದನು. ಆಗ ದಾಸಪ್ಪ ನೀಳವಾದ ಗಡ್ಡ ಮೀಸೆಗಳನ್ನು ಬಿಟ್ಟು ಜಟಾಧಾರಿಯಾಗಿ ನಾಲ್ಕುವರ್ಷಗಳ ಕಾಲ ಭಕ್ತರೊಡನೆ ಸಂಚರಿಸುತ್ತಾ ಕಾಲ ಕಳೆದನು.

ಪ್ರಪಂಚದಲ್ಲಿ ಅನೇಕರು ಭಕ್ತರ ವೇಷವನ್ನು ಹಾಕಿಕೊಂಡು ದೇವರ ಸ್ಮರಣೆಯನ್ನು ಮಾಡುತ್ತಾ, ಹಲವು ಕೃತಿಗಳನ್ನು ತಮ್ಮ ಮನಬಂದಂತೆ ಹಾಡುತ್ತಾ ಹಣವನ್ನು ಸಂಪಾದಿಸಿ ಅದನ್ನೇ ಜೀವನ ವೃತ್ತಿಯನ್ನಾಗಿಸಿಕೊಳ್ಳುವುದುಂಟು. ಅಂತಹವರಿಗೆ ದೇವರಲ್ಲಿ ಹೆಚ್ಚಿನ ಜ್ಞಾನವಾಗಲೀ, ಭಕ್ತಿಯಾಗಲೀ ಇರದೆ, ಕೇವಲ ಧನ ಸಂಪಾದನೆಯ ಮಾಧ್ಯಮವನ್ನಾಗಿ ಭಗವನ್ನಾಮಸ್ಮರಣೆ ಮಾಡುವುದು ದಿನ ನಿತ್ಯದ ಕಾರ್ಯವಾಗಿರುತ್ತದೆ. ದಾಸಪ್ಪನೂ ತಾನು ದಾಸನೆಂದು ಹೇಳಿಕೊಂಡು, ಕೇವಲ ಉದರ ಪೋಷಣೆಗಾಗಿಯೇ ಕಪಟ ವೇಷವನ್ನು ಹಾಕಿಕೊಂಡು ಧನ ಸಂಪಾದನೆಗಾಗಿ ಕಾಶಿ, ರಾಮೇಶ್ವರ ಯಾತ್ರೆ ಮಾಡಿದವರೆಂದು ಸುಳ್ಳು ಹೇಳಿ ಜೀವನ ಮಾಡಿದ ವಿಚಾರವನ್ನು ವಿಜಯದಾಸರಾದ ಮೇಲೆ ಶ್ರೀ ಹರಿಯ ಕೃಪೆಯಿಂದ ಮೈ ಪುಳಕಗೊಂಡಾಗ ಮರೆಮಾಚದೆ ಹೇಳಿ-ಕೊಂಡಿರುವುದಲ್ಲದೆ ತಮ್ಮ ಹಿಂದಿನ ಜೀವನವನ್ನು ನೆನೆಸಿಕೊಂಡು ಅಂತಹ ಕಾರ್ಯ ನಡೆದುಹೋದುದಕ್ಕಾಗಿ ಪಶ್ಚಾತ್ತಾಪವನ್ನೂ ವ್ಯಕ್ತಪಡಿಸಿದ್ದಾರೆ.

ಬಂದೆನೂ ಭವರೋಗ ಬಂಧನದೊಳಗೆ
ದಾಸನು ನಾನೆಂದು ಧರಣಿಯೊಳಗೆ ಮಾಯ
ವೇಷವನು ಧರಿಸಿ ವ್ಯವಹಾರ ಮಾಡುತ್ತ
ಕಾಸು ಕಾಸಿಗೆ ಕಾಲು ಸುಟ್ಟ ಬೆಕ್ಕಿನಂತೆ
ದೇಶದೊಳಗೆನ್ನ ಸರಕನು ತೋರುತ್ತಾ
ಕಾಶಿ ರಾಮೇಶ್ವರದ ಯಾತ್ರೆಗೆ ಪೋದ ವಿ
ಶೇಷರು ನಾವೆಂದು ಸಟೆಯ ಪೇಳಿ
ದೋಷಕ್ಕೆ ಗುರಿಯಾದೆ ವಿಜಯ ವಿಠ್ಠಲ ತಂದೆ
ನೀ ಸುಲಭನೆಂದು ಎಣಿಸದೆ ಗುಣಿಸದೆ

ದಾಸಪ್ಪ ಯಾತ್ರೆಯನ್ನು ಮುಗಿಸಿಕೊಂಡು ತನ್ನ ೨೦ನೆಯ ವಯಸ್ಸಿನಲ್ಲಿ ಚೀಕನಪರಿವಿಗೆ ಬಂದನು. ದಾಸಪ್ಪನ ಮನೆಯವರು ಅವರ ಗುರುತನ್ನು ಹಿಡಿದು ಮನೆಗೆ ಕರೆದುಕೊಂಡು ಹೋಗಿ ಸಂಸಾರದಲ್ಲಿ ಆಸಕ್ತನಾಗುವಂತೆ ಮಾಡಿದರೆಂದು ಶ್ರೀ ಕೇಶವ ವಿಠಲರು ತಿಳಿಸಿರುತ್ತಾರೆ.

ವಿಜಯರಾಯರ ಪಾದಕಮಲ ಭಜಿಸಲಾಕ್ಷಣ
ಗ್ವಿಜಯ ಮಾಡಿಸಿ ಜನರನ್ನು ಪೊರೆವನುದಿನ,
ದಾಸಪ್ಪನೆಂಬ ನಾಮದಿಂದ ಕರೆಸುತ ಉದರ
ಗೋಸುಗದಿ ಪರರ ಬಳಿಯ ಆಶ್ರೈಸುತ
ಏಸು ಪರಿಯ ಬಡತನವು ಸೇಸಿ ದಣಿವುತ
ಕ್ಲೇಶಗೊಂಡು ಸುಲಿಸಿಕೊಂಡು ಕಾಶಿಗ್ಹೋಗುತ ೧

ವಾಸವಾಗಿ ಸನ್ಯಾಸಿ ವೇಷಧರಿಸುತ ನಿತ್ಯ
ಬ್ಯಾಸರದಲೆ ವ್ರತಗಳು ಉಪವಾಸ ಮಾಡುತ
ರಾಶಿ ರಾಶಿ ಜನರ ಕೂಡಿ ದೇಶ ಚರಿಸಿ ಮ್ಯಾಲೆ
ಕಾಶಿ ಬಿಟ್ಟು ಸೇತು ರಾಮೇಶನ್ನ ಹುಡುಕುತ್ತ ೨

ತಿರುಗಿ ತಿರುಗಿ ಚೀಕಲಾಪರಿಗೆ ಬಂದನು ಕಂಡು
ಗುರುತು ಹಿಡಿದು ಆ ಕ್ಷಣದಿ ಕರೆದು ಒಯ್ದರು
ಪರಮ ಸಂತೋಷದಿಂದ ಭರಿತರಾದರು ಮೈ
ನೆರೆದ ಶೋಭನಾದಿಗಳನು ತ್ವರಿತ ಮಾಡ್ದರು ೩

ಹೀಗೆ ತಮ್ಮ ಅರಿವಿಲ್ಲದಂತೆಯೇ ಮನೆಗೆ ಹಿಂದಿರುಗಿದ ದಾಸಪ್ಪನವರು ಶ್ರೀ ಹರಿಯ ಕೃಪೆಯಿಂದ ಪದಿನೆಂಟು ಗ್ರಾಮಗಳಿಗೆ "ಶಾನುಭೋಗರಾಗಿ" ನೇಮಕಗೊಂಡರು. ಆ ಕಾರ್ಯವನ್ನು ಹನ್ನೆರಡು ವರ್ಷಗಳ ಕಾಲ ಯಶಸ್ವಿಯಿಂದ ನಿರ್ವಹಿಸಿ ಸಂಸಾರದಲ್ಲಿ ಆಸಕ್ತರಾಗಿ ನೆಮ್ಮದಿಯ ಜೀವನವನ್ನು ಅವರು ನಡೆಸಿದರು. ಉದ್ಯೋಗ ಜೀವನ ಕೆಲ ಕಾಲ ಚೆನ್ನಾಗಿ ನಡೆಯಿತಾದರೂ ಆ ಕಾರ್ಯದಲ್ಲಿ ಏಳು ಬೀಳುಗಳನ್ನು ಅನುಭವಿಸುವ ಕಾಲ ಬಂದಿತು. ಸರ್ಕಾರದ ಹಣದ ಲೆಕ್ಕ ತಪ್ಪಿದ ಆಪಾದನೆ ಒಮ್ಮೆ ದಾಸಪ್ಪನ ಮೇಲೆ ಎರಗಿತು. ಆ ಹೊತ್ತಿಗೆ ಅವರ ತಂದೆಯವರು ನಿಧನರಾದುದರಿಂದ ಸಂಸಾರದ ಜವಾಬ್ದಾರಿ ಎಲ್ಲವೂ ದಾಸಪ್ಪನ ಮೇಲೆಯೇ ಒರಗಿತ್ತು. ಆರ್ಥಿಕ ಮುಗ್ಗಟ್ಟಿನಿಂದಲೂ ಮಾನಸಿಕ ಅಶಾಂತಿಯಿಂದಲೂ, ಜೀವನವನ್ನು ಎದುರಿಸುವ ಸಾಮರ್ಥ್ಯವನ್ನು ಅವರು ಕಳೆದುಕೊಂಡಾಗ ಅಪವಾದ ಅವಮಾನಗಳನ್ನು ಹೊತ್ತು ಬಾಳಲಸಾಧ್ಯವಾಗಿ

ಮನೆಯನ್ನು ತೊರೆದು ಗಂಗಾಭಿಮುಖರಾದರು. "ಸಂಕಟ ಬಂದರೆ ವೆಂಕಟರಮಣ" ಎನ್ನುವಂತೆ ಜೀವನವನ್ನು ಧೈರ್ಯದಿಂದ ಎದುರಿಸಿ ಜಯಿಸುವ ಶಕ್ತಿಯನ್ನು ಪಡೆಯಲೆಂದು ದಾಸಪ್ಪ ಕ್ರಿ.ಶ.೧೭೧೪ ರಲ್ಲಿ ಎಂದರೆ ತನ್ನ ಮೂವತ್ತೆರಡನೆಯ ವಯಸ್ಸಿನಲ್ಲಿ ಪುನಃ ಕಾಶಿಯ ಹಾದಿಯನ್ನೇ ಹಿಡಿದರೆಂದು ಕೇಶವವಿಠಲರು ಹೇಳಿದ್ದಾರೆ.

ವರ ಮಾತೃಪಿತೃ ಸಹೋದರರು ಸಹವಾಗಿ
ಬೆರೆತು ಮಾನವರಂತೆ ಸಂಸಾರ ವೃತ್ತಿಯಲಿ
ಎರ[ಡಾರು] ವರ್ಷ ಇರುತಿದು ಮೆಲ್ಲನೆ ಹರಿ
ವರ ಕೃಪೆಯ ಆಗೆ ತಿಳಿದು
ಮತ್ತೆ ಪೊರಟರು ಶ್ರೀ ಉತ್ತುಮ ಶ್ಲೋಕ ಹರಿ
ಪೆತ್ತ ಗಂಗೆಯ ಸ್ನಾನ ಗಯದಲ್ಲಿ ಪಿಂಡವ
ನಿತ್ತು ಮರಳಿ ಬಂದು ವಾರಣಾಸಿಯಲ್ಲಿ
ಉತ್ತಮರ ಸಂಗದಿಂದ
ನಿತ್ಯ ಸಂಸಾರದಲ್ಲಾಸಕ್ತರಾಗುತ ದೊಡ್ಡ
ಹತ್ತು ಎಂಟು ಗ್ರಾಮವನ್ನು ಒತ್ತಿ ಆಳುತ
ಗುತ್ತಿಗೆಯ ಹೊತ್ತರೊಕ್ಕ ಮ್ಯಾಲೆ ಬೀಳುತಾ ಇನ್ನು
ಎತ್ತ ಸೇರಲೆಂದು ಭಾಗೀರಥಿಗೆ ಹೋಗುತ

ಹೀಗೆ ದಾಸಪ್ಪನವರ ಜೀವನದಲ್ಲಿ ನಡೆದ ಘಟನೆಯನ್ನು ಶ್ರೀ ಕೇಶವವಿಠಲರು ಹೇಳಿದ್ದಾರೆ "ಗಯದಲಿ ಪಿಂಡವನಿತ್ತು ಮರಳಿ" ಎಂದು ಹೇಳಿರುವುದರಿಂದ ದಾಸಪ್ಪ ಎರಡನೆಯ ಬಾರಿಗೆ ಕಾಶಿಗೆ ಹೋಗುವ ಹೊತ್ತಿಗೆ ಅವರ ತಂದೆಯವರು ದೈವಾಧೀನರಾಗಿದ್ದರೆಂದು ಊಹಿಸಬಹುದು. ಕಾಶಿಯ ಪವಿತ್ರವಾದ ಗಂಗಾನದಿಯ ಸ್ನಾನದಿಂದಲೂ, ವಿಶ್ವೇಶ್ವರನ ದರ್ಶನದಿಂದಲೂ ದಾಸಪ್ಪನವರನ್ನು ಜನ್ಮ ಜನ್ಮಾಂತರಗಳಿಂದ ಅಂಟಿಕೊಂಡು ಬಂದ ಪಾಪ ಪರ್ವತವು ಸೂರ್ಯನನ್ನು ಕಂಡ ಮಂಜಿನಂತೆ ಕರಗಿತು. ಮನೋಭಿಮಾನಿಯಾದ ಕಾಶಿಯ ವಿಶ್ವೇಶ್ವರ ದಾಸಪ್ಪನವರ ಮನಸ್ಸಿಗೆ ಶಾಂತಿಯನ್ನು ನೀಡುವಂತಹ ಹರಿದಾಸ ದೀಕ್ಷೆಗೆ ನೆರವಾದನು.

## ಅಂಕಿತೋಪದೇಶ

ಒಂದು ದಿನ ದಾಸಪ್ಪನವರು ಕಾಶಿಯಲ್ಲಿ ಮಲಗಿರಲು ಒಂದು ಅದ್ಭುತ ಸ್ವಪ್ನವೊಂದನ್ನು ಕಂಡರು. ಶ್ರೀ ಪುರಂದರ ದಾಸರು ಬಂದು ಮಗುವನ್ನು ತಟ್ಟಿ ಎಬ್ಬಿಸುವಂತೆ ದಾಸಪ್ಪನನ್ನೆಬ್ಬಿಸಿ ನಿರಂತರ ಪ್ರವಾಹದಿಂದ ತುಂಬಿದ ಗಂಗಾ ಸಲಿಲವನ್ನು ದಾಟಿಸಿ ವ್ಯಾಸ ಕಾಶಿಗೆ ಕರೆದುಕೊಂಡು ಹೋದರು. ಅಲ್ಲಿ ಶ್ರೀ ವೇದವ್ಯಾಸರ ದರ್ಶನವಾಯಿತು. ಶ್ರೀ ಪುರಂದದಾಸರು ತಂಬೂರಿ, ತಾಳ. ಗೆಜ್ಜೆಗಳನ್ನಿತ್ತು ಆಶೀರ್ವದಿಸಿ "ವಿಜಯವಿಠಲ" ಎಂಬ ಅಂಕಿತವನ್ನು ದಯಪಾಲಿಸಿದರು. ಆ ಹೊತ್ತಿಗೆ ಕಾಶಿಯ ವಿಶ್ವೇಶ್ವರನಿಗೆ ಸುಪ್ರಭಾತವನ್ನು ಬಯಸುವ ದೇವಾಲಯದ ಘಂಟಾನಾದವು ದಾಸಪ್ಪನಿಗೆ ಕೇಳಿ ಬಂದಿತು. ಕಂಡ ಕನಸು ನನಸಿನಂತೆ ಮನಸ್ಸಿನಲ್ಲಿ ಅಚ್ಚೊತ್ತಿದ್ದಿತು. ಎಚ್ಚೆತ್ತರೂ ಇನ್ನೂ ವ್ಯಾಸ ಕಾಶಿಯಲ್ಲಿ ಶ್ರೀ ಪುರಂದರ ಗುರುಗಳೊಡನೆ ಶ್ರೀ ವೇದವ್ಯಾಸ ಮಹರ್ಷಿಗಳ ಸನ್ನಿಧಾನದಲ್ಲಿ ವೇದೋಪನಿಷತ್ತುಗಳ ತತ್ತ್ವೋಪದೇಶವಾಗುತ್ತಿರುವಂತೆಯೇ ಭಾಸವಾಯಿತು. ಶ್ರೀ ಪುರಂದರದಾಸರು ಕರುಣೆಯಿಂದ ಹರಿದಾಸ ದೀಕ್ಷೆಯನ್ನು ನೀಡಿ ಅಂಕಿತೋಪದೇಶ ಮಾಡಿದುದರಿಂದ, ದಾಸಪ್ಪನ ಮನಸ್ಸು ಸಂತೋಷಗೊಂಡು ಮನಸ್ಸಿನಲ್ಲಿದ್ದ ಅನೇಕ ಆಲೋಚನೆ, ಅಶಾಂತಿ, ಆತಂಕಗಳು ಒಮ್ಮೆಲೇ ಸರಿದು ಹೋದವು. ಲೋಕದ ವಿಷಯದಲ್ಲಿ ವೈರಾಗ್ಯವೂ ಲೋಕೈಕ ಪುರುಷನಲ್ಲಿ ಅವಿಚ್ಛಿನ್ನವಾದ ಭಕ್ತಿಯೂ ಉಂಟಾಯಿತು. ತಂಬೂರಿಯನ್ನು ಹಿಡಿದು ಕಾಲಿಗೆ ಗೆಜ್ಜೆಯನ್ನು ಕಟ್ಟಿ ಕೈಯಲ್ಲಿ ಚಿಟಿಕೆಯನ್ನು ಹಿಡಿದು,

ಗುರು ಪುರಂದರ ದಾಸರೇ ನಿಮ್ಮ ಚರಣ ಸರಸಿಜ ನಂಬಿದೆ
ಗರುವ ರಹಿತನ ಮಾಡಿ ಎನ್ನನು ಪೊರೆವ ಭಾರವು ನಿಮ್ಮದೆ

ಎಂದು ಭಕ್ತಿಯಿಂದ ತಮ್ಮ ಜೀವನದ ಮಾರ್ಗದರ್ಶಕರಾದ ಶ್ರೀ ಪುರಂದರ ದಾಸ ಗುರುವರ್ಯರನ್ನು ಕುರಿತು ಹಾಡಿದರು.

# ಸಾಧನೆ

ಶ್ರೀ ಪುರಂದರದಾಸರ ಅನುಗ್ರಹ ದಾಸಪ್ಪನವರಿಗೆ ದೊರೆತ ಮೇಲೆ ಹರಿಭಕ್ತಿಯಿಂದ ಜೀವನವನ್ನು ಸಾರ್ಥಕಪಡಿಸಿಕೊಳ್ಳಬೇಕೆಂಬ ಹಂಬಲ ಅವರ ಹೃನ್ಮನಗಳನ್ನು ತುಂಬಿತು ಭಗವಂತನನ್ನು ಕುರಿತು ಅವರು ಅನನ್ಯವಾಗಿ ಸ್ತೋತ್ರ ಮಾಡಲಾರಂಭಿಸಿದರು. ಆಗ ಅವರ ಕಣ್ಣಿಗೆ ಕಂಡ ದೇವಾಲಯದ ಮೂರ್ತಿಗಳು ಕಲ್ಲಾಗಿರಲಿಲ್ಲ. ಅಲ್ಲಿ ಭಗವಂತನ ವಿಶೇಷ ವಿಭೂತಿಯನ್ನು ಮಹಿಮಾ-ತಿಶಯಗಳನ್ನು ಕಂಡು ಆನಂದದಿಂದ ಭಜನೆ ಮಾಡುತ್ತಿದ್ದರು. ಸರಸ್ವತಿಯ ಅನುಗ್ರಹದ ಬಲದಿಂದ ಒಂದಾದ ಮೇಲೊಂದರಂತೆ ಅರಳಿದ ಆಶುಕವಿತಾ ಕುಸುಮಗಳನ್ನು ವಿಜಯವಿಠಲನ ಅಡಿದಾವರೆಗಳಲ್ಲಿ ಅವರು ಭಕ್ತಿಯಿಂದ ಸಮರ್ಪಿಸಲಾರಂಭಿಸಿದರು. ಇದರಿಂದ ಜೀವನದ ಅನೇಕ ಆತಂಕಗಳು ತತ್ಕಾಲದಲ್ಲಿ ಮರೆಯಾಗಿ, ಶ್ರೀ ಹರಿಯ ಸ್ಮರಣೆ, ಧ್ಯಾನಗಳಿಂದ ಬಾಳನ್ನು ಬೆಳಗಿಸಿಕೊಳ್ಳಬೇಕೆಂಬ ಅಪೇಕ್ಷೆ ಬಲವಾಗಿ, ಪ್ರಾಪಂಚಿಕ ಸುಖಾಪೇಕ್ಷೆ ಕಡಿಮೆಯಾಗಿ ಬಾಳು ಹಗುರವಾಯಿತು.

"ಈಸಬೇಕು ಇದ್ದು ಜಯಿಸಬೇಕು" ಎಂಬ ಪುರಂದರ ದಾಸರ ಉಕ್ತಿಯನ್ನು ನೆನೆಯುತ್ತಾ, ನಂಬಿದ ಸತಿಯನ್ನು ಸಹೋದರನನ್ನೂ ಕಾಪಾಡುವ ದೃಷ್ಟಿಯಿಂದ ದಾಸರು ತಮ್ಮ ಊರಾದ ಚೀಕನಪರಿವಿಗೆ ತಾವಾಗಿಯೇ ಹಿಂದಿರುಗಿದರು. ಹರಿದಾಸರಾದ ಮೇಲೆ ಜೀವನದಲ್ಲಿ ತಮ್ಮ ಪಾಲಿನ ಜವಾಬ್ದಾರಿಯನ್ನು ಮರೆಯಲಿಲ್ಲ. ಆದರೆ ಹೆಚ್ಚಿನ ಮಮತೆ ಮೋಹಗಳನ್ನು ಸಂಸಾರದಲ್ಲಿ ತಾಳದೆ ಎಲ್ಲರೂ ತಮ್ಮೊಂದಿಗೆ ಸಾಧನಾ ನೌಕೆಯನ್ನೇರಲು ಸಹಕರಿಸಿ ನಾವಿಕರಾದವರು ವಿಜಯದಾಸರು. ಹರಿದಾಸರ ಜೀವನದ ವೈಶಿಷ್ಟವೇ ಹೀಗಿದೆ. ಅರಿಷಡ್ವರ್ಗಗಳನ್ನು ಜಯಿಸಿ ಶ್ರೀಹರಿ ಕೊಟ್ಟ ಸಂಪತ್ತಿನಿಂದ ತೃಪ್ತ ಜೀವನವನ್ನೂ ನಡೆಸಬೇಕೆಂಬುದು ಹರಿದಾಸರ ಉಪದೇಶವಾಗಿ ಅಂತಹ ಆದರ್ಶ ಜೀವನವನ್ನು ವಿಜಯದಾಸರ ಚರಿತ್ರೆಯಲ್ಲಿ ನಾವು ಗುರುತಿಸಬಹುದಾಗಿದೆ.

ದಾಸಪ್ಪ ವಿಜಯದಾಸರೆಂದು ಕರೆಸಿಕೊಂಡ ತಕ್ಷಣದಲ್ಲಿಯೇ ಅವರ ಜೀವನದ ಎಲ್ಲ ಸಮಸ್ಯೆಗಳೂ ಬಗೆಹರಿಯಲಿಲ್ಲ. ಅವರು ಶ್ರೀಮಂತರೂ ಆಗಲಿಲ್ಲ. ಸಂಸಾರದ ಪರಿಸ್ಥಿತಿ ಎಂದಿನಂತೆಯೇ ಇತ್ತು. ಬಡತನದ ಬೇಗೆ ಹೆಚ್ಚಿದ್ದರೂ ಪರಮಾತ್ಮನನ್ನೆ ಅದರ ಪರಿಹಾರಕ್ಕಾಗಿ, "ನೊಂದು ಸಂಸಾರದೊಳು ವಂದಿಸಿದೆನೊ! ಇಂದು ಬಿಂದು ಮಾಧವಾ!" ಎಂದು ಮೊರೆಹೊಕ್ಕರೇ ವಿನಾ ಅನ್ಯ ದೈವಗಳ ಬಳಿ ಹೋಗಲಿಲ್ಲ. ತಮಗಿಂತ ಬಡತನವನ್ನನುಭವಿಸುವವರನ್ನು ಕಂಡು ಅಂತಹವರನ್ನು ಪರಮಾತ್ಮ ಏಕೆ ಹುಟ್ಟಿಸಿದನೆಂದು ಸಹಾನಭೂತಿಯಿಂದ ಪ್ರಶ್ನಿಸಿದರು.

ಯಾಕೆ ಪುಟ್ಟಿಸಿದಿ ಇನ್ನೂ ಇಲೊ ಹರಿಯೆ
ಲೋಕದೊಳನುಗಾಲ ತಿರಿದು ತಿಂಬುವಂತೆ ಮಾಡಿ
ಒಡಲಿಗಾಗಿ ಒಬ್ಬನ ಸಂಗಡ ಹೋಗಲು
ಕೊಡುವವನು ಇಲ್ಲೆಂದು ಪರಿಹರಿಸುವ
ಸುಡು ಈ ಶರೀರದ ಬಳಲಲಾರೆನೊ, ವಿಷದ
ಮಡುವನಾದರು ಧುಮಕಿ ಮರಣನಾಗುವೆ ರಂಗ ೧

ಪ್ರತಿದಿನವು ಅನ್ನ ಕೊಡುವವನ ಬಾಗಿಲಿಗ್ಹೋಗೆ
ಹತನಾಗುವನು ಎನ್ನ ನೋಡುತಲಿ
ಕ್ಷಿತಿಯೊಳಗೆ ಈ ಪರಿ ಬದುಕಿರೋದಕಿಂತ
ಹತವಾಗಬಹುದು ದಂಬಿನ ಮೊನೆಗೆ ಬಿದ್ದು ರಂಗಾ ೨

ಎಲ್ಲಿ ಬೇಡಿದರಿಲ್ಲವೆಂಬೊ ಸೊಲ್ಲೆಲ್ಲಿದೇ
ಒಲ್ಲೆನೋ ಸಾಕು ಈ ನರಜನ್ಮವು
ಬಲ್ಲಿದ ಬಲ್ಲಿದರರಸ ಸಿರಿ ವಿಜಯ ವಿಠಲ ನಿ
ನ್ನಲ್ಲಿ ದೂತರ ಸಂಗದಲ್ಲಿ ಸುಖಬಡಿಸೋ ೩

ಯಾವ ಸಂಪಾದನೆಯೂ ಇಲ್ಲದೆ ಅನೇಕ ದಿನಗಳು ಉಪವಾಸ ಮಾಡಿ ಮನುಷ್ಯನೊಬ್ಬ ಬಾಳನ್ನು ಬಹು ಕಷ್ಟದಿಂದ ನೂಕಬೇಕಾದ ಪರಿಸ್ಥಿತಿಯಲ್ಲಿ ಭಿಕ್ಷಾಟನೆ ಮಾಡಿ ಅವನು ಜೀವನವನ್ನು ಮಾಡಬೇಕಾಗುತ್ತದೆ. ಆಗ ಅಂತಹವರಿಗಾಗುವ ಅವಮಾನ–ದು:ಖ ಅಷ್ಟಿಷ್ಟಲ್ಲ. ಅವಮಾನವನ್ನು ಸಹಿಸಿ ಒಂದು ತುತ್ತನ್ನಕ್ಕಾಗಿ ಯಾಚಿಸಿದಾಗ ಅದು ದೊರಕದಿರಲು ಬೇಡು–ವವರಿಗಾಗಬಹುದಾದ ದು:ಖವನ್ನು ಯಾವ ಮಾತುಗಳಲ್ಲಿ ತಾನೆ ವಿವರಿಸಲು ಸಾಧ್ಯ? ಜ್ಞಾನವಿದ್ದರೇನು ? ಭಕ್ತಿಯಿದ್ದರೇನು ? ಶ್ರೀಮಂತ ಜೀವನವನ್ನು ನಡೆಸುವ ಸುಯೋಗ ಒದಗದಿದ್ದರೂ ಹುಟ್ಟಿದ ಮನುಷ್ಯನಿಗೆ ಪ್ರತಿದಿನವೂ ಅತ್ಯಗತ್ಯವಾದ ಒಂದು ಹೊತ್ತಿನ ಊಟವು ದೊರೆಯದಿದ್ದರೆ ಮನುಷ್ಯನ ಸ್ಥೈರಣೆ ಮಿತಿ ಮೀರದಿರುವುದೆ ? ಅಂತಹ ಪರಿಸ್ಥಿತಿಯಲ್ಲಿ ಮನುಷ್ಯ ತಾನು ಮಾಡ–ಬಹುದಾದಂತಹ ಕಾರ್ಯ ಸರಿಯೇ? ತಪ್ಪೇ? ಎಂದು ಯೋಚಿಸುವ ಶಕ್ತಿಯನ್ನು ಸ್ಥೈರಣೆಯನ್ನೂ ಕಳೆದುಕೊಳ್ಳಬಹುದು. ಎಲ್ಲ ಮಹಾಪಾತಕಗಳಿಗಿಂತಲೂ ಹಿರಿಯಪಾತಕವೆಂದೆನಿಸಿಕೊಂಡಿರುವ ಆತ್ಮಹತ್ಯೆಯ ಕಡೆಗೂ ಮನುಷ್ಯನ ಮನಸ್ಸು ಆಗ ಓಲೈಸಬಹುದು. ಅಂತಹ ದಾರಿದ್ರ್ಯ ಲೋಕದ ಯಾವ ಮಾನವನಿಗೂ ಬರದಿರಲೆಂದು.

ಇರಬಾರದು ಬಡವ ಜಗತ್ತಿನೊಳಗೆ
ಪರದೇಶಿ ಮಾನವಗೆ ದಿಕ್ಕು ಮತ್ತಾವನೋ?

ಎಂಬ ಕೃತಿಯನ್ನು ಅವರ ಹೃದಯ ಹಾಡಿತು. ಶ್ರೀಮಂತರೆಂದು–ರಾಜರೆಂದು ಅವರಲ್ಲಿ ಬಡವ ಬೇಡಲು ಹೋದರೆ ಸಿಗಬಹುದಾದುದೇನು? ಪೊಡವಿಪತಿ ದೃಷ್ಟಿಗಳು ಒಳ್ಳೆದಲ್ಲವೆಂದು ಬಿಡದೆ ಜನ ಹೇಳುವುದು ಸಿದ್ಧವಯ್ಯ ಎಂಬ ಮಾತಿನ ಸತ್ಯ ಅನುಭವಕ್ಕೆ ಬರಬಹುದು. ಅಲ್ಲದೆ ಮರಳಿ ಮಾತಾಡಿದರೆ ಅಪರಾಧ ಹೊರಿಸುವರಾದುದರಿಂದ ಬೇಡುವುದಾದರೆ ಶ್ರೀ ಹರಿಯೊಬ್ಬನನ್ನು ಮಾತ್ರ ಬೇಡಬೇಕೆಂದು ದಾಸರು ಹೇಳುತ್ತಾರೆ.

ಲೋಕದ ಬಡ ಮನಸ್ಸಿನ ಶ್ರೀಮಂತ ಮನುಜರನ್ನೂ ಅವರ ಕ್ರಿಯೆಗಳನ್ನೂ ಶ್ರೀಹರಿಯು ಗುಣವೈಲಕ್ಷಣ್ಯಗಳೊಡನೆ ಹೋಲಿಸಿ ಆಯಾ ಜೀವರ ಕರ್ಮಾನುಸಾರವಾಗಿ ಪ್ರತಿಯೊಂದು ಫಲವನ್ನು ಅವರವರಿಗೆ ನಿರ್ವಂಚನೆಯಾಗಿ ಕೊಡುವ ನ್ಯಾಯಮೂರ್ತಿಯಾದ ಶ್ರೀ ಹರಿಯ ರೂಪ-ಕಾರ್ಯಗಳು ಮನಸ್ಸಿನಲ್ಲಿ ಸುಳಿದು ಇತರರನ್ನು ಬೇಡಿ ಅವಮಾನ ಹೊಂದುವುದಕ್ಕಿಂತ ಲೋಕೇಶ್ವರನನ್ನು ಕೊಂಡಾಡಿ ಅವನ ಕೃಪೆ ಹೊಂದುವುದು ಲೋಕದ ಎಲ್ಲ ಸಂಪತ್ತಿಗಿಂತಲೂ ಅಧಿಕವೆಂದು ತಿಳಿದು, ಆ ದೇವ ದೇವೋತ್ತಮನನ್ನು ಕೊಂಡಾಡುತ್ತಾ ಸರ್ವಜೀವರಲ್ಲಿಯೂ ಸರ್ವಕಾಲಗಳಲ್ಲಿಯೂ ವ್ಯಾಪ್ತನಾಗಿ ಕೊಡುವ-ಕೊಂಬುವ ಎರಡೂ ಶ್ರೀಹರಿಯ ಕ್ರಿಯೆಗಳೇ ಎಂಬ ಅನುಸಂಧಾನದಿಂದ ಶ್ರೀಹರಿಯ ಲೀಲೆಯನ್ನು ಆನಂದಬಾಷ್ಪ ಲೋಚನರಾಗಿ ದಾಸರು ಕೊಂಡಾಡಿದರು. ಜೊತೆಗೆ ಸಾಮಾನ್ಯ ಜನರ ರೀತಿ-ನೀತಿಗಳನ್ನು ವಿಮರ್ಶಿಸಿದರು.

ಕೊಡುವವನು ನೀನು ಕೊಂಬುವವನು ನಾನು
ಬಡಮನದ ಮನುಜರನ ಬೇಡಿದರೇನುಂಟು ಪ

ಹದಿನಾರು ಪಲ್ಲುಗಳ ತೆರೆದು ಆಲ್ಪರಿದರೆ
ಇದು ಸಮಯವಲ್ಲೆಂದು ಪೇಳುವನೊ
ಮದನ ಕೇಳಿಗೆ ನೂರು ಒಂದು ಮಾಡಿ ನೋಡುವನು
ಮದಡ ಮನುಜ ಎನಗೆ ಏನು ಕೊಡುವನೊ ಹರಿಯೆ ೧

ಗತಿಯಿಲ್ಲವೆಂದು ನಾನಾ ಪ್ರಕಾರದಿಂದ
ಮತಿಗೆಟ್ಟು ಪೊಗಳಿದರೆ ಅವನು ತನ್ನ
ಸತಿಸುತರ ಕೇಳಬೇಕೆನುತ ಮುಖದಿರುಹುವನು
ಅತಿ ದುರುಳ ಮತ್ತೇನು ಕೊಡುವನೊ ಹರಿಯೆ ೨

ಹೀನವೃತ್ತಿ ಜನರ ಆಶೆಯನು ಮಾಡುವರು
ಗಾಣದೆತ್ತು ತಿರುಗಿ ಬಳಲಿದಂತೆ
ಭಾನು ಕೋಟಿ ತೇಜ ವಿಜಯವಿಠಲರೇಯ
ನೀನಲ್ಲದನ್ಯತ್ತ ಕೊಡುವ ಕೊಂಬುವರುಂಟೆ ೩

ಪ್ರಾಪಂಚಿಕ ಜೀವನದಲ್ಲಿ ಎಷ್ಟೆ ಕಷ್ಟಗಳಿದ್ದರೂ. ಅವುಗಳನ್ನು ಕಡೆಗಣಿಸಿ ಪರಮಾತ್ಮನ ದರ್ಶನಕ್ಕಾಗಿ ಹಂಬಲಿಸುವವರೇ ಭಕ್ತರು. ಮಾನವ ಜನ್ಮದಲ್ಲಿ ಮಾತ್ರ ಭಕ್ತಿ ಸಾಧನೆಗೆ ಅವಕಾಶವಿರುವುದನ್ನರಿತ ದಾಸರು ಅದಕ್ಕಾಗಿ ಜೀವನದ ಪ್ರತಿ ನಿಮಿಷವನ್ನೂ ವ್ಯಯ ಮಾಡುತ್ತಿದ್ದರು.

ಆರಾದರು ಛೀ ಎನಲಿ ಆರಾದರೂ ಥೂ ಎನಲಿ
ಆರಾದರು ಹಳಿಯಲಿ ಆರಾದರೂ ಮುಳಿಯಲಿ
ಆರಾದರು ಬೈಯಲಿ ಆರಾದರೂ ನಿಂದಿಸಲಿ
ಆರಾದರು ಪೇಕ್ಷಿಸಲಿ ಆರಾದರಾಡಿ ಕೊಳ್ಳಲಿ
ಪ್ರೇರಕ ಸರ್ವರಿಗೆ ವಿಜಯ ವಿಠಲ

ಎಂದು ಚಿಂತಿಸಿ ನಾನು ನಿನ್ನ ಸೇವಕ ಏನಾದರೂ ಬರಲಿ ನಿನ್ನ ಬಿಡುವೆನೆ ರಂಗಾ ಎಂದು ಪ್ರತಿಜ್ಞೆ ಮಾಡಿದರು. ವಿಜಯದಾಸರ ದೃಷ್ಟಿ ನಿರಂತರವೂ ತತ್ತ್ವಜ್ಞಾನಾಭಿಮುಖವಾಗಿರುತ್ತಿತ್ತು. ದಿನಗಳುರುಳಿದಂತೆ ವೇದ, ಉಪನಿಷತ್ತು, ಪುರಾಣ ಮೊದಲಾದ ಶಾಸ್ತ್ರಗ್ರಂಥಗಳಲ್ಲಿ ಉಕ್ತವಾಗಿರುವ ಶ್ರೀ ಹರಿಯ ವಿಶೇಷ ಮಹಿಮಾತಿಶಯಗಳನ್ನು ತಿಳಿದು ಭಕ್ತಿ ಭಾವ ಪರವಶರಾಗುತ್ತಿದ್ದರು. ಆಗ ಆನಂದೋದ್ರೇಕದಿಂದ ಮೈ ಮರೆತು ಶ್ರೀ ಹರಿಯನ್ನು ಕುರಿತು ಹಾಡಿದ ಕೃತಿಗಳ ಸಂಖ್ಯೆ ಎಷ್ಟೆಂದು ಬಲ್ಲವರಾರು ? ಆ ಸ್ತೋತ್ರವಾಹಿನಿ ಓತ ಪ್ರೋತವಾಗಿ ಹರಿಯುತ್ತಿತ್ತು. ಅಂತಹ ಸ್ತೋತ್ರಗಳನ್ನು ಕೇಳಿದ ಸುತ್ತಮುತ್ತಲಿನ ಭಕ್ತ ಜನ ಸಮೂಹ ದಾಸರ ವಾಕ್ ಚಾತುರ್ಯತೆಗೆ ಬೆರಗಾಗುತ್ತಿದ್ದರು. ವಿಜಯದಾಸರಿಗೆ ಶ್ರೀ ಹರಿಯ ಕರುಣೆ ಅಪಾರವಾಗಿರುವುದಾಗಿ ಜನತೆ ಅಂತಹ ಸಂದರ್ಭಗಳಲ್ಲಿ ಭಾವಿಸುತ್ತಿದ್ದರು. ಕೂಸಿ ಮಗ ದಾಸ ಎಂದು ಉದಾಸೀನದಿಂದ ಕರೆಯುತ್ತಿದ್ದ ಜನರೂ ವಿಶೇಷವಾದ ಗೌರವವನ್ನು ತೋರಿಸಲಾರಂಭಿಸಿದರು. ಅನೇಕರು ಇವರ ಶಿಷ್ಯರಾಗಿ ಆಶೀರ್ವಾದಗಳನ್ನು ಪಡೆದರು. ಕಾಲ ಕಳೆದಂತೆ ಶ್ರೀಮಂತ ವರ್ಗ ವಿಜಯದಾಸರನ್ನು ಅಸಾಮಾನ್ಯ ವ್ಯಕ್ತಿ ಎಂದು ಪರಿಗಣಿಸಿ ಗೌರವಾದರಗಳನ್ನು ತೋರಿಸಿ ಅಂತಹವರ ಮನಸ್ಸಂತೋಷ ಪಡಿಸಿ ತಾವು ಧನ್ಯರಾಗಲು ಅವಕಾಶವನ್ನು ಕಾಯುತ್ತಿದ್ದರು.

ಏಕಾಕಿಯಾಗಿ ತಿರುಗುತ್ತಿದ್ದ ದಾಸಪ್ಪ ವಿಜಯವಿಠಲನ ಕರುಣೆಯಿಂದ ಶಿಷ್ಯವರ್ಗದೊಡನೆ ವಿಜೃಂಭಣೆಯಿಂದ ಸಂಚರಿಸುತ್ತಾ, ಹಿರಿಯ ಗುರುಪೀಠವನ್ನೇರಿ ನಾಡಿನ ಜನರ ಅಜ್ಞಾನಾಂಧಕಾರವನ್ನು ಪರಿಹರಿಸುತ್ತಾ ಪ್ರಸಿದ್ಧರಾಗಿ ಬೆಳಗಿದರು. ಒಂದು ಹೊತ್ತಿನ ಭೋಜನಕ್ಕೆ ಕಷ್ಟವಾಗುತ್ತಿದ್ದವರಿಗೆ ಶ್ರೀ ಹರಿಯ ಕೃಪೆಯಿಂದ ಬಳಿಕ ಅನೇಕರಿಗೆ ಮೃಷ್ಟಾನ್ನ ಭೋಜನ ಮಾಡಿಸುವಂತಹ ಶಕ್ತಿಯನ್ನು ಪಡೆಯುವಂತಾಯಿತು. ಮನೆ ಮನೆಗಳನ್ನು ತಿರುಗಿ, ಕಷ್ಟಪಟ್ಟು ದುಡಿದರೂ, ನಾಲ್ಕು ಕಾಸು ಕೈಗೆಟುಕದ ಕಾಲ ಮಾಯವಾಗಿ ದಾಸರಿದ್ದಲ್ಲಿಗೇ ದ್ರವ್ಯ ಪ್ರಾಪ್ತಿಯಾಗುವ ಯೋಗ ಒದಗಿ ಬಂದಿತು. ಜೀರ್ಣ ಮಲಿನ ವಸ್ತ್ರ ದೊರೆಯದ ಸ್ಥಿತಿ ಮರೆಯಾಗಿ ನಯವಾದ ಶುಭ್ರ ರೇಷ್ಮೆ ವಸ್ತ್ರಗಳನ್ನುಟ್ಟು ಶೋಭಿಸಿದರು. ಸಂಜೆ ತನಕ ಕೆಲಸ ಮಾಡಿ ಸಣ್ಣ ಸೌಟಿನ ತುಂಬ ಗಂಜಿ ಕಾಣದವರು ಕಾಲಕಾಲಕ್ಕೆ ಪ್ರತಿ ದಿನವೂ ಭಕ್ಷ್ಯ ಭೋಜ್ಯಗಳ ಭೋಜನವನ್ನು ಸವಿಯುವ ಸೌಭಾಗ್ಯವನ್ನು ಪಡೆದರು. ಆದರೆ ಜೀವನದಲ್ಲಾದ ಈ ಗಮನಾರ್ಹವಾದ ಬದಲಾವಣೆಯಿಂದ ವಿಜಯದಾಸರಿಗೆ ಅಹಂಕಾರ ಬರಲಿಲ್ಲ. ಎಲ್ಲವೂ ತಮ್ಮ ಕಾವ್ಯಶಕ್ತಿಯಿಂದ ಎಂದು ಗರ್ವಕ್ಕೊಳಗಾಗಲಿಲ್ಲ, ಅರಿಷಡ್ವರ್ಗಗಳನ್ನು ಜಯಿಸಿದ್ದ ದಾಸರು ಎಲ್ಲವೂ ಶ್ರೀ ಕೃಪೆಯೆಂದೇ ಭಾವಿಸಿ ತಮ್ಮ ಹಿಂದಿನ ಜೀವನವನ್ನು ಸಿಂಹಾವಲೋಕನ ಮಾಡಿಕೊಂಡು ಶ್ರೀ ಹರಿಯ ವಿಚಿತ್ರ ಮಹಿಮೆ-ಕೃಪೆಗೆ ತಲೆದೂಗಿ ವಿಸ್ಮಯ ಮೂಕರಾದರು. ದೃಢವಾದ ತತ್ತ್ವಜ್ಞಾನದಿಂದುದಯಿಸಿದ ಭಕ್ತಿಯಿಂದ ಶ್ರೀ ಹರಿಯ ಅಗಾಧ ಶಕ್ತಿಯನ್ನು ಕೊಂಡಾಡಿ ತಮ್ಮ ಅಸ್ವಾತಂತ್ರ್ಯವನ್ನು ಅರಿತುಕೊಂಡು ಹೀಗೆ ಹಾಡಿದರು.

ನಿನ್ನ ಒಲುಮೆಯಿಂದ ನಿಖಿಳ ಜನರು ಬಂದು  
ಮನ್ನಿಸುವರೋ ಮಹರಾಯ  
ಎನ್ನ ಪುಣ್ಯಗಳಿಂದ ಈ ಪರಿಯುಂಟೇನೊ  
ನಿನ್ನದೆ ಸಕಲ ಸಂಪತ್ತು  
ಒಬ್ಬ ಹೆಂಗಸಿಗೆ ಹೊಟ್ಟೆಗೆ ಹಾಕುವುದಕಿನ್ನು  
ತಬ್ಬಿಬ್ಬುಗೊಂಡೆನೊ ಹಿಂದೆ

ನಿಬ್ಬರದಿಂದಲಿ ಸರ್ವರ ಕೊಡುಂಬೊ
ಹಬ್ಬವನುಣಿಸುವಿ ಹರಿಯೆ ೧

ಸಂಜೆತನಕವಿದ್ದು ಸಣ್ಣಸೌಟಿನ ತುಂಬ
ಗಂಜಿ ಕಾಣದೆ ಬಳಲಿದೆನೊ
ವ್ಯಂಜನ ಮೊದಲಾದ ನಾನಾ ರಸಂಗಳ
ಭುಂಜಿಸುವುದು ಮತ್ತೇನೊ ೨

ಜೀರ್ಣ ಮಲಿನ ವಸ್ತ್ರ ಕಾಣದ ನರನಿಗೆ
ಊರ್ಣ ವಿಚಿತ್ರ ಸುವಸನ
ವರ್ಣ ವರ್ಣದಿಂದ ಬಾಹೋದದೇನೂ ಸಂ-
ಪೂರ್ಣ ಗುಣಾರ್ಣವ ದೇವ ೩

ನಿಚೋಚ್ಚ ತಿಳಿಯದೆ ಸರ್ವರ ಚರಣಕ್ಕೆ
ಚಾಚಿದೆ ನೊಸಲ ಹಸ್ತಗಳ
ಯೋಚಿಸಿ ನೋಡಲು ಸೋಜಿಗವಾಗಿದೆ
ವಾಚಕ್ಕೆ ನಿಲುಕದು ಹರಿಯೆ ೪

ಮಧ್ಯಾಹ್ನ ಕಾಲಕ್ಕೆ ಅತಿಥಿಗಳಿಗೆ ಅನ್ನ
ಮೆದ್ದೆನೆಂದರೆ ಈಯೆಗಾಣೆ
ಈ ಧರೆಯೊಳಗೆ ಸತ್ಪಾತ್ರರ ಕೊಡುಂಬೂ
ಪದ್ಧತಿ ನೋಡೊ ಪುಣ್ಯಾತ್ಮ ೫

ಮನೆಮನೆ ತಿರಿದರು ಕಾಸು ಪುಟ್ಟದೆ ಸು-
ಮ್ಮನೆ ಚಾಲ್ವರಿದು ಬಳಲಿದೆನೊ
ಹಣ ಹೊನ್ನು ದ್ರವ್ಯಂಗಳಿದ್ದಲ್ಲಿಗೆ ತನಗೆ
ತಾನೆ ಪ್ರಾಪ್ತಿ ನೋಡೂ ಜೀಯಾ ೬

ವೈದಿಕ ಪದವಿಯನೀವಗೆ ಲೌಕಿಕ
ಐದಿಸುವುದೆ ಬಹು ಖ್ಯಾತೆ
ಮೈದುನಗೊಲಿದ ಶ್ರೀ ವಿಜಯ ವಿಠಲ ನಿನ್ನ
ಪಾದ ಸಾಕ್ಷಿಯನುಭವವೊ ೭

ಸದ್ಗುರುಗಳಿಂದ ಒಮ್ಮೆ ಉಪದೇಶವನ್ನು ಪಡೆದ ಶಿಷ್ಯನು ಸಾಮಾನ್ಯವಾಗಿ ಎಂದಿಗೂ ಸಾಧನೆಯ ದಿವ್ಯ ಮಾರ್ಗದಿಂದ ವಿಚಲಿತನಾಗುವುದಿಲ್ಲ. ಸುಖ-ದು:ಖಗಳೆರಡೂ ಶ್ರೀ ಹರಿಯ ಕೃಪೆಯೆಂದು ತಿಳಿದು ಅವನು ಜೀವನದ ಪ್ರತಿ ನಿಮಿಷದಲ್ಲಿಯೂ ಪುಣ್ಯಸಂಚಯ ಮಾಡುತ್ತಿರುತ್ತಾನೆ. ಅಪರೋಕ್ಷ ಜ್ಞಾನಿಗಳೂ, ಸ್ವರೂಪ ಗುರುಗಳೂ ಆದ ಪುರಂದರದಾಸರಿಂದ ವಿಜಯದಾಸರಿಗೆ ಅಂಕಿತೋಪದೇಶವಾಗಿದ್ದುದರಿಂದ ಕಡುಬಡತನ ಹೋಗಿ ವೈಭವದ ಶ್ರೀಮಂತಿಕೆಯ ಜೀವನವನ್ನು ಅನುಭವಿಸುವ ಸುಯೋಗ ಒದಗಿದಾಗಲೂ ಶ್ರೀ ಹರಿಯ ನಾಮ ಸ್ಮರಣೆ ಮಾಡುವುದನ್ನು ಅವರು ಮರೆಯಲಿಲ್ಲ. ಜ್ಞಾನಪೂರ್ವಕವಾದ ದೃಡಭಕ್ತಿಯುಂಟಾಗಿದ್ದುದರಿಂದ ಜೀವನದಲ್ಲಿ ಬರುವ ಸುಖ ದು:ಖಗಳೆರಡರಿಂದಲೂ ದಾಸರ ಭಕ್ತಿ ಅಧಿಕಗೊಳ್ಳುತ್ತಿತ್ತು. ಆದುದರಿಂದಲೇ ಶ್ರೀಮಂತಿಕೆಯ ಅನುಭವವನ್ನು ಪಡೆದಾಗ ಚಕಿತರಾಗಿ ಶ್ರೀ ವಿಜಯವಿಠಲ ನಿನ್ನ ಪಾದಸಾಕ್ಷಿಯನುಭವವೊ ಎಂದು ಹಾಡಿದ್ದಾರೆ.

ಹರಿದಾಸ ಪರಂಪರೆಗೆ ಸೇರಿದವರ ವೈಶಿಷ್ಟ್ಯವನ್ನು ಅವರ ಭಜನೆ ಹಾಗೂ ತೀರ್ಥಯಾತ್ರಾ ಪರ್ಯಟನೆಯಲ್ಲಿ ಕಾಣಬಹುದು. ಪ್ರತಿದಿನವೂ ನಿತ್ಯ ನೈಮಿತ್ತಿಕ ಕರ್ಮಗಳಾಚರಿಸುವುದರೊಡನೆ ತಾರತಮ್ಯಾನುಸಾರವಾಗಿ ದೇವತೆಗಳನ್ನು ಗಾಯನದ ಮೂಲಕ ಕೊಂಡಾಡಿ, ಆ ಸಂಕೀರ್ತನೆಯನ್ನು ಕೇಳುವವರ ಹೃದಯದಲ್ಲಿ ಭಕ್ತಿ ಉತ್ಪನ್ನವಾಗುವಂತೆ ಮಾಡುವುದು ಒಂದು ಸಂಪ್ರದಾಯವಾಗಿ ಹರಿದಾಸ ಪರಂಪರೆಯಲ್ಲಿ ಬೆಳೆದು ಬಂದಿದೆ. ದಾಸರು ಉತ್ತಮ ಗಾಯಕರೆನಿಸಿ ಸಂಗೀತ ಶಾಸ್ತ್ರಬಲ್ಲವರಾಗಿದ್ದುದರಿಂದ ಆ ನಾದೋಪಾಸನೆಗೆ ಅನೇಕರು ತಲೆದೂಗಿ ತಮ್ಮ ಅರಿವಿಲ್ಲದಂತೆಯೇ ದಾಸರಿಂದ ಪ್ರಭಾವಿತರಾಗುತ್ತಿದ್ದರು. ಹೀಗೆ ವಿಜಯದಾಸರಿಂದ ಪ್ರಭಾವಿತರಾದವರಲ್ಲಿ ದಿವಾನ್ ತಿಮ್ಮಣ್ಣನವರೂ ಒಬ್ಬರು.

ಆದವಾನಿ–ರಾಯಚೂರು ಮೊದಲಾದ ಪ್ರಾಂತ್ಯಗಳನ್ನು ದಾಸರ ಕಾಲದಲ್ಲಿ ಆಳುತ್ತಿದ್ದ ಮುಸಲ್ಮಾನ್ ನಾಯಕನಾದ ಬಲಾಸತ್ ಜಂಗನ ಮಂತ್ರಿಯಾಗಿ ತಿಮ್ಮಣ್ಣ ಎಂಬುವರು ಇದ್ದರು. ಆದವಾನಿ ಇವರ ಸ್ಥಳವಾಗಿತ್ತು. ವಿಜಯದಾಸರ ಭಜನಾ ವೈಖರಿ ಈ ಮಂತ್ರಿವರ್ಯರ ಮನಸ್ಸನ್ನು ಆಕರ್ಷಿಸಿದಾಗ, ದಾಸರನ್ನು ಮನೆಗೆ ಆಹ್ವಾನಿಸಿ ಅವರಿಂದ ಹರಿಭಜನೆ ಉಪದೇಶಗಳನ್ನು ಕೇಳುತ್ತಿದ್ದಂತೆ ತಿಮ್ಮಣ್ಣನವರಿಗೆ ಶ್ರೀ ಹರಿಯಲ್ಲಿ ಭಕ್ತಿಯುಂಟಾಗಿ ವಿಜಯದಾಸರ ಶಿಷ್ಯರಾಗಬೇಕೆನಿಸಿತು. ಆಗ ತಿಮ್ಮಣ್ಣನಿಗೆ ವಿಜಯದಾಸರು ವೇಣುಗೋಪಾಲ ವಿಠಲ ಎಂದು ಅಂಕಿತವನ್ನಿತ್ತು ಉದ್ಧರಿಸಿದರು.

ವೇಣುಗೋಪಾಲ ವಿಠ್ಠಲರೇಯಾ
ನಿನ್ನ ಪದರೇಣು ನಂಬಿದ ಮಾನವ
ಏನೂ ಅರಿಯದಲಿಪ್ಪ ನೀನೊಂದು ಕರುಣದಲಿ
ಜ್ಞಾನ ಭಕುತಿಯ ಕೊಡುವುದೂ ಸ್ವಾಮಿ ಪ

ಪರದೈವ ನೀನೆಂದು ಮೂಢತ್ವತನದಲ್ಲಿ
ಪರಿಪೂರ್ಣವಾಗಿ ನಿರುತಾ ನೆರೆ ನಂಬಿದೆನು ನಾ
ನಾ ಪ್ರಕಾರದಲಿ ಸ್ಮರಣೆ ಮಾಡುತ ಮನದಲಿ
ತರತಮ್ಯ ಭಾವದಲಿ ಮಾರ್ಗವನೆ ತೋರಿ ವಿ
ಸ್ತರ ಮಾಡು ಇವನ ಕೀರ್ತಿ
ಕರುಣಾಕರನೆ ನಿನ್ನ ಮೊರೆ ಹೊಕ್ಕ ಶರಣನ್ನ
ಕರಪಿಡಿದು ಪಾಲಿಸುವುದು ಸ್ವಾಮಿ ೧

ಲೌಕಿಕವೆಲ್ಲ ಇವಗೆ ವೈದಿಕವೆಂದೆನಿಸಿ
ಸಾಕುವುದು ಸಾಕಾರನೆ
ನೂಕು ದುರುಳರಿಂದ ಬಂದ ವಿಪತ್ತುಗಳ
ತಾಕಗೊಡದಂತೆ ವೇಗ
ಬೇಕು ಬೇಕೆಂದೆನುತ ಪೊಗಳುವವನಿಗೆ ಶುಭ

ವಾಕು ನೇಮಿಸು ಸಂತತ
ನಾಕ ಜನ ಬಲವಾಗಿ ರಕ್ಷಿಸಲಿ ಸುರತರುವೆ
ಶ್ರೀ ಕಾಂತ ನಿನ್ನಿಂದಲಿ ಸ್ವಾಮಿ ೨

ಓರ್ವನ ಪೆಸರುಗೊಂಡು ಪೇಳಲೇತಕೆ ಇನ್ನು
ಸರ್ವರನು ವಿಧದಲಿ
ಊರ್ವಿಯೊಳಗಿಟ್ಟು ಉದ್ಧರಿಸು ಉರುಕಾಲ
ನಿರ್ವ್ಯಾಜದವನ ಮಾಡಿ
ಸರ್ವರಗೋಸುಗ ನಾನು ತುತಿಸಿ ಯೋಗ್ಯರಿಗೆ
ಸರ್ವಾಧಾರ ಸಿರಿ ವಿಜಯವಿಠ್ಠಲ ನಿನ್ನ
ಶರ್ವ ತುತಿಸಿ ಕಾಣ ನಾನೊಬ್ಬ ಪೊಗಳುವೆನೆ ೩

ಎಂಬ ಮೂರು ನುಡಿಗಳ ಕೃತಿಯೊಂದನ್ನು ರಚಿಸಿ ಶಿಷ್ಯನಿಗೆ ಉಪದೇಶಿಸಿದರು.

ವಿಜಯದಾಸರು ತಮ್ಮ ಗುರುಗಳಾದ ಪುರಂದರದಾಸರ ಆರಾಧನಾ ಮಹೋತ್ಸವವನ್ನು ಪ್ರತಿವರ್ಷವೂ ಹಂಪೆಯಲ್ಲಿ ವಿಜೃಂಭಣೆಯಿಂದ ನಡೆಯಿಸುತ್ತಿದ್ದರು. ಆ ಮಹಾಸಮಾರಾಧನೆಗೆ ಪತಿವಿಹೀನೆಯಾದ ಹೆಂಗಸೊಬ್ಬಳು ದಾರಿದ್ರ್ಯದಿಂದ ಬಳಲಿ ಅನ್ನ ನೀರು ಕಾಣದೆ ತೃಪ್ತಿಕರವಾದ ಭೋಜನ ಮಾಡಲು ಆಗಮಿಸಿದ್ದಳು. ಅವಳ ಜೊತೆಗೆ ಒಂದು ವರ್ಷ ದಾಟಿದ ಒಂದು ಗಂಡು ಮಗುವಿತ್ತು. ಆ ಮಗುವಿಗೆ ಮೈಯೆಲ್ಲಾ ಕಜ್ಜಿಯಾಗಿದ್ದುದರಿಂದ ಎಲ್ಲರೂ ಅಸಹ್ಯ ಪಟ್ಟು ಆ ತಾಯಿ–ಮಕ್ಕಳನ್ನು ದೂಷಿಸುತ್ತಿದ್ದರು. ಎಲ್ಲಿ ಹೋದರೂ ತಾತ್ಸಾರ–ಅವಮಾನಗಳನ್ನು ಅನುಭವಿಸುತ್ತಿದ್ದ ಆಕೆಗೆ ಅಲ್ಲಿಯೂ ಅವಮಾನವೇ ಆಯಿತು. ಆಗ ಜೀವನದಲ್ಲಿ ಬೇಸರವುಂಟಾಗಿ ಆತ್ಮಹತ್ಯೆ ಮಾಡಿಕೊಳ್ಳಬೇಕೆಂದು ನಿಶ್ಚಯಿಸಿ ಬೆಳಗಿನ ಝಾವದಲ್ಲಿಯೇ ತುಂಗ ಭದ್ರೆಯ ಬಳಿ ಬಂದಾಗ ವಿಜಯದಾಸರು ಬೆಳಗಿನ ಆಹ್ನೀಕಕ್ಕಾಗಿ ಆಗಮಿಸಿದರು. ಆಕೆಯ ಪ್ರಯತ್ನವನ್ನು ಕಂಡು ಅವಳ ದು:ಖವನ್ನರಿತು ಸಮಾಧಾನ ಪಡಿಸಿ ಆ ಮಗುವನ್ನು ತಾವು ಸಾಕುವುದಾಗಿ ಹೇಳಿ ಪಡೆದುಕೊಂಡರು. ಆ ಅಬಲೆಯನ್ನು ತಂಗಿ ಎಂದೇ ಭಾವಿಸಿ ಆಶ್ರಯ ನೀಡಿ

ಉಪಕರಿಸಿದರು. ಆ ಮಗುವನ್ನು ಪವಿತ್ರವಾದ ತುಂಗಭದ್ರಾ ನದಿಯ ಸ್ನಾನ ಮಾಡಿಸಿ.

ಇವನ ಪಾಲಿಸಿದರೆ ಎನಗೆ ಪುಣ್ಯ
ಅವನಿಯೊಳಗೆಂದೆಂದಿಗೂ ನಾನೆ ಧನ್ಯ ಪ

ನಟ್ಟ ಮುಳ್ಳು ಕಿತ್ತಿ ಬಟ್ಟಂತೆ ಮಾಡೊ
ಘಟ್ಯಾಗಿ ಭಕುತನ್ನ ಕಾಪಾಡೊ ೧

ಸಾಧನ ಪ್ರಾಣಿಗಳಿರಬೇಕು
ಆದರದಿಂದ ಕೇಳೆನ್ನ ವಾಕು ೨

ಭಜಿಪರ ಭಾಗ್ಯೋದಯ ನಿಧಿಯೆ
ವಿಜಯವಿಠಲ ಕೇಳೆನ್ನ ದೊರೆಯೆ ೩

ಎಂದು ದೇವರನ್ನು ಪ್ರಾರ್ಥಿಸಿ ಮೋಹನನೆಂದು ಹೆಸರಿಟ್ಟು ಸಾಕಿ ಸಲಹಿದರು. ಮೋಹನ ಬೆಳೆದು ದೊಡ್ಡವನಾದ ಮೇಲೆ ಸಕಲ ಶೃತಿ ಸ್ಮೃತಿಗಳ ತತ್ತ್ವಾರ್ಥಗಳನ್ನು ಅವನಿಗೆ ತಿಳಿಸಿ "ಮೋಹನ ವಿಠಲ" ಎಂದು ಅಂಕಿತೋಪದೇಶ ಮಾಡಿದರು.

ಪಾಹಿ ಮೋಹನವಿಠಲ ಪರಮ ಕರುಣಾ ಜಲಧಿ
ಮಹದಾದಿ ದೇವ ವಂದ್ಯ
ಮೋಹ ಪಾಶವ ಬಿಡಿಸಿ ನಂಬಿದವನಿಗೆ ಒಲಿದು
ರಹಸ್ಯ ಮತಿಕೊಡುವದು ಸ್ವಾಮಿ ಪ

ಎಂದು ಅಂಕಿತ ಪದವನ್ನು ಮಾಡಿ ಶ್ರೀ ಮೋಹನದಾಸರನ್ನು ಆಶೀರ್ವದಿಸುವುದರೊಡನೆ ಜೀವನದಲ್ಲಿ ಹರಿದಾಸನಾಗಿ ಬಾಳುವವರ ಗುರಿ ಹೇಗಿರಬೇಕೆಂಬುದನ್ನು ತಿಳಿಸುವ ಸಲುವಾಗಿ ಆ ಸಾಕು ಪುತ್ರನ ಮೇಲೆ ತುಂಬ ಅಭಿಮಾನದಿಂದ "ಚಿರಂಜೀವಿಯಾಗಿರೆಲೊ ಚಿನ್ನ ನೀನು" ಎಂದು ಹರಿಸಿದರು.

ಶ್ರೀ ವಿಜಯದಾಸರು ಬಹು ಉದಾರಿಗಳಾಗಿದ್ದರೆಂದು ಈ ಮೇಲಿನ ಕಥೆಯಿಂದ ತಿಳಿದು ಬರುತ್ತದೆ. ಕಷ್ಟಪಡುವವರನ್ನು ಕಂಡು ಮರುಗಿ ಯಾವ ಸಹಾಯವನ್ನು ಮಾಡದೆ ಮುಂದೆ ಹೋಗುವಂತಹ ಸಾಮಾನ್ಯ ವ್ಯಕ್ತಿಯಾಗಿರಲಿಲ್ಲ. ಮೋಹನ ದಾಸರನ್ನು ತಮ್ಮ ಪುತ್ರರೆಂದೇ ಭಾವಿಸಿ ನೀತಿಯುತವಾದ ಆದರ್ಶ ಜೀವನ ನಡೆಸುವಂತೆ ಮಾರ್ಗದರ್ಶಕರಾದರು. ಅವರ ದೃಷ್ಟಿಗೆ ಮೇಲಿನ ಕೃತಿಯೇ ಸಾಕ್ಷಿಯಾಗಿದೆ. ಮೋಹನದಾಸರು ಕೃತಜ್ಞತೆಯಿಂದ ವಿಜಯದಾಸರು ಮಾಡಿದ ಉಪಕಾರವನ್ನು ಹೀಗೆ ನೆನೆದಿದ್ದಾರೆ.

ನಿನ್ನ ಪಾದವ ನಂಬಿ ಅನ್ಯರಾಶ್ರಯವೇಕೋ
ಚನ್ನಗುರು ವಿಜಯರಾಯ ಪ
ಇನ್ನೇನು ಇನ್ನೇನು ಎನ್ನ ಕುಲಕೋಟಿ ಪಾ
ವನ್ನವಾದುದು ನಿಶ್ಚಯಸ್ವಾಮಿ ಅಪ

ವ್ಯಾಸರಾಯರ ಗುಹೆಯೊಳಗೆ ನವ ಸ
ನ್ಯಾಸಿಗಳ ಸಮಕ್ಷಮದಲ್ಲಿ ಎನ್ನ
ದಾಸನಾಗೆನುತ ನೀ ಪೇಳ್ದೆ ! ನಮ್ಮ
ಶ್ರೀಶ ಸರ್ವೋತ್ತಮನಹುದೆಂದು ಬರೆದು
ತೋಷದಿಂದೆನ್ನ ಪೊರೆದೆ ಸ್ವಾಮಿ

ಈಗಿನ ನವ ಬೃಂದಾವನ ಎಂಬ ಹಂಪೆಯ ಬಳಿಯಿರುವ ಊರಿನಲ್ಲಿ ಈ ಘಟನೆ ನಡೆಯಿತೆಂದು ಮೇಲಿನ ಕೃತಿಯಿಂದ ತಿಳಿಯುತ್ತದೆ. ಮೋಹನದಾಸರು ದೊಡ್ಡವರಾದ ಮೇಲೆ ಮುಂಜಿ ಮದುವೆಯನ್ನು ವಿಜಯದಾಸರು ನಡೆಸಿದರು. ಅಲ್ಲಿ ಒಮ್ಮೆ ಮೋಹನದಾಸರಿಗೆ ಅಪಮೃತ್ಯು ಒದಗಿದಾಗ ಪರಿಹರಿಸಿದರೆಂದು ಐತಿಹ್ಯವಿದೆ.

ಶ್ರೀ ವಿಜಯದಾಸರ ಜೀವನದಲ್ಲಿ ನಡೆದ ಮಹಿಮೆಗಳು ಅನೇಕವಾಗಿವೆ. ಅವರ ಬಳಿ ಶ್ರೀ ಹರಿಯು ವಿವಿಧ ರೂಪಗಳಲ್ಲಿ ಬಂದು ಅವರ ಮನಃ ಪರಿಪಾಕವನ್ನೂ, ನಿಷ್ಠೆಯನ್ನೂ ಪರೀಕ್ಷಿಸಿ ಅನಂತರ ತನ್ನ ದರ್ಶನವನ್ನಿತ್ತು,

ಅವರ ತಪ್ಪುಗಳನ್ನು ತಿದ್ದಿ ಸಂತೋಷ ಪಡಿಸಿರುವುದುಂಟು. ಕಂಡಂತೆ ಕಾಣಿಸಿ ಮಾಯವಾದಾಗ ಭಕ್ತನು ಮೊರೆಯಿಡುವ ಸಂಕೀರ್ತನೆಯ ಪರಿಯನ್ನು ಕೇಳಿ ಶ್ರೀ ಹರಿಯು ಆಶೀರ್ವದಿಸಿರುವುದುಂಟು. ದಾಸರು ಸಮಸ್ತ ಭಾರತದ ಪುಣ್ಯಕ್ಷೇತ್ರಗಳ ಸಂದರ್ಶನ ಸಮಾರಂಭಗಳಲ್ಲಿ ತೋರಿದ ಪವಾಡಗಳು ವಿಪುಲವಾದರೂ ಅವರ ಕೃತಿಗಳ ಆಧಾರದಿಂದ ಖಚಿತವೆನಿಸುವ ಮಹಿಮಾತಿಶಯಗಳು ವಿರಳವಾಗಿದೆ. ಅಂತಹ ಕೆಲವು ಐತಿಹಾಸಿಕ ಘಟನೆಗಳನ್ನು ಇಲ್ಲಿ ಸಮೀಕ್ಷಿಸಲಾಗಿದೆ.

ಶ್ರೀ ವಿಜಯದಾಸರು ದಕ್ಷಿಣ ಭಾರತದ ಮನ್ನಾರ್‌ಗೆ ಶ್ರೀ ಕೃಷ್ಣನ ಸಂದರ್ಶನಕ್ಕಾಗಿ ಒಮ್ಮೆ ಹೋಗಿದ್ದರು. ಶ್ರೀಕೃಷ್ಣನ ಮೂರ್ತಿಯಲ್ಲಿ ಸೂಸುವ ಮುಗ್ಧತೆ ಗಾಂಭೀರ್ಯ, ಭಕ್ತಿ ವಾತ್ಸಲ್ಯಗಳು ಸಾಮಾನ್ಯ ಜನರನ್ನೆ ಆಕರ್ಷಿಸುವುದೆಂದ ಮೇಲೆ ಭಕ್ತರ ಹೃದಯ ಆ ಮೂರ್ತಿಯನ್ನು ಕಾಣಲೆಂದು ಹೇಗೆ ಹಂಬಲಿಸಿರಬೇಕು? ವಿಜಯದಾಸರು ಮನ್ನಾರ್‌ನಲ್ಲಿ ಒಂದು ದಿನ ಪ್ರಾತ: ಕಾಲ ಅಲ್ಲಿನ ಹರಿದ್ರಾ ನದಿಯಲ್ಲಿ ಸ್ನಾನ ಮಾಡಿ ಶುಚಿರ್ಭೂತರಾಗಿ ಶ್ರೀ ಕೃಷ್ಣನ ದರ್ಶನಕ್ಕಾಗಿ ಹೊರಟಿದ್ದರು. ದಾರಿಯಲ್ಲಿ ಆರೇಳು ವರ್ಷದ ಬಾಲಕನೊಬ್ಬ ಮಡಿಯಲ್ಲಿ ಹೊರಟಿದ್ದ ದಾಸರನ್ನು ನೋಡಿ ನೀರು ಚಿಮುಕಿಸಿದ. ವಿಜಯದಾಸರು ತಾವು ಅಪವಿತ್ರವಾದುದಾಗಿ ಭಾವಿಸಿ ಪುನ: ಸ್ನಾನಮಾಡಿ ಬಂದರು. ಪುನ: ಅದೇ ಹುಡುಗ; ಅದೇ ನಗು, ಅದೇ ಚೇಷ್ಟೆ, ಈ ರೀತಿ ಆರೇಳು ಸಲ ಚೇಷ್ಟೆ ಮಾಡಿದರೂ ಕೋಪಗೊಳ್ಳದ ದಾಸರು ಎಂಟನೆ ಬಾರಿ ಕೋಪಗೊಂಡರು. ಆಗ ಆ ಹುಡುಗ ಬಾಯಿಯಲ್ಲಿ ನೀರು ತುಂಬಿಕೊಂಡು ದಾಸರಮೇಲೆ ಉಗುಳಿದನಂತೆ, ತಕ್ಷಣವೇ ಅಪಾಕೃತನ ಉಚ್ಚಿಷ್ಟದಿಂದ ಅಜ್ಞಾನ ಮಾಯವಾಗಿ ಆ ಬಾಲಕ ಶ್ರೀ ಕೃಷ್ಣನೆಂದೇ ತಿಳಿದರು. ನಂದಗೋಕುಲದಲ್ಲಿ ಶ್ರೀ ಕೃಷ್ಣನು ಆಡಿದ ಆಟಗಳು ದಾಸರ ಮನಸ್ಸಿನಲ್ಲಿ ಮಿಂಚಿನಂತೆ ಸುಳಿಯಿತು. ಹುಡುಗನಲ್ಲಿ ಭಕ್ತಿ ಉಕ್ಕೇರಿ ಆ ಗುಂಗುರು ಕೂದಲಿನ ದುಂಡು ಮುಖದ ನೀಲ ಮೇಘ ಶ್ಯಾಮನನ್ನು ಶ್ರೀ ಕೃಷ್ಣನೆಂದು ತಿಳಿದಾ ಕ್ಷಣವೇ ಆ ಹುಡುಗ ಮಾಯವಾದ. ವಿಜಯದಾಸರಿಗಾದ ವಿರಹ ಹೇಳಬಲ್ಲವರಾರು? ಶ್ರೀ ಕೃಷ್ಣನನ್ನು ಮಾತನಾಡಿಸಲೆಂದು ಗರ್ಭಾಂಗಣದ ಮೂರ್ತಿಯನ್ನು,

ಮಾತನ್ನಾಡೊ ಮನ್ನಾರಿ ಕೃಷ್ಣ ಮಾತನ್ನಾಡೈ
ದಾತನು ನೀನೆಂದು ಬಯಸಿ ಬಂದೆ ಮಾತನಾಡೈ

ಎಂದು ಆ ದಿನದ ಕೃಷ್ಣನ ಉಡಿಗೆಯನ್ನು ವರ್ಣಿಸುತ್ತಾ 'ಮಾತನಾಡು' ಎಂದರು. ಆದರೆ ಅಂದು ಕೃಷ್ಣ ಮೌನಿಯಾದನೇಕೊ?

ಹರಿದಾಸರಿಗೂ ತಿರುಪತಿಯ ವೆಂಕಟೇಶನಿಗೂ ಬಹು ನಿಕಟವಾದ ಸಂಬಂಧವಿರುವುದನ್ನು ಕಾಣುತ್ತೇವೆ. ಭರತ ಖಂಡದಲ್ಲಿ ಶ್ರೀ ಹರಿಯ ಅನೇಕ ದೇವಾಲಯಗಳಿದ್ದರೂ ತಿರುಪತಿಯ ವೆಂಕಟೇಶನ ಮಹಿಮೆ ಅಗಾಧವಾದುದು. ತಿರುಪತಿ, ಪಂಡರಪುರ– ಉಡುಪಿ ಕ್ಷೇತ್ರಗಳ ಸಂದರ್ಶನವನ್ನು ಅದೆಷ್ಟು ಬಾರಿ ಹರಿದಾಸರು ಮಾಡುತ್ತಿದ್ದರೊ ಹೇಳಲಸಾಧ್ಯ. ಈ ಮೂರ್ತಿಗಳನ್ನು ಕುರಿತು ನೂರಾರು ಕೃತಿಗಳನ್ನು ಒಬ್ಬೊಬ್ಬ ಹರಿದಾಸರೂ ಹಾಡಿರುವುದರಿಂದ. ಈ ಕ್ಷೇತ್ರಗಳ ಸಂದರ್ಶನ ಕಾರ್ಯಕ್ರಮ ನಿಯಮವಾಗಿದ್ದಿತೆಂದೆನಿಸುತ್ತದೆ. ಅಂತಹ ಸಂದರ್ಭಗಳಲ್ಲಿ ಹರಿದಾಸರು ತಮಗಾದ ಅನುಭವವನ್ನು ರಸವತ್ತಾಗಿ ವರ್ಣಿಸಿದ್ದಾರೆ. ಹರಿದಾಸರು ರಚಿಸಿರುವ ಇಂತಹ ಕೃತಿಗಳು ಐತಿಹಾಸಿಕ ದೃಷ್ಟಿಯಿಂದ ಪ್ರಾಮುಖ್ಯವಾಗಿದೆ. ಆದರೆ ಹರಿದಾಸರೊಡನಿದ್ದ ಶಿಷ್ಯರು ಆಯಾ ಸಂದರ್ಭಗಳಲ್ಲಿ ಆ ಕೃತಿಗಳನ್ನು ಬರೆದಿಡುವುದರೊಡನೆ ಘಟನೆಗಳನ್ನೂ ಗುರುತಿಸಿದ್ದರೆ ಹರಿದಾಸರ ಕೃತಿಗಳ – ಜೀವನ ವಿಮರ್ಶೆಗೂ ಹೆಚ್ಚು ಸಹಾಯವಾಗುತ್ತಿದ್ದಿತಲ್ಲದೆ ಗ್ರಂಥ ಪಾಠವೂ ಪರಿಶುದ್ಧವಾಗಿ ಉಳಿಯುತ್ತಿತ್ತು. ನಕಲು ಕೃತಿಗಳ ಜೋಡಣೆಗೆ ಅವಕಾಶವಿರುತ್ತಿರಲಿಲ್ಲ. ಆದರೆ ಇಂತಹ ಕಾರ್ಯ ನಡೆಯದಿರುವುದರಿಂದ ಹರಿದಾಸರ ಜೀವನದಲ್ಲಿ ನಡೆದಿರುವ ಪವಾಡಗಳನ್ನೇ ಪ್ರಶ್ನಿಸುವಂತಾಗಿದೆ. ಆದರೂ ಕೆಲವು ಹರಿದಾಸರ ಕೃತಿಗಳೊಡನೆ ಅವರ ಜೀವನದ ಪವಾಡವೂ ಪ್ರಸಿದ್ಧಿಯಾಗಿ ಅದರ ಸುಳಿಯನ್ನು ಸ್ಪಷ್ಟವಾಗಿ ಅವರ ಕೆಲವು ಕೃತಿಗಳಲ್ಲಿ ಕಾಣಬಹುದು. ವಿಜಯದಾಸರ ಜೀವನದಲ್ಲಿ ನಡೆದಂತಹ ಪವಾಡಗಳಲ್ಲಿ ತಿರುಪತಿಯ ಕೆಲವು ಘಟನೆಗಳು ತುಂಬಾ ಸ್ವಾರಸ್ಯವಾಗಿವೆ.

ಒಮ್ಮೆ ವಿಜಯದಾಸರು ತಿರುಪತಿಗೆ ಬ್ರಹ್ಮೋತ್ಸವಕ್ಕೆ ಹೋಗಿದ್ದರು. ಆಗ ಭಕ್ತರ ನುಗ್ಗಾಟ ಕೇಳಬೇಕೆ? ಅತಿ ದೂರದಿಂದ ಬಂದ ವಿಜಯದಾಸರಿಗೆ ಗರ್ಭಾಂಗಣದಲ್ಲಿದ್ದ ಶ್ರೀನಿವಾಸನ ದರ್ಶನಯೋಗ ಲಭಿಸಲಿಲ್ಲ. ಎಲ್ಲಿ ನೋಡಿದರೂ ಭಕ್ತರ ಸಂದಣಿಯೇ ಇತ್ತು. ವಿಜಯದಾಸರಿಗೆ ದರುಶನ ಸಿಗಲಿಲ್ಲವೆಂಬ ಶೋಕಭಾವ ಸ್ಥಾಯಿಯಾಗುವುದರ ಬದಲು ಭಕ್ತಿಯ ಹೆಚ್ಚಳದಿಂದ ದೇವರಲ್ಲಿದ್ದ ಸಲುಗೆಯಿಂದ ಕ್ರೋಧ ಸ್ಥಾಯಿಯಾಗಿ ರೌದ್ರ ರಸಭರಿತವಾದ ಕೃತಿ ಅವರಿಂದ ರಚನೆಯಾಯಿತು.

ನಿನ್ನ ದರುಶನಕೆ ಬಂದವನಲ್ಲವೊ ದೇವ
ಪುಣ್ಯವಂತರ ದಿವ್ಯ ಚರಣ ನೋಡಲಿ ಬಂದೆ
ಎಲ್ಲೆಲ್ಲಿಯೂ ನಿನ್ನ ವ್ಯಾಪ್ತಿ ತಾನಾಗಿರಲು
ಇಲ್ಲಿಗೇ ಬರುವ ಕಾರಣವ್ಯಾವುದೋ
ಸೊಲ್ಲಿಗೆ ಸ್ತಂಭದಲಿ ತೋರಿದ ಮಹಾ ಮಹಿಮ
ಎಲ್ಲಿಲ್ಲವೋ ನೀನು ಬಲ್ಲ ಭಕುತರಿಗೆ? ೧

ಕರೆವಾಗಲೆ ಓಡಿ ಬಂದೊದಗುವೋ ದೇವ
ಮರಳಿ ಗಾವುದವೆಣಿಸಿ ಬರಲ್ಯಾತಕೊ
ನೆರೆ ನಂಬಿದವರಿಗಾವಲ್ಲಿಯಾದರೆ ಏನೂ
ಅರಿತವರ ಮನದಲ್ಲಿ ನಿಂದಾಡುವ ಚೆಲ್ವ ೨

ಧ್ಯಾನಕ್ಕೆ ಸಿಲುಕುವ ನಿನ್ನ ಕಾಣಲಿಬಹುದು
ಜ್ಞಾನಿಗಳು ಎಂದು ಬರುವರೂ ಅಲ್ಲಿಗೆ
ಅನಂತ ಜನುಮದಲಿ ಜಪತಪ ವ್ರತ ಹೋಮ
ಏನು ಮಾಡಿದರಿಷ್ಟು ಜನ ಕೂಡುವುದೊ ದೇವ ೩

ಕಠಿಣವು ನಿನ್ನ ಭಕ್ತರ ದರುಶನ ಲಾಭ
ಸಟೆಯಲ್ಲ ವೇದಗಳು ಸಾರುತಿದೆಕೋ

ವಟುವೆ ಮೊದಲಾದ ವೈಷ್ಣವರಂಘ್ರಿಗಳು ಲವ
ತೃಟಿಯಾದರೊ ಸೋಂಕಲದು ಗತಿಗೆ ದಾರಿ ೪

ನೀನಿದ್ದ ಸ್ಥಾನದಲಿ ಸರ್ವ ಪುಣ್ಯಕ್ಷೇತ್ರ
ನೀನಿದ್ದ ಸ್ಥಾನದಲಿ ಸಕಲ ತೀರ್ಥ
ನೀನಿದ್ದ ಸ್ಥಾನದಲಿ ಸಮಸ್ತ ತಾತ್ವಿಕರು
ನಾನಿತ್ತ ಬಂದದ್ದು ನಿನಗೆ ತಿಳಿಯದೆ ಸ್ವಾಮಿ ೫

ಇದನೆ ಲಾಲಿಸು ಜೀಯ ನಿನ್ನದೊಂದೆ ಮೂರ್ತಿ
ನಿದರುಶನವಲ್ಲದೆ ಮಿಗಿಲಾವುದೋ
ಪದೆಪದೆಗೆ ಮಧ್ವಮತ ಪೊಂದಿದ ಸುಜನರ
ಹೃದಯದಲಿ ಒಂದೊಂದು ಪರಿ ನಿನ್ನ ರೂಪಗಳು ೬

ಭಳಿರೆ ತಿರುಮಲರಾಯ ನಿನ್ನ ಕರುಣಾರಸಕೆ
ನೆಲೆಗಾಣೆ ನೆಲೆಗಾಣೆ ನೆರೆ ಹೊರೆಯಲಿ
ಒಲಿದು ದೇವರ ದೇವ ವಿಜಯವಿಠಲರೇಯ ೭

ವೆಂಕಟೇಶನ ದರ್ಶನ ಲಭಿಸಲಿಲ್ಲವೆಂದು ಅಸಮಾಧಾನದಿಂದ ನಿನ್ನ ದರುಶನಕೆ ಬಂದವನಲ್ಲ ಎಂದು ವ್ಯಂಗ್ಯವಾಗಿ ನಿಂದಾಸ್ತುತಿ ರೂಪವಾಗಿ ಹಾಡಲಾರಂಭಿಸಿದರೂ ಆ ಕ್ರೋಧ ಕೇವಲ ಮೊದಲ ನಾಲ್ಕು ನುಡಿಗಳಲ್ಲಿ ಹರಿದು ಭಕ್ತಿ ಹೆಚ್ಚಾದಂತೆ ಕ್ರೋಧ ಮಾಯವಾಗಿ, ಶೋಕಸ್ಥಾಯಿಯಾಗಿ ಪಲ್ಲಟಿಸಿ ನಿನ್ನದೊಂದೆ ಮೂರ್ತಿ ನಿದರುಶನವಲ್ಲದೆ ಮಿಗಿಲಾವುದೋ ಎಂದು ಕೊನೆಯ ಮೂರು ನುಡಿಗಳಲ್ಲಿ ಶ್ರೀ ಹರಿಯ ಸ್ತೋತ್ರ ಕರುಣಾರಸ ಪೂರಿತವಾಗಿ ಹರಿದಿರುವುದು ಶ್ರೀ ವಿಜಯದಾಸರ ಭಕ್ತಿಯ ದ್ಯೋತಕವಾಗಿದೆ. ಆದರೆ ದಾಸರ ಸ್ತೋತ್ರಗಳಿಗೆ ಉತ್ತರವಾಗಿ ವೆಂಕಟೇಶ ತಕ್ಷಣ ತನ್ನ ದರುಶನ ನೀಡಲಿಲ್ಲ ! ಭಕ್ತನ ವ್ಯಂಗ್ಯ ನುಡಿಗಳನ್ನು ಮತ್ತಷ್ಟು ಕೇಳಬೇಕೆನಿಸಿತೇನೋ? ಎರಡು ಮೂರು ದಿನಗಳಾದರೂ ದೇವರದರ್ಶನವಿಲ್ಲದೆ ದಾಸರಿಗೆ ದಿಕ್ಕು ತೋಚದಂತಾಯಿತು.

ಆಗ ದೇವಾಲಯದ ಹೊರಪ್ರಾಕಾರದ ಒಳಾಂಗಣದಲ್ಲಿದ್ದಾಗ ವೆಂಕಟೇಶನ ವ್ಯಾಪಾರವನ್ನು ನೋಡಿದರು. ಅವರಿಗೆ ನಗು ಬಂದಿತು. ಆಗ ವೆಂಕಟೇಶನಿಗೆ ಹೀಗೆ ಮಂಗಳ ಹಾಡಿದರಂತೆ.

ಜಯಮಂಗಳಂ ನಿತ್ಯ ಶುಭ ಮಂಗಳಂ
ತೊಳಸದಕ್ಕಿಯ ತಿಂಬ ಕಿಲುಬು ತಳಿಗೆಯಲುಂಬ
ಕೊಳಗದಲಿ ಹಣಗಳನು ಅಳೆಸಿಕೊಂಬ
ಇಲ್ಲ ತನಗೆಂದು ಸುಳ್ಳು ಮಾತಾನಾಡಿದರೆ
ಎಲ್ಲವನು ಕಸುಕೊಂಬ ಕಳ್ಳ ದೊರೆಗೆ ೧

ತನ್ನ ನೋಡುವನೆಂದು ಮುನ್ನರ್ಗಾವುದ ಬಂದು
ತನ್ನ ಗುಡಿಯ ಪೊಕ್ಕ ಜನರಿಗೆಲ್ಲ
ಹೊನ್ನು ಹಣ ಕಸುಕೊಂಡು ತನ್ನ ದರುಶನ ಕೊಡವೆ
ಬೆನ್ನೊಡೆಯ ಹೊಡೆಸುವ ಅನ್ಯಾಯಕಾರಿಗೆ ೨

ಗಿಡ್ಡ ಹಾರುವನಾಗಿ ಶೆರಗೊಡ್ಡಿ ದಾನವ ಬೇಡಿ
ದುಡ್ಡು ಕಾಸುಗಳಿಗೆ ಕೈಯ ನೀಡಿ
ಅಡ್ಡ ಬಿದ್ದ ದಾಸರಿಗೆ ವಿಡ್ದೂರಗಳ ಕಳೆದು
ದೊಡ್ಡವರ ಮಾಳ್ಪ ಸಿರಿ ವಿಜಯವಿಠಲಗೇ ೩

ಮಂಗಳ ಹಾಡಿದ ಮೇಲೆ ತಾನೆ ಪ್ರಸಾದ ವಿನಿಯೋಗ? ವಿಜಯದಾಸರಿಗೆ ವೆಂಕಟೇಶನ ದರ್ಶನ ಲಾಭವಾಯಿತು. ಆಗ ತಾವು ಜಗದಾಧಿಪತಿಯನ್ನು ಕುರಿತು ಹಿಂದೆ ಆಡಿದ ಸಥೆ ನುಡಿಗಳಿಗಾಗಿ ಮರುಗಿದರು. ಶ್ರೀ ಹರಿಯ ಸಾಕ್ಷಾತ್ ದರ್ಶನವಾದ ಸಂತೋಷ ಅಪರೋಕ್ಷ ಜ್ಞಾನಿಗಳಾದುದರಿಂದ ದಾಸರಿಗೆ ಲಭಿಸಿ ಆನಂದ ಪರವಶರಾದರು.

ನಿನ್ನ ನೋಡಲಿ ಬಂದೆ ನಿತ್ಯ ತೃಪ್ತ
ಅನ್ಯರಿಂದಲಿ ಎನಗೆ ಏನು ಪ್ರಯೋಜನವೋ ಪ

ದರುಶನಕೆ ಬಂದವ ನಾನಲ್ಲೆಂದು ನಾನಂದು
ಹರಿ ನಿನಗೆ ನುಡಿದದ್ದು ಮನಸ್ಸಿನೊಳಗೆ
ಇರುತಿಪ್ಪದೇನಯ್ಯಾ ಬಿನ್ನಪವ ಲಾಲಿಸು
ಶರಣ ಜನರ ಅಭಿಪ್ರಾಯವೊಂದು ಬಗೆ ಇಪ್ಪದು ೧

ನಿರುತ ವ್ಯಾಪ್ತತ್ವ ಕರುಣತ್ವ ಅಣುಮಹತ್ತು
ಸರುವ ಚೇತನ ಜಡ ಮತ್ತೆ ಮತ್ತೆ
ಪರಿ ಪರಿಯಿಂದಲಿ ನಿನ್ನಲಿ ಉಂಟು ನಿನ್ನ
ವರ ಮೂರ್ತಿಗಳ ಪೇಳಿದೆ ಇದಷ್ಟು ವಿನಯದಲಿ ೨

ಧ್ಯಾನಕ್ಕೆ ನೀನು ಪ್ರಧಾನನೆಂದು ನುಡಿದೆ
ಆನಂದಮತಿ ಕೊಡವ ಅಪ್ರಮೇಯ
ಕ್ಷೋಣಿ ಜನಕ್ಕಿಂತ ದ್ವಾರದವರು ವೆಗ್ಗಳವಾಗೆ
ಏನೆಂಬೆ ತಿರುವೆಂಗಳೇಶ ನಿನ್ನಾಟಕ್ಕೆ ೩

ಮಿಕ್ಕ ಮಂದ ಜನಕೆ ನಿನ್ನ ಭಕುತರ ಮೇಲೆ
ಭಕುತಿ ಪುಟ್ಟುವುದಕ್ಕೆ ನಾಪೇಳಿದ್ದು
ಅಕಟಕಟ ನಿನ್ನ ದೊರೆತನಕೆ ಏನೆಂಬೆ
ತಕ್ಕ ಮಾತುಗಳೇನೊ ಅಲೋಚಿಸಿ ನೋಡೆ ೪

ಹೊನ್ನು ಹಣ ತೂಗಬೇಕಾದರೆ ಮೊದಲಿಗೆ
ಚಿನ್ನ ಹಾಕುವರೇನೊ ಚಿನ್ಮಯ ರೂಪ
ಮುನ್ನ ನಿನ್ನವರ ದರುಶನವಾದ ಮೇಲೆ ಪಾ
ವನ್ನ ಶರೀರನೆ ನಿನ್ನ ಕಾಂಬುವದುಚಿತ ೫

ಜರೆ ಮರಣ ರಹಿತ ಸುಜನರ ಪರಿಪಾಲಾ ನಿ
ರ್ಜರ ಗಣಕೆ ನಿತ್ಯ ವಜ್ರ ಪಂಜರಾ
ಜರೆಗೆ ವರವಿತ್ತ ದನುಜರ ವಂಶನಾಶಾ ನಿ
ರ್ಜರ ನದಿ ಜನಕಾಂಬುಜ ರವಿನಯನ ದೇವಾ ೬

ಸ್ಥೂಲ ಮತಿಯಿಂದ ಪೇಳಿದೆನೆಂದು ಚೆನ್ನಾಗಿ
ಲಾಲಿಸು ಲಲಿತಾಂಗಿ ಲಕುಮಿ ರಮಣಾ
ನೀಲಗಿರಿ ನಿವಾಸ ವಿಜಯ ವಿಠಲ ವೆಂಕಟ
ವಾಲಗವೆ ಕೈಕೂಳ್ಳು ಯೋಗ್ಯತವನಿತು ೭

ಪರಮಾತ್ಮನನ್ನು ಹೀಗೆ ಪ್ರಾರ್ಥಿಸಿ ಹಿಂದೆ ಆಡಿದ ಮಾತುಗಳನ್ನು ಕ್ಷಮಿಸಬೇಕೆಂದು ನಮಿಸಿದರು. ನಿನ್ನ ದರುಶನಕೆ ಬಂದವನಲ್ಲ' ಎಂಬ ಕೃತಿಯಲ್ಲಿ ತಾವಾಡಿದ ಪ್ರತಿಯೊಂದು ಮಾತಿಗೆ ದಾಸರು 'ನಿನ್ನ ದರುಶನಕೆ ಬಂದವನೊ' ಎಂಬ ಕೃತಿಯಲ್ಲಿ ಉತ್ತರಿಸಿರುವ ಪರಿ ಎಷ್ಟು ಭಯಭಕ್ತಿ ಪೂರಿತವಾಗಿದೆ ಎಂಬುದನ್ನು ವಾಚಕರು ಗಮನಿಸಬೇಕು. 'ನಿನ್ನ ದರುಶನಕೆ ಬಂದವಲ್ಲ' ಎಂಬ ಕೃತಿಯಲ್ಲಿ ಆಡಿದ ಮಾತನ್ನು ಸ್ಥೂಲಮತಿಯಿಂದ ಪೇಳಿದೆ 'ಮಿಕ್ಕ ಮಂದ ಜನಕೆ ನಿನ್ನ ಭಕುತರ ಮೇಲೆ ಭಕುತಿ ಪುಟ್ಟುವುದಕೆ ನಾ ಪೇಳಿದ್ದು' ಎಂದು ಪ್ರಾರ್ಥಿಸಿ 'ವೆಂಕಟ ವಾಲಗ ಕೈಕೊಳ್ಳೊ' ಎಂದು ಅನನ್ಯವಾಗಿ ಭಜಿಸಿರುವುದು. ಈ ಎರಡು ಕೃತಿಗಳಲ್ಲಿನ ಸಂಬಂಧವನ್ನು ಚೆನ್ನಾಗಿ ತೋರಿಸುತ್ತದೆ.

ಶ್ರೀ ವೆಂಕಟೇಶನ ದರ್ಶನದಿಂದ ಸಮಾಧಾನ ಮನಸ್ಸಿಗಾದುದರಿಂದ ವಿಜಯದಾಸರು ಬ್ರಹ್ಮೋತ್ಸವದ ದಿನ ದೇವಾಲಯದ ಆವರಣದಲ್ಲಿಯೇ ಧ್ಯಾನಾಸಕ್ತರಾದರು. ಶ್ರೀ ಹರಿಯನ್ನು ಹೃದಯ ಕಮಲದಲ್ಲಿ ಕಂಡು ಧ್ಯಾನಸಕ್ತರಾದುದರಿಂದ ಅವರು ಎಷ್ಟು ಹೊತ್ತು ಧ್ಯಾನಿಸುತ್ತಾ ಕುಳಿತರೆಂಬುದು ಅವರಿಗರಿವಾಗಲಿಲ್ಲ. ಆದರೆ ಆ ದಿನ ಬ್ರಹ್ಮೋತ್ಸವವಾದುದರಿಂದ ಹೊರಗೆ ಬ್ರಹ್ಮರಥದಲ್ಲಿ ಸನ್ನಿಹಿತನಾಗಿದ್ದ ಲಕ್ಷ್ಮೀವೆಂಕಟೇಶನನ್ನು ಮೆರವಣಿಗೆಯಲ್ಲಿ ಕರಿದೊಯ್ಯಲು ಸಹಸ್ರಾರು ಭಕ್ತರು ಸಿದ್ಧರಾಗಿ ಭಕ್ತಿಯಿಂದ ಬ್ರಹ್ಮರಥವನ್ನು ಎಳೆಯಲು ಯತ್ನಸಿದರೂ ರಥ ಒಂದಡಿ ಮುಂದೆ ಬರಲಿಲ್ಲ. ಶ್ರೀ ಹರಿಯು ಭಕ್ತವತ್ಸಲನಲ್ಲವೇ? ವಿಜಯದಾಸರ ಭಕ್ತಿಯನ್ನು ತಾಳ್ಮೆಯನ್ನೂ ಹಿಂದಿನ ದಿನಗಳಲ್ಲಿ ಪರೀಕ್ಷಸಿದ್ದ ಶ್ರೀ ಹರಿ ಅಂದು ವಿಜಯದಾಸರ ಸ್ತೋತ್ರದಿಂದ ಮಾತ್ರ ಮುಂದೆ ಬರಲು ರಥ ಅಲುಗದಂತೆ ಕುಳಿತಿದ್ದನಂತೆ !

ವಿಜಯದಾಸರ ಹೃದಯದಲ್ಲಿ ಬಿಂಬ ಮೂರ್ತಿ ಅದೃಶ್ಯವಾದ ಮೇಲೆ ಹೊರಬಂದು.

ಸಾಗಿ ಬಾರಯ್ಯ ನೀನು ಗೋವಿಂದ ವೆಂಕಟ ಪ

ಸಾಗಿ ಬಾರಯ್ಯ ಭವರೋಗದ ವೈದ್ಯನೆ
ಬಾಗುವೆ ನಿನಗೆ ಚೆನ್ನಾಗಿ ತುತಿಪೆನಿಂದು
ಭಾಗಿರಥಿ ಪಿತ ಭಾಗವತರ ಸಂ
ಯೋಗ ರಂಗ ಉರಗಗಿರಿ ವೆಂಕಟ ಅ.ಪ.

ರಥದ ಮಧ್ಯದಲಿಪ್ಪನೆ ರಥಾಂದಜ ವಾಹನನೆ
ರಥಾಂಗ ಪಾಣಿಯೆ ದಶರಥ ನೃಪ ಬಾಲ
ಪಾರ್ಥಗೆ ಒಲಿದವನ ರಥವ ನಡೆಸಿ ಅತಿ
ರಥ ಮಹರಥರ ವಿರಥರ ಮಾಡಿ ಗೆಲಿಸಿದೆ
ಪ್ರಥಮ ದೈವವೆ ಮನ್ಮಥಪಿತ ದೈತ್ಯರ
ಮಥನ ಭಕ್ತರ ಮನೋರಥನೆ ತಾರಾ
ಪಥವರ್ಣನೆ ತವಕಥಾಶ್ರವಣದಲಿ ಸು
ಪಥವ ತೋರಿಸು ಪ್ರಥಮಾಂಗದೊಡೆಯ ೧

ನಿಲ್ಲದೆ ಬರುವುದು ಪುಲ್ಲಲೋಚನೆ ಸಿರಿ
ವಲ್ಲಭ ಸರ್ವರಿಗು ಬಲ್ಲಿದನೆ ಆ ಪ್ರತಿ
ಮಲ್ಲ ಮುರ ವಿರೋಧಿ ಮೆಲ್ಲ ಮೆಲ್ಲನೇ ಪಾದ
ಪಲ್ಲವ ತೋರುತ್ತ ಎಲ್ಲಾ ಕಾಲದಿ ನಮ್ಮ
ನೆಲ್ಲರುದ್ಧರಿಪುದು ಎಲ್ಲಿ ನಿನಗೆ ಸರಿ
ಯಿಲ್ಲವೂ ನೋಡಲು ಸಲ್ಲುವುದೋ ಬಿರು
ದಲ್ಲಿಗಲ್ಲಿಗೆ ಗುಣ ಬಲ್ಲವರಾರಿನ್ನು
ನೆಲ್ಲಕಟ್ಟು ಕೊನೆಯಲ್ಲಪ್ಪ ವಿಶ್ವ ೨

ಬೊಮ್ಮ ಮೊದಲು ಮನುಜೋತ್ತಮರು ಕಡೆಯಾಗಿ
ನಿಮ್ಮದಾಸರು ಅವರ ಸಮ್ಮಂಧಿಗಳ ಪಾದ
ನೆಮ್ಮಿ ಕೊಂಡಿಪ್ಪಂಥಧಮ್ಮನು ನಾ ಸರ್ವೋ
ತ್ತುಮ್ಮನೇಕ ಗುಣ ಮಹಿಮ್ಮ ವಿಭೂಷಿತ
ರಮ್ಮೆ ಧರಣಿ ದೇವಿ ಇಮ್ಮಹಿಷೇರ ಕೂಡಿ
ಸಮ್ಮುಖನಾಗುತ ಸುಮ್ಮನೆ ಬಾಬಾ
ಹಿಮ್ಮೆಟ್ಟಿದೆ ಸಿರಿ ವಿಜಯ ವಿಠಲ ಅನು
ಪಮ್ಮ ಚರಿತ ಪರಬೊಮ್ಮ ತಿರುಮಲೇಶ ೩

ಎಂದು ಹಾಡಿದಾಗ ವೆಂಕಟೇಶ ಇಮ್ಮಹಿಷೇರ ಕೂಡಿ ಸಮ್ಮುಖನಾಗುತ ರಥದಲ್ಲಿ ವೇಗವಾಗಿ ನಡೆದು ಬಂದನಂತೆ.

ಆದವಾನಿಯ ದಿವಾನರಾಗಿದ್ದ ತಿಮ್ಮಣ್ಣನು ವಿಜಯದಾಸರ ಶಿಷ್ಯನಾದ ಮೇಲೆ ದಾಸರು ಹೆಚ್ಚು ಕಾಲ ಆದವಾನಿಯಲ್ಲಿಯೇ ಕಳೆಯುತ್ತಿದ್ದರೆನಿಸುತ್ತದೆ. ಆಗ ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕಿನ ಮೊಸುರಕಲ್ಲಿನ ಭಾಗಣ್ಣ ಗಾಯತ್ರಿ ಮಂತ್ರದ ಪುನಶ್ಚರಣೆಯಿಂದ ಭೂತ ಭವಿಷ್ಯತ್ ಜ್ಞಾನವನ್ನು ಸಂಪಾದಿಸಿ ಪ್ರಸಿದ್ಧ ಜ್ಯೋತಿಶಾಸ್ತ್ರಜ್ಞರಾಗಿದ್ದರು. ಅಲ್ಲದೆ 'ವೆಂಕಟಕೃಷ್ಣ' ಎಂಬ ಅಂಕಿತದಿಂದ ಅನೇಕ ಕೃತಿಗಳನ್ನು ರಚಿಸುತ್ತಿದ್ದರು. ಒಮ್ಮೆ ವಿಜಯದಾಸರ ಭೇಟಿ ಭಾಗಣ್ಣನವರಿಗೆ ಯಾದಗಿರಿಯಲ್ಲಿ ಲಭಿಸಿದಾಗ ಭಾಗಣ್ಣನವರು ವಿಜಯದಾಸರ ಶಿಷ್ಯರಾಗಲು ಅಪೇಕ್ಷಿಸಿದರು. ವಿಜಯದಾಸರು 'ಗೋಪಾಲವಿಠಲ' ಎಂದು ಅಂಕಿತೋಪದೇಶವನ್ನು ಮಾಡಿದರು. ಭಾಗಣ್ಣನವರಿಗೆ ವಿಜಯದಾಸರು ಕ್ಷಯ ಸಂವತ್ಸರದ ಮಾರ್ಗಶಿರ ಶುದ್ಧತ್ರಯೋದಶಿ ಶುಕ್ರವಾರ ಅಶ್ವಿನಿ ನಕ್ಷತ್ರದಲ್ಲಿ ಅಂಕಿತೋಪದೇಶವನ್ನು ಮಾಡಿದರೆಂದು ಚಿಪ್ಪಗಿರಿಯ ವಿಜಯದಾಸರ ಕೃತಿಗಳಲ್ಲಿನ ಪುಸ್ತಕದಲ್ಲಿ ಗೋಪಾಲವಿಠಲರಿಗುಪದೇಶಿಸಿದ ಅಂಕಿತ ಪದದ ಮೇಲೆ ಬರೆದಿರುವುದರಿಂದ ಕ್ರಿ.ಶ.೧೭೪೬ ರಲ್ಲಿ ಭಾಗಣ್ಣನವರಿಗೆ ಅಂಕಿತವಾಯಿತೆಂದು ಹೇಳಬಹುದು.

ಗೋಪಾಲವಿಠಲ ನಿನ್ನ ಪೂಜೆ ಮಾಡುವೆನು
ಕಾಪಾಡು ಈ ಮಾತನು
ಅಪಾರ ಜನುಮದಲ್ಲಿ ಕೂಡಿದವನ ಮೇಲೆ
ನೀ ಪ್ರೀತಿಯನು ಮಾಡಿ ನಿಜದಾಸರೊಳಗಿಡು ಪ

ಶ್ರುತಿ ಶಾಸ್ತ್ರ ಪುರಾಣ ಮಿಕ್ಕಾದ ಗ್ರಂಥಗಳ
ಸತತ ಅಭ್ಯಾಸ ಮಾಡಿ
ಮಿತಿ ಇಲ್ಲದಲೆ ತೀರ್ಥಯಾತ್ರೆ ದಾನ ನಾನಾ
ವ್ರತಗಳನು ಬಿಡದೆ ಮಾಡಿ
ಮತಿಯಲ್ಲಿ ನಿಂದು ಮಹಾಸ್ತೋತ್ರಗಳ ಗೈದು ಉ
ನ್ನತ ತಪಸುಗಳ ಮಾಡಿ
ಹಿತ ಪುಣ್ಯದಿಂದವಗೆ ಉಪದೇಶ ಮಾಡಿದೆನೋ
ಚ್ಯುತ ದೂರ ನಿನ್ನ ಕರುಣಾಸಕೆ ಎಣೆಗಾಣೆ ೧

ಅಂಕಿತ ನಾನಿತ್ತೆ ನಿನ್ನ ಪ್ರೇರಣೆಯಿಂದ
ಕಿಂಕರಗೆ ಲೌಕಿಕ ಡೊಂಕ ನಡತಿಯ ಬಿಡಿಸಿ
ಜನುಮ ಜನುಮದಲ್ಲಿದ್ದ
ಪಂಕನಿಕರವ ತೊಲಗಿಸಿ ಶಂಕೆ ಪುಟ್ಟದಂತೆ
ಕಾವ್ಯಗಳ ಪೇಳಿಪದು
ಸಂಕಟಗಳಟ್ಟಿಧಾಗೆ ವೆಂಕಟಕೃಷ್ಣನು ನೀನೆ
ವಿಜಯವಿಠಲ ಇಂದು
ಅಂಕುರವು ಫಲಿಸಿ ಫಲಪ್ರಾಪ್ತಿಯಾಗಲಿ ೨

ಎಂಬ ಮೂರು ನುಡಿಗಳ ಅಂಕಿತ ಪದವನ್ನು ರಚಿಸಿ ಉಪದೇಶಿಸಿದರು. ಭಾಗಣ್ಣನವರಿಗೆ ವಿಜಯದಾಸರು ಯಾದಗಿರಿ ಎಂಬ ನರಸಿಂಹ ಕ್ಷೇತ್ರದಲ್ಲಿ ಅಂಕಿತ ಪ್ರದಾನ ಮಾಡಿದರೆಂದು ತಂದೆ ಗೋಪಾಲ ವಿಠಲರು ತಿಳಿಸಿದ್ದಾರೆ.

ಧಾತ್ರಿಯೊಳು ಯಾದವಗಿರಿಯ ಸತ್ಪಾತ್ರ ತಿಮ್ಮಣ್ಣನೆಂಬನಾ
ತೀರ್ಥಯಾತ್ರೆಯ ನೆವದಿಂದಾ ಕ್ಷೇತ್ರದಲಿ ವಾಸ ಮಾಡ್ದನಾ

ವೆಂಕಟಕೃಷ್ಣೆಂದು ಪದಗಳಿಗಂಕಿತವು ನೀಡುತಲಿರೆ
ವೆಂಕಟೇಶನ ದಾಸವರ್ಯರು ಸೋಂಕಿ ವಿಜಯದಿಂ ಬರುತಿರೆ
ದಾಸವರ್ಯರು ಕಂಡು ಇವರಿಗುಪದೇಶವನು ಕೊಡಲಾಕ್ಷಣಾ
ಏಸು ಜನ್ಮದ ಸುಕೃತವೆನುತಲಿ ಲೇಸು ಲೇಸೆಂದು ಮೆರೆದನಾ

ಭಾಗಣ್ಣನವರು ಅಂಕಿತ ಪಡೆದ ಮೇಲೆ ಗೋಪಾಲದಾಸರೆಂದು ಪ್ರಸಿದ್ಧರಾದರು. 'ಶ್ರುತಿ ಶಾಸ್ತ್ರ ಪುರಾಣ ಮಿಕ್ಕಾದ ಗ್ರಂಥಗಳ ಸತತ ಅಭ್ಯಾಸ ಮಾಡಿ' ಎಂಬ ವಾಕ್ಯವನ್ನು ಈ ಕೀರ್ತನೆಯಲ್ಲಿ ಹೇಳುವುದರ ಮೂಲಕ ವಿಜಯದಾಸರು ಸಂಸ್ಕೃತ ತತ್ವಶಾಸ್ತ್ರಗ್ರಂಥಗಳನ್ನು ಚೆನ್ನಾಗಿ ಅಭ್ಯಾಸ ಮಾಡಿರುವುದಾಗಿ ಹೇಳಿಕೊಂಡಿದ್ದಾರೆ. ಆದರೆ, ' Vijaya Dasa came back to his native home and then went to kolur to learn the scriptures of his religion' ಎಂಬ ಅಭಿಪ್ರಾಯವೊಂದಿದೆಯಾದರು ಈ ಮಾತಿಗೆ ಯಾವ ಆಧಾರವನ್ನು ಸೂಚಿಸದಿರುವುದರಿಂದ ಇದು ಕೇವಲ ಊಹೆಯ ಮಾತಾಗಿದೆ. ವಿಜಯದಾಸರು ಬಾಲ್ಯದಲ್ಲಿಯೇ ತಮ್ಮ ತಂದೆಯವರಿಂದ ಸಂಸ್ಕೃತ ಅಭ್ಯಾಸವನ್ನು ಮಾಡಿದ್ದು ಹರಿದಾಸರಾದ ಮೇಲೆ ವೇದೋಪನಿಷತ್ತುಗಳ ಅಧ್ಯಯನವನ್ನು ಆಸಕ್ತಿಯಿಂದ ಮಾಡಿರಬಹುದೆನ್ನಿಸುತ್ತದೆ. ಶ್ರೀ ವಿಜಯದಾಸರು ಕೇವಲ ಮಧ್ವ ತತ್ವವನ್ನು ಕನ್ನಡ ಭಾಷೆಯಲ್ಲಿ ತಿಳಿದ ವ್ಯಕ್ತಿಗಳಷ್ಟೇ ಆಗಿರದೆ, ಮಾಧ್ವಯತಿ ಪರಂಪರೆಯಲ್ಲಿ ಬಂದ ಅನೇಕ ಪೀಠಾಧಿಪತಿಗಳ ನೇತೃತ್ವದಲ್ಲಿ ಅಧ್ಯಯನ ಮಾಡಿದ ಪಂಡಿತರು ಹೇಗೆ ಸಿದ್ಧಾಂತವನ್ನು ನ್ಯಾಯ, ತರ್ಕ, ಮೀಮಾಂಸಾದಿಗಳೊಡನೆ ಸಂಸ್ಕೃತದಲ್ಲಿಯೇ ವಾಗ್ವಾದಗಳನ್ನು ಪ್ರತಿವಾದಿಗಳೊಡನೆ ನಡೆಸಿ ಜಯದುಂದುಭಿಯನ್ನು ಮೊಳಗಿಸುತ್ತಿದ್ದರೋ ಅಂತೆಯೇ ವಿಜಯದಾಸರು ಸಿದ್ಧಾಂತವನ್ನು ಕರತಲಾಮಲಕವನ್ನಾಗಿಸಿಕೊಂಡು ಪ್ರತಿವಾದಿಗಳನ್ನು ಜಯಿಸುವ ಸಾಮರ್ಥ್ಯವನ್ನು ಪಡೆದಿದ್ದ ಮೇಧಾವಿಗಳಾಗಿದ್ದರು. ರಾಮಾಶಾಸ್ತ್ರಿ ಎಂಬ ಅದ್ವೈತ ತತ್ವ ಪಂಡಿತರೊಡನೆ ಯುಕ್ತಿ–ಯುಕ್ತವಾಗಿ ವಿಜಯದಾಸರು ವಾದಿಸಿ ಅವರನ್ನು ನಿರುತ್ತರರನ್ನಾಗಿ ಮಾಡಿದಾಗ ಅವರು ವಿಜಯದಾಸರ ಶಿಷ್ಯರಾದರಂತೆ.

ಶ್ರೀ ವಿಜಯದಾಸರಿಗಿದ್ದ ತಪೋಬಲ ಅಗಮ್ಯವಾದುದು. ಶಿಷ್ಯರ ಹಾಗೂ ದುಃಖಿತ ಜನರನ್ನು ಕಂಡಾಗ ಅವರು ಉದಾರಿಗಳಾಗಿ ಅನೇಕ ರೀತಿಯಿಂದ ಅವರಿಗೆ ಉಪಕರಿಸುತ್ತಿದ್ದರು. ಅವರ ಉದಾರವಾದ ಕೊಡುಗೆಯುಲ್ಲಿ ಆಯುರ್ದಾನವೂ ಸೇರಿದೆ. ತಮ್ಮ ಆಯಸ್ಸಿನ ಕೆಲವು ವರ್ಷಗಳನ್ನು ಅನೇಕರಿಗೆ ದಾನ ಮಾಡುವ ಶಕ್ತಿ ಅವರಿಗಿದ್ದುದರಿಂದ ಅವರೊಬ್ಬ ಮಹಿಮೋಪೇತ ವ್ಯಕ್ತಿಗಳೆಂದು ಪ್ರಸಿದ್ಧರಾಗಿದ್ದಾರೆ.

ಅನೇಕ ಭಕ್ತರಿಗೆ ಬಂದ ಕಷ್ಟ ಪರಂಪರೆಯನ್ನು ನೋಡಿ ವಿಜಯದಾಸರ ಮನಸ್ಸು ಕರಗಿ ಅವರನ್ನು ಅಂತಹ ಕುತ್ತುಗಳಿಂದ ದೂರಮಾಡುವ ಪ್ರಯತ್ನದಲ್ಲಿ ಸಫಲರಾದ ವಿಜಯದಾಸರು ಎಲ್ಲವೂ ಶ್ರೀ ಹರಿಯ ಅನುಗ್ರಹವೇ ಎಂದು ತಿಳಿದು ಸಂತೋಷದಿಂದಿದ್ದರು. ಸತ್ಪುರುಷರ ಲಕ್ಷಣವೇ ಹೀಗೆ 'ಪರೋಪಕಾರಾರ್ಥಮಿದಂ ಶರೀರಂ' ಎಂದು ಅವರ ಭಾವನೆ. ಇಂತಹ ಭಕ್ತರ ಹೃದಯದ ಪರಿಪಕ್ವತೆಯನ್ನು ಆ ದೈವವು ಪರೀಕ್ಷಿಸುವ ರೀತಿಯೂ ಒಮ್ಮೊಮ್ಮೆ ಭಯಂಕರವಾಗಿರುವುದುಂಟು. ಆ ಭಕ್ತನ ಭಕ್ತಿಯ ಎತ್ತರವನ್ನು ಪರೀಕ್ಷಿಸಲು ದೇವರು ಭಕ್ತನಿಗೆ ಬಡತನವನ್ನೊಮ್ಮೆ ನೀಡಿ, ಸಿರಿವಂತಿಕೆಯವನ್ನು ಮತ್ತೊಮ್ಮೆ ಕರುಣಿಸಿ, ಕೊಟ್ಟದ್ದನ್ನು ಅಪಹರಿಸಿ ಲೋಕದಲ್ಲಿ ಲೋಗರನ್ನಾಗಿ ಮಾಡಿ ಬಂಧು ಬಾಂಧವರನ್ನಗಲಿಸಿ ನಿರಾಶ್ರಿತ ವ್ಯಕ್ತಿಯನ್ನಾಗಿ ಮಾಡಿ ಆ ಭಕ್ತ ಹೃದಯದ ಪರಿಪಕ್ವತೆಯನ್ನು ಅಳೆಯುತ್ತಾನೆ. ಈ ಯಾವ ಪರೀಕ್ಷೆಗಳಲ್ಲಿಯು ಸೋಲದೆ ದೃಢ ಚಿತ್ತನಾಗಿ ಪರಮಾತ್ಮನಲ್ಲಿ ಭಕ್ತಿಯನ್ನು ಒಂದೇ ರೀತಿಯಾಗಿ ತೋರುವವನೆ ನಿಜವಾದ ಭಕ್ತನಲ್ಲವೆ? ಅಪರಂಜಿ ಬಂಗಾರ ಪುಟಕ್ಕಿಟ್ಟಾಗ ತನ್ನ ಕೊಳೆಯೆಲ್ಲವನ್ನು ಕಳೆದುಕೊಂಡು ಪ್ರಜ್ವಲಿಸುವಂತೆ ಆ ದೇವರ ಪರೀಕ್ಷೆಗಳಿಂದ ಭಕ್ತನು ತನ್ನ ಪಾಪಗಳಿಂದ ವಿಮುಕ್ತನಾಗಿ ಪುಣ್ಯಪುಂಜನಾಗಿ ಬೆಳಗುತ್ತಾನೆ. ಇಂತಹ ಪ್ರಸಂಗ ವಿಜಯದಾಸರ ಜೀವನದಲ್ಲಿಯು ನಡೆಯಿತು. ಶೇಷಗಿರಿ ತಂದೆ ನಡೆದ ಹಾದಿಯಲ್ಲಿ ಅವರ ಮನಸ್ಸಿಗನುಗುಣವಾಗಿ ನಡೆಯುತ್ತಾ ಹರಿದಾಸನೆನಿಸಿಕೊಂಡಿದ್ದನು. ಇದರಿಂದ ವಿಜಯದಾಸರಿಗೂ ಅಪಾರವಾದ ಸಂತೋಷವಿತ್ತು. ತಂದೆಯ ಮನಸ್ಸಿನಂತೆ ನಡೆಯುವ ಪುತ್ರನಿಂದ ಯಾವ ತಂದೆಗೆ ತಾನೆ ತೃಪ್ತಿಯಿರುವುದಿಲ್ಲ. ಆದರೆ ಇಂತಹ ಶೇಷಗಿರಿ ಕ್ರಿ.ಶ.೧೭೫೧ರಲ್ಲಿ ಮೃತ್ಯುವಿಗೀಡಾದನು.

ಹೋದ್ಯಾ ಶೇಷಗಿರಿದಾಸ ಸುಲಭ ಹಾದಿಯನು ಮೆಟ್ಟಿ ನಮ್ಮನ್ನು ಭವಾಬ್ಧಿಯೊಳಿಟ್ಟು ಎಂದು ದುಃಖವಾದಾಗ

ಶೋಕ ಯಾತಕೆಮನವೆ ನಿನಗೆ ಇಂದು
ಈ ಕುಮಾರನು ನಿಜಗತಿಯ ಕೊಡಿಸುವನೇ?
ಕಾಲಕ್ಕೆ ತಕ್ಕದ್ದು ಮಾಡಿಸುವ ಹರಿ ತಾನು
ಮೇಲು ಕೀಳಾಗಗೊಡದಲೆ ನಿತ್ಯ
ಚಿಂತೆ ಮಾಡುವುದ್ಯಾಕೆ ಮನವೆ ನೀನು
ಪಿಂತೆ ಎಸಗಿದ ಕರ್ಮ ಎಂದಿಗಾದರೂ ಬಿಡದು
ನೀನೇನು ಮಾಡಲಾಪಿಯೋ ಲಕುಮೇಶ
ನಾನೀಗ ಪಡೆದದ್ದು ಉಣದಲೆ ಪೋಗುವದೆ ಪ

ಲೋಕದೊಳಗೆ ನಿನ್ನ ಕೊಂಡಾಡಿ ಪ್ರತಿದಿನ
ಏಕ ಭಕುತಿಲಿ ಸರ್ವೋತ್ತಮಾನೆಂದು
ಏಕಾಂತ ಭಜಿಪ ಮನುಜಗಾದರು ಬರೆದ
ವಾಕು ತಪ್ಪುವುದೇನು ಅಜನು ನಿರ್ಣೈಸಿದಾ

ಎಂದು ದುಃಖಿಸಿದರು. ಹೀಗೆ ನಾನಾ ವಿಧವಾಗಿ ಒತ್ತರಿಸಿ ಬರುತ್ತಿದ್ದ ದುಃಖವನ್ನು ತತ್ವಶಾಸ್ತ್ರಗಳ ಬಲದಿಂದ ತಾವು ಸಮಾಧಾನ ಮಾಡಿಕೊಂಡರಲ್ಲದೆ ತಮ್ಮ ಪತ್ನಿಯವರಿಗೂ ಅಂತಹ ಸಮಾಧಾನದ ಮಾತುಗಳನ್ನು ಹೇಳಿದರು. ಹಿಂದೆ ಯಾವುದೋ ಜನ್ಮದಲ್ಲಿ ಕಾಡಿನಲ್ಲಿದ್ದ ಬಾಲ ಮೃಗವೊಂದನ್ನು ತಾವು ಕೊಂದು ಯಮಪುರಿಗೆ ಕಳುಹಿದುದರಿಂದ ಶೇಷಗಿರಿಯನ್ನು ಕಳೆದುಕೊಳ್ಳಬೇಕಾಯಿತೆಂದು ವಿಜಯದಾಸರು ಒಂದು ಕೃತಿಯಲ್ಲಿ ಹೇಳಿದ್ದಾರೆ.

ಚಿಂತೆಯಾತಕೆ ನಿನಗೆ ಎಲೆ ಪ್ರೀಯಳೆ
ಸಂತತಾ ತಿಳುಹುವೆನು ಭಕುತಿಯಿಂದ ಕೇಳು ಪ

ಸಂತಾನವಿಲ್ಲೆಂದು ಈರ್ವರೂ ಚಿಂತಿಪುದ್ಯಾಕೆ
ಪಿಂತೆ ಕಾಂತಾರದಲಿ ಬಾಲ ಮೃಗನಾ

ಅಂತಕನ ಪುರಿಗೆ ಅಟ್ಟಿದ ದೋಷದಿಂದ ನಮ
ಗಿಂತು ತೋರಿತು ಗುಟ್ಟು ಪೇಳಬಾರದು ರಮಣಿ
ಈ ಜನ್ಮ ಬಂದದಕೆ ಇನ್ನಾದರೆಚ್ಚೆತ್ತು
ಮಾಜಿಕೊಂಡಿದ್ದ ಜನರಂತೆ ನಡೆದು
ಮೂಜಗತ್ಪತಿ ಸಿರಿ ವಿಜಯವಿಠಲನ ಸ
ರೋಜ ಚರಣವನು ಪೂಜಿಸುವೆನೊ ರಮಣಿ

ವಿಜಯದಾಸರು ಲೌಕಿಕ ಸಂಪಾದನೆಗಾಗಿ ಶ್ರೀ ಹರಿಯನ್ನು ಮೊರೆ ಹೊಕ್ಕವರಲ್ಲ. ಜೀವನದ ಕ್ಷಣಿಕತೆಯನ್ನು ದುಃಖ ಮಿಶ್ರಿತವಾದ ಸುಖ ಸ್ವರೂಪವನ್ನು ಅರಿತುಕೊಂಡು ಅವರು ಭವಬಂಧನದ ಸರಪಳಿಯನ್ನು ಕಳಚಿಕೊಳ್ಳಲೆಂದು ಉನ್ನತ ಭಕ್ತಿ ಭಿಕ್ಷುಗಳಾದ ಹರಿದಾಸರವರು. ಅಂತಹವರನ್ನು ಲಕ್ಷ್ಮೀ ವೆಂಕಟೇಶನು ಮತ್ತೊಮ್ಮೆ ಬೇರೊಂದು ಪರೀಕ್ಷೆಗೀಡು ಮಾಡಿದ ಪ್ರಸಂಗ ಬಹು ಸ್ವಾರಸ್ಯವಾಗಿದೆ.

ಚೀಕಲಪರಿವಿಯಲ್ಲಿದ್ದಾಗ ಒಂದು ದಿನ ವಿಜಯದಾಸರು ಪ್ರಾತಃ ಕಾಲದಲ್ಲಿ ಮನೆ ಬಿಟ್ಟು ಹೊರಗೆ ಹೋದವರು ಭೋಜನ ಸಮಯವಾದರೂ ಮನೆಗೆ ಹಿಂದಿರುಗಲಿಲ್ಲ. ಆಗ ಅವರ ಮನೆಗೆ ಮುತ್ತೈದೆಯೊಬ್ಬಳು ಬೆಳ್ಳಿಯ ತಟ್ಟೆಯಲ್ಲಿ ಸೊಗಸಾದ ಷಡ್ರಸೋಪೇತವಾದ ನಾನಾ ವಿಧ ಭೋಜನ ಪದಾರ್ಥಗಳನ್ನು ಎಲೆ ಮುಚ್ಚಿ ತಂದು, ಬೆಳ್ಳಿಯ ತಂಬಿಗೆಯಲ್ಲಿ ಕೇಸರಿ ಬೆರಸಿದ ನೀರನ್ನಿಟ್ಟು ವಿಜಯದಾಸರು ತಮ್ಮ ಮನೆಗೆ ಭೋಜನಕ್ಕೆ ಒಪ್ಪಿಕೊಂಡವರು ಎಷ್ಟು ಹೊತ್ತಾದರೂ ಬಾರದಿದ್ದುದರಿಂದ ಮನೆಯವರು ಇವುಗಳನ್ನು ಕಳುಹಿಸಿದ್ದಾರೆಂದು ತಿಳಿಸಿ ಕೊಟ್ಟು ಅದೃಶ್ಯಳಾದಳಂತೆ. ಅನಂತರ ಮನೆಗೆ ವಿಜಯದಾಸರು ದಯ ಮಾಡಿದರು. ಮನೆಯೆಲ್ಲಾ ಪಚ್ಚ ಕರ್ಪೂರ ಕೇಸರಿ ಮತ್ತು ಹಸನಾದ ಘೃತದಿಂದ ಘಮಘಮಿಸುತಿತ್ತು. ಆಶ್ಚರ್ಯದಿಂದ ಮನೆಯಲ್ಲಿ ಕೇಳಿದಾಗ ಭೋಜನಕ್ಕೆ ಒಪ್ಪಿ ಮಾತುಕೊಟ್ಟು ಅನ್ಯರಿಗೆ ತೊಂದರೆ ಕೊಡುವುದು ಸರಿಯೆ ಎಂಬ ಪ್ರಶ್ನೆಯೇ ಬಂದಿತು. ಆದರೆ ಆ ದಿನ ವಿಜಯದಾಸರನ್ನು ಯಾರೂ ಭೋಜನಕ್ಕೆ ಆಹ್ವಾನಿಸಿರಲಿಲ್ಲವಂತೆ, ಶ್ರೀ ಹರಿ ಅನುಗ್ರಹಿಸಿದ ಭೋಜ್ಯ ವಸ್ತುಗಳನ್ನು ಭುಂಜಿಸಿ ಆನಂದಿಸಿದ ಮೇಲೆ ವಿಜಯದಾಸರಿಗೆ ತಮ್ಮ ಮನೆಗೆ ಸಾಕ್ಷಾತ್ ಸಂಪದಭಿಮಾನಿ, ಕ್ಷೀರಸಾಗರ ಕನ್ನಿಕೆಯಾದ ಲಕ್ಷ್ಮೀದೇವಿಯೇ ಬಂದಿರುವುದಾಗಿ

ಭಾಸವಾಯಿತು. ಇದರಿಂದ ಉಂಟಾದ ಸಂತೋಷದೊಡನೆ ಆ ಭಕ್ತ ಹೃದಯಕ್ಕೆ ತಾಪವೂ ಆಯಿತ್ತು. ಆಗ ಭಾವಪರವಶರಾಗಿ,

ನೀನೊಲಿದುದಕ್ಕಿಹ ಸೌಖ್ಯವೆ ಇನ್ನು
ನಾನೊಲ್ಲೆ ನಾನೊಲ್ಲೆ ಸರ್ವೇಶ
ಮಾನಸದಲಿ ನಿತ್ಯ ನೆರನಂಬಿದಂಥ ಮಾನವನ ಕೂಡ
ಮಾನವಾಗಿಪ್ಪರೆ? ಪ

ಷಡುರಸ ನಾನಾ ಸುಭೋಜನ
ಬಿಡಿಸಯ್ಯ ದಾನವ ಭಂಜನ
ಒಡನೊಡನೆ ಮೊರೆಯಿಡುವೆನೊ ಕರುಣಿಸೊ
ಅಡಿಗಡಿಗೆ ಜ್ಞಾನ ಕೊಡವಂತೆ ಪ್ರತಿದಿನ
ಒಡಲಿಗೋಸುಗ ಪೊಡಮಟ್ಟು ನಿ
ನ್ನಡಿಗಳಿಗೆ ನಮಿಸದೆ ಕೇಳೆ
ನ್ನೊಡೆಯ ಧ್ಯಾನವ ಪಾಲಿಸಿ ಭವ
ದಡಿಯ ತಡೆಯಿಂದೆತ್ತಿ ನೋಳ್ಪುದು ೧

ಜನ ಜನರಿಂದ ಮನ್ನಣೆ ದೇವ
ಎನಗೆ ಹತ್ತದು ಕಾಣೊ ನಿನ್ನಾಣೆ
ಮನೋ ವಾಚ ಕಾಯದಲ್ಲಿನಿತು ಸಿದ್ಧವಿದೆ
ಅನುವಿಲ್ಲ ಯೋಚನೆ ಯಾತಕೆ ದೇವಾ
ಜನುಮದೊಳು ಸಾಧನವಿದಾಯಿತು
ಧನ ಕನಕ ವಾಹನಗಳಿಂದಲಿ
ಘನಗತಿಗೆ ಒಂದಿನ ಒಂದಾದರೂ
ಗುಣದಿ ನಿನ್ನಾರ್ಚನೆ ಮಾಡಲಿಲ್ಲ ೨

ಕಂಡ ಕಂಡಲ್ಲೆನ್ನ ತಿರುಗಿಸಿ
ಥಂಡ ಥಂಡದಿಂದ ಮರುಗಿಸಿ

ಮಂಡಲದೊಳು ನೀ ಚಂಡ ಕರ್ಮದೊಳಿಟ್ಟು
ಉಂಡುಂಡದಕ್ಕೆಲ್ಲ ದಂಡಿಸುವರೇನೊ
ತೋಂಡ ನಾನೈ ತವಕದಿಂದಲಿ
ಖಂಡ ಮತಿಯನು ಕೊಡದೆ ಒಲಿದು
ಹಿಂಡು ಮುಕ್ತರ ಸಂಗವೀವುದು

ಗಂಡುಗಲಿ ಸಿರಿ ವಿಜಯವಿಠಲ

ಷಡುರಸ ನಾನಾ ಭೋಜನದಲ್ಲಿನ ಆಸಕ್ತಿ ನಿರಸನಕ್ಕಾಗಿ ಶ್ರೀ ಹರಿಯಲ್ಲಿ ನಿವೇದಿಸಿಕೊಂಡು ನೀನೊಲಿದುದಕ್ಕಿಹ ಸೌಖ್ಯವೆ ನಾನೊಲ್ಲೆ ನಾನೊಲ್ಲೆ ಸರ್ವೇಶ ಎಂದು ಹಾಡಿರುವುದು ವಿಜಯದಾಸರ ಜೀವನದ ಗುರಿ ಏನೆಂಬುದನ್ನು ಸ್ಪಷ್ಟಪಡಿಸುತ್ತದೆ.

ವಿಜಯದಾಸರು ಹೀಗೆ ಲೋಕದ ಜೀವನಕ್ಕೆ ಅಂಟಿಯೂ ಅಂಟದಂತಿದ್ದರು. ಸಾಧನೆಯ ದಿವ್ಯ ಮಾರ್ಗದಲ್ಲಿ ಸಾಗುತ್ತಾ ಕಾಲಕಾಲಕ್ಕೆ ಸ್ಫೂರ್ತಿ ಕುಡಿಯೊಡೆದಂತೆ ಅನೇಕ ಕೃತಿಗಳನ್ನು ರಚಿಸಿ, ಕನ್ನಡಿಗರಿಗುಪಕರಿಸಿದರು. ಇವರು ರಚಿಸಿದ ಕೀರ್ತನೆಗಳಲ್ಲಿ ಐನೂರಕ್ಕೂ ಹೆಚ್ಚಾಗಿ ದೊರೆತಿವೆ. ಹರಿದಾಸ ಚತುಷ್ಟರಲ್ಲಿ ಎರಡನೆಯವರಾದ ಶ್ರೀ ವಿಜಯದಾಸರು ಉಳಿದ ಇಬ್ಬರು ಮಹನೀಯರಾದ ಶ್ರೀ ಗೋಪಾಲದಾಸರು ಹಾಗೂ ಶ್ರೀಜಗನ್ನಾಥದಾಸರಿಗೆ ಮಾರ್ಗದರ್ಶಕರಾದವರು. ಶ್ರೀ ಜಗನ್ನಾಥದಾಸರಿಗೆ ಗೋಪಾಲದಾಸರಿಂದ ನಲವತ್ತು ವರ್ಷಗಳ ಆಯುರ್ದಾನವನ್ನು ಮಾಡಿಸಿ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿಯೇ ಅಭೂತಪೂರ್ವವಾದ ಗ್ರಂಥವೆಂಬ ಪ್ರಶಸ್ತಿಗೆ ಪಾತ್ರವಾದ ಶ್ರೀ ಹರಿಕಥಾಮೃತಸಾರ ಎಂಬ ತತ್ತ್ವ ಶಾಸ್ತ್ರಗರ್ಭಿತವಾದ ಕಾವ್ಯವನ್ನು ರಚಿಸಲು ವಿಜಯದಾಸರು ನೆರವಾದರು. ಶ್ರೀ ಗೋಪಾಲದಾಸರಿಂಧ ಶ್ರೀನಿವಾಸಾಚಾರ್ಯರಿಗೆ ಅಂಕಿತ ಕೊಡಿಸಿ, ವಿಜಯದಾಸರು ಆಶೀರ್ವದಿಸಿದ ಘಟನೆಯಿಂದ ದಾಸರ ವ್ಯಕ್ತಿತ್ವ, ವಿಶಾಲ ಹೃದಯ ತಿಳಿದು ಬರುತ್ತದೆ.

ಕರ್ನಾಟಕದಲ್ಲಿ ರಾಯಚೂರು ಜಿಲ್ಲೆಯ ಮಾನವಿ ಕ್ಷೇತ್ರದಲ್ಲಿ ಶ್ರೀ ನರಸಪ್ಪ ಲಕ್ಷ್ಮಿಬಾಯಿ ದಂಪತಿಗಳಿಗೆ ಶ್ರೀನಿವಾಸ ಎಂಬ ಪುತ್ರನಿದ್ದನು. ಚಿಕ್ಕಂದಿನಲ್ಲಿಯೇ ಮಂತ್ರಾಲಯದ ಶ್ರೀ ವರದೇಂದ್ರ ತೀರ್ಥ ಶ್ರೀ ಪಾದಂಗಳವರಲ್ಲಿ ವಿದ್ಯಾಭ್ಯಾಸ ಮಾಡಿದ ಶ್ರೀನಿವಾಸ ವೇದೋಪನಿಷತ್ತುಗಳ ರಹಸ್ಯವನ್ನು ಸತತ ಅಭ್ಯಾಸದಿಂದಲೂ ಪ್ರತಿಭೆಯಿಂದಲೂ ಅರಿತು ಗುರುಗಳ ಆಶೀರ್ವಾದಕ್ಕೆ ಪಾತ್ರನಾದನು. ವಿದ್ಯಾಭ್ಯಾಸವಾದ ಮೇಲೆ ಶ್ರೀ ಪಾದಂಗಳವರು ಸಂತೋಷದಿಂದ ಆಚಾರ್ಯ ಎಂಬ ಬಿರುದನ್ನಿತ್ತು ಆಶೀರ್ವದಿಸಿದರು. ಶ್ರೀನಿವಾಸಾಚಾರ್ಯರಾಗಿ ಮಾನವಿಗೆ ಬಂದ ಮೇಲೆ ಅನೇಕ ಶಿಷ್ಯರಿಗೆ ಪಾಠ ಹೇಳುತ್ತಾ ವಿದ್ವಾಂಸರೆಂಬ ಘನತೆಯಿಂದ ಸಂತೃಪ್ತ ಜೀವನವನ್ನು ನಡೆಸುತ್ತಿದ್ದರು. ಶ್ರೀನಿವಾಸಾಚಾರ್ಯರ ಸಂಸ್ಕೃತ ಪಾಂಡಿತ್ಯ ದಿನ ಕಳೆದಂತೆ ವರ್ಧಿಸುವುದರ ಜೊತೆಗೆ ಕನ್ನಡದಲ್ಲಿ ತತ್ತ್ವ ಶಾಸ್ತ್ರವನ್ನು ತಿಳಿಸುವ ಹರಿದಾಸರ ಗುಂಪಿನ ಮೇಲೆ ತಾತ್ಸಾರವು ಉಂಟಾಯಿತು. ಇವರ ತಾಯಿಯ ಸೋದರ ಸಂಬಂಧಿಯೇ ಆದ ಶ್ರೀ ವಿಜಯದಾಸರು ಮಾನವಿಗೆ ಬಂದಾಗ ಅಹಂಕಾರದಿಂದ ಬಂಧುವೊಬ್ಬರನ್ನು ಮಾತನಾಡಿಸುವುದಕ್ಕೂ ಆ ಸಂಸ್ಕೃತದ ವ್ಯಾಮೋಹ ಅಡ್ಡವಾಗಿ ನಿಂತಿತು. ಶ್ರೀನಿವಾಸಾಚಾರ್ಯರು ಮನಸ್ಸಿನಲ್ಲಿ,

ದಾಸವೇಷವ ಧರಿಸಿ ಕೂಸಿ ಮಗ ನೀನು ಬಹು
ಮೋಸ ಪಡಿಸಿದೆ ಜನರ ಭಾಸ್ವದಪರೋಕ್ಷಿಯೆಂ
ದೇಸು ಬಗೆಯಾಯ್ತು ಕಲಿದೋಷ ಹಾ! ಹಾ!

ಎಂದು ಭಾವಿಸಿ ಭೂಸರ ಕ್ಲೇಶಪಡಿಸಿದರಂತೆ ಇಂತು ಹರಿಕರಣ ಧೀಮಂತರನು ಬೈದ ಪರಿಣಾಮದಿಂದಲೋ ಏನೋ ಉದರಬೇನೆ ಆಚಾರ್ಯರಿಗೆ ಪ್ರಾಪ್ತವಾಗಿ ಹಾಸಿಗೆ ಹಿಡಿದು ಮಲಗಬೇಕಾಯಿತು

ಕಂಸಮರ್ದನ ದಾಸರಿಗೆ ಸಂಶಯದಿ ಎರಗದಲೆ ವಿದ್ವಾಂಸನೆಂದಹಂಕರಿಸೆ ಭವಗುಣದಿ ಬಂಧಿಸುವ ಎಂದು ಹರಿಕಥಾಮೃತ ಸಾರದಲ್ಲಿ ತಮ್ಮ ಜೀವನದ ಘಟನೆಯನ್ನೇ ಆಚಾರ್ಯರು ಧ್ವನಿಸಿರಬೇಕೆನಿಸುತ್ತದೆ . ಆ ಉದರಬೇನೆ ಯಾವ ಲೌಕಿಕ ವೈದ್ಯರಿಂದಲೂ ಹತೋಟಿಗೆ ಸಿಗದಿರಲು ಭವರೋಗ ವೈದ್ಯನನ್ನೆ ಶರಣು

ಹೋದಾಗ ಶ್ರೀ ವಿಜಯದಾಸರನ್ನೇ ಶರಣು ಹೋಗಬೇಕೆಂದು ಸೂಚನೆಯಾಯಿತು. ವಿಧಿಯಿಲ್ಲದೆ ಚೀಕಲಪರಿವಿಯಲ್ಲಿದ್ದ ವಿಜಯದಾಸರಲ್ಲಿಗೆ ಬಂದು ನಮಸ್ಕರಿಸಿ ಕ್ಷಮೆಯನ್ನು ಕೇಳಿದಾಗ ಬಂಧುವನ್ನು ಪ್ರೀತಿಯಿಂದ ಮಾತನಾಡಿಸಿ ಅಭಯವಿತ್ತು, ಉತ್ತನೂರಿನ ಶ್ರೀ ಗೋಪಾಲದಾಸರಲ್ಲಿಗೆ ಹೋದರೆ ಗುಣವಾಗುವುದೆಂದು ವಿಜಯದಾಸರು ಆಶೀರ್ವದಿಸಿದರು. ಉತ್ತನೂರಿಗೆ ಹೋಗಿ ಗೋಪಾಲದಾಸರನ್ನು ಪ್ರಾರ್ಥಿಸಿದ ಮೇಲೆ, ವಿಜಯದಾಸರ ಅಪ್ಪಣೆಯಂತೆ,

ಎನ್ನ ಬಿನ್ನಪ ಕೇಳೊ ಧನ್ವಂತ್ರಿ ದಯಮಡೊ
ಸಣ್ಣವನು ಇವ ಕೇವಲ ಪ
ಬನ್ನ ಬಡಿಸುವ ರೋಗವನ್ನು ಮೋಚನ ಮಾಡಿ
ಚೆನ್ನಾಗಿ ಪಾಲಿಸುವುದು ಕರುಣೆ ಅ.ಪ

ಎಂದು ಗೋಪಾಲದಾಸರು ಕೃತಿಯನ್ನು ರಚಿಸಿ , ಶ್ರೀ ಹರಿಯನ್ನು ಪ್ರಾರ್ಥಿಸಿ ಧನ್ವಂತ್ರಿ ಮಂತ್ರ ಪೂರಿತವಾದ ಭಕ್ರಿಯನ್ನು ಶ್ರೀನಿವಾಸಾಚಾರ್ಯರಿಗೆ ನೀಡಿ ಉದರಬೇನೆಯನ್ನು ಹೋಗಲಾಡಿಸಿದರು. ಫಂಡರಪುರದ ವಿಠಲನ ದರ್ಶನಕ್ಕೆ ಶ್ರೀನಿವಾಸಚಾರ್ಯರು ತೆರಳಿದಾಗ ಅಲ್ಲಿಯ ಚಂದ್ರಭಾಗ ನದಿಯಲ್ಲಿ ಮಿಂದಾಗ ತಲೆಯ ಮೇಲೆ 'ಜಗನ್ನಾಥ ವಿಠಲ' ಎಂಬ ಶಿಲಾಫಲಕ ದೊರೆತು ಶ್ರೀನಿವಾಸಾಚಾರ್ಯರು ಅಂದಿನಿಂದ 'ಶ್ರೀ ಜಗನ್ನಾಥದಾಸರೆಂದೇ' ಪ್ರಸಿದ್ಧಿಯಾದರು ಗೋಪಾಲದಾಸರನ್ನು ಗುರುಗಳೆಂದು ತೋರಿಸಿದ ಶ್ರೀ ವಿಜಯದಾಸರನ್ನು ಇನ್ನೊಂದು ಕೃತಿಯಲ್ಲಿ ಹೀಗೆ ನೆನೆಸಿದ್ದಾರೆ.

"...... ಘೋರ ವ್ಯಾಧಿಯ ನೋಡಿ ವಿಜ
ಯ ರಾಯ ಭೊರಿ ಕರುಣವ ಮಾಡಿ
ತೋರಿದವರಿವರೆ ಉದ್ಧಾರ ಕರೆಂದಂದಿ
ನಾರಭ್ಯ ತವಪಾದ ಸೇರಿದೆ ಸಲಹೆಂದು

ವಿಜಯದಾಸರು ತಮ್ಮ ತಪೋಬಲವನ್ನು ಪರೋಪಕಾರಕ್ಕಾಗಿ ಉಪಯೋಗಿಸಿಕೊಂಡರೇ ವಿನಾ ಇತರರನ್ನು ಹಾಳು ಮಾಡಲು ಎಂದಿಗೂ

ಪುಣ್ಯದ ಪ್ರಯೋಜನವನ್ನು ಪಡೆದುಕೊಳ್ಳಲಿಲ್ಲ. ಉಳಿದವರ ಸಂತೋಷವೇ ಅವರ ಜೀವನದ ಗುರಿಯಾಗಿತ್ತು. ಒಂದು ಸಲ ವಿಜಯದಾಸರ ಶಿಷ್ಯರಲ್ಲಿ ಕೆಲವರು ತೀರ್ಥಯಾತ್ರೆಗೆಂದು ಗುರುಗಳ ಅನುಜ್ಞೆಯನ್ನು ಪಡೆದು ಪಂಢರಪುರಕ್ಕೆ ಹೋಗಿದ್ದರು. ದಾಸರ ಜೊತೆಯಲ್ಲಿಯೇ ಉಳಿಯಬೇಕಾದ ಕೆಲವು ಶಿಷ್ಯರು ತಮಗೆ ವಿಠಲನ ದರ್ಶನ ಲಾಭವಿಲ್ಲೆಂದು ಮನಸ್ಸಿನಲ್ಲಿ ಆತಂಕ ಪಟ್ಟುಕೊಳ್ಳುತ್ತಿದ್ದರು. ಆದಿನ ದಾಸರು ಚೀಕನಪರಿವಿಯ ಅಶ್ವತ್ಥ ನರಸಿಂಹನ ಬಳಿಯಿದ್ದವರು, ತಮ್ಮ ಶಿಷ್ಯರ ಮನಸ್ಸಿನ ಚಿಂತೆಯನ್ನು ತಿಳಿದು ದೇವರ ಪೂಜೆ ಮಾಡುವ ಸಮಯದಲ್ಲಿ ತಮ್ಮ ಶಿಷ್ಯರಿಗೆ 'ಮುಸುಕು ಹಾಕಿ ಕೊಳ್ಳಿ' ಎಂದು ಹೇಳಿ ಕೆಲವು ನಿಮಿಷಗಳಾದ ಮೇಲೆ 'ಮುಸುಕು ತೆಗೆದು ದೇವರ ದರ್ಶನ ಮಾಡಿರಿ' ಎಂದು ಹೇಳಿದಾಗ ನರಸಿಂಹನ ಬದಲಾಗಿ ಶಿಷ್ಯರು ಪಾಂಡುರಂಗನನ್ನೇ ಕಂಡರಂತೆ. ಈ ಸಂಗತಿಯನ್ನು ಶ್ರೀ ಗೋಪಾಲದಾಸರು, ಅಂಗದ ಮುಸುಕು ತೆಗೆಯಲು ಕ್ಷೇತ್ರದಿ ಪಾಂಡುರಂಗನೋ ವಿಜಯರಾಯ ಎಂದು 'ಸ್ಮರಿಸುವೆ ನಾ ನಿಮ್ಮ ಚರಣಕಮಲ' ಎಂಬ ಕೃತಿಯಲ್ಲಿ ತಿಳಿಸಿರುವರು.

### ವಿಜಯವಿಠಲನ ಆಗಮನ

ಮಾಳಿಗೆ ಶ್ರೀನಿವಾಸಚಾರ್ಯರೆಂಬ ಜ್ಞಾನಿಗಳೂ, ಸದಾಚಾರ ಸಂಪನ್ನರೂ ಆದ ವಿದ್ವಾಂಸರು 'ವಿಜಯವಿಠಲ' ಪ್ರತಿಮೆಯನ್ನು ಪ್ರತಿನಿತ್ಯವೂ ಪೂಜಿಸುತ್ತಾ ಸಾಧನ ನಿರತರಾಗಿದ್ದರು. ಶ್ರೀನಿವಾಚಾರ್ಯರಿಗೆ ವೃದ್ಧಾಪ್ಯ ಸಮೀಪಿಸಿದ ಮೇಲೆ ಶ್ರೀ ಹರಿಯ ಸೂಚನೆಯಂತೆ ವಿಜಯವಿಠಲನ ವಿಗ್ರಹವನ್ನು ವಿಜಯದಾಸರಿಗೆ ಒಪ್ಪಿಸಿದರೆಂದು ಶ್ರೀ ಮೋಹನದಾಸರು ಹೇಳಿದ್ದಾರೆ.

ವಿಜಯರಾಯರ ಪಾದ ನಿಜವಾಗಿ ನಂಬುಲು
ಅಜನ ಪಿತ ತಾನೆ ಒಲಿವಾ
ಸಿರಿ ವಿಜಯ ವಿಠಲ ಶ್ರೀನಿವಾಸಾ
ಚಾರ್‍ಯರು ಹರಿಯಾಜ್ಞೆಯಿಂದ ಕೊಟ್ಟರು

ವಿಜಯವಿಠಲನ ಪ್ರತಿಮೆ ಶ್ರೀ ಹರಿಯಿಂದಲೇ ಶ್ರೀನಿವಾಸಾಚಾರ್ಯರ ಮೂಲಕ ಮನೆಗೆ ಬಂದಾಗ ವಿಜಯದಾಸರಿಗಾದ ಆನಂದಕ್ಕೆ ಪಾರವಿಲ್ಲದಂತಾಯಿತು. ತಾವು ತೋರಿದ ಅಲ್ಪ ಭಕ್ತಿಗೆ ವಿಜಯವಿಠಲ ಒಲಿದುದರ ಸಂತೋಷದಲ್ಲಿ,

ಇಂದು ಎನ್ನ ಮನೆಗೆ ಬಂದ ಕಾರಣವೇನು
ಇಂದಿರಾ ರಮಣ ಗೋವಿಂದ ಕೃಷ್ಣ
ಜ್ಞಾನ ಪೂರ್ವಕವಾಗಿ ಜ್ಞಾನದಿಂದಧಿಕರಾದ
ನೀನೆ ನೀನೆ ಎಂಬೂ ಶ್ರೀನಿವಾಸಾಚಾರ್ಯರ
ಮಾನಸದಲ್ಲಿ ಪೊಳೆದ ಮಾನಿಸರೂಪನೆ

ಎಂದು ಒಂದು ಸುಳಾದಿಯನ್ನು ಆಗ ರಚಿಸಿದರು. ಅಭಿಷೇಕ, ಅರ್ಚನೆ, ಸ್ತೋತ್ರ, ನೈವೇದ್ಯ ಯಾವುದನ್ನು ಸಮರ್ಪಕವಾಗಿ ಮಾಡುವ ಶಕ್ತಿಯಿಲ್ಲದ ಪಾಮರನಲ್ಲಿ ವಿಜಯವಿಠಲ ದಯ ಮಾಡಿಸಿರುವನೆಂದ ಮೇಲೆ ಅವನ ಕಾರುಣ್ಯ ಎಷ್ಟೆಂದು ವಿಜಯದಾಸರೇ ಆಶ್ಚರ್ಯಪಟ್ಟಿದ್ದಾರೆ.

ಅಭಿಷೇಕವೆಂಬಂಥ ಉತ್ತಮ ಮನ್ನಣೆಯಿಲ್ಲ
ಆಭರಣ ವಸನ ಗಂಧಾಕ್ಷತೆ ಮೊದಲಿಲ್ಲ
ಶೋಭನವಾದ ಕುಸುಮ ತುಳಸಿಯಿಲ್ಲ
ಸೌಭಾಗ್ಯವಾದ ಧೂಪಾದಿ ಓದನವಿಲ್ಲ
ಆ ಭಕ್ಷ್ಯ ಪಾಯಸ ಪರಿ ಪರಿ ಪಡಿಗಳಿಲ್ಲ
ಅಭಿವಂದನೆ ಸರ್ವ ಪೂಜಾ ಲಕ್ಷಣವಿಲ್ಲ
ಕುಭವದಲ್ಲಿನ ಲೋಭಿಯ ಸೇರಲು
ಲಾಭವೇನು ಪೇಳೋ?
ನೆಚ್ಚಿ ಮೆಚ್ಚಿಸಲಾರೆ ಅರ್ಚಿಸಿ ಒಲಿಸಲಾರೆ
ನಿಜ್ಜ ನೀನೇ ಪೊರೆಯೋ ವಿಜಯವಿಠಲ ಹರಿಯೇ

ವಿಜಯದಾಸರ ನಿರಹಂಕಾರ ಹಾಗೂ ಭಯ ಭರಿತವಾದ ಭಕ್ತಿಗೆ ಮೇಲಿನ ಕೃತಿ ಸಾಕ್ಷಿಯಾಗಿದೆ. ವಿಜಯವಿಠಲನ ವಿಗ್ರಹವನ್ನು ಒಂದು ದಿನ ತಮ್ಮ

ಶಿಷ್ಯರಾದ ಗೋಪಾಲದಾಸರಿಗೆ ಪೂಜೆಗೆಂದು ಅನುಗ್ರಹಿಸಿದಾಗ ಗೋಪಾಲದಾಸರು,

ಬಂದ್ಯಾ ವಿಠಲ ಇಂದು ಬಡವನಲ್ಲಿ
ವೃಂದಾವನದಲಿ ಗೋವೃಂದಗಳ ಕಾಯ್ದವನೆ
ವೊಳಗಿ ಶ್ರೀನಿವಾಸಾಚಾರ್ಯ ಮನೆಯಿಂದ
ಮೇಲಾಗಿ ಬಹು ಪರಿಯಿಂದ ಪೂಜೆಯಗೊಂಡು
ಕೀಳುಮನುಜನ ಎನ್ನ ಪಾಲಿಸಬೇಕೆಂದು

ಎಂದು ವಿಜಯವಿಠಲ ವಿಗ್ರಹದ ಇತಿಹಾಸವನ್ನು ಸ್ಪಷ್ಟಪಡಿಸಿದ್ದಾರೆ. ಈ ವಿಗ್ರಹವನ್ನು ಗದ್ವಾಲ್‌ನಲ್ಲಿರುವ 'ತಂದೆ ಗೋಪಾಲವಿಠಲ' ರ ವಂಶಜರಾದ ಶ್ರೀ ವೆಂಕೋಬದಾಸರ ಮನೆಯಲ್ಲಿ ಇಂದಿಗೂ ಕಾಣಬಹುದು.

ಶ್ರೀ ಜಗನ್ನಾಥದಾಸರಿಗೆ ಅಹಂಕಾರ ನಿರಸನ ಮಾಡಿ, ಹರಿದಾಸ ಸಾಹಿತ್ಯದಲ್ಲಿಯೂ ಹರಿದಾಸರಲ್ಲಿಯೂ ಗೌರವ ತೋರುವಂತೆ ಮಾಡಿದ ರೀತಿಯಲ್ಲಿ ನ್ಯಾಯಸಂಧೆಯ ಪಂಡಿತರಾಗಿದ್ದ ಕಲ್ಲೂರು ಸುಬ್ಬಣ್ಣಾಚಾರ್ಯರ ಅಹಂಕಾರವನ್ನು ಮುರಿದು ಅವರ ಹೃದಯವನ್ನು ವಿಜಯದಾಸರು ನಿರ್ಮಲ ಮಾಡಿದರು.

ಒಂದು ದಿನ ಶ್ರೀ ಜಯತೀರ್ಥ ವಿರಚಿತ 'ಶ್ರೀ ಮನ್ನ್ಯಾಯಸುಧಾ' ಗ್ರಂಥದ ಮಂಗಳ ಮಹೋತ್ಸವ ವಿಜೃಂಭಣೆಯಿಂದ ನಡೆದಿತ್ತು. ಆದರೆ ಕಾರಣಾಂತರದಿಂದ 'ಮಂಡಿಗೆ' ಮಾಡುವ ಅಡಿಗೆಯವನು ಬರಲಿಲ್ಲವಂತೆ. ವಿಷಯ ತಿಳಿದ ವಿಜಯದಾಸರು ಅಡಿಗೆಯವನ ವೇಷಧರಿಸಿ ಅವನ ಕಾರ್ಯವನು ಪೂರೈಸಿ ಸುಧಾಶ್ರವಣಕ್ಕಾಗಿ ಆಗಮಿಸಿದರು. ಅನಂತರ ಸುಧಾಗ್ರಂಥದ ಕೆಲವು ವಾಕ್ಯಗಳ ಉಪದೇಶವನ್ನು ಮಾಡಬೇಕೆಂದು ಆಚಾರ್ಯರನ್ನು ಪಾರ್ಥಿಸಿದಾಗ ಆಚಾರ್ಯರು ಆಗ್ರಹಗೊಂಡರಂತೆ. ವಿಜಯದಾಸರು ಶಾಸ್ತ್ರಗ್ರಂಥಗಳನ್ನು ಗುರುಕುಲದಲ್ಲಿ ಸತತವಾಗಿ ಅಭ್ಯಾಸ ಮಾಡಿ ಅರಿತುಕೊಳ್ಳದೆ ಅಜ್ಞರಾದ ಕನ್ನಡ ಹರಿದಾಸರೆಂಬತಾತ್ಸಾರ ಅವರಲ್ಲಿದ್ದಿತೇನೋ? ಆಗ ದಾಸರು ಅಲ್ಲಿದ್ದ ಮೂರ್ಖನೊಬ್ಬನನ್ನು ಕರೆದು 'ಸುಧಾಗ್ರಂಥವನ್ನು ಅನುವಾದ ಮಾಡು ಎಂದಾಗ

ಆ ವ್ಯಕ್ತಿ ತಲೆ ತಗ್ಗಿಸಿದ. ಆಗ ಅವನ ತಲೆಯ ಮೇಲೆ ವಿಜಯದಾಸರು ತಮ್ಮ ಅಮೃತ ಹಸ್ತವನ್ನಿಟ್ಟು, 'ಆಚಾರ್ಯರಿಗೆ ಸುಧಾಗ್ರಂಥದಲ್ಲಿ ಅರ್ಥವಾಗದ ಸಮಸ್ಯೆಗಳನ್ನು ತಿಳಿಸಿ ಉತ್ತರಗಳನ್ನು ಹೇಳು ಎಂದು ಆಶೀರ್ವದಿಸಿದರು. ಮೂಕನೂ, ಮೂರ್ಖನೂ ಎನಿಸಿದ್ದ ಆ ಪರಿಚಾರಕ ಕಲ್ಲೂರು ಸುಬ್ಬಣ್ಣಾಚಾರ್ಯರ ಮನಸ್ಸಿನಲ್ಲಿದ್ದ ವಿವಿಧ ಸಮಸ್ಯೆಗಳನ್ನು ಉದಾಹರಿಸಿ ಸಮರ್ಪಣವಾದ ಉತ್ತರಗಳನ್ನು ಜನಸ್ತೋಮಕ್ಕೆ ಸುಲಲಿತವಾಗಿ ವಿವರಿಸಿದನು. ಆತನ ವಾಗ್ವೈಖರಿಯನ್ನು ಕೇಳಿ ಸಭೆ ಅಚ್ಚರಿಪಟ್ಟಿತು. ಆಚಾರ್ಯರು ವಿಜಯದಾಸರ ತಪೋಶಕ್ತಿಗೆ ಬೆರಗಾದರು. ತಾವು ಮಾಡಿದ್ದು ಅಪಚಾರವೆಂದು ಅರಿವಾಯಿತು. ಶ್ರೀ ವಿಜಯದಾಸರನ್ನು ಕ್ಷಮೆ ಕೋರಿದಾಗ ಅವರ ತಪ್ಪುಗಳನ್ನು ಕ್ಷಮಿಸಿ ವಿಶ್ವಾಸವನ್ನು ತೋರಿದರು. 'ಶ್ರೀವ್ಯಾಸ ವಿಠಲ' ಎಂಬ ಅಂಕಿತವನ್ನು ಶ್ರೀ ವೇಣುಗೋಪಾಲ ವಿಠಲರ ಮೂಲಕ ಉಪದೇಶ ಪಡೆದ ಮೇಲೆ ವಿಜಯದಾಸರ ಉಪಕಾರವನ್ನು ಆಚಾರ್ಯರು ಕೃತಜ್ಞತೆಯಿಂದ ಹೀಗೆ ಕೊಂಡಾಡಿದ್ದಾರೆ.

ಸ್ಮರಿಸಿ ಬದುಕಿರೋ ದಿವ್ಯ ಚರಣಕೆರಗಿರೋ
ದುರಿತ ತರಿದು ಪೊರೆವ ವಿಜಯಗುರುಗಳೆಂಬರ
ದಾಸರಾಯನಾ ದಯವ ಸೂಸಿ ಪಡೆದನಾ
ದೋಷರಹಿತನಾ ಸಂತೋಷ ಭರಿತನಾ
ಮೋದ ಭರಿತನಾ ಪಂಚಭೇದವರಿತನಾ
ಸಾದು ಚರಿತನಾ ಮನ ವಿಷಾದ ಮರೆತನಾ
ವೇದ ಓದಲು ಬರಿದೆ ವಾದ ಮಾಡಲು
ಹಾದಿಯಾಗದೋ ಬುಧರ ಪಾದ ನಂಬದೆ
ಇಂದಿರಾಪತಿ ಇವರ ಮುಂದೆ ಕುಣವನೋ
ಅಂದ ವಚನವಾ ಜನಕೆ ತಂದು ಕೂಡುವನೋ
ಸಟೆಯಿದಲ್ಲವೊ ವ್ಯಾಸವಿಠಲ ಬಲ್ಲನೊ
ಪಠಿಸ ಬಹುದಿದು ಕೇಳಿ ಕುಟಿಲ ರಹಿತರೋ

ವಿಜಯ ಕವಚವೆಂದು ಪ್ರಸಿದ್ಧವಾಗಿರುವ ಇಪ್ಪತ್ತೇಳು ನುಡಿಗಳನ್ನೊಳಗೊಂಡ ಈ ಸ್ತೋತ್ರದಲ್ಲಿ ವಿಜಯದಾಸರ ವ್ಯಕ್ತಿತ್ವವನ್ನು ಆಚಾರ್ಯರು ತಾವು ಕಂಡಂತೆ ಸೊಗಸಾಗಿ ಚಿತ್ರಿಸಿದ್ದಾರೆ. 'ಮನ ವಿಷಾದ ಮರೆತ ಮೋದ ಭರಿತ' ವ್ಯಕ್ತಿ ಎಂಬ ಮಾತು ಇಲ್ಲಿ ಉಚಿತವಾಗಿ ಬಂದಿದೆ. ಸಂಪ್ರದಾಯವನ್ನನುಸರಿಸಿ ವೇದಗಳನ್ನೋದಿ ವಾದಿಗಳೊಡನೆ ವಾದ ಮಾಡಿ ಜಯ ಹೊಂದಿ ಭರತ ಖಂಡದ ಪುಣ್ಯಕ್ಷೇತ್ರಗಳ ಸಂದರ್ಶನ, ನದಿಗಳ ಸ್ನಾನಗಳಿಂದ ಅಪರೋಕ್ಷ ಜ್ಞಾನವಾಗುವುದಿಲ್ಲ, ಯಾವ ಕಾರ್ಯವನ್ನು ಮಾಡಿದರೂ ಅನುಸಂಧಾನ ಮುಖ್ಯ. ಅರಿಷಡ್ವರ್ಗಗಳನ್ನು ಜಯಿಸಿ ಶ್ರೀ ಹರಿಯಲ್ಲಿ ಹರಿದಾಸರಲ್ಲಿ ಅನನ್ಯ ಭಕ್ತಿಯಿಂದ ಮಾಡುವ ಕರ್ಮಗಳಿಂದ ಮಾತ್ರ ಪೂರ್ಣಫಲ ಪ್ರಾಪ್ತಿ– ಎಂಬ ಸಂದೇಶವನ್ನು ಆಚಾರ್ಯರು ವ್ಯಾಸವಿಠಲರೆನಿಸಿದ ಮೇಲೆ ಹಾಡಿದ್ದಾರೆ. ಒಮ್ಮೆ ಗೋಪಾಲದಾಸರು ಶ್ರೀ ಕೃಷ್ಣನ ದರ್ಶನಕ್ಕಾಗಿ ಉಡುಪಿ ಕ್ಷೇತ್ರಕ್ಕೆ ಹೋಗಿ ಬರಲು ಗುರುಗಳನ್ನು ಅನುಮತಿ ಬೇಡಿದರು ಆಗ ಮಾರ್ಗ ಮಧ್ಯದಲ್ಲಿ ಗೋಪಾಲದಾಸರಿಗೊದಗ ಬಹುದಾದ ತೊಂದರೆಯನ್ನು ತಿಳಿದು ವಿಜಯದಾಸರು, ಶಿಷ್ಯನನ್ನು ಕಾಪಾಡ ಬೇಕೆಂದು ಉಗಾಭೋಗವೊಂದನ್ನು ರಚಿಸಿ ಉಪದೇಶಿಸಿದರು.

ಒಂದು ಕೈಯಲ್ಲಿ ಖಡ್ಗ
ಒಂದು ಕೈಯಲ್ಲಿ ಹಲಿಗೆ ಅಂದವಾಗಿ
ಹಿಡಿದುಕೊಂಡು ದಿವರಾತ್ರಿಯಲಿ
ಬಂದು ಬದಿಯಲ್ಲಿ ನಿತ್ಯ ಬಾರಾಸನನಾಗಿ
ಹಿಂದು ಮುಂದುಪದ್ರವವಾಗದಂತೆ
ಇಂದಿರೇರಮಣ ಕಾಯುತ್ತಲಿರೆ ಎನಗಾವ
ಬಂಧಕಗಳು ಇಲ್ಲ ಧನ್ಯ ಧನ್ಯ
ಕಂದರ್ಪನಯ್ಯ ಸಿರಿ ವಿಜಯವಿಠಲರೇಯ ದೇವ
ಎಂದೆಂದಿಗಾಪತ್ತು ಬರಲೀಯನ

ಉಡುಪಿ ಕ್ಷೇತ್ರಕ್ಕೆ ಹೋಗುವ ಮಾರ್ಗದಲ್ಲಿ ಮಂಡಗದ್ದೆ ಎಂಬ ಚಿಕ್ಕ ಊರಿನಲಿಭೀಮ ಎಂಬುವನು ತನ್ನ ಊರಿಗೆ ಬಂದ ಪಥಿಕರನ್ನು ಆದರದಿಂದ

ಉಪಚರಿಸಿ ಅವರಲ್ಲಿನ ಹಣದ ವಿಚಾರವನ್ನು ಸೂಕ್ಷ್ಮವಾಗಿ ಅರಿತು, ಅವರು ಮುಂದಿನ ಊರನ್ನು ಸೇರುವುದರಲ್ಲಿ ವೇಷ ಮರೆಸಿಕೊಂಡು ದಾರಿಯಲ್ಲಿ ತನ್ನ ಪರಿವಾರದವರೊಡನೆ ಬಂದು ಪಥಿಕರ ಒಡವೆ ವಸ್ತುಗಳನ್ನ ಅಪಹರಿಸುವುದು ಅವನ ಉದ್ಯೋಗವಾಗಿತ್ತು. ಈ ಸರದಿ ಗೋಪಾಲದಾಸರಿಗೂ ಬಂದಿತು. ಮೂರು ಕಡೆ ಗೋಪಾಲದಾಸರ ವಸ್ತುಗಳನ್ನಪಹರಿಸಲು ಯತ್ನಿಸಿದಾಗ ಖಡ್ಗಪಾಣಿಯಾಗಿ ದಾಸರನ್ನು ಕಾಯುವ (ಶ್ರೀ ಹರಿ) ಯನ್ನು ಕಂಡ ಭೀಮ ಹೆದರಿ ತನ್ನ ತಪ್ಪನ್ನು ಮನ್ನಿಸಬೇಕೆಂದು ಪ್ರಾರ್ಥಿಸಿದಾಗ ಅವನ ದುಷ್ಟ ನಡತೆ ಹೋಗುವಂತೆ ಉಪದೇಶಿಸಿದ ಉಗಾಭೋಗದ ಪುನಶ್ಚರಣೆಯಿಂದ ಗೋಪಾಲ ದಾಸರು ಗಂಡಾಂತರದಿಂದ ಪಾರಾದರೆಂದು ತಂದೆ ಗೋಪಾಲ ವಿಠಲರು ಹೇಳಿದ್ದಾರೆ.

ಉಡುಪಿ ಕೃಷ್ಣನ ದರುಶನಕೆ ಆಜ್ಞಾ
ಕೊಡಬೇಕೆನುತಲಿ ಕೇಳ್ದನು
ತಡವ್ಯಾಕೆನುತಲಿ ಸ್ತುತಿಯ ಮಾಡಿ
ಕೊಡುತ ಪೋಗಿ ಬಾರೆಂದನು
ಮಂಡಗದ್ದಿಯ ಕಳುಹಿದಾ
ಗಂಡಿತ್ರಯದಿ ಸುಲಿಯಲು ಸಿಗದಿರೆ
ಚಂಡ ನಮಿಸೆ ಉದ್ಧರಿಸಿದಾ

ಹೀಗೆ ವಿಜಯದಾಸರು ತಮ್ಮ ಹರಿದಾಸ ಜೀವನದಲ್ಲಿ ಅನೇಕರ ಉಪಕಾರಾರ್ಥವಾಗಿ ಶ್ರೀ ಹರಿಯನ್ನು ನಾನಾ ವಿಧವಾಗಿ ಸ್ತೋತ್ರ ಮಾಡುತ್ತಾ ಸಾಧನೆಯನ್ನು ಮಾಡಿಕೊಂಡು ಸಹಸ್ರಾರು ಕನ್ನಡ ಕೃತಿಗಳನ್ನು ರಚಿಸಿದರು. ಹರಿದಾಸರಾದ ಮೇಲೆ ಭರತಖಂಡದ ತೀರ್ಥಕ್ಷೇತ್ರಗಳನ್ನು ಸಂದರ್ಶಿಸಿ ಆಯಾ ಮೂರ್ತಿಗಳ ಮಹಾತ್ಮೆಯನ್ನು ಚಿತ್ರಿಸಿರುವುದರಿಂದ ಇವರ ಕೃತಿಗಳು ಪ್ರವಾಸ ಸಾಹಿತ್ಯವಾಗಿಯೂ ತೋರುತ್ತವೆ. ಈ ಮಧ್ವಸಿದ್ಧಾಂತದ ವಿಶದ ವಿವರಣೆಗಾಗಿ ಅವರಿಂದ ರಚಿತವಾದ ಅಸಂಖ್ಯ ಕೃತಿಗಳಲ್ಲಿ ಐನೂರಕ್ಕೂ ಮಿಕ್ಕಿದ ಸುಳಾದಿಗಳು ಇಂದು ದೊರೆತಿವೆ. ಇದರಿಂದ ವಿಜಯದಾಸರ ಜ್ಞಾನ ಎಷ್ಟು ವಿಶಾಲವೂ ಆಳವೂ ಆಗಿದ್ದಿತೆಂದು ತಿಳಿಯಬಹುದು. ಹರಿದಾಸ ಸಾಹಿತ್ಯದ ವಿಶಿಷ್ಟ

ರೂಪಗಳಾದ ಕೀರ್ತನೆ, ಸುಳಾದಿ, ಉಗಾಭೋಗ ಎಂಬ ಮೂರು ರೂಪಗಳ ಕೃತಿಗಳನ್ನು ವಿಜಯದಾಸರು ರಚಿಸಿದ್ದಾರೆ.

ಶ್ರೀ ವಿಜಯದಾಸರು ತಮ್ಮ ಬಾಳಿನ ಕೊನೆಯ ಕಾಲದಲ್ಲಿ ಹುಟ್ಟಿದೂರನ್ನು ಬಿಟ್ಟು ಈಗಿನ ಆಂಧ್ರಪ್ರದೇಶ ರಾಜ್ಯದ ಗುಂತಕಲ್‌ಗೆ ಸುಮಾರು ನಾಲ್ಕು ಮೈಲಿ ದೂರವಿರುವ 'ಚಿಪ್ಪಗಿರಿ' ಎಂಬಲ್ಲಿಗೆ ಬಂದು ನೆಲೆಸಿದರು. ಈ ಗ್ರಾಮದಲ್ಲಿ ಭೋಗೇಶ್ವರ, ಪ್ರಸನ್ನ ವೆಂಕಟೇಶ, ಚನ್ನಕೇಶವ ದೇವಾಲಯಗಳಿವೆ. ಈ ದೇವಾಲಯಗಳನ್ನು ಚಕಣಾಚಾರಿ ಎಂಬ ಶಿಲ್ಪಿ ಕಡೆದು ಈ ಗ್ರಾಮದಲ್ಲಿಯೇ ಕೆಲಕಾಲ ವಾಸವಾಗಿದ್ದುದರಿಂದ ಈ ಗ್ರಾಮಕ್ಕೆ 'ಶಿಲ್ಪಗಿರಿ' ಎಂದೂ ಕಾಲ ಕ್ರಮೇಣ ಊರಿನ ಇಳಿಯುವ ಬಾವಿಗಳಲ್ಲಿ ನೀರು ಸಂಪೂರ್ಣ ಒಣಗಿ ಹೋಗಿ ಚಿಲುಮೆಗಳನ್ನು ತೆಗೆದು ಚಿಪ್ಪಿನಲ್ಲಿ ಗೋಕಿ ತೆಗೆದುಕೊಳ್ಳುತ್ತಿದ್ದುದರಿಂದ 'ಚಿಪ್ಪಗಿರಿ' ಎಂಬ ಹೆಸರು ಬಂದಿತೆನ್ನುತ್ತಾರೆ. ಇಲ್ಲಿನ ದೇವಾಲಯಗಳಲ್ಲಿನ ಶಾಸನಗಳಿಂದ ಪ್ರಾಚೀನ ಕಾಲದಲ್ಲಿ ತೆಲುಗು-ಕನ್ನಡ ಎರಡು ಭಾಷೆಗಳು ಚೆನ್ನಾಗಿ ಬಳಕೆಯಲ್ಲಿದ್ದುದಾಗಿ ತಿಳಿದು ಬರುತ್ತದೆ. ಪ್ರಸನ್ನ ವೆಂಕಟೇಶ ದೇವಾಲಯಕ್ಕೆ ಶಾ. ಶಕ ವರ್ಷಂಗಳು ೧೪೫೦ನೆಯ ಸರ್ವಧಾರಿ ಸಂವತ್ಸರ ವೈ.ಬ. ೩೦ನೆಯ ಸೋಮವಾರ ಸೂರ್ಯಗ್ರಹಣ ಪುಣ್ಯಕಾಲದಲ್ಲಿ ಶ್ರೀ ಕೃಷ್ಣದೇವರಾಯನು ದಾನ ಮಾಡಿದ ಭೂಮಿಯ ವಿವರಣೆಯುಳ್ಳ ಶಾಸನ ಕನ್ನಡ ಭಾಷೆ ಲಿಪಿಯಲ್ಲಿದ್ದು ಈ ದೇವಾಲಯದಲ್ಲಿರುವುದನ್ನು ಕಾಣಬಹುದು. ಚನ್ನಕೇಶವ ದೇವಾಲಯಕ್ಕೆ ಶಾಲೀವಾಹನ ಶಕ ವರುಷಂಬಲ ೧೪೭೦ ಕ್ರಿ. ಸರಿಯುಗ (ಕ್ರಿ.ಶ. ೧೫೪೮) ನೇಟಿ ವಿಭವ ಸಂವತ್ಸರ ವೈ.ಶು. ೧೫ ರಂದು ನೀಡಿದ ದಾನ ಶಾಸನ ತೆಲುಗು ಭಾಷೆ ಮತ್ತು ತೆಲುಗು ಲಿಪಿಯಲ್ಲಿದೆ.

ಭಾಸ್ಕರ ಕ್ಷೇತ್ರವೆಂದು ಪ್ರಸಿದ್ಧಿಯಾಗಿರುವ ಚಿಪ್ಪಗಿರಿಯಲ್ಲಿ ವಿಜಯದಾಸರು ಇದ್ದಾಗ ಅಲ್ಲಿಯ ಚಂದಪ್ಪನೆಂಬ ಕುರುಬನೊಬ್ಬನ ಬಾವಿಯಲ್ಲಿದ್ದ ಶ್ರೀ ವೇಣುಗೋಪಾಲಕೃಷ್ಣ ವಿಗ್ರಹವನ್ನು ಅವನಿಂದಲೇ ತೆಗೆಯಿಸಿದಾಗ ದಾಸರ ಮೇಲಲವನಿಗೆ ಭಕ್ತಿಯುಂಟಾಗಿ ಅವನು ೨೦ ಎಕರೆ ಭೂಮಿಯನ್ನು ಒಂದು ಕೊಳಗ ಹಣವನ್ನೂ ದಾಸರಿಗೆ ದಾನ ಮಾಡಿದನೆಂದು ಹೇಳುತ್ತಾರೆ.

ಶ್ರೀ ವಿಜಯದಾಸರು 'ಶ್ರೀ ವೇಣುಗೋಪಾಲಕೃಷ್ಣ' ದೇವರ ಸುಂದರ ವಿಗ್ರಹವನ್ನು ವೃಕ್ಷದಡಿ ಸಣ್ಣಕಟ್ಟೆ ಕಟ್ಟಿ ಪ್ರತಿಷ್ಠಾಪನೆ ಮಾಡಿದರು ಎಂದು ಹೇಳಿದ ಲೇಖಕರೇ ಶ್ರೀ ಮೊದಲ್‌ಕಲ್ ಶೇಷದಾಸರು (ಗುರು ವಿಜಯವಿಠಲರು) ವಿಜಯದಾಸರ ಕಟ್ಟೆಯ ಮೇಲೆ ದೊಡ್ಡ ವೃಂದಾವನ ತಾವೇ ಕಟ್ಟಿ ಅದರಲ್ಲಿ ಶ್ರೀ ಗೋಪಾಲಕೃಷ್ಣದೇವರನ್ನು ಪ್ರತಿಷ್ಠೆ ಮಾಡಿದರು ಎಂದು ಒಂದೇ ಪುಸ್ತಕದಲ್ಲಿ ತಿಳಿಸಿದ್ದಾರೆ. ಒಂದು ವಿಗ್ರಹಕ್ಕೆ ಒಂದೇ ಜಾಗದಲ್ಲಿ ಎರಡು ಸಲ ಪ್ರತಿಷ್ಠೆಯಾಗುವುದು ಹೇಗೆ ಸಾಧ್ಯ? ಶ್ರೀ ಗುರು ವಿಜಯವಿಠಲರು ಈ ಗುಡಿಯ ಜೀರ್ಣೋದ್ಧಾರ ಮಾಡಿರಬೇಕೆನಿಸುತ್ತದೆ.

ಶ್ರೀ ವಿಜಯದಾಸರಿಗೆ ದಾನವಾಗಿ ಬಂದ ಭೂಮಿಯಲ್ಲಿದ್ದ ಕೊಳ 'ವಿಜಯ ತೀರ್ಥ' ವೆಂದು ಪ್ರಸಿದ್ಧಿಯಾಗಿದೆ. ಏಕಾಂತದ ಬೀಡಾಗಿ, ತಪಸ್ವಿಗಳಿಗೆ ಶಾಂತವೂ ಪರಿಶುದ್ಧವೂ ಆದ ಭಾವನೆಯನ್ನುಂಟು ಮಾಡುವಂತಹ ಪವಿತ್ರವಾದ ಚಿಪ್ಪಗಿರಿಯಲ್ಲಿ ವಿಜಯದಾಸರು ಕ್ರಿ.ಶ. ೧೭೫೫ನೆಯ ಕಾರ್ತೀಕ ಶುದ್ಧ ದಶಮಿ ಗುರುವಾರ ವಿಜಯವಿಠಲನ ಪಾದವನ್ನು ನಿಶ್ಚಿಂತೆಯಿಂದ ಸೇರಿದರು.

ತೆರಳಿ ಪೋದರು ಸಿರಿಹರಿಯ ಪುರತೆ ಪ

ಕರಿರಾಜ ವರದನ್ನ ಸ್ಮರಿಸುತ್ತ ವಿಜಯದಾಸರು ಅ ಪ

ಯುವ ಸಂವತ್ಸರ ಕಾರ್ತೀಕ ಶುದ್ಧ
ಅವಿರುದ್ಧವಿಲ್ಲದಲೆ ಶುದ್ಧ ದಶಮೀ
ನವನಾಡಿ ಗುರುವಾರ ದಿವಿಜರ ಮೇಳದಲಿ
ಭಳಿ ಭಳಿ ನಗೆಮುಖದಿಂದ ಹರಿಚರಿತೆ ಪಾಡುತಲಿ ೧

ಅಪ್ಪ ತಿಮ್ಮಪ್ಪನಾ ಯಾತ್ರಿ ಮಾಡಿಕೊಂಡು
ಚಿಪ್ಪಗಿರಿಯೆಂಬ ಗ್ರಾಮದಲೆ
ಚಪ್ಪಾಳೆನಿಕ್ಕುತಲಿ ನಮ್ಮ ದಾಸರು ನೋಡೆ
ಸರ್ಪಶಯನ ಹಯವದನ ವಿಠಲ ಬಳಿಗೆ

ಎಂದು ವಿಜಯದಾಸರ ಸೋದರರಾದ ಹಯವದನ ವಿಠಲರು ಹೇಳಿದ್ದಾರೆ.

ಚಿಪ್ಪಗಿರಿಯಲ್ಲಿ ಶ್ರೀ ವಿಜಯದಾಸರ ದೇಹ ಅಗ್ನ್ಯಂತರ್ಗತ ಪರುಶುರಾಮಗೆ ಅರ್ಪಿಸಿದ ಸ್ಥಳದಲ್ಲಿ ಶ್ರೀ ಗೋಪಾಲದಾಸರು ಮೋಹನದಾಸರು ಮುಂತಾದವರೇ ಒಂದು ಕಟ್ಟೆ ಕಟ್ಟೆಸಿ ಪೂಜಾ ಮಾಡಹತ್ತಿದರು. ಕೆಲವರ್ಷದ ನಂತರ ಶ್ರೀ ಮೋಹನದಾಸರು ಚಿಪ್ಪಗಿರಿಯಲ್ಲೆ ಪರಲೋಕ ಯಾತ್ರೆಗೈದರು. ಆ ಜ್ಞಾನಿಗಳ ಪವಿತ್ರ ದೇಹವಾದರೂ ಅವರ ಆಜ್ಞೆಯಂತೆ ಶ್ರಿ ವಿಜಯರಾಯರ ಕಟ್ಟೆಯ ಸಮೀಪ ಪೂರ್ವ ಭಾಗದ ಸ್ಥಳದಲ್ಲಿಯೇ ಪರಶುರಾಮನಿಗೆ ಸಮರ್ಪಿಸಿದರು. ನಂತರ ಆ ಸ್ಥಳದಲ್ಲಿಯೇ ಶ್ರೀ ಮೋಹನದಾಸರ ಕಟ್ಟೆ ಕಟ್ಟಿಸಿದರು. ಎರಡು ಕಟ್ಟೆಗಳು ಕೂಡಿಸಿ ಕಟ್ಟೆಯ ಮೇಲೆ ಗುಡಿಯಾಯಿತು. ಎಂದು ಶ್ರೀ ಗೋರಬಾಳ ಹನುಮಂತರಾಯರು ತಿಳಿಸಿರುವರು. ಆದರೆ ಈ ದಾಸರ ವಂಶೀಯರು ವಿಜಯದಾಸರ ದೇಹವನ್ನು ಅಗ್ನ್ಯಂತರ್ಗತ ಪರಶುರಾಮನಿಗೆ ಅರ್ಪಿಸಿದ ಸ್ಥಳದಲ್ಲಿ ಕಟ್ಟೆಯನ್ನು ಕಟ್ಟಿಲ್ಲವೆಂದೂ ವಿಜಯದಾಸರು ವೇಣು ಗೋಪಾಲ ಕೃಷ್ಣನ ವಿಗ್ರಹವನ್ನು ಈಗಿರುವ ಜಾಗದಲ್ಲಿ ಪ್ರತಿಷ್ಠಾಪಿಸಿ ಆ ಸ್ಥಳದಲ್ಲಿ ಧ್ಯಾನಕ್ಕೆ ಕುಳಿತುಕೊಳ್ಳುತ್ತಿದ್ದರೆಂದೂ ವಿಜಯದಾಸರು ಕುಳಿತು ಕೊಳ್ಳುತ್ತಿದ್ದ ಕಟ್ಟೆಗೆ ' ವಿಜಯ ದಾಸರ ಕಟ್ಟೆ' ಎಂದು ಕರೆಯುವರೆನ್ನುತ್ತಾರೆ.

ಚಿಪ್ಪಗಿರಿಯಲ್ಲಿ ಇಂದಿಗೂ ಪ್ರತಿವರ್ಷವೂ ಕಾರ್ತೀಕ ಮಾಸದ ಶುದ್ಧ ನವಮಿ, ದಶಮಿ, ಏಕಾದಶಿ ಮತ್ತು ದ್ವಾದಶಿ ದಿನಗಳಲ್ಲಿ ಶ್ರೀ ವಿಜಯದಾಸರ ಆರಾಧನಾ ಮಹೋತ್ಸವ ವಿಜೃಂಭಣೆಯಿಂದ ನಡೆಯುತ್ತದೆ, ಈ ಸಂದರ್ಭದಲ್ಲಿ ವಿಜಯದಾಸರ ಪಲ್ಲಕ್ಕಿ ಉತ್ಸವ ಭಜನೆ ಇತ್ಯಾದಿ ಕಾರ್ಯಕ್ರಮಗಳು ನಡೆಯುತ್ತವೆ. ಈ ಸಂದರ್ಭದಲ್ಲಿ ಅವರ ವಂಶೀಯರು ಶ್ರೀ ವಿಜಯದಾಸರು ಉಪಯೋಗಿಸುತ್ತಿದ್ದ ತಂಬೂರಿಯನ್ನು ಉತ್ಸವದಲ್ಲಿ ತೋರಿಸುತ್ತಾರೆ. ವಿಜಯದಾಸರ ಜನ್ಮಸ್ಥಳವಾದ ಚೀಕನಪರಿವಿಯಲ್ಲಿ ದಾಸರು ಉಪಯೋಗಿಸುತ್ತಿದಸಾಣೆಯುಕಲ್ಲು ಹಾಗೂ ಚಿಟಿಕೆಗಳನ್ನು ಇಂದಿಗೂ ಕಾಣಬಹುದಾಗಿದೆ.

ಅಪರೋಕ್ಷ ಜ್ಞಾನಿಗಳೆಂದು ಪ್ರಸಿದ್ಧರಾಗಿರುವ ಶ್ರೀ ವಿಜಯದಾಸರು ಸಾಹಿತ್ಯ ದೃಷ್ಟಿಯಿಂದ ಬೆಲೆಯುಳ್ಳ, ತತ್ತ್ವ ಶಾಸ್ತ್ರ ದೃಷ್ಟಿಯಿಂದ ಅಮೂಲ್ಯ–ವೆನಿಸುವಂತಹ ಪದ–ಸುಳಾದಿ ಹಾಗೂ ಉಗಾಭೋಗಗಳನ್ನು ರಚಿಸಿ ಮಹತ್ತರ

ಕಾಣಿಕೆ ನೀಡಿದ್ದಾರೆ. ಇವರ ನಡೆ, ನುಡಿಗಳು ಆದರ್ಶವಾದುದು- ಅನುಸರಣೀಯವಾದುದು. ಇಂಥಹ ದಯಾಮಯ ಚೇತನವೇ ಲೋಕದಲ್ಲಿ ವಿರಳವೆನ್ನಬಹುದು. ಇಂತಹ ವಿರಳ ವ್ಯಕ್ತಿಗಳ ಗುಂಪಿಗೆ ಸೇರಿದ ಅನರ್ಘ್ಯ ರತ್ನಗಳಲ್ಲಿ ಒಂದು ರತ್ನ ಕನ್ನಡ ನಾಡಿನ ಭಾಗ್ಯೋದಯದಿಂದ ಒಲಿದು ಬಂದುದು ಕನ್ನಡಿಗರ ಪುಣ್ಯ ವಿಶೇಷವೆನ್ನಬಹುದು.

## ಸುಳಾದಿಗಳ ಬಗ್ಗೆ

ಈ ಸಂಕೀರ್ಣ ಸಂಪುಟದಲ್ಲಿ ವಿಜಯ ದಾಸರ ತೊಂಭತ್ತಾರು ಸುಳಾದಿಗಳು ಪ್ರಕಟಗೊಂಡಿದೆ. ಇದರಲ್ಲಿ ಸುಳಾದಿ ಸಂಖ್ಯೆ ೪, ೧೨, ೨೦ ಮತ್ತು ೪೨ ನೆಯ ಸುಳಾದಿಗಳು ಮೊದಲ ಬಾರಿಗೆ ಅಚ್ಚಾಗುತ್ತಿವೆ. ಮೈಸೂರಿನ ಶ್ರೀಮತಿ ಹೇಮಲತಾ ಅವರು ಈ ಸುಳಾದಿಗಳನ್ನು ಬರೆದು ಕೊಟ್ಟಿರುವರು, ಈ ಅಪ್ರಕಟಿತ ಸುಳಾದಿಗಳ ಪ್ರಕಟನೆಗೆ ಡಾ॥ ಟಿ.ಎನ್. ನಾಗರತ್ನ ಅವರು ವಿಶೇಷ ನೆರವನ್ನು ಒದಗಿಸಿದ್ದಾರೆ. ಆದ್ದರಿಂದ ಇವರಿಬ್ಬರಿಗೂ ನನ್ನ ವಿಶೇಷ ಕೃತಜ್ಞತೆಗಳು. ವಿಜಯದಾಸರಿಂದ ರಚನೆಗೊಂಡ ಒಟ್ಟು ನಾಲ್ಕುನೂರಾ ತೊಂಭತ್ತು ಸುಳಾದಿಗಳು ಈ ನಾಲ್ಕು ಸಂಪುಟಗಳಲ್ಲಿ ಪ್ರಕಟಗೊಂಡಿದ್ದು ಅವುಗಳ ವಿವಾರ ಹೀಗಿದೆ.

ಸಂಪುಟ ೧ ಕ್ಷೇತ್ರದರ್ಶನ ೧೦೨ ಸುಳಾದಿಗಳು
ಸಂಪುಟ ೨ ಆತ್ಮನಿವೇದನೆ ೧೯೨ ಸುಳಾದಿಗಳು
ಸಂಪುಟ ೩ ತತ್ತ್ವನವನೀತ ೧೪೩ ಸುಳಾದಿಗಳು
ಸಂಪುಟ ೪ ಸಂಕೀರ್ಣ ೯೨ ಸುಳಾದಿಗಳು

ಪೂರ್ವದಲ್ಲಿ ಉಡುಪಿ ಶ್ರೀ ಪಾವಂಜೆ ಗುರುರಾವ್, ಶ್ರೀ ಸುಬೋಧ ಎಂ.ರಾಮರಾವ್ ಮತ್ತು ಶ್ರೀ ಗೋರಬಾಳ ಹನುಮಂತ ರಾಯರು ವಿಜಯದಾಸರ ಕೃತಿಗಳನ್ನು ಪ್ರಕಟಿಸಿದ್ದರು. ಇವರಲ್ಲಿ ಶ್ರೀ ಗೋರಬಾಳ ಹನುಮಂತರಾವ್ ಅವರು ಅತ್ಯಧಿಕ ಸಂಖ್ಯೆಯಲ್ಲಿ ವಿಜಯದಾಸರ ಸುಳಾದಿಗಳನ್ನು ಪ್ರಕಟಿಸಿದ್ದರೂ ಅವುಗಳಲ್ಲಿ ನಾನಾ ಬಗೆಯ ಸ್ಖಾಲಿತ್ಯಗಳಿದ್ದವು. ಈ ಸ್ಖಾಲಿತ್ಯಗಳನ್ನು

ಸಾಧ್ಯವಾದೆಡೆಗಳಲ್ಲಿ ಸರಿಪಡಿಸಿ ಪ್ರಕಟಿಸಲಾಗಿದೆಯಾದರೂ ಎಷ್ಟೋ ಕಡೆ ಪಾಠ ಸಮಸ್ಯೆ ನಿವಾರಣೆ ಯಾಗಿಲ್ಲ. ಸುಳಾದಿಗಳ ಪೂರ್ವಕಥೆಗಳನ್ನು ಮತ್ತು ಲಘು ಟಿಪ್ಪಣಿಗಳನ್ನು ಕೊಟ್ಟಿದೆಯಾದರೂ ಇದು ತೀರಾ ಲಘುವಾಗಿದೆ ಎಂಬ ಅರಿವುಂಟು.

ಒಂದು ದಶಕದಲ್ಲಿ ಮಾಡಬಹುದಾದ ಕೆಲಸವನ್ನು ಕೇವಲ ಹದಿನೈದು ತಿಂಗಳುಗಳಲ್ಲಿ ಕಾಲೇಜಿನ ಹಾಗೂ ಇತರ ಜವಾಬ್ದಾರಿಗಳನ್ನು ನಿರ್ವಹಿಸಿಕೊಂಡು ಈ ನಾಲ್ಕು ಸಂಪುಟಗಳ ಸಂಪಾದನಾ ಕಾರ್ಯ ಮಾಡಬೇಕಾದ ನಿಮಿತ್ತ ಈ ಸಂಪಾದನಾ ಕಾರ್ಯ ನನಗೆ ಪೂರ್ಣ ತೃಪ್ತಿಯನ್ನುಂಟು ಮಾಡಿಲ್ಲ, ಸಮಗ್ರ ದಾಸ ವಾಙ್ಮಯ ಪ್ರಕಟನಾ ಯೋಜನೆಯ ಕಾರ್ಯ ನಿರ್ವಾಹಕ ಸಂಪಾದಕರಾದ ಡಾ. ಟಿ.ಎನ್. ನಾಗರತ್ನ ಅವರ ಒತ್ತಾಸೆಯಿಂದಲೂ, ಕಾಲಕ್ಕೆ ಬದ್ಧವಾಗಿ ಕೆಲಸ ಮಾಡುವ ಧ್ಯೇಯವನ್ನಿಟ್ಟುಕೊಂಡು ಶ್ರಮಿಸಿದ ನಿಮಿತ್ತದಿಂದಲೂ ಇಂದು ಈ ಕಾರ್ಯ ಮುಗಿಯಿತೆಂಬ ಹಂತವನ್ನು ಮುಟ್ಟಿದೆ ಎಂದು ಹೇಳದಿರಲಾರೆ.

ಇದು ಸಂಕೀರ್ಣ ಸಂಕಲನವಾಗಿರುವ ನಿಮಿತ್ತ ನಾನಾ ವಿಷಯಗಳು ಈ ಸುಳಾದಿಗಳಲ್ಲಿ ಅಡಕವಾಗಿದೆ. ಆದ್ದರಿಂದ ಈ ಸುಳಾದಿಗಳನ್ನು ವಿಷಯಾನುಸಾರ ಜೋಡಿಸದೆ ಅಕಾರಾದಿ ಕ್ರಮದಲ್ಲಿ ಜೋಡಿಸಲಾಗಿದೆ. ಸೃಷ್ಟಿ, ಪ್ರಳಯ, ಕಾಲವಿಚಾರ, ತಾರತಮ್ಯ, ನೈವೇದ್ಯ ಕ್ರಮ, ಭೋಜನ ಪದಾರ್ಥಗಳಲ್ಲಿರುವ ಅಭಿಮಾನಿ ದೇವತೆಗಳು ಹಾಗೂ ಭಗವದ್ರೂಪಗಳ ವಿವರ, ಚಕ್ರಾಬ್ಜ ಮಂಡಲದ ಸ್ವರೂಪ ಹಾಗೂ ಅದರಲ್ಲಿ ಅಡಕವಾಗಿರುವ ವಿಷಯವಿವರ, ಧ್ಯೇಯ, ವರ್ಣಾಭಿಮಾನಿ ದೇವತಾ ವಿವರ, ದೇಹದಲ್ಲಿರುವ ನಾಡಿಗಳ ವಿವರ, ಜೀವದ ಮೇಲಿರುವ ವಿವಿಧ ದೇಹಗಳ ವಿಚಾರ ಅವುಗಳು ಕಳಚುವ ಬಗೆ ಇತ್ಯಾದಿ ಶಾಸ್ತ್ರೀಯ ವಿಚಾರಗಳು ಈ ಸುಳಾದಿಗಳಲ್ಲಿ ಅಭಿವ್ಯಕ್ತ ಮಾಡಲಾಗಿದೆ. ಸಂಸ್ಕೃತ ಭಾಷೆಯ ನೂರಾರು ಗ್ರಂಥಗಳಲ್ಲಿ ಚೆದುರಿ ಹೋಗಿರುವ ಈ ವಿಷಯಗಳನ್ನು ಕನ್ನಡದ ಸುಳಾದಿಗಳಲ್ಲಿ ಸೆರೆ ಹಿಡಿದಿರುವುದು ಒಂದು ಮಹತ್ಸಾಧನೆಯೇ ಸರಿ; ಸಪ್ತಕೋಟಿ ಮಂತ್ರಾರ್ಥಾವುಳ್ಳದ್ದೆಂದು ಜನಜನಿತವಾಗಿರುವ ಹೃದಯಾಬ್ಜ ಮಂಡಲದ ವಿವರಗಳೆಲ್ಲವೂ ಕಂಕಣಾಕಾರ ಸುಳಾದಿಯಲ್ಲಿ ಪ್ರತಿಬಿಂಬಿತವಾಗಿದ್ದು ಇದು ಒಂದು ಅಮೂಲ್ಯ ರಚನೆ ಎನಿಸಿದೆ. ಅಕಾರಾದಿ ಸಂಸ್ಕೃತದ ಐವತ್ತೊಂದು

ಅಕ್ಷರಗಳು, ದಿನ, ವಾರ, ತಿಥಿ, ಪಕ್ಷ, ಅಯನ, ಋತು, ವರ್ಷಗಳಲ್ಲಿರುವ ಭಗವದ್ರೂಪಗಳ ವಿವರಗಳನ್ನು ಈ ಸುಳಾದಿಗಳಲ್ಲಿ ನೀಡಲಾಗಿದೆ. ಸೃಷ್ಟಿ ಮತ್ತು ಪ್ರಳಯಕ್ಕೆ ಸಂಬಂಧಿಸಿದ ಸುಳಾದಿಗಳಲ್ಲಿನ ವಿಷಯಗಳನ್ನು ವಿಜ್ಞಾನದ ವಿಚಾರದೊಡನೆ ತುಲನೆ ಮಾಡಿ ಸತ್ಯಾಸತ್ಯತೆಯನ್ನು ಒರೆಗಲ್ಲಿಗೆ ಹಚ್ಚಿ ನೋಡಲು ಈ ಸುಳಾದಿಗಳು ಅವಕಾಶ ಮಾಡಿಕೊಟ್ಟಿವೆ.

ಮಾನವ ಜನ್ಮವಿರುವುದು ಸತ್ಯ, ಅಹಿಂಸೆ, ತ್ಯಾಗಪೂರ್ಣವಾದ ಬದುಕನ್ನು ನಡೆಸಿ ಭಗವದ್ ಭಕ್ತಿಯನ್ನು ಬೆಳೆಸಿಕೊಳ್ಳುವುದರ ಮೂಲಕ ಶಾಂತ ಜೀವನವನ್ನು, ಭಗವತ್ ಸಾಕ್ಷಾತ್ಕಾರವನ್ನು ಹೊಂದಲು ದೊರೆತಿರುವ ಅವಕಾಶವೆಂಬ ಭಾವನೆಯನ್ನುಳ್ಳವರಿಗೆ ವಿಜಯದಾಸರ ಸುಳಾದಿಗಳು ಜ್ಞಾನದ ಗಣಿ ಎನಿಸಿ ಅಮೃತೋಪಮವಾಗುತ್ತದೆ. ಸಂಸ್ಕೃತ ಭಾಷೆಯನ್ನರಿಯದೆ ತತ್ವ ಶಾಸ್ತ್ರದ ಸಾರವನ್ನರಿಯಲು ಸಾಧ್ಯವಿಲ್ಲವೆಂಬ ಪರಿಸ್ಥಿತಿಯನ್ನು ವಿಜಯದಾಸರು ಸುಳಾದಿಗಳ ರಚನೆಯ ಮೂಲಕ ತೊಡೆದು ಹಾಕಿದ್ದಾರೆಂಬುದು ಗಮನಾರ್ಹ ಸಂಗತಿಯಾಗಿದೆ. ಇಂತಹ ಸುಳಾದಿಗಳನ್ನು ಕರ್ನಾಟಕ ಸರ್ಕಾರ ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಮೂಲಕ ಪ್ರಕಟಗೊಳಿಸುತ್ತಿರುವುದು ಸಂತೋಷಪ್ರದ ಸಂಗತಿಯಾಗಿದೆ. ಈ ಕಾರ್ಯವನ್ನು ನನಗೆ ವಹಿಸಿ ಕೊಟ್ಟ ಈ ಇಲಾಖೆಯ ನಿರ್ದೇಶಕರಾದ ಶ್ರೀ ವೈ.ಕೆ. ಮುದ್ದುಕೃಷ್ಣ ಅವರಿಗೆ ನನ್ನ ಕೃತಜ್ಞತೆಗಳು. ಕಾರ್ಯನಿರ್ವಾಹಕ ಸಂಪಾದಕರಾದ ಡಾ. ಟಿ.ಎನ್. ನಾಗರತ್ನ ಅವರು ಮೇಲಿಂದ ಮೇಲೆ ಸಕಾಲಕ್ಕೆ, ನಿರ್ದುಷ್ಟವಾಗಿ ಈ ಸಂಪುಟಗಳು ಪ್ರಕಟವಾಗುವಂತೆ ಸಲಹೆ ಸೂಚನೆಗಳನ್ನು, ಕಾಲದ ಮಿತಿಯಗಡುವನ್ನು ಅತ್ಯಂತ ನಯವಾಗಿ ಸೂಚಿಸುತ್ತಾ ಅವಿಶ್ರಾಂತವಾಗಿ ಈ ಕಾರ್ಯವನ್ನು ಮುಂದುವರಿಸಿ ಪೂರ್ಣಗೊಳಿಸಲು ಒತ್ತಾಯ ಮಾಡಿರುವರು. ಇದರಿಂದ ಈ ಕಾರ್ಯ ಅತ್ಯಂತ ಕಡಿಮೆ ಅವಧಿಯಲ್ಲಿ ಪೂರ್ಣಗೊಳ್ಳಲು ಸಾಧ್ಯವಾಯಿತು. ಆದ್ದರಿಂದ ಡಾ. ಟಿ.ಎನ್. ನಾಗರತ್ನ ಅವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತಾಪೂರ್ವಕ ವಂದನೆಗಳು. ಸಮಗ್ರ ದಾಸವಾಙ್ಮಯ ಪ್ರಕಟನಾ ಯೋಜನೆಯ ಸಮಿತಿಗೂ ಎಲ್ಲಕ್ಕಿಂತ ಹೆಚ್ಚಾಗಿ ಇಂತಹ ಬೃಹತ್ ಕಾರ್ಯವನ್ನು ಕೈಗೊಂಡ ಕರ್ನಾಟಕ ಸರ್ಕಾರದ ಮುಖ್ಯ ಮಂತ್ರಿಗಳಿಗೂ, ಸಂಸ್ಕೃತಿ ಇಲಾಖಾ ಸಚಿವೆಯರಿಗೂ ಅಭಿವಂದನೆಗಳು.

**–ಡಾ. ಕೆ. ಗೋಕುಲನಾಥ**

# ಸುಳಾದಿಗಳ ಕ್ರಮಸೂಚಿ

# ಸಂಕೀರ್ಣ

## ೧

### ಧ್ರುವತಾಳ

ಅಂದು ನಿನ್ನ ದರುಶನಕ್ಕೆ ಆರ್ತ ಉಳ್ಳವನಾಗಿ
ಬಂದು  ಒಂದೆಡೆಯಲ್ಲಿ ಏಕಾಂತದಿ
ನಂದಾವಾಗಿ ಕುಳಿತು ಧ್ಯಾನಮಾಡುತಲಿರೆ
ಮಂದರಧರ ನೀನೆ ಪದಜಾರೂಪ
ದಿಂದ ಮಾಡಿದ ವಸನ ತೊತ್ತ ಚಲ್ಲಣ ಬಿಗಿವಿ
ನಿಂದ ಮೆಟ್ಟಿದ ಕೆರಹು ಈ ಪರಿಯಲ್ಲಿ
ಮುಂದೆ ಬಂದು ನಿಂದು ಅಂದಾವ ತೋರಿ ನಗೆ
ಯಿಂದ ಮಾತನಾಡಿದೆ ಚಿತ್ರದಲ್ಲಿ
ಕಣ್ದೆರದು ನಿನ್ನ ನೋಡಿದೆನಲ್ಲಾದೆ
ವಂದಿಸಲಿಲ್ಲಾ ಕುರುಹು ತಿಳಿಯಲಿಲ್ಲಾ
ಪೊಂದಿದ ಅಜ್ಞಾನದಿಂದಲಿ ಅಸೂಯಾ
ತಂದುಕೊಂಡೆನಲ್ಲಾದೆ ಪಾಂಡು ರಂಗಾ
ನಿಂದಿರ ಪೇಳಿ ತುತಿಸಿ ನೀನೆ ಅನಿಮಿತ್ತ
ಬಂಧುವೆ ನಿಜವೆಂದು ಪದಕೆ ಎರಗೀ
ಸುಂದರಾಂಗ ಸುಲಭ ಭಕುತವತ್ಸಲ ಪರಾ
ನೆಂದು ಪದಕೆ ಎರಗೀ
ಸುಂದರಾಂಗ ಸುಲಭ ಭಕುತವತ್ಸಲ ಪರಾ
ನೆಂದು ಕಾಯಯ್ಯಯೆಂದು ಹಸ್ತಾ ಮುಗಿದು

ಇಂದ್ರಿಯಂಗಳು ಎಲ್ಲಾ ಸರ್ವದಾ ನಿನ್ನ ಪ್ರಜೆ
ಯಿಂದ ಓಲ್ಯಾಡಲಿ ಎಲ್ಲಿ ಇದ್ದರೂ
ಎಂದೆಂದಿಗೆ ಇದನೆ ಬೇಡಿಕೊಂಡು ದುಃಖ
ದಿಂದ ಕಡೆ ಬೀಳಲಿಲ್ಲಾ ಅಕಟಕಟಾ
ಅಂದೆ ಅಪುನರಾನರ್ತಿ ಐದುವೆನೇನೊ ನಿನ್ನ
ಸಂದರುಶನವನ್ನು ಮದಿಕೊಳು ತಾ
ಒಂದೊಂದಧಿಕವಾಗಿ ನಿನ್ನ ದಾಸರ ಸಂಗ
ದಿಂದ ಮೇಲು ಮೇಲಾಗಿ ಇಪ್ಪೆನಲ್ಲಾ
ಮಂದಮತಿಗ ನಾನು ಮಾನು[ಷಾ]ನ್ನ
ತಿಂದ ಕಾರಣದಿಂದ ಇನಿತಾಯಿತೋ
ತಂದೆ ಎನ್ನನು ಹೀಗೆ ಕರ್ಮಾದ ಮಾರ್ಗಕ್ಕೆ
ತಂದೆಯಲ್ಲದೆ ನಿನಗೆ ಲಾಭವೇನೊ
ಸಂದುವೆನಲ್ಲದೆ ಅಂದಿನ ದಿನದಿ ನಿನ್ನ
ಚಂದ ಚಂದಾದರೂಪ ವ್ಯಕ್ತವಾಗೇ
ಅಂದುಂಟು ಇಂದಿಲ್ಲಾ ಎನದಿರೀ
ಅಂದು ಪುರಂದರದಾಸರು ಪೇಳಿದ ಮಾತು
ತಂದುಕೊಳ್ಳಲಿಲ್ಲಾ ಅನುಭವಕೆ ಈಗ ಹಾಹಾ
ಎಂದರೆ ಏನಾಹುದೊ ಎನ್ನ ಭಾಗ್ಯ
ಇಂದು ಈ ಪರಿಯಲ್ಲಿ ಕ್ಲೇಶಶೋಕ ಪ್ರತಿ
ಬಂಧಕದೊಳು ಹೊರಳಿ ನಾನಾ ಪರಿ ದು
ರ್ಗಂಧದಲಿ ಮುಳುಗಿ ಮುಂಗಾಣದಿಪ್ಪ ದುಃಖ
ವೃಂದಗಳಿರಲಿಕ್ಕೆ ಎಂತಾಹುದೋ
ಮಂದಿಯ ಬಯಸಿದಂತೆ ಸಾಧ್ಯವಾದರೆ ಗೋ
ವಿಂದ ನಿನ್ನ ಮಾಯಕ್ಕೆ ದುಸ್ತರ ದೂರವೆಂಬೊ
ಅಂದ ಮಾತಿಗೆ ವ್ಯಾಹತಿ ಬಾರದೇನೊ ನಿತ್ಯಾ
ನಂದ ವಿಗ್ರಹ ವಿಶ್ವಾ ನಾರಾಯಣಾ
ಇಂದಿರೆ ಬ್ರಹ್ಮ ವಾಯುವೀಂದ್ರ ಫಣೀಂದ್ರ

ಕಂದು ದಂಧರ ಇಂದ್ರ ಕಂದರ್ಪಾದಿ ಮಿಕ್ಕ
ವೃಂದಾರಕವೃಂದ ಯಾವಜ್ಜೀವರು ಮು
ಕುಂದಾ ನಿನ್ನ ಮಾಯಾವೆಂಬೊ ಮಹಾ
ಸಿಂಧುವಿನೊಳು ಮುಣುಗಿಸಿದಂದವಾದ ಗುಣ
ದಿಂದಲಿ ಗುಣರೂಪ ಕ್ರೀಯಗಳೆಲ್ಲಾ
ಒಂದೊಂದು ಎಣಿಸಾದರೊಳಗಾನಂತಾ
ಒಂದಾನಂತ ಯುಕ್ತ ಅಣು ಅತ್ಯಣು
ಸಂದಿಸಿಕೊಂಡಿಪ್ಪವೊ ಅನವಸ್ತಿಯಾಗಿ ಬಿಡದೆ
ಬಿಂದು ಮಾತುರ ಪಾರಗಾಣರದಕೊ
ದ್ವಂದ್ವ ಸೈರಿಸದಿಪ್ಪ ಅಲ್ಪ ಬುದ್ಧಿಗ ನಿನ್ನ
ಬಂಧಕ ಶಕುತಿಗೆ ಪ್ರತಿಕೂಲನೇ
ಹಿಂದೆ ಏನಾದದ್ದು ಆಗಿಪೋಯಿತು ಮುಚ
ಕುಂದ ಪಾಲಕನೆನೆ ಎನ್ನ ಹೃದಯ
ಮಂದಿರದೊಳು ಮುಖ್ಯ ಪ್ರಾಣಾನಧಿಷ್ಠಾನ
ದಿಂದಲಿ ಆ ಪರಿಯಲಿ ಪೊಳದು
ಕುಂದದೆ ಭ್ರಾಂತಿಯನ್ನು ಗೊಳಿಸುವುದೇನೊ ಅರ
ವಿಂದ ದಳಾಕ್ಷ ಪುಂಡರೀಕವರದಾ
ಅಂದಿಗೆ ಗೆಜ್ಜೆ ಪೆಂಡೆ ಸರಪಳಿ ಪೀತಾಂಬರ
ಕುಂದಣಹಾರ ಪದಕ ವೈಜಯಂತಿ
ವೃಂದಾವನ ಮಧ್ಯಯಿದ್ದ ಮಾಲೆ ವನಮಾಲೆ
ಗಂಧ ಕಸ್ತೂರಿ ಪುನಗು ಪರಿಮಳದ್ರವ್ಯ
ದಿಂದಲ್ಲೊಪ್ಪುವ ಮತ್ತೆ ಕೌಸ್ತುಭ ಮಣಿ ಸಿರಿ
ಯಿಂದ ವಕ್ಷಾಂಗದ ಕಂಕಣ ಮುದ್ರೆ
ಇಂದುವಿನಂತೆ ಕರ್ನಕುಂದಲ ನೊಸಲು ತಿಲಕ
ಮಂದಹಾಸದಿ ನೋಳ್ಪ ನೋಟ ಮಾಟಾ
ಸಂದೋಹ ಮಣಿಗಣಕಿರಣ ಕಿರೀಟ ಕಾಂತಿ
ಯಿಂದ ಈರೈದು ದಿಕ್ಕು ಬೆಳಗುತಿಪ್ಪ

ಸಿಂಧುಶಯನ ಪೂರ್ಣ ಸದ್ಗುಣಸಾಂದ್ರ ಹರಿ
ಮಂದಾಕಿನಿಯ ಪೆತ್ತ ಮಹಮಹಿಮಾ
ಒಂದೊಂದು ಇಂಥ ಇಂಥರೂಪಗಳಾನಂತ ವಿ[ರುವೆ]
ನೆಂದು ತೋರಿದೆ ಎನಗೆ ಈ ರೂಪವಾ
ಸಂದೇಹಗೊಳಿಪುದೇ ಸಕಲಾರ್ಥ ಕೊಡುವನೇ
ಕಂದನಂತೆ ಎನ್ನ ಸಲಹ ಬೇಕೋ
ಛಿಂದಿ ಛಿಂದಿಯ ಮಾಡು ಮನದಲ್ಲಿದ್ದ ಸಂಶಯ
ಗಂಧವಾದರು ನಿಂದಿರಗೊಡದೆ
ನಿಂದಿಸಿದನಿಗೆ ನಿನ್ನ ಶರೀರದೊಳು
ಪೊಂದಲಿಟ್ಟುಕೊಂಡೆ ಸರ್ವರು ನೋಡಾ
ಸಂದಿ ಗೊಂದಿಯಲ್ಲಿ ಆಡಿದರೇನುಂಟು
ಸಂಧಾನ ವ್ಯಾತಕೆ ಮುಕ್ತಾವಿರಲೂ
ನಿಂದಲ್ಲಿ ಕುಳಿತಲ್ಲಿ ಅವಲ್ಯಾದರೂ ಸಂ
ಬಂಧಿಗನಾಗಿ ಒಡನೆ ಇಪ್ಪನೆ
ಇಂಧನದೊಳಗಗ್ನಿ ಇದ್ದಂತೆ ಎನ್ನೊಳಗೆ
ಸಂದಿಸಿಕೊಂಡಿಪ್ಪ ಪರಮ ಪುರುಷಾ
ಹಂದಿ ನಾಯಿ ನರಿ ಜನುಮ ಬಂದರೆ ನಿನ
ಗೆಂದಿಗೆ ತಪ್ಪದು ಕಾವ ಬಿರಿದು
ಅಂದ ಮಾತಿಗೆ ನೀನೊಪ್ಪದಿರಲಾನಕ
ದುಂದುಭಿಗೆ ಮೊದಲು ರೂಪತೋರಿ ಮ
ತ್ತೊಂದು ರೂಪವನ್ನು ತೋರಲಿಲ್ಲವೇ ನಾ
ರಂದ ಗಾಯನಕೆ ಬೆಂಬಲ ದೇವಾ
ಬೆಂದ ಸಂಸಾರದೊಳು ಸುಖವಿಲ್ಲ ಸುಖವಿಲ್ಲ
ನೊಂದು ಬದುಕಬೇಕು ಕ್ಷಣ ಭೃಂಗುರಾ
ರಂಧ್ರವಲ್ಲದೆ ಪೂರ್ಣಸೌಖ್ಯ ಕಾಣೆನೊ ವ
ಸುಂಧರದಲ್ಲಿ ಜನಿಸಿ ಜಪಿಸಿದರೂ
ನಂದ ಗೋಪನಕಂದಾ ನಿನ್ನ ನಿಜರೂಪ

ಸಂದರುಶನದಲ್ಲಿ ಕರ್ಮ ಕ್ಷಯವೊ
ಸ್ಯಂದನ ಅಂದಣ ಸಿಂಧುರ ಮಂದರ
ಸುಂದರ ಮಂದಿರ ಚಂದನಾದಿ
ಇಂದೀವರಾಕ್ಷ ನಂದಿವಾಹನ ನಿನ್ನ ನಲ
ವಿಂದೆ ನೋಡದಲೆ ಪ್ರಾರಬ್ಧ ಭೋಗ
ಕಂದುಕ ಆಡಿದಂತೆ ಉಂಡು ತೃಪ್ತನಾಗೆ
ಖಂಡವಿಲ್ಲದೆ ಪದವಿ ಒಪ್ಪದಯ್ಯಾ
ಸಂಧ್ಯಾಕಾಲ ವಾಹದಕೆ ಹೊತ್ತು ಸ್ವಲ್ಪವೆ ಉಂಟು
ದಂಧಾನ ಮಾಡದಿರು ದಯವಂತನೇ
ಇಂದ್ರಿಯ ಗೋಚರ ವಿಜಯ ವಿಠ್ಠಲರೇಯ
ಅಂಧ ಕೂಪದಿಂದ ಕಡಿಗೆತ್ತು ಕರುಣದಲ್ಲಿ ೧

## ಮಟ್ಟತಾಳ

ನಮೋನಮೋ ಲಕುಮೀಶ ನಮೋನಮೋ ಧರಣೀಶ
ನಮೋನಮೋ ದುರ್ಗೇಶ ನಮೋನಮೋ ಯಜ್ಞೇಶ
ನಮೋನಮೋ ಲೋಕೇಶ ನಮೋನಮೋ ವಿತ್ತೇಶ
ನಮೋನಮೋ ಹೃಷಿಕೇಶ ನಮೋನಮೋ ಭೂತೇಶ
ನಮೋನಮೋ ಗುಣೇಶ ನಮೋನಮೋ ಮಂತ್ರೇಶ
ನಮೋನಮೋ ಯೋಗೇಶ ನಮೋನಮೋ ಕಾಲೇಶ
ನಮೋನಮೋ ವರುಣೇಶ ನಮೋನಮೋ ಗಗನೇಶ
ನಮೋನಮೋ ಪ್ರಕೃತೇಶ ನಮೋನಮೋ ಜೀವೇಶ
ನಮೋನಮೋ ಕರ್ಮೇಶ ನಮೋನಮೋ ಸರ್ವೇಶ
ನಮೋನಮೋ ಭಕುತೇಶ
ನಮೋನಮೋ ವಿರಕುತೀಶ
ನಮೋನಮೋ ಜ್ಞಾನೇಶ ನಮೋನಮೋ ಪ್ರಾಣೇಶ
ನಮೋನಮೋ ಎಂದು ನಮಿಸಿ ಬೇಡಿದೆ ವರವ
ನಮಿಪರ ಸುರಧೇನು ದ್ರುಮವೆ ಚಿಂತಾಮಣಿಯೆ

ನಮೋನಮೋ ನಿನಗೆ ನಿನ್ನೈಶ್ವರ್ಯಕ್ಕೆ
ನಮೋನಮೋ ನಿನಗೆ ನಿನ್ನಯ ಬಲಕ್ಕೆ
ನಮೋನಮೋ ನಿನಗೆ ನಿನ್ನಯ ಕೀರ್ತಿಗೆ
ನಮೋನಮೋ ನಿನಗೆ ನಿನ್ನಯ ವೀರ್ಯಕ್ಕೆ
ನಮೋನಮೋ ನಿನಗೆ ನಿನ್ನಯ ಜ್ಞಾನಕ್ಕೆ
ನಮೋನಮೋ ನಿನಗೆ ನಿನ್ನಯ ವಿಜ್ಞಾನಕ್ಕೆ
ನಮೋನಮೋ ಭಗವಂತಾ ನಮೋನಮೋ ಎಂದವರಿಗೆ
ಶಮದಮಗಳನಿತ್ತು ಶ್ರಮಗಳ ಪರಿಹರಿಸಿ
ಅಮಿತಸೌಖ್ಯವ ಕೊಡುವ
ನಮೋನಮೋ ಪಾಂಡುರಂಗ ನಮೋನಮೋ ಪಂಢರಿರಾಯಾ
ನಮೋ ಭೀಮಾ ತೀರ ವಿಮಲಸದನ ವಾಸಾ
ನಮೋನಮೋ ಗೋವಳರಾಯಾ
ನಮೋನಮೋ ನಮೋನಮೋ ಅನುಪಮಿತ
ನಮೋನಮೋ ಪವಿತ್ರ ನಮೋನಮೋ ವಿಚಿತ್ರ
ನಮೋನಮೋ ಶುಭಗಾತ್ರ ರಮೆಯ ಸಂಗಡನಿತ್ಯ
ರಮಿಸುವ ನಿರ್ದೋಷಾ ಕಮಲದಳ ನೇತ್ರಾ
ತಮ ನಿಯಾಮಕನೆ ಮಮತೆಯಿಂದಲಿ ಮೋಹ
ಭ್ರಮಣದೊಳಗೆ ಇದ್ದ ಕುಮತಿಯ ಹರಿಸು
ಕುಮುದ ಬಾಂಧವ ವರ್ಣಾ
ನಮೋನಮೋ ವಿಠ್ಠಲ ನಮೋನಮೋ ವಿಜಯ
ನಮೋನಮೋ ಕೃಷ್ಣ ನಮೋನಮೋ ವೆಂಕಟ
ನಮೋನಮೋ ಎಂದು ನಮಿಸಿದೆ ನಿನ್ನಂಘ್ರಿ ಕಮಲಕೆ ಶಿರವಾಗಿ
ತಮಹರ ಗೋಪಾಲ ವಿಜಯವಿಠ್ಠಲ ನಿನಗೆ
ಸಮವಿಲ್ಲ ಎಲ್ಲ ಕಮಲಗರ್ಭನು ಬಲ್ಲಾ ೨

## ತ್ರಿವಿಡಿತಾಳ

ಇದೆ ರೂಪದಿಂದಲ್ಲ ಮುಕುತಿಯಾಗದು ಜೀಯಾ
ಪದುಮನಾಭನೆ ಕೇಳೊ ನಿತ್ಯ ಎನ್ನ
ಹೃದಯದೊಳಗೆ ಬಂದು ಪೊಳೆವ ರೂಪವ ತೋರು
ಪದವಿಗೆ ಇದೆ ಅಲ್ಲದಿನ್ನೊಂದುಂಟೇ
ಬದಿಯಲ್ಲಿ ನಿಂತು ಮಾತಾಡಿದ ಕಾಲಕ್ಕೂ
ನಿದರುಶನ ನಿನ್ನ ಮೂರ್ತಿ ಬೇರೆ
ಅದರಿಂದ ಮೋಕ್ಷಕ್ಕೆ ತೀವ್ರಗತಿಯುಂಟು
ಇದೆ ಇದೆಯಾದರೆ ಪಾಪಾನಾಶಾ
ಸುಧಿಯಿಂದ ನಿಶ್ಚಯವಾದರೆ ಪಂಚ
ಭೇದದ ಸಮಾಧಿಗೆ ಸಿದ್ಧಯೋಗ್ಯತದಂತೆ
ಯದು ಕುಲೋತ್ತುಮ ನಿನ್ನ ರೂಪಗಳು ಅನಂತಾ
ವಿಧವಾಗಿ ಉಂಟಯ್ಯಾ ಲಾಲಿಸಯ್ಯಾ
ಪದುಮ ಮೊದಲಾದ ಚೇತನ ಜಡ ನಿತ್ಯಾ ನಿತ್ಯಾ
ಅಧಿಷ್ಠಾನ ಅವತಾರ ಆವೇಶ ಅಂಶವು
ಮುದದಿಂದ ಅಂಶಿ ಈ ಪರಿಯಲ್ಲಿ ನಮಗೆ ಸಂ
ಪದವಿಗೆ ಧ್ಯಾನಕ್ಕೆ ನಿರುತಸಿದ್ಧಾ
ಇದರೊಳಗೆನಗಾವದು ನಿಧಾನದ ಕಾಣೆ
ಸದಮಲ ವಿಗ್ರಹವೆ ಸಾರ್ವಭೌಮಾ
ಪದೊಪದೆಗೆ ನಿನ್ನ ಪಂಚ ವಿಧ ಮೂರ್ತಿಗಳು
ನಿದರುಶನ ನಿಜವಕ್ಕು ಮುಕುತರಿಗೇ
ಅಧಿಕಾರ ಭೇಧದಿಂದಲಿ ಕಲ್ಪಕಲ್ಪಕ್ಕೆ
ತುದಿ ಮೊದಲು ಮಧ್ಯ ಸರ್ವಾಂಗದಲ್ಲೀ
ಇದೆ ಇದೆ ಸಿದ್ಧವು ಎನಗೆ ನಿಶ್ಚಯವಾವದು
ಮೊದಲು ಕಂಡದ್ದು ಈಗ ನೋಡುವುದೂ
ಎದುರಿಲಿ ನಿಂದು ಕುಣಿದಾಡಿ ಬಾಹಿರದಲ್ಲಿ

ಬದಿಯಲಿ ಓಡ್ಯಾಡುತಲಿ ಇರಲೂ
ಮದನಾರಿಗಾದರೂ ಅಪರೋಕ್ಷವಲ್ಲೆಂದು
ಒದಗಿ ಶಾಸ್ತ್ರಗಳಲ್ಲಿ ಸಾರುತಿದಕೊ
ಪದುಮನಾಭನೆ ಕೇಳು ಎಂಥವರಿಗೆ ತನ್ನ
ಹೃದಯದಲ್ಲಿ ಮೂರ್ತಿಯ ಕಾಣದನಕ
ಹದುಳೆಸೇರರುಹ ಕಾಣೊ ಸ್ಪಷ್ಟತ್ವದಲಿ ಭೇದ
ತದನಂತರದಲಿ ಪ್ರಾಚುರ್ಯ ನಿತ್ಯಾ
ಬುಧರು ಇಂತೆಂದು ಪೇಳುವರು ಗ್ರಂಥದಲ್ಲಿ
ಪದ ಶ್ಲೋಕಂಗಳು ಶೋಧಿಸಿ ಶೋಧಿಸೀ
ಮಧು ವೈರಿ ವಿಜಯ ವಿಠ್ಠಲರೇಯ ಎನಗಿಂದು
ಹದನಾವದು ತಿಳಿಸೊ ಲಿಂಗ ಭಂಗಕ್ಕೆ ವೇಗಾ ೩

## ಅಟ್ಟತಾಳ

ಅನುಕ್ತವೆಂದು ಪೇಳುವುದಿಲ್ಲ ಎಲೊ ಜೀಯಾ
ನಿನಗೆ ನಿನಗೆ ಭೇದವಿಲ್ಲವೆಂಬೊದೆ ಸಿದ್ಧ
ಮನಸು ಮುಟ್ಟಿದೆ ಇದಕೆ ಕಿಂಚಿತು ಮಾತುರ
ಅನುಮಾನ ಮಾಳ್ಪದಿಲ್ಲವಾಂರವ ಬಗೆ ನೋಡೇ
ತನು ವಾಕ್ ಮನ ಜಾಗರ ಸ್ವಪ್ನಾವಸ್ತಿ
ಗುಣದಲ್ಲಿ ಕರ್ಮ ಮಾಡಿದವಕ್ಕೆ ಇ
ಷ್ಟಾನಿಷ್ಟಾ ಪೂರ್ವೋತ್ತರ ಜ್ಞಾನದಿಂದಲಿ ಮತ್ತೆ
ಮಿನಗುವ ಶೇಷಪ್ರಾರಬ್ಧ ಪರಿಯಂತ
ಅನುವಾಗಿ ಒಂದೊಂದು ನಿನ್ನ ಮೂರ್ತಿ ಚನ್ನಾಗಿ
ದಣಿದಣಿ ನೋಡಲು ಒಂದರಲಿ ಒಂದು
ಅನುಭವವಾಗಿ ಕರ್ಮಕ್ಷಯ ಉತ್ಕ್ರಾಂತಿ
ಗಣನೆ ಇಲ್ಲದೆ ಮಾರ್ಗ ಮೇಲೆ ಭೋಗಾನಂದಾ
ಸನುಮತವಾಗಿದೆ ಎಲ್ಲರಿಗೆ ಉಂಟು
ಎನಗಾವುದು ಪೇಳು ತೋರುವ ರೂಪ ಚೇ

ತನದೊಳಗಿದ್ದದೊ ಲಿಂಗದೇಹ ಸ್ಥೂಲ
ತನುವು ಹೃದಯ ಮಿಗಿಲಾದ ಸ್ಥಾನದಲ್ಲಿ
ಚಿನುಮಯ ಈ ರೂಪದಲಿ ಎಲ್ಲಿ ಇದ್ದೀ
ವನಜ ಸಂಭವ ದೇವಮುನಿ ಮಿಕ್ಕಾದ ನೃಪ
ಮನುಜೋತ್ತಮ ತೃಣವಿಡಿದು ಪೊಂದಿಪ್ಪನೆ
ಅನಿಮಿತ್ತ ಬಾಂಧವ ಸದ್ಗುಣ ನಿಖಿಳ ಜೀವನ ಭಿನ್ನ
ಆನಂದಮುನಿ ಮನ ಮಂದಿರಾ
ಮನಸಿಜ ಕೋಟಿ ಲಾವಣ್ಯ ಲಕ್ಷೀಶ್ವರಾ
ಕ್ಷಣ ಮಾತುರ ಆಲಸ್ಯ ಮಾಡದೆ ಪೇಳು
ವಿನಯದಿಂದಲಿ ಅಂದು ಒಮ್ಮೆ ತೋರಿದಿಯಿಂ
ದಿನದಲ್ಲಿ ಒಮ್ಮೆ ಪೊಳೆದೆ ಪರಂಜ್ಯೋತಿ
ಪ್ರಣವ ಪ್ರತಿಪಾದ್ಯ ಮೋಕ್ಷ ಪ್ರದಾಯಕ
ಘನ ಘನ ಮಹಘನ ವಿಜಯ ವಿಠ್ಠಲರೇಯ
ಜನುಮ ಸಫಲವಾಯಿತು ಸಾಧನ ಸಿದ್ಧಿಸಿತೊ ೪

## ಆದಿತಾಳ

ಎಂತಾದರೇನು ಎನಗೆ ಪಾಪನಾಶನ ಮಾಡಿ
ಮುಂತೆ ಬರುವ ಜನನ ಕಳೆದು ಕಾರುಣ್ಯದಲ್ಲಿ
ಸಂತೋಷವನೆ ಕೊಟ್ಟು ಇರುಳು ಹಗಲು ನಿನ್ನ
ಚಿಂತೆ ಮಾಡುವ ಹಾಗೆ ಪ್ರೇರಣೆಯಾಗ ಬೇಕೊ
ಸಂತರಿಸು ನಿತ್ಯ ಸಂತರ ಸಂಗದಲ್ಲಿ
ಮಂತ್ರ ತಂತ್ರಗಳಿಲ್ಲ ಬಲು ಮಂದಮತಿ ನಾನು
ನಿಂತು ಕರಗಳ ಮುಗಿವೆ ವರವ ಪಾಲಿಸೊ
ಅನಂತ ರೂಪಾತ್ಮಕ ಲೀಲಾ ಮನುಜ ವಿಗ್ರಹ
ಸಂತೆ ನೆರದರೊಳು ಓರ್ವನಿದ್ದಂತೆ ನಾ
ನೆಂತು ಕಡೆ ಬೀಳೂವೆ ವಿಷಯಾಂಬುಧಿ ದಾಟಿ
ಅಂತಿಜ ಜನುಮವೆ ಕೊಡು

ಅಂತ್ಯ ದೇಹವೆ ಕೊಡು
ಪಂಥ ಮಾತ್ರ ಪೋಗಾಡಿ ನಿನ್ನ ಕಥಾಮೃತ
ಮಂಥನಿಸಿ ಪೂರ್ಣ ಭಕುತಿಯಿಂದ ಸವಿದು
ಗ್ರಂಥಿಸಿಕ್ಕ ತೊಡಕು ಬಿಚ್ಚುವಂತೆ ಮಾಡು
ಇಂಥ ರೂಪದಿಂದ ಎನಗಾಗುವ ಸಿದ್ಧಿ
ಪಂಥವ ತೋರಿಸಯ್ಯಾ ತೊಲಗಿ ಪೋಗದಿರು
ಭ್ರಾಂತಿಗೊಳಿಸದಿರು ಪಾದಕ್ಕೆ ಎಚ್ಚರಿಕೆ
ಪ್ರಾಂತ್ಯ ಭಾಗಕ್ಕೆ ತಾರಕಾಣ್ಯವಾಗಲಿ ಬೇಕೊ
ಪಿಂತೆ  ಒಲಿದು ಪರಮಾನುಗ್ರಹ ಮಾಡಿದದಕೆ
ಕಂತು ಜನಕ ನನಗೆ ಇದೆ ಶಾಶ್ವತವೆಂಬೆ
ತಿಂಥಿಣಿಸುರ ವಂದ್ಯಾ ವಿಜಯವಿಠ್ಠಲ ಎನ್ನ
ಅಂತರಂಗದೊಳಗೆ ಇಪ್ಪ ಪಾಂಡುರಂಗಾ ೫

### ಜತೆ

ಈ ಲೋಹಕ್ಷೇತ್ರ ನಿವಾಸಾ ಗೋವಳೇಶ
ಪಾಹಿ ಪಂಢರಿರಾಯಾ ವಿಜಯ ವಿಠ್ಠಲ ಪ್ರೀಯಾ ೬

## ೨

### ಧ್ರುವತಾಳ

ಅಂದು ಮಹಾಪ್ರಳಯ ರಾತ್ರಿ ಸಂಪೂರ್ಣೆಯ ।
ಸಂಧಿಸಿದ ಸಮಯದಲ್ಲಿ ವಿಪ್ರಜಾತಿ ।
ಎಂದೆನಿಸುವ ವಾಸುದೇವ ಭಗವದ್ರೂಪ ।
ದಿಂದ ಪುಟ್ಟಿದ ಪುರುಷನಾಮಾ ಬ್ರಹ್ಮ
ಗೊಂದು ಶರೀರವಿದು ಆದಿಯಲುದ್ಭವ ।
ಪೊಂದಿದನಾದಿಲಿಂಗ ಕಾರಣವಿದಕೋ ।
ನಿಂದಿಹ ಪುರುಷ ಬ್ರಹ್ಮನೀ ತತ್ವದೇಹದಲ್ಲಿ ।

ಮುಂದೆ ಮತ್ತೊಂದು ಗಾತ್ರ ನಿರ್ಮಾಣವೋ ।
ಅಂದವಾಗಿದೆ ಭಾಗತ್ರಯವಾದ ಏಕರೂಪ ।
ದಿಂದ ಮೆರೆದ ಪ್ರಕೃತಿ ಶಬ್ದವಾಣೀ ।
ಯಿಂದ ಪುಟ್ಟಿದನೊಂದು ಅಂಶದಿಂದ ವಿರಂಚಿ ।
ಹಿಂದಣ ದೇಹದೊಳಗೆ ಅತಿ ಪ್ರಭೇಧ ।
ಸಂದೇಹವಿದಕಿಲ್ಲ ಮನ ಚಿತ್ತ ಬುದ್ಧಿಯಂತೆ ।
ಬಿಂದು ಪಾದಾನಾತಿಳಿ ತ್ರಯಗುಣ ಜೀವರು ।
ಇಂದಿಗೆ ಎಂಟು ವರ್ಷ ಸವೆದು ಪೋದವು ಮೇಲೆ ।
ಇಂದು ಮೌಳಿಯ ಪೆತ್ತನಾತರುವಾಯಾ ।
ಒಂದೊಂದು ಸಂವತ್ಸರ ಮೀರಿ ಪೋಗಲಲ್ಲಿಗೆ ।
ಸಂದಿಪೋಯಿತು ಅಜಗೆ ಹತ್ತು ಅಬ್ದಾ (ವರ್ಷ)
ಮುಂದೆ ಅನಿರುದ್ಧದೇವ ಜನಿಸಿದ ಜೀವಿಗಳ ।
ಛಂದದಿಂದಲಿ ಗರ್ಭದೊಳು ತಾಳಿದ ।
ಮಂದಹಾಸದಿಂದ ಎಲ್ಲರಿಗೆ ತನ್ನಾಮಕ ।
ವೆಂದೆಂಬದೇಹ ವಿತ್ತ ತಾರತಮ್ಯದಿ ।
ಕಂದರ್ಪಪಿತನಮ್ಮ ವಿಜಯ ವಿಠ್ಠಲ ಶತಾ ।
ನಂದಗೆ ಕರುಣಿಸಿವ ದೇಹಗಳೆಣಿಕೆ ನೋಡೂ ೧

## ಮಟ್ಟ ತಾಳ

ವಾರಿಜ ಸಂಭವಗೆ ತ್ರಿಗುಣಾತ್ಮಕ ಲಿಂಗ ।
ಶರೀರದಿಂದ ಬಂದ ಗಾತ್ರಗಳೆಣಿಕೆ ।
ಹಾರೈಸು ಮೊದಲವ್ಯಕ್ತ ತತ್ವ ।
ಮೂರೊಂದು ವಿಧ ಮಹಾನದಹಂಕಾರಾ ತ್ರಿವಿಧಾ ।
ವರಣ ಮನ ದಶಯಿಂದ್ರಿಯಂಗಳು ।
ಸಾರತನ್ಮಾತ್ರಕ ನಭವಯು ವಂ ।
ಗಾರ ಉದಕ ಧರಣೆ ಈ ರೀತಿಯಲ್ಲಿ ಒಂದೊಂದು ।

ಶರೀರ ಬೇರೆ ಬೇರೆಯಕ್ಕು ಕವಚವ ತೊಟ್ಟಂತೆ ।
ಚಾರು ಪ್ರಕಾಶದಲ್ಲಿ ಪ್ರಥಮ ಕಳೇ ।
ವರಕೆ ವಂದಾವರಣ ಈ ರನೆ ದೇಹಕ್ಕೆ ಅವ್ಯಕ್ತದ ಸಹಿತ ।
ಮೂರನೆ ಗಾತ್ರಕ್ಕೆ ಮಹತತ್ವದ ಕೂಡ ।
ಸಾರ ಪ್ರಮೇಯ ತಿಳಿಯಿದೆಯಿದೇ ಪ್ರಕಾರ ।
ಮೂರೆಂಟು ತತ್ವಗಳೊಂದಧಿಕ ।
ಕಾರಣ ಕಾರ್ಯಗಳು ಅಂಶಿ ಅಂಶಯುಕ್ತ ।
ಮಾರನಯ್ಯ ನಮ್ಮ ವಿಜಯ ವಿಠಲ ವಿ ।
ಸ್ತಾರ ಮಾಡಿದಗಿನಿತು ಬೊಮ್ಮಗೆ ದೇಹಗಳನು ೨

## ತ್ರಿವಿಡಿ ತಾಳ

ಗುಣ ವಿಶಿಷ್ಟರಾಶಿ ಭೂತ ಪ್ರಕೃತಿ ಸೂಕ್ಷ್ಮ ।
ವೆನಿಸುವ ಲಿಂಗ ಷೋಡಶ ಕಳಾಭಾಗ ।
ಮಿನಗುವಂದೊಂದು ಪರಮಾಣುಪುಂಜ ವ ।
ಖ್ಖಣಿಸಬಲ್ಲನಾರು ತುಂಬಿಹವೊ ।
ಅನುಕೂಲ ಮುಂದೆ ಪುಟ್ಟುವ ಅನಿರುದ್ಧಕ್ಕೆ ।
ಮನೋಹರ ವಾಗಿದೆ ಬ್ರಹ್ಮರಾಯಾ ।
ತನುವು ತೆತ್ತನು ನೋಡು ಬೀಜಾಂಕುರದಂತೆ
ಗಣನೆಯಿಲ್ಲದೆ ತತ್ವ ಸಂಖ್ಯೆಯಿಂದ ಜನಕ ।
ಜನಕಭಾವ ಪರಮಾಣುಗತಿ ಕಾ ।
ರಣ ಕಾರ್ಯವೆನಿಸಿ ಪ್ರತಿ ।
ತನವುಗಳಾದವು ಆವರ್ಕಸಾಕಾರ ।
ಅನಿರುದ್ಧ ನಿರ್ಮಾಣ ಮಾಡಿದನಯ್ಯಾ ।
ವನಜ ಸಂಭವಗೇಕೋನ ತ್ರಿಂಶತಿ ದೇಹ ಲ ।
ಕ್ಷಣ ಪೂರ್ಣದಿಂದಲಿ ಬೆಳದವದಕೋ ।

ಘನ ಮೂರುತಿ ನಮ್ಮ ವಿಜಯ ವಿಠ್ಠಲರೇಯ ।
ಗುಣ ಪೂರ್ಣ ಶಾಂತಿಯಿಂದಲಿನಿತು ಪುಟ್ಟಿಸಿದ ೩

## ಅಟ್ಟ ತಾಳ

ಏಕದ್ವಯತ್ರಯ ಚತು: ಪಂಚಷಟ್ ಸಪ್ತ ।
ಈ ಕ್ರಮಕ್ಕೆ ಕಾಯ ಚರಮ ಪರಿಯಂತ ।
ಲೋಕೇಶಗೆ ಇಪ್ಪತ್ತೆಂಟು ಭಿನ್ನಾಂಶದಲ್ಲಿ
ವಾಕುವ್ಯವಹಾರ ಜಗದೊಳುಪಾದಾನಾದಾ ।
ಪ್ರಕೃತಿಗಳೆಲ್ಲ ಲಿಂಗ ಸಂಬಂಧವೊ ।
ಆಕಾರವೆನ್ನಿ ಸೂಕ್ಷ್ಮ ನೋಡಲು ಸ್ಥೂಲ ।
ಪ್ರಾಕು ವಿಚಾರಿಸಿ ದ್ವಿತೀಯ ಶರೀರವು ।
ಶೋಕ ವಿನಾಶನ ವಿಜಯ ವಿಠಲರೇಯ ।
ಬೇಕಾದ ವರವೀವ ಈ ಪರಿಕೊಂಡಾಡೆ ೪

## ಆದಿತಾಳ

ವಿಷಮಾವಸ್ಥೆ ಯಾಗದ ತತ್ಪೂರ್ವದಲ್ಲಿಯಿದೆ ।
ಪುಸಿಯಲ್ಲವನಿರುದ್ಧ ದೇಹ ಪ್ರಾಪ್ತಿ ।
ಬಿಸಿಜ ಭವಾಂಡ ಬಾಹ್ಯ ಪ್ರಥಮಾವರಣ ತತ್ವ ।
ವಸುಮತಿ ಪರಿಯಂತ ಎಣಿಸು ಮೂಲ ಪ್ರಕೃತಿ ।
ವಶನಾದ ವ್ಯಕ್ತ ಮಹಾಗುಣತ್ರಯಾತ್ಮಕ ಹಂಕಾ ।
ರೆಸೆವ ಮನ ಜ್ಞಾನ ಕರ್ಮ ಮಾತ್ರ ಭೂತ ಪಂಚ ।
ಮಿಸುಣಿಯೆಂದಂದಿ ದೇಹವಷ್ಟ ವಿಂಶತಿ ರಾ ।
ಜಿಸುತಿಪ್ಪವು ನೋಡು ಯಿದೆಯಿದರೊಳು ಲಿಂಗ ।
ದೆಶೆಯಿಂದ ಪಲ್ಲೈಸಿದ ಅನಿರುದ್ಧದೇಹ ಪ್ರಜ ।
ನಿಸಿದವು ಭಿನ್ನಂಗಿ ತತ್ವ ತತ್ವದೇಹ ।

ಬಿಸಿಜ ಸಂಭವಗೆ ದ್ವಿವಿಧ ಪ್ರಕೃತಿಯಿಂದ ।
ದಶ ಪಂಚ ಮೇಲಾರು ಸಿದ್ಧವಾದವು ಪು ।
ರುಷಗಾತ್ರ ಇದರಂತೆ ತಿಳಿದು ಕೂಡಿಸುವುದು ।
ಅಸಂಭಾವಿತವಲ್ಲ ಇದರ ವಿನಾಯಿನ್ನು ।
ಎಸಳು ಶರೀರವುಂಟು ವಿಜ್ಞಾನ ಚಿತ್ತ ಬುದ್ಧಿ ।
ಅಶ್ರದ್ಧ ವೈರಾಗ್ಯ ಬಲ ವೀರ್ಯ ಲೋಕ ಮಂತ್ರ ।
ಪೆಸರನ್ನ ತಪ ಕರ್ಮ ಕರಾದಿಯೆಲ್ಲುಂಟು ।
ಹಸನಾಗಿ ಇವುಯೆಲ್ಲ ಸಪ್ತಾ ವರ್ಕದೊಳಗೆನ್ನಿ ।
ತ್ರಿಸರದ ಗುಣದ ಕಾರ್ಯ ಚತುರವಿಂಶತಿ ತತ್ವ ।
ಮಿಸರಿಯಾದ ಮೇಲೆ ವಿರಾಟ್ ಸತ್ಯಲೋಕ ।
ವಸುಧಿಗೆ ನಾಭಿಗಿರಿ ಸ್ವರ್ಗ ಭೂರ್ಭುವರಾದಿ ।
ದಶದಿಕ್ಕಿನೊಳಗೆ ಈ ಪರಿ ರೂಪಾಂತರ ರೂಪ ।
ಕುಶಲ ಸರ್ವದ ಕಾಣೊ ಪರಮಾಣು ಪ್ರದೇಶ ।
ವಸತಿಯಾಗಿಪ್ಪನು ಅಂಶಿ ಅಂಶಾನಂತ ।
ಬೆಸಸ ಬಲ್ಲವರಾರೊ ಈತನ ಮಹಿಮೆ ಮಾ ।
ನಸದಲ್ಲಿ ನಿರ್ಜರಾದಿಗಣ ಎಣಿಸಲಾರದು ।
ಅಸುರ ಸಂಹರ ವಿಜಯ ವಿಠಲರೇಯ ।
ಪಶುಪತಿ ಸುರರಿಗೆ ಉತ್ತುಮನ ಮಾಡಿದ ೫

## ಜತೆ

ಚತುರ್ಮುಖ ಧರಿಸಿದ ಶರೀರ ಇನಿತಯ್ಯಾ ।
ಚತುರ ಮೂರುತಿ ತುರ್ಯ ವಿಜಯವಿಠಲನಿಂದ ೬

೩

## ಧ್ರುವ ತಾಳ

ಅಣುದ್ವಯ ಪರಮಾಣು ಇಂಥಾದೆ ತ್ರಯವಾಗೆ ।
ತ್ರಣುಯೆನಿಸೆ ಕೊಂಬೋದು ಇದೆ ತೃಸರೇಣು ।
ಮನ್ಮನ ಗೋಚರವೆನ್ನು ಜಾಲಾರ್ಕಕಿರಣಾದಲ್ಲಿ ।
ಘನವಾಗಿ ಚರಿಸುವ ದೇಶ ಭೇದ ।
ಇನಿತು ತ್ರಸರೇಣುತೃಟಿ ತೃಟಿಮೂರು ಯೆಂಬೋದೂ ।
ಅನಿಸಿ ಕೊಳುತಲಿದೆ ಒಂದು ವೇದ ।
ತ್ರಣಿವೇಧವೊಂದುಲವ ಯಿಂಥವು ಮೂರಾಗಿ ।
ಎಣಿಸು ನಿಮಿಷಾವೆಂದು ನಿಮಿಷ ಮೂರು ।
ಕ್ಷಣವಾಗುವುದು ಕೇಳಿ ಮರಳೆ ಚೆನ್ನಾಗಿ ಐದು ।
ಕ್ಷಣ ಕೂಡಿದರೆ ಒಂದು ಕಾಷವೆನ್ನಿ ।
ಅನುಮಾನ ಮಾಡಸಲ್ಲ ಹೃದಿನೈದು ಕಾಷ್ಟ್ಯಾಲೋ ।
ಚನ ಮಾಡುವೊಂದು ಲಘುವು ಸಿದ್ಧವಕ್ಕು ।
ಗುಣಿಸು ಹದಿನೈದು ಲಘವ,ವೊಂದು ನಾಡಿಯೆಂದು ।
ಇನಿತು ಆರೇಳುಯೆಂಟು ಒಂದುಯಾಮಾ ।
ಎಣಿಕೆಗೈಯೊ ಯಿಂಥ ಯಮ ಚತುಷ್ಟವಾಗಿ ।
ದಿನಮಣಿ ಅಸ್ತಂಗತ ಹನ್ನೆರೆಡುತಾಸು ।
ಇನಿತು ಹನ್ನೆರಡಾಗಿ ಇರುಳು ನಾಲ್ಕು ಝೂಂವ ।
ಎನಿಸುವದು ವೊಂದು ವಾಸರಕೆ ।
ಗಣಿತಜ್ಞರು ಪೇಳುವರು ತಿಥಿ ತಾರ ಯೋಗ ಕರಣ ।
ಮನುಜರಿ[ಗೊಂ]ದು ದಿವ[ಸಾ]ಯಿತೋ ದೇವ ।
ಜನನ ಮಿಕ್ಯಾದ ಕರ್ಮಗಳಿಗೆ ಇದೆ ಆರಂಭ ।
ವೆನಿ[ಸಿ] ಹತ್ತ್ಯದು ದಿವಸವೆಂಬೋದೆ ಪಕ್ಷ ।
ಇನಿತು ಈ ಪರಿಯಾಗೆ ಭಿನ್ನ ಪಕ್ಷವೆಂ ।

ದೆನಿಸುವುದು ಶುಕ್ಲಕೃಷ್ಣಯೆಂಬೋದೆ ಪಕ್ಷ ।
ಅನುವಾಗಿ ಎರಡು ಪಕ್ಷ ಕೂಡಿಸಲು ಮಾ ।
ತನು ಕೇಳು ತಿಂಗಳೊಂದು ಇಂಥವೆರಡು ।
ಅನುಸಂಧಿ ನಾಲ್ಕು ಒಂದು ಋತುವಾಹದು ಇವೆ ಆರು ।
ಗುಣಿಸಲು ಒಂದು ವರ್ಷ ವರ್ಷ ನೂರಾಗಲು ।
ಮನುಜರಿಗೆ ಪೂರ್ಣಾಯು ಎಂದೆನಿಸುವುದು ಯೋ ।
ಚನೆ ಮಾಡು ಮಾನುಷ್ಯಮಾನದ ಲೆಕ್ಕ ।
ಅನಿಮಿಷ ತತಿಗಳಿಗೆ ಮತ್ತೆ ಬಗೆವೊಂದು ವತ್ಸರ ।
ದಿನವೊಂದು ಹಗಲಿರಳು ಆಗೋವೆಂದು ।
ವನಜಗರ್ಭನ್ನ ತನಕ ಈ ಪರಿಯಿಂದ ಎಣಿಸಿ ।
ಗುಣಿಸಿ ತಿಳಿಯಬೇಕು ಕಾಲಪ್ರಭಾ ।
ಅಣುಮ ಹತ್ತುರೂಪ ವಿಜಯ ವಿಠ್ಠಲರೇಯ ।
ಗುಣ ನಿಧಿ ಸರ್ವ ಕಾಲದೊಡನೆ ತಿರುಗುತಿಪ್ಪ ೧

## ಮಟ್ಟತಾಳ

ಮೂರೊಂದು ಯುಗವುಂಟು ಮನುಜ ಮಾನದಲ್ಲಿ ।
ಸಾರುವೆ ವರ್ಷಂಗಳು ವಿವರ ವಿವರವಾಗಿ ।
ಆರಂಭ ಯುಗಕೆ ಹದಿನೇಳು ಲಕ್ಷ ।
ಈರೈದು ಹತ್ತುಯೆಂಟು ಸಾವಿರವೆನ್ನಿ । (೧೭,೨೮೦೦೦)
ಚಾರುದ್ವಿತೀಯ ಯುಗಕೆ ಲಕ್ಷದ್ವಾದಶ ತೊಂಭ ।
ತ್ತಾರು ಸಾವಿರವಯ್ಯ ೧ (೧೨,೯೬೦೦೦)
ಮೂರನೆಯುಗಕೆ ಎಂಟು ಲಕ್ಷಮ್ಯಾಲೆ ।
ಈರೆರಡರುವತ್ತು ಸಾವಿರ ವರುಷಗಳು (೮,೬೪೦೦೦)
ಈರೀತಿ ಗ್ರಹಿಸು ನಾಲ್ಕನೆ ಯುಗಕೆ ವಿ ।
ಚಾರನಾಲ್ಕು ಲಕ್ಷತ್ರಿಂಶತಿದ್ವಯ ಸಹಸ್ರ । ೯೪,೩೨೦೦೦)
ಹಾರೈಸು ಎಲ್ಲ ಕೂಡಿ ಗುಣಿಸೆ ವಿ ।

ಸ್ತಾರವಾಗಿದೆ ನಾಲ್ಕು ಹತ್ತು ।
ಮೂರುಲಕ್ಷ ದಶ ದಶ ಸಾಸಿರವೊ । (೪೩,೨೦೦೦೦)
ಬ್ಯಾರೆ ಬ್ಯಾರೆ ಯುಗದ ಪೆಸರಂಗಳು ಶೃಂ ।
ಗಾರದಿಂದಲಿ ಕೇಳಿ ಕೃತ ತ್ರೇತ ದ್ವಾಪರ ಕಲಿ ।
ಸಾರ ಹೃದಯರೊಲಿದು ಸಂತತ ಕರುಣದಲಿ ।
ಶ್ರೀರಮಣ ನಮ್ಮ ವಿಜಯ ವಿಠ್ಠಲರೇಯ ।
ಮೂರೊಂದು ವತ್ಸರ ನಾಮಕ ಕಾಣೊ ೨

## ರೂಪಕ ತಾಳ

ಏಕತ್ರಯವೊಮ್ಮೆ ತಿರುಗಿದರು ಮಹಯುಗ ।
ನಾಕಮಾನದಲ್ಲಿ ದ್ವಾದಶ ಸಹಸ್ರವೊ । (೧೨,೦೦೦)
ಲೋಕದೊಳಗೆ ಸಿದ್ಧಯಿಂಥ ಮಹಯುಗ ಸಾವಿರ ।
ಶ್ರೀಕಾಂತನಿಂದಲಿ ತಿರುಗಿದರದು ಅಂದು ।
ಲೋಕೇಶನಿ[ಗಾ]ಗುವದು ಒಂದು ಹಗಲು ಶಬ್ದ ।
ವಾಕುಲಲಿಸಿ ನಾನೂರು ಮೂವತ್ತೆರಡು ಕೋಟಿ ।
-----------------(೪,೩೨೦೦೦೦೦೦೦)
ಈ ಕಾಲದಂತೆ ಸಾವಿರಾವರ್ತಿ ತಿರುಗಿದರು ।
ನೂಕಿ ಪೋಯಿತು ಒಂದುಯಿರಳು ಕಮಲಾಸನಗೆ ।
ನಾಲ್ಕುನೂರು ಮೂವತ್ತೆರಡು ಕೋಟಿ ।
ಶ್ಲೋಕಾರ್ಥದಿಂದಲಿ ಇತ್ತಂಡ ಕೂಡಿಸಿ ।
ನಾಲ್ಕೆರಡು ಅರವತ್ತು ನಾಲ್ಕು ಕೋಟಿ ಗುಣಿತ ।
------------(೮,೬೪ ೦೦೦೦೦೦೦)--
ವಾಕೇಶ ಚತುರ್ಮುಖಗೆ ನಿಜವೊಂದು ದಿವಸವೊ ।
ಸಾಕಾರ ಮೂರ್ತಿ ಸಿರಿ ವಿಜಯ ವಿಠ್ಠಲರೇಯ ।
ಲೌಕಿಕ ಮಾನದಲ್ಲಿ ಇಷ್ಟು ವರ್ಷ ಗೈದ ೩

## ಝಂಪಿ ತಾಳ

ವನಜಸಂಭವನ ಒಂದು ದಿವ ರಾತ್ರಿಯೊಳು ।
ಮನುಗಳು ಚತುರ್ದಶರು ತಮ್ಮ ಪದವಿ ।
ಅನುಭವಿಸುವರು ಪ್ರತ್ಯೇಕ ಪ್ರತ್ಯೇಕವಾಗಿ ।
ಗಣನೆ ಮಾಡಲಿಬೇಕು ಇವರ ಕಾಲ ।
ಮನವೊಬ್ಬಗೆ ಎಪ್ಪತ್ತೊಂದು ಮಹಾಯುಗ ದಶ ।
ಪರಗರ್ಧಾಲಕ್ಷ ಮೇಲೆ ಭುಕ್ತಿಕಾಲ ।
ಎಣಿಕೆ ಮಾಡಲಿಬೇಕು ಎಪ್ಪತ್ತೊಂದು ಮಹಾಯುಗ ।
ವಿನಯದಿಂದಲಿ ಒಂದು ಮಹಯುಗದ ಲೆಖ್ಖ । (೪೩,೨೦೦೦೦)
ಇನಿತು ಎಪ್ಪತ್ತೊಂದಂದ ವೆಗ್ಗಳಿಸೆ ।
ಮನಕೆ ಒಪ್ಪುವುದ ತ್ರಿಂಶತಿಕೋಟಿ ಅರವತ್ತು ।
ಮುನಿಲಕ್ಷ ಯಿಪ್ಪತ್ತು ಸಾವಿರ ವರುಷ । (೨೦,೬೭,೨೦೦೦೦)
ಮನು ಒಬ್ಬನಿಗೆ ಮಹಯುಗ ಎಪ್ಪತ್ತೊಂದು ।
ಉಣಿಸಿ ಪೋದವು ನೂಕೆ ಅದು ಸಂಖ್ಯ ಮಾಡೆ ।
ಕ್ಷಣ ಬಿಡದೆ ಒಂಭೈನೂರುವೊಂಭತ್ತು ನಾಲ್ಕು ।
ಮಿನಗುವದು ಮಹಾಯುಗ ಉಳಿದನಾರು ಈ ।
ಜನಕೆ ಹಂಚಿಕೆಯಿಂದ ನೋಡಲಿಬೇಕು ।
ಎಣಿಸು ಹದಿನೆಂಟು ಲಕ್ಷ ಒಂದೈವತ್ತು ಸಾವಿರ ।
ವನಧಿ ಶತಯಿಪ್ಪತ್ತೆಂಟು ವರುಷಾರು ತಿಂಗಳ ।
ದಿನ ಇಪ್ಪತ್ತೈದು ತಾಸು ಹದಿನೇಳು ಲಘು ಐದು ।
ಕೊನೆ ಮಾತ್ರವುಂಟು ಅದು ಅಲ್ಪವಿವಿಕ್ಷ ।
ಮನೋರ್ವಣಿಗೆ ಕೇಳು ಕಾಲಕ್ಲಪ್ತಿ ಅಬ್ದ ।
ಮುನಿಗಳ ಸಮ್ಮತವೊ ಬಲ್ಲವರಿಗೆ .......................
ಇನಿತು ಮಿಶ್ರಮಾಡೆ ಒಬ್ಬ ಮನುವಿಗೆ ಧಾ ।

ರುಣಿ ವಶವಾಗಿಯಿದ್ದದು ಕೇಳಿರೊ ।
ಗಣ ಹತ್ತುಕೋಟಿ ಎಂಭತ್ತೈದು ಲಕ್ಷ, ಮಾ ।
ರ್ಗಣ ಎರಡು ಶತ ಮೇಲೆವೊಂದು ಸಹಸ್ರ ।
ವನಧಿ ವಿಂಶತಿ ಅಷ್ಟವರುಷ ತದುಪರಿಯಿಂದ ।
ಗುಣಿಸು ಯುಗಮಹಾಯುಗ ವಿಭಾಗದಿ ।
ಜನನ ಮರಣ ಶೂನ್ಯ ವಿಜಯವಿಠ್ಠಲ ತಾನೆ ।
ಮನುವಿನೊಳಗಿದ್ದು ತ್ರಿಲೋಕವನು ಆಳ್ವಾ ೪

## ತ್ರಿವಿಡಿತಾಳ

ಹದಿನಾಲ್ಕು ಮನುಗಳು ಇಪ್ಪರು ಸ್ವಾಯಂಭುವ ।
ಇದರೊಳಗಾದಿ ಮನುವೆನಿಸಿಕೊಂಬ ।
ಮುದದಿಂದ ತಿಳಿವುದು ತಾಪಸಾಖ್ಯಮನು ।
ಉದುಭವವಾಗಿಹ ನಾರೆಯಣ ।
ಬುಧರು ವಿವರಿಸಿ ಇದರ ಸಂಧಿ ಕಾಲದ ಕ್ಲಪ್ತಿ ।
ಒದಗಿ ಕೊಂಡಾಡುವುದು ಪುಣ್ಯವಕ್ಕು ।
ಮೊದಲು ಮನುವಿಗೆ ಎರಡು ಸಾವಿರ ಹಯನ ।
ಅದರ ತರುವಾಯದಲಿ ಐದು ಮನುಗಳಿಗೆ ।
ಹದಿನಾಲ್ಕು ನೂರು ವತ್ಸರ ಪ್ರಕಾರ ।
ಇದನೆ ಗುಣಿಸಲಾಗಿ ಏಳು ಸಾವಿರವಾ ।
ದುದು ಕಾಣೊ ಉಳಿದೆಂಟು ಮನುಗಳಸಂಧಿ ।
ಹದಿನೈದು ನೂರಬ್ದದಂತೆ ಉಗ್ಗಡಿಸೆ ಹನ್ನೆರಡು
ಸಾವಿರ ವಾದವೆನ್ನಿ ————————
ಇದರಂತೆ ಅವರವರರ ಸಂಧಿ ಕಾಲಗಳಿಗೆ ।
ತ್ರಿದಶಗಣ ಬಲ್ಲ[ರು] ಕಾಲ ವಿವರ ।

ಮದನ ಜನಕ ನಮ್ಮ ವಿಜಯ ವಿಠ್ಠಲರೇಯ ।
ಹೃದಯದೊಳಗೆ ಪ್ರೇರಿಸಿದಂತೆ ವಿವರ ನಿಶ್ಚಯ ಮಾಡಿ ೫

## ಅಟ್ಟತಾಳ

ಇಂತು ಸಾವಿರ ಬಾರಿ ತಿರುಗಿದರೆ ದೇವ ।
ತಿಂತಿಣಿ ಪಿರಿಯಂಗೆ ಹಗಲಿರಳೊಂದೆ ಅಯ್ಯ ।
ಸಂತಿತೊ ಕಾಣೊ ಮುಂದೆ ಗಣತಿ ಚನ್ನಾಗಿ ।
ಚಿಂತಿಸು ಬೊಮ್ಮನ್ನಾ ಒಂದೆ ತಿಂಗಳಿಗೆ ಆ ।
ದ್ಯಂತಕಾಲ ನೋಡೆ ಎರಡು ಅರ್ಬುದ ಐನೂರಾ ತೊಂ ।
ಭತ್ತೆರಡು ಕೋಟಿ ವತ್ಸರ ಸಿದ್ಧ । ೨,೫೯೨0000000
ಇಂಥವೆ ಹನ್ನೆರಡಾಗಿ ವೊಂದುವರುಷ ।
ಮಂತ್ರೋಕ್ತದಿಂದಲಿ ಇವೆನೂರು ಬೊಮ್ಮಗೆ ।
ಕಂತು ಜನಕ ರಂಗವಟಪತ್ರ ಶಯನನೊ ।
ಎಂತು ಪೇಳಲಿ ಹರಿಯ ಶಕ್ತಿಗೆ ಸರ್ವ ಸ್ವಾ ।
ತಂತ್ರನೊ ಅಜನಬ್ದ ನೂರು ವರುಷ ಪರಿ ।
ಯಂತ ಮಲಗಿಪ್ಪ ಲಕುಮಿ ಸಹಿತವಾಗಿ ।
ಚಿಂತಿತ ಫಲದಾಯ ವಿಜಯ ವಿಠ್ಠಲರೇಯ ।
ಪಿಂತಿನಬೊಮ್ಮನಿಗೆ ಇದರಂತೆ ಫಲಿಸಿದ । ೬

## ಆದಿತಾಳ

ಕಾಲಾತೀತ ವಿಷ್ಣು ಅಣು ಮಹತ್ತುವಾದ
ಕಾಲಪ್ರೇರಕನಾಗಿ ಅನಾದಿಯಿಂದ ವಿಡಿದು ।
ಕಾಲನಾಮಕನೆನಿಸಿ ಸಮಸ್ತ ಜೀವಿಗಳ ।
ಕಾಲಪಾಶದಿ ಸಂಸಾರದೊಳಗಿಟ್ಟು ।
ಕಾಲಕಾಲಕೆ ಮಹ ಸುಳಿಯೊಳು ಸುತ್ತಿಸುವ ।

ಕಾಲ ಮೂರುತಿ ಈತನ ಭಯದಿಂದ ಜಡ ಜೀವರು ।
ಕಾಲ ಮಿರದೆ ಸರ್ವ ತತ್ವಥ ಕೊಡುವರು ।
ಕಾಲದೊಡನೆಯಿಪ್ಪ ಕಾಲಕ್ಕೆ ಸಿಗದಿಪ್ಪ
ಕಾಲತ್ರಯದಲ್ಲಿ ಇನಿತೆನಿಸಿದ ಮಾನವ
ಕಾಲ ಜ್ಞಾನಿಯಾಗುವ ಆವಾವ ದೇಹದಲ್ಲಿ
ಕಾಲನ್ನ ಭೀತಿಯಿಲ್ಲದೆ ಸುಖಿಸುವ ಗೋತ್ರದೊಡನೆ
ಕಾಲಕ್ಕೆ ದೋಷವಿಲ್ಲ ಸು[ಬಂ]ಧದಿಂದ ದು
ಷ್ಕಾಲ ಅಕಾಲವೆಂದು
ಕಾಲ ಕರೆಸಿಕೊಳುತಿಪ್ಪವು ನೋಡಿರೊ
ಕಾಲ (ಕಾಳ) ಕಂಧರವಿನುತ ವಿಜಯ ವಿಠ್ಠಲ ಸರ್ವ
ಕಾಲಕೆ ಗತಿಯನ್ನು ಕಡೆ ಮಾಡುವ ಭವದಿಂದ ೭

## ಜತೆ

ಕಾಲ ವಿವರ ತಿಳಿದು ವಿಜಯ ವಿಠ್ಠಲರೇಯನ ।
ಕಾಲಿಗೆರಗಿ ಬದುಕು ಜ್ಞಾನ ಭಕುತಿಯಿಂದ ೮

೪

## ಧ್ರುವ ತಾಳ

ಅಣುಮಹತ್ತು ಆತುಮರೊಳು ನೆನೆಸಿ.
ನಾನಾ ಬಗೇಯಿಂದ ಗಾತುರ ಇಂದ್ರಿ[ಯ]ಗಳ ತಿಳಿದು
ಭೌತಿಕಾಚ್ಚಾದಿರೊ ಕಾಯನಿಂದಿರದು ಜೀ
ಮೂತದ ಛಾಯವೆನ್ನು ಇಹ ಸೌಖ್ಯ[ದ]
ಮಾತು ಈ ಪರಿ ತಿಳಿದು ಮುದದಿಂದ ಪುಣ್ಯಕ್ಕೆ ಸು
ಕೇತಮಾಡು ಮಾಳ್ಪಮಂತ್ರಗಳಿಗೆ

ಶ್ವೇತ ದ್ವೀಪವಾಸಿ ವಾಸುದೇವ ಮುಖ್ಯ ವಾತಖ
ದ್ಯೋತ ಗುರು ಇವರಲ್ಲಿಟ್ಟು ಆ ತರುವಾಯ
ಈ ತನ್ನ ಹೃತ್ಕಮಲದಲ್ಲಿ ಶ್ರೀ ಕರುಣೀಶನ್ನಧ್ಯಾನಗೈದು
ಈತನ್ನ ಮಧ್ಯದಲ್ಲಿ ಅನಂತ ಅಂಶಾತ್ಮಕ
ಆ ತನ್ನ ತಂದು ಏಕ ಚಿಂತನೇ ಗೈದು
ವಾತಸ್ಪ[ಷಾ]ವಿಲ್ಲದ ದೀಪಾದಂತೇ ಕುಳಿತು
ಜ್ಞಾತಾನುಷ್ಠಾನ ದಿಂದ ಗಮನಾಗಮನಾ ನೋಡು
ಕೌತೂ[ಕ] ವೆ [ನಿ]ಸುತ್ತಿದೆ ಈ ಮಂತ್ರವೋ
ಪೋತಕನಾರಭ್ಯ ಯೌವನ ಜಠರ ವಿಡಿದು
ಪ್ರೇತಯಾಕನ ದೇಹ್ಯ ನರಕಸ್ವರ್ಗ
ಜ್ಯೋತಿರ್ಮಯಾ ಶರೀರ ಪುನರಾ ಜನನಾ ಮರಣಾ
ಈ ತೆರದಲ್ಲಿ ಬಲು ಜನ್ಮಬರಲು
ಭೂತಳ[ದೊ]ಳು ಎಂಭತ್ತು ನಾಲುಕು ಲಕ್ಷಯೋನಿ
ಜಾತನಾದಕಾಲಕ್ಕೂ ಒಳಗಿಪ್ಪಾದು
ಭೂತಿ ಕೊಡುವಾ ಪಿರಿದು ಅಪ್ರಯತ್ನ ಮಂತ್ರ
ಕಾತುರಗೊಡದಯ್ಯ ಅಜ್ಞಾನಿ ಯೇ
ಪ್ರಾತಃ ಕಾಲದಾರಭ್ಯ ಅಪರೋದಯ ಪರ್ಯಂತ
ಆತುಮಾದೊಳು ಸಿದ್ಧ ಸ್ವಚ್ಛಾವೃತ್ತಿ
ಜ್ಞಾತ ಕಾಲಾದಿಂದ ಗತ ಜನ್ಮಂಗಳ ಮಿಶ್ರಾ
ಮಾತಗರ್ಭಾದಿ ಶೇಷ ಪಾರಬ್ಧ
ಗತವಾಗುವತನಕ ಇಂದೆ ಪ್ರಾಣ ಮಂತ್ರಾವೆಂದು
ಪ್ರೀತಿಯಿಂದಾಲಿ ಜಪಿಸೊಧ್ಯಾನೋಕ್ತಾದಿ
ಪಾತಕಾ ನಿನಗಿಲ್ಲ ಕಾಲಕಾಲಕ್ಕೆ ಪುಣ್ಯಾ
ವ್ರಾತ ಬಂದೊದಗೋದು ಆನಂದಕ್ಕೆ

ಶ್ರೀತಾಂಸುರ ವಿಹಸ್ತ(?) ವಿಜಯಾ ವಿಠಲರೇಯಾ
ಭೀತಾರಹಿ ತನ್ನ ಮಾಳ್ಪಮಂತ್ರಾನುಸಂಧಾನಕ್ಕೆ ೧

## ಮಟ್ಟತಾಳ

ಮಂತ್ರಾ ಮಾಡುವ ಬಗೆ ತಿಳಿವುದು ಚನ್ನಾಗಿ
ತಂತ್ರಾಸಾರದಿಂದಾ ಅಂಗಾಂಗುಳಿನ್ಯಾಸ
ಸಂತೋಷದಲ್ಲಿ ಮಾಡು ಧೃಢತರ ಮನಸಿ ನಲ್ಲಿ
ಅಂತರಂಗದಲ್ಲಿ ಸರ್ವರೂಪಾತ್ಮಕ
ಮಂತ್ರದೇವತಿ ಮುಖ್ಯಪ್ರಣವ ಮೂರುತಿಯ ಏ
ಕಾಂತದಲ್ಲಿ ಹೃತ್ಕಮಲ ಕರ್ಣಿಕ ಮಧ್ಯ
ಇಂತಿಹ ಕಮಲಕ್ಕೆ ಷಡಷ್ಟ ದ್ವಾದಶ
ಮುಂತೇ ಚತುರ್ವಿಂಶತಿ ಪ್ರವತ್ತೊಂದು
ಚಿಂತಿಸು ದಳ ಸಂತಿರಿ ಕೋಣೆ ಬೀಜಗಳು
ಯಾತ್ರಾವಾಹನಮ್ಮ ವಿಜಯ ವಿಠಲಾ
ಸ್ವಾತಂತ್ರ ಪುರುಷಾ ಸರ್ವನಿಯಾಮಕ

## ತ್ರಿವಿಡಿತಾಳ

ಮನವೇ ಲಾಲಿಸಿ ಕೇಳು ಅಬ್ಧಾ ಮಂತ್ರಾಕೆ ಜಿ[ತಾ]
ಸನನಾಗು ಜಯಾವೆಂದು ಹರಿಯ ಸ್ತುತಿಸಿ
ಏಣಿಕೆಯಿಂದಾಲಿ ನೋಡು ಒಂದೊಂದು ಮಂತ್ರಕೆ
ಘನವಾಗಿ ವರ್ಣಂಗಾಳುಯಿಪ್ಪಾವೊ ಲೇಸು
ಎಣಿಸೊ ಒಂದೊಂದು ದಳದಲ್ಲಿ ಒಂದೊಂದು
ವರ್ಣ ಮಿನಗೂವ ಮತಿಯಿಂದಯಿಡಲಾವಷ್ಟು
ಯಿನಿತು ಗ್ರಹಿಸು ಇವಕೆ ಒಂದೊಂದು ಹರಿರೂಪ
ಚಿನ್ಮಯ ಮೂರುತಿ ಸರ್ವಭಿನ್ನಾ

ಗುಣವಂತ ಮಂತ್ರಾತ್ಮಕನನ್ನು ಕೂಡಿಸಿ
ಮಣಿಗಣದಿಂದ ಜಪಿಸುವಲ್ಲಿ
ಅನುಭವ ವೀರಕೀ (?) ಮಂತ್ರ ದೇವತ ಸಹಿತ
ಕ್ಷಣ ಕ್ಷಣಕೆ ನಿನ್ನೊಳ ವಲಾಮಾಕಾರ
ಗುಣಿಸೋ ವರ್ಣಾಕ್ಷರ ಆದಿ ಮೂರುತಿಯಲ್ಲಿ
ಗಣನೇ ಮಾಡು ನಿತ್ಯ ನಿನ್ನಾ ನಾಸಗ್ರದ
ಕೊನೇಯಿಂದ ವಾಸಯೋಗ ಮಾಳ್ಪದರೊಳು
ಮಣಿಯಿಂದ ಮಣಿದೆ ಬೆರಳಾಸಾಸೋದು
ಅನುಭಾರತಿ ಪ್ರಿಯ ವಿಜಯವಿಠಲಾ ಸ
ದ್ಗುಣ ಮಣಿ ಖಣಿಯೆಂದು ಅನುದಿನನೆನೆಸಿ ೩

## ಅಟ್ಟತಾಳ

ಇಂದೆ ಮಂತ್ರ ಸಾರ್ಥಕ ಇದೆ ಮಂತ್ರಸಿದ್ಧಿಯೋ
ಇದೆ ಮಂತ್ರಯಿದೆ ಪ್ರಕಾರದಿಂದ ತತು ತತು ಮಂತ್ರಾವ
ವಿಧಿಯಿಂದ ಪದೋಪದಿಗೆ ಬಲು ಒದಗಿ ಮಾಡುವ ಧ್ಯಾನಕ್ಕೆ
ಮುದ ಭಕುತಿಯಿಂದ ಇದರಂತೆ
ಒಂದೇ ಸಾರಿ ನೆನೆದಡೆ ತತ್ಪುಣ್ಯದ
ಉದಧಿ ಸೂಸುವುದಯ್ಯ ಮಧು
ಸೂದನಹರಿ ವಿಜಯ ವಿಠಲರೇಯ
ಪ್ರಧ್ಯಾನವ ಕೊಡುವಾನು ಒಂದೇ ಉಚ್ಚಾರಣೆಗೆ

## ಆದಿತಾಳ

ಮಧ್ಯ ಮೂರುತಿ ಸುತ್ತ ಸೇವಾರೂಪಾದಿಂದ
ಪೊಂದಿಕೊಂಡಿಪ್ಪಾವು ಸ್ವಾಮೂರ್ತಿ ಪರಿವಾರ

ಸಿದ್ಧಾವಾದುದು ಕೇಳು ಜಪವೆ ತಿಳಿಯಾ ಬೇಕು
ಹೃದ್ಗುಹದಲಿ ಇನಿತು ಚಕ್ರಾಬ್ಜ ಮಂಡಲ ಪದ್ಮ
ಸುದರುಶನಗಳಾದಿ ವಿಚಾರ ತಿಳಿದು
ಪದ್ಧತಿ ತಪ್ಪದೆ ಪರಿಭ್ರಮಣವಾಗದೆ ಪದ್ಮ
ಬಾಂಧವ ನಮ್ಮ ವಿಜಯ ವಿಠಲರೇಯ
ಉದ್ಧರಿಸುವ ಬಿಡದೆ ಉನ್ನತ ಗತಿ ಇತ್ತು ೭

## ಜತೆ

ಜನುಮದೊಳು ಒಮ್ಮೆ ಪರಿ ಜಪಿಸಾಲು
ಗುಣತ್ರಯ ನಾಶನ ವಿಜಯ ವಿಠಲ ಪೊಳೆವಾ ೫

೫

## ಧ್ರುವತಾಳ

ಅಣುವೆಂದು ನಿನ್ನನು ಘನವಾಗಿ ಪೂಜಿಸುವೆನೆ
ಅಣುವಲ್ಲ ಅಣುವಲ್ಲ ಅಬುಜನಲ್ಲ
ಘನವೆಂದು ನಿನ್ನ ನಾನು ಅಣು ಮಾತ್ರ ಅರ್ಚಿಸುವೆನೆ
ಘನವಲ್ಲ ಘನವಲ್ಲ ಘನ ಸದೃಶ
ಅಣುವಲ್ಲ ಘನವಲ್ಲ ಘನ ಸದೃಶ
ಏನೆಂಬೆ ನಿನ್ನ ಸೋಜಿಗವು ನೆಲೆಯಿಲ್ಲ
ಅನಿಮಿಷರೀಶ ನಿನ್ನ ಅನಿಮಿಷ ಗಣದವರು
ಎಣಿಸಿ ಗುಣಿಸಿ ಗುಣ ನೆಲೆಗಾಣರೊ
ಮನುಜ ವನಜ ತನುಜ ಜೀವಾದಿಗಳ

ತನುವಿನೊಳಗೆ ಒಂದಿನವಗಲದೆ
ಧನ[ವ] ಕಾಯುವ ಸರ್ಪನ ತೆರದಿನ
ಮ್ಮನು ಪಾಲಿಸುವ ಕಾಸನು ಬೇಡದೆ
ಘನ ಮಹಿಮ ವಿಜಯ ವಿಠಲ
ಮುನಿನುತ ನಿನ್ನ ಅಣು ಘನರೂಪ ಕಾಣೆನೊ ನಾನು

## ಮಟ್ಟತಾಳ

ಪುರುಷರ ಮೋಹಿಸುವ ಪರಮ ಸುಂದರದೇವ
ಪುರುಷೋತ್ತಮ ನೀನೆ ಪುರುಷ ಪ್ರಧಾನನೆ
ಪುರುಷನು ನೀನೆ ಪುರುಷ ಬೀಜನು ನೀನೆ
ಪುರಾರಿ ಪುರಂದರ ಪುರುಷಾರ್ಥವನೀವ
ಪುರುಷ ಮೃಗವ ತಂದ ಪುರುಷನ ಪ್ರಾಣ ಕಿಂ
ಪುರುಷ ವಂದಿತ ಪಾದ ವಿಜಯ ವಿಠ್ಠಲ
ಪರಮ ಪುರಾತನ ಪುರುಷರೂಪತ್ರಯನೆ ೨

## ತ್ರಿವಿಡಿ ತಾಳ

ಪೊಡವಿ ಸಿಂಹಾಸನ, ಕೊಡೆ[ಯೆ] ಗಗನ ನಿನಗೆ
ಮಡುವಿನುದಕ ಗೋವು ಕೊಡೆ ಪಾಲಭಿಷೇಕ
ಅಡವಿ ತುಲಸಿಲತೆ ಗಿಡ ಕುಸುಮ ನಿನ್ನ
ಅಡಿಗೇರಿಸುವೆನಯ್ಯಾ ನುಡಿಮಂತ್ರಗಳಿಂದ
ಬಿಡದೆ ತಿರುಗುವ ರವಿ ಕಡಲಸುತನ ದೀಪ
ಒಡೆಯ ತಾರೆಗಳು ನಿನಗಿಡುವ ಆಭರಣವು
ಬಡಿವಾಣವೆಲ್ಲ ಅಂಗಡಿಯ ಪದಾರ್ಥಗಳು
ಕೊಡುವ ಕಪ್ಪಗಳು ನಿನಗಿಡುವ ಕಾಣಿಕೆ ದೇವ

ಸುಡುವ ದಾವಾಗ್ನಿಯೆ ಕಡುತೇಜದಾರತಿ
ಅಡಿಗಡಿಗೆ ಸಂಶಯ ವಿಡಿಯದಲೆ ನಾನು
ಒಡನೊಡನೆ ಆವಾವ ಎಡಿಯಲ್ಲಿದ್ದವೆಲ್ಲ
ತಡೆಯದೆ ಮನದಲ್ಲಿ ಕೊಡುವೆನರ್ಪಿತವೆಂದು
ಕುಡುತೆ ಜಲಕೆ ಮುಕುತಿ ಕೊಡುವ ವಿಜಯ ವಿಠಲ ೩

## ಅಟ್ಟ ತಾಳ

ಏಳುವಾಗಲಿ ಮುಗ್ಗಿ ಬೀಳವಾಗಲಿ ಹರಟೆ
ಹೇಳುವಾಗಲಿ ವಾರ್ತೆ ಕೇಳುವಾಗಲಿ ದೇಶ
ಆಳುವಾಗಲಿ ಭಾರ ತಾಳುವಾಗಲೆ ಧನ
ಹೂಳುವಾಗಲಿ ಸುಖ ಬಾಳುವಾಗಲಿ ನಿತ್ಯ
ವ್ಯಾಳೆಯಾಗಲಿ ಅವೇಳೆಯಾಗಲಿ ಮನ
ದಾಲೋಚನೆಯೆಲ್ಲ ವಾಲಗ ಹರಿಯೆನ್ನಿ
ವೇಳೆ ಸವಿಯದರ ವೇಳೆ ಸವೆಯಲಿಲ್ಲ
ನಾಲಿಗೆಯಿಂದಲಿ ಪೇಳುವುದಲ್ಲದೆ
ಆಲದೆಲೆಯ ಶಾಯಿ ವಿಜಯ ವಿಠ್ಠಲ ತಾಯಿ
ಲಾಲಿಸಿದಂತೆ ಮಾತಾಲಿಸಿಕೊಂಬ ೪

## ಆದಿತಾಳ

ಎತ್ತಣ ಸಮರ್ಪಣೆ ಎತ್ತಣ ಸಮರ್ಪಣೆಂದು
ಎತ್ತಲಿದ್ದ ಹರಿಯು ಎತ್ತ ತೃಪ್ತನಾಹನೆಂದು
ಚಿತ್ತದಲಿ ಭೇದಗೊಂಡು ತತ್ತಳಿಗೊಂಬುವುದಲ್ಲ
ನಿತ್ಯ ಭಕ್ತಿಯಿಲ್ಲದವನು ಹತ್ತಿಲಿ ಪದಾರ್ಥವೆಲ್ಲ
ಜತ್ತಾಗಿರಿಸಿಕೊಂಡು ಸುತ್ತ ಸಮರ್ಪಣೆಯೆಂದು

ಇತ್ತು ನಲಿದಾಡಿದರೆ ಉತ್ತಮ ಶ್ಲೋಕನು ಒಪ್ಪ
ಚಿತ್ತ ಶುದ್ಧನಾಗಿ ಕರವೆತ್ತಿ ಬಲು ದೀನನಾಗಿ
ಅತ್ತಲಿದ್ದ ಉದಕವು ಅತ್ತಲರ್ಪಿತವೆನಲು
ಚಿತ್ತಜ ಪಿತನು ಮೆಚ್ಚಿ ಚಿತ್ತದಲ್ಲಿ ಒಪ್ಪಿಕೊಂಡು
ಹತ್ತಕ್ಕೆ ನೂರಾರು ಮಾಡಿ ಬಿತ್ತಿ ಬೆಳೆಸಿ ಉಣಿಸುವ
ಇತ್ತ ಬರುವ ಭವದೂರ ವಿಜಯ ವಿಠ್ಠಲರೇಯ
ಎತ್ತಲಾದರೇನು ತನ್ನ ಭೃತ್ಯನೆಂದರೊಡಂಬಡುವ ೫

## ಜತೆ

ಅಚ್ಚುತಗರ್ಪಿತವೆಂದು ದಾಸರೆನಲು ಕಲ
ಗಚ್ಚು ಕೂಡಿದ ಕಾಣೊ ವಿಜಯ ವಿಠ್ಠಲ ಮೆಚ್ಚಿ ೬

## ೬

## ಸುಳಾದಿ – ಧ್ರುವತಾಳ

ಅತ್ಯಣು ಜೀವವಿದೆ ಅನಾದಿಯಿಂದ ಸಿದ್ಧ ।
ನಿತ್ಯವಾಗಿಪ್ಪದು ಶ್ರೀಹರಿಯಾ ।
ಭೃತ್ಯನೆಂದೆನಿಪುದು ಬಹುಕಾಲದಲ್ಲಿ ತಪ್ಪದಲೆ ।
ಸತ್ಯವೊಇದೆ ನಿಜ ಶ್ರುತಿಯಲ್ಲಿ ಸಾರಿಸಾರಿ ಕೃತ ।
ಕೃತ್ಯವಾಗುತಿಪ್ಪರು ಬ್ರಹ್ಮಾದ್ಯರು ।
ಸತ್ಯ ಲೋಕಧೀಶ ಸರ್ವ ಜೀವಿಗಳೊಳು ।
ಸ್ತುತ್ಯನು ಕಾಣೊ ಸರ್ವದ ನಿರ್ಮಲ ।
ಕೃತ್ತಿವಾಸನಿಂದಲಿತ್ತ ವುಳ್ಳವರಾರು ಪ್ರಾ ।
ಕೃತ ಬದ್ಧವಾದ ಕಲಿ ಆವಿಷ್ಟ ।

ತತ್ತಳಗೊಳಿಪುದು ಅವರವರ ಯೋಗ್ಯತದ ।
ನಿತ್ತು ಕಾಲವನನ್ನು ಪರೀಕ್ಷಿಸಿ ।
ಸತ್ವಾದಿ ಪರಿಚ್ಛೇದವುಳ್ಳ ಲಿಂಗದೇಹ ।
ಹತ್ತಿ ಕೊಂಡಿಪ್ಪದು ತ್ರಿವಿಧರಿಗೆ ।
ಉತ್ತುಮ ಜ್ಞಾನಿಗಳಿಗೆ ಮೊದಲು ಪರಿಚ್ಛೇದ ।
ಸತ್ವಗುಣದ ಆವರಕವೆನ್ನಿ ।
ನಿತ್ಯ ಸಂಸಾರಿಗಳಿಗೆ ರಾಜಸ ಗುಣವಹುದು ।
ಮತ್ತೆ ತಮೋಯೋಗ್ಯರಿಗೆ ತಮೋಪರಿಚ್ಛೇದ ।
ಪ್ರತ್ಯೇಕವಾಗಿಪ್ಪದು ಒಂದಕ್ಕೊಂದು ಬಿಡದೆ ।
ಜತ್ತಾಗಿ ಕಾರಣವೆನಿಸಿ ಕೊಳುತ ।
ಎತ್ತ ನೋಡಿದರತ್ತ ಜೀವನ ಪ್ರಕಾಶ ।
ಸುತ್ತುವಂತೆ ಮಾರ್ಗವ ಕೊಡುತ ।
ಉತ್ತರೋತ್ತರದಿಂದ ತಮ ತಮ ಗುಣದ ಕಾರ್ಯ ।
ವಿತ್ತವದಲ್ಲದೆ ಬಿಡದು ತ್ರಿವಿಧರಿಗೆ ।
ಉತ್ತರ ಲಾಲಿಸೆ ಅಭಾವ ಜ್ಞಾನ ।
ಹೊತ್ತು ಹೊತ್ತಿಗೆ ಬರುತಲಿಪ್ಪವು ।
ಕತ್ತರಿಸಿ ಲಿಂಗ ಪೋಗುವ ಪರಿಯಂತ ।
ನಿತ್ಯಭಾವ ಜ್ಞಾನ ಅವರಿಗಿಲ್ಲ ।
ಬಿತ್ತರಿಸಿ ಅಲ್ಲಿಯಿದ್ದ ಪರಿಚ್ಛೇದಕೆ ।
ಕರ್ತಳಾಗಿಪ್ಪಳು ಶ್ರೀ ಭೂದುರ್ಗನಾಮ ।
ತತ್ತಳಿಸುತಿಪ್ಪ ಸ್ಥಾನದಲ್ಲಿ ।
ಎತ್ತಿ ದ್ವಾರವನ್ನು ಪಾದದಲ್ಲಿ ಮುಚ್ಚಿ ।
ವೃತ್ತಿರೂಪ ಜ್ಞಾನ ಕೊಡುತಿಪ್ಪಳು ।
ತತ್ವೇಶರು ಲಿಂಗದೇಹದಲ್ಲಿ ಯಿಲ್ಲ ।

ಎತ್ತ ನೋಡಿದರತ್ತ ಸಿರಿವ್ಯಾಪ್ತಳು ।
ಕರ್ತನು ಸರ್ವರಿಗೆ ವಿಜಯ ವಿಠ್ಠಲರೇಯ ।
ಅತ್ಯಂತ ಮಹಿಮನು ಸಕಲರಿಗೆ ಪ್ರೇರಕ ೧

## ಮಟ್ಟ ತಾಳ

ಪ್ರಥಮ ಪರಿಚ್ಛೇದದಲಿ ಮನಸುವುಂಟು ।
ದ್ವಿತೀಯ ಪರಿಚ್ಛೇದದಲಿ ದಶೇಂದ್ರಿಯಗಳು ।
ತೃತಿಯ ಪರಿಚ್ಛೇದದಲಿ ಶಬ್ದಾದಿಗಳು ।
ಚ್ಯುತವಾಗದೆಯಿಪ್ಪವು ಕಾರಣ ರೂಪದಲ್ಲಿ ।
ಪ್ರತಿ ಪ್ರತಿ ಕಲ್ಪಕ್ಕೆ ಪೂವಿಗೆ ಪರಿಮಳ ವ್ಯಾ ।
ಪುತವಾಗಿದ್ದಂತೆ ಪೊಂದಿಕೊಂಡಿಪ್ಪವು ।
ಕೃತಿರಮಣ ನಮ್ಮ ವಿಜಯ ವಿಠಲ ತಾನೆ ।
ಸತತ ಜೀವರ ಕೈಯ್ಯ ಚೇಷ್ಟಿಯ ಮಾಡಿಸುವ ೨

## ತ್ರಿವಿಡಿ ತಾಳ

ಅಲ್ಲಿಂದ ಬಿಂದುಗಳು ಉದುರಿಸಿದ ಸಿರಿ ।
ವಲ್ಲಭನು ಲಿಂಗದೇಹದೊಳಗಿದ್ದು ।
ಅಲ್ಲಾಡಿಸಲು ಆಗ ಅನಿರುದ್ಧ ಶರೀರ ।
ಎಲ್ಲ ಜೀವರಿಗೆ ಸಿದ್ಧವಾಯಿತು ।
ಸೊಲ್ಲು ಲಾಲಿಸಿ ಕೇಳಿ ಈ ವಿವರವಾಣಿ ।
ನಲ್ಲನಿಂದ ವಿಡಿದು ಕ್ರಮಾನುಸಾರ ।
ಸೊಲ್ಲುವೊಂದೊಂದು ಅಧಿಕಾರವಾಗಿ ದೇಹ ।
ನಿಲ್ಲದೆ ಇಪ್ಪದು ಪ್ರಥಿವಿ ತನಕ ।
ಬಲ್ಲದ್ದೆ ಸರಿ ಅನಿರುದ್ಧ ಶರೀರಕ್ಕೆ ।
ಎಲ್ಲ ತಾತ್ವಿಕರು ಅಭಿಮಾನ್ಯರೊ ।

ಬಲ್ಲಿದ ಬೊಮ್ಮಗೆ ರುದ್ರಾದಿಗಳಿಂದ ।
ಇಲ್ಲವಯ್ಯ ಮಾಳ್ಪ ಪ್ರಯೋಜನ ।
ಖುಲ್ಲಮರ್ದನ ನಮ್ಮ ವಿಜಯ ವಿಠ್ಠಲರೇಯ ।
ನಲ್ಲದೆ ಮತ್ತೊಬ್ಬನಿಲ್ಲ ಸ್ವಾತಂತ್ರನು ೩

## ಅಟ್ಟತಾಳ

ಶ್ರೀ ರಮಣನಾಗಿ ವಿಷ್ಣು ಎನಿಸಿಕೊಂಬ ।
ಭೂರಮಣನಾಗಿ ಬ್ರಹ್ಮನೆನಿಸಿಕೊಂಬ ।
ದುರ್ಗಾ ರಮಣನಾಗಿ ರುದ್ರನೆನಿಸಿಕೊಂಬ
ನಾರಾಯಣ ತಾನೆ ಈ ಪರಿಯಲ್ಲಿಪ್ಪ ।
ಕಾರಣಕಾರ್ಯ ಶರೀರ ತಪ್ಪದೆ ।
ಮೂರು ಗುಣದ ವ್ಯಾಪಾರ ಮಾಡಿಸುವ ।
ಸಾರ ಹೃದಯವಾಸಿ ಸಿರಿ ವಿಜಯ ವಿಠ್ಠಲರೇಯ ।
ಸಾರಿದವರ ಸಂಸಾರ ಉತ್ತರಿಸುವ ೪

## ಆದಿತಾಳ

ಪ್ರತಿ ಪ್ರತಿ ದೇಹದಲ್ಲಿ ಈ ಬಗೆ ದೇವ ದೇ ।
ವತೆಗಳುಂಟು ಆ ತಮ್ಮ ವ್ಯಾಪಾರ ಮಾಡಿಸುತ ।
ಪ್ರತಿಕೂಲವಾಗರು ನೀಚರುತ್ತಮ್ಮರಿಗೆ ।
ಹಿತವಾಗಿ ಇಪ್ಪರು ಉತ್ತಮರು ನೀಚರಿಗೆ ।
ಚತುರವಿಧ ತಿಳಿ ಅಜ್ಞಾನ ಅಪೂರ್ಣ ।
ಸತು ಉಪಜೀವನ ಜೀವಿಗಳಿಗೆ ಉಂಟು ।
ಸತುವ ಮೂರುತಿ ನಮ್ಮ ವಿಜಯವಿಠ್ಠಲರೇಯ ।
ಮತಿಯ ಕೊಡುವನು ಇಂದ ಗುಣಿಸಿದ ಜನರಿಗೆ । ೫

## ಜತೆ

ಧ್ಯಾನವನ್ನೆ ಮಾಡು ದಾಸಭಾವವೆ ವಹಿಸಿ ।
ಜ್ಞಾನದಾಯಕ ವಿಜಯವಿಠ್ಠಲನ್ನ ಪೂಜಿಸು ೬

## ೭

## ಧ್ರುವತಾಳ

ಅನಂತಕಾಲದೊಳಗೊಂದೆ ಕಾಲವಿದೆ
ಅನಂತಾನಂತ ದೇಶದೊಳಗೊಂದೆ ದೇಶವಿದೆ
ಅನಂತ ಗುಣ ದೊಳುಗೊಂದೆ ಗುಣವಿದೆ
ಅನಂತಾನಂತ ಕರ್ಮದೊಳಗೊಂದೆ ಕರ್ಮವಿದೆ
ಅನಂತಾನಂತ ಜನುಮದೊಳಗೊಂದೆ ಜನುಮವಿದೆ
ಅನಂತಾನಂತ ಯಾತ್ರಿಯೊಳಗೊಂದೆ ಯಾತ್ರಿಯಿದೆ
ಅನಂತಾನಂತ ತೀರ್ಥದೊಳಗೊಂದೆ ತೀರ್ಥವಿದೆ
ಅನಂತಾನಂತ ಶ್ರುತಿಯೊಗೊಂದೆ ಶ್ರುತಿಯಿದೆ
ಅನಂತಾನಂತ ಮಂತ್ರದೊಳಗೊಂದೆ ಮಂತ್ರವಿದೆ
ಅನಂತಾನಂತ ವರ್ಣದೊಳಗೊಂದೆ ವರ್ಣವಿದೆ
ಅನಂತಾನಂತ ದ್ರವ್ಯದೊಳಗೊಂದೆ ದ್ರವ್ಯವಿದೆ
ಅನಂತಾನಂತ ಜಾಂಡಜಾಂಡದೊಳಗೊಂದೆ ಜಾಂಡವಿದೆ
ಅನಂತಾನಂತ ಕಲ್ಪದೊಳಗೊಂದೆ ಕಲ್ಪವಿದೆ
ಅನಂತಾನಂತ ಯುಗದೊಳಗೊಂದೆ ಯುಗವಿದೆ
ಅನಂತಾನಂತ ಕಾಲದೊಳಗೊಂದೆ ಕಾಲವಿದೆ
ಅನಂತಾನಂತ ಒಂದೆ ಒಂದೊಂದೆ ಅನಂತಾನಂತ

ಅನಂತ ಗುಣಪೂರ್ಣ ವಿಜಯ ವಿಠಲರೇಯಾ
ಅನಂತ ಜೀವರಾಶಿಯೊಳು ಒಂದು ಜೀವ ನಾನಾ ೧

## ಮಟ್ಟ ತಾಳ

ಅನಂತ ಮೂರ್ತಿಯೊಳಗೊಂದೆ ಮೂರ್ತಿಯಿದೆ ಅನಂತಾ
ಅನಂತ ನಾಮದೊಳಗೊಂದೆ ನಾಮವಿದೆ ಅನಂತಾ
ಅನಂತ ಸ್ಮರಣೆಯೊಳಗೊಂದೆ ಧ್ಯಾನವಿದೆ ಅನಂತಾ
ಅನಂತಾನಂತಾ ಅನಂತ ಬಗೆ ವಿಜಯ ವಿಠಲರೇಯಾ
ಅನಂತಾವತಾರ ಅನಂತ ಚರಿತಾ ೨

## ತ್ರಿವಿಡಿ ತಾಳ

ತೃಣ ಜೀವರಾಶಿಗಳು ಬೊಮ್ಮನ ತನಕವರು
ಗುಣದಲ್ಲಿ ಪರಮಾಣು ಪ್ರಾದೇಶದಿ
ಎಣಿಸಿ ನೋಡುವರಯ್ಯಾ ತಮ್ಮ ಯೋಗ್ಯತದರಿತು
ಎಣಿಕೆ ಅಧಿಕಾಧಿಕವೆನಿಸಿ
ಇನಿತಲ್ಲದೆ ಲಕುಮಿ ಬೊಮ್ಮನ ನೋಡಲು
ಗಣನೆ ಇಲ್ಲದೆ ಒಂದಾನಂತ ಮಡಿಯಾಗಿ
ಮನದಲ್ಲಿ ಕಾಂಬಳು ಲೇಶ ಬಿಡದೆ
ಜನುಮರಹಿತ ನೀನೆ ಲಕುಮಿ ನೋಡಿದರೊಳು
ಅಣು ಅತ್ಯಣುಗಳು ಕಾಣುತಿಪ್ಪೆ
ನಿನಗೆ ನಿನ್ನಿಚ್ಛೆಗೆ ಭೇದ ಎಂದಿಗಿಲ್ಲಾ
ಚಿನುಮಯ ರೂಪನೆ ತತ್ವ ಮೋದಾ
ಅನಿಮಿಷಾದಿಗಳಿಗೆ ಸೋಜಿಗ ತೋರುವ
ಘನ ಮಹಿಮಾ ವೈಕುಂಠವಾಸಾ ಶ್ರೀಶಾ

ತನು ಹತ್ತು ಇಂದ್ರಿಯಂಗಳು ಚಿತ್ತ ಬುದ್ಧಿಯು
ಮನ ಅಹಂಕಾರ ನಾನಾ ವರ್ಣನೆ
ತನುರೂಹ ಸರ್ವಾವಯವಗಳು ಜ್ಞಾನಪೂ
ರಣನಾಗಿ ಇಪ್ಪ ಸ್ವಂತಂತ್ರ ಪುರುಷರ್ಚನೆ ಮಾಡಿ
ನಿನ್ನ ಮೆಚ್ಚಿಸ ಬಲ್ಲನೆ ದೇವಾ
ಎನಗಾವದು ನಿನ್ನ ನೆಲೆಯೆ ತಿಳಿಯೆ
ಬಿನಗು ದೈವದೊಡಿಯಾ ವಿಜಯವಿಠ್ಠಲ ನಿನ್ನ
ನೆನಹೆ ಮುಕ್ತಿಗೆ ಮಾರ್ಗವೆಂಬೋದೆ ಶ್ರುತಿಸಿದ್ದಾ ೩

### ಅಟ್ಟತಾಳ

ಧರಣಿ ಉದಕ ತೇಜ ವಾಯು ಅಂತರಿಕ್ಷಾ
ಸ್ಪರಶ ರೂಪರಸ ಗಂಧ ಶಬ್ಧ ಮಿಗಿಲಾದ
ಪರಮಾಣುಗಳು ಚತುರವಿಂಶತಿ ತತ್ವ
ವಿರುತಿರೆ ಅತಿ ಸೂಕ್ಷ್ಮವಾಗಿ ಅದರೊಳು
ಹರಿನಿನೇ ಅಂಥ ಪರಮಾಣುಗಳಲ್ಲಿ
ಪರಿ ಪರಿ ಬಗೆಯಿಂದಲಿ ಒಳಗಿಪ್ಪೆ ಕಾಣುತ್ತ
ನಿರುತ ನೀನರಿಯದ ದ್ರವ್ಯಂಗಳ ತಂದು
ವರ ಪೂಜೆ ಮಾಡು ಎಂದರೆ ಆವದಿಪ್ಪದು
ಚರಾಚರದಲ್ಲಿ ಪ್ರಾಣ ಪ್ರಕೃತಿ ನೀನಲ್ಲದೆ
ತಿರುಗುವ ವ್ಯಾಪಾರ ಮತ್ತಾವದು ಪೇಳೋ
ಚರಣದಲ್ಲಿ ಧರೆ ಅಳೆದ ಮಹಾತುಮಾ
ಸರಿಯಿಲ್ಲ ನಿನಗೆಲ್ಲಿ ವಿಜಯ ವಿಠ್ಠಲ ಎನ್ನ
ಇರವ ಬಲ್ಲವನಿಗೆ ವಿಸ್ತರಿಸುವುದೇನೊ ೪

## ಆದಿತಾಳ

ಸನಕಾದಿ ಮುನಿ ಮನುಗಳು
ಅನಿಮಿಷಗಣ ಪಾಕಶಾಸನ ರುದ್ರ
ಪನ್ನಗ ಖಗ ವನಜಭವನ ಮನಕೆ ತೋರದಾ
ಕಣ್ಣಿಗೆ ಪೊಳೆಯದ ಚಿನುಮಯ ಅನ್ನಮಯಾ
ಘನಕೆ ಘನ ನಿನ್ನ ಪೂಜೆಯನ್ನು ಮಾಡಿ
ದಣಿಸುವನಾರು ಬಣ್ಣಿಸಲರಿದು ಬಿ
ನ್ನಾಣದಲ್ಲಿ ಎನ್ನ ಭವದ ಬನ್ನ ಬಿಡಿಸೊ
ಅನಂತಾನಂತ ಚನ್ನ ಮೂರುತಿ ವಿಜಯ ವಿಠ್ಠಲ
ನಿನ್ನ ಪಾದವನ್ನು ನಂಬಿದೆ ೫

## ಜತೆ

ನನ್ನಂಥವನ ಪೂಜೆಯಿಂದ ನಿನಗೇನು
ಅನಂತಾನಂತನೆ ವಿಜಯ ವಿಠ್ಠಲ ಸುಲಭಾ ೬

## ೮

## ಧ್ರುವತಾಳ

ಅನಂತ ಬೊಮ್ಮಾಂಡ ನಿನ್ನುದರದಲ್ಲಿ ಯಿಟ್ಟು
ಅನಂತ ಬೊಮ್ಮಾದಿಗಳ ನಿನ್ನೊಳಗಡಗಿಸಿ ಕೊಳುತ
ಅನಂತ ಸರ್ವದಲ್ಲಿ ನೀನೆ ನೀನೆ
ಅನಂತ ಮಹಿಮೆಯ ತೋರುತಲಿ
ಅನಂತ ಅನಂತ ಅವತಾರ ಮಾಡುತ್ತ
ಅನಂತ ಗುಣ ಪರಿಪೂರ್ಣ ನೀಲವರ್ನಾ

ಅನಂತ ನದಿ ಜನಕ ವಿಜಯ ವಿಠ್ಠಲ ನೀನೆ
ಅನಂತ ಪರಿಯಲ್ಲಿ ನಾಟಕ ಕರ್ತಾ ೧

### ಮಟ್ಟತಾಳ

ಬಹು ಶಿರಸಾ ಬಹು ಕರ್ನಾ ಬಹುನಯನಾ ಬಹುನಾಸಾ
ಬಹುವದನಾ ಬಹುಬಾಹು ಬಹುಹಸ್ತ ಬಹುಕಂಠ
ಬಹುಉದರಾ ಬಹುಕಟಿ ಬಹುಜಾನು ಬಹುಜಂಘೆ
ಬಹುಚರಣಾ ಬಹುನಖಾ ಬಹು ಮೂರುತಿ
ವಿಜಯ ವಿಠ್ಠಲರೇಯಾ
ಬಹುಕಾಲದ ಹಿರಿಯ ಬಹುವಿಧ ಪಾಲಿಸು ೨

### ತ್ರಿವಿಡಿ ತಾಳ

ಜನನ ಮರಣಾರ್ಭಕತನ ಯೌವ್ವನ ಜರೆ
ತನ ನಾನಾಕಾ ಮನಸಿನ ವ್ಯಾಪಾರಂಗಳು
ಇನಿತು ನಿರ್ಮಾಣವ ಎನಗೆ ಕಲ್ಪಿಸಿಕೊಟ್ಟು
ದಣಿಸುವುದುಚಿತವೆ ದನುಜಾಂತಕಾ
ಮನುಮಥ ಜನಕ ನಮ್ಮ ವಿಜಯ ವಿಠ್ಠಲರೇಯಾ
ನಿನಗೆ ಈ ಪರಿ ವ್ಯಾಪಾರವೇ ಬಲು ಲೇಸು ೩

### ಅಟ್ಟತಾಳ

ಇದರಿಂದ ನಿನಗೆ ಕಾಲಕ್ಷೇಪವಿದ್ದರೆ
ಅದರಂತೆ ಮಾಡಿ ಎನ್ನನು ಪುಟ್ಟಿಸಲಿಬೇಕು
ಮಧು ಸೂದನ ರಂಗಾ ವಿಜಯ ವಿಠ್ಠಲರೇಯಾ
ಚದುರತನ ವೆಂಬೊದದಟ ಒಂದಲ್ಲದಲೆ ೪

## ಆದಿತಾಳ

ಆರಗೊಡವಿ ಏನು ಎನಗೆ ಆರ ಸಂಗವೇನು ಎನಗೆ
ಆರಿಂದಲೇನುಪಕಾರವಾಗೊದೆನಗೆ ಮುಂದೆ
ಆರನಾದರೇನು ನೀನುದ್ಧಾರವನ್ನು ಮಾಡು ಬಿಡು
ಕೋರುವನಾನಲ್ಲ ಎನ್ನ ಓರಂತೆ ಮಾಡು ಎಂದು
ಶ್ರೀರಮಣ ವಿಜಯ ವಿಠಲಾಪಾರ ಮಹಿಮ ಪರಿಪೂರ್ಣ
ಮೂರುತಿ ಮುರಾರಿ ಸರ್ವಾಧಾರಿ ವಾರಿಸ ವದನಾ ೫

## ಜತೆ

ಹೊಸ ಪರಿಯ ವ್ಯಾಪಾರ ನಿನ್ನಲ್ಲಿ ಇರಲಾಗಿ
ಅಸುರ ರಿಪು ವಿಜಯ ವಿಠಲ ಎನಗೆ ಇನಿತೊ ೬

## ೯

## ಧ್ರುವತಾಳ

ಅನ್ನಾಭಿಮಾನಿ ಚಂದ್ರ ಅಲ್ಲಿ ಕೇಶವ ಪರ
ಮಾನ್ನದಲ್ಲಿ ಭಾರತೀ ನಾರಾಯಣ
ಪೂರ್ಣಭಕ್ಷಗಳಲ್ಲಿ ಸೂರ್ಯ ಮಾಧವ ಘೃತಕೆ
ಕನ್ಯಾ ಲಕುಮಿ ಅಲ್ಲಿ ಗೋವಿಂದನೋ
ಬೆಣ್ಣೆ ಪಾಲಿನಲ್ಲಿ ಸರಸ್ವತಿ ವಿಷ್ಣು ಶಿರೋ
ರನ್ನ ಮಂಡಿಗಿಯಲ್ಲಿ ವಾಗೀಶ ಮಧುಸೂದನ
ಬೆಣ್ಣೆಯಲ್ಲಿ ವಾಯು ಅಲ್ಲಿ ತ್ರಿವಿಕ್ರಮಾ
ಘನ್ನ ದಧಿಯಲ್ಲಿ ಚಂದ್ರ ವರುಣ ವಾಮನ

ಚನ್ನ ಸೂಪಿನಲ್ಲಿ ಗರುಡ ಶ್ರೀಧರ ದೇವ
ಮುನ್ನೆ ಪತ್ರಶಾಖ ಮಿತ್ರನು ಹೃಷಿಕೇಶ
ಇನ್ನು ಫಲಶಾಖಗಳಲ್ಲಿ ಸರ್ವ ಪದುಮನಾಭ
ಬಣ್ಣಿಪೇ ಆಮ್ಲದಲ್ಲಿ ಪಾರ್ವತಿ ದಾಮೋದರ
ಅನ್ನಾಮ್ಲಪತಿ ರುದ್ರ ಅಲ್ಲಿ ಸಂಕರುಷಣ
ಕಣ್ಣಿಗೆ ಇಂಪಾದ ಸಕ್ಕರಿಯಲ್ಲಿ ಸುರವ
ರೇಣ್ಯ ಇಂದ್ರನು ತದ್ಗತ ವಾಸುದೇವ
ಪನ್ನಗಶಾಯಿ ನಮ್ಮ ವಿಜಯ ವಿಠ್ಠಲರೇಯನ ಪಾ
ವನ್ನ ಮೂರ್ತಿಯ ನೆನಸಿ ಪವಿತ್ರ ನೀನಾಗೊ ೧

## ಮಟ್ಟತಾಳ

ಪರಿಪರಿ ಸೋಪಸ್ಕಾರದಲ್ಲಿಗೆ ಅಭಿಮಾನಿ
ಪರಮೇಷ್ಠಿ ಎನ್ನಿ ಆತಗೆ ಪ್ರದ್ಯುಮ್ನ
ತರುವಾಯ ಕಟುದ್ರವ್ಯಕೆ ಯಮರಾಯಾ
ಇರುತಿಪ್ಪನು ಅಲ್ಲಿ ಅನಿರುದ್ಧ ಮೂರುತಿ ದೇವರು
ಸರಕು ಸಂಭಾರಗಳು ಇಂಗು ಸಾಸಿವಿ ಏಳಾ
ಮರೀಚಿ ಜೀರಿಗಿ ಮೊದಲಾದ ಕರ್ಪೂರ ಚಂದನ ಕೇ
ಶರ ಮೊದಲಾದ ಬಗೆ ಬಗೆ (ಪರಿಪರಿ) ವಿಧವಾದ
ಪರಮಳ ದ್ರವ್ಯಕ್ಕೆ ಮನುಮಥ ಅಧಿಪತಿ
ಪುರುಷೋತ್ತಮ ದೇವನು ವಾಸವಾಗಿಹನಯ್ಯಾ
ಪರೀಕ್ಷಿಸು ತೈಲ ಪಕ್ವ ಜಯಂತಾ
ವರ ಅಧೋಕ್ಷಜ ಮೂರ್ತಿ ಪೊಂದಿಕೊಂಡು ನಿತ್ಯ
ಮರಳೆ ಸಂಡಿಗೆಯಲ್ಲಿ ದಕ್ಷಪ್ರಜೇಶ್ವರಾ
ನರಹರಿ ಅಲ್ಲಿಪ್ಪ ಅದ್ಭುತ ಕಾರ್ಯನು

ಅರೆಮರೆ ಇಲ್ಲದೆ ಉದ್ಧಿ ಭಕ್ಷದಲಿ
ಇರುತಿಪ್ಪನು ಮನು ಅಲ್ಲಿ ಅಚ್ಯುತಮೂರ್ತಿ
ಸುರುಚಿ ಲವಣದಲಿ ನಿರಋತಿ ಜನಾರ್ಧನ
ಸ್ಥಿರವೆನ್ನಿ ಲವಣ ಶಾಖಕ್ಕಭಿಮಾನಿ
ಮರೀಚಿ ಪ್ರಾಣನು ಅಲ್ಲಿ ಉಪೇಂದ್ರ ಭಗವಂತ
ಪರಮ ಶೋಭಿತ ತಾಂಬೂಲ ದ್ರವ್ಯಕೆ ಗಂಗಾ
ಹರಿನಾಮಕ ದೇವ ಸ್ವಾದೋದಕದಲ್ಲಿ
ತರಣಿ ಸಮನ ಪುತ್ರ ಶ್ರೀ ಕೃಷ್ಣನು ಎನ್ನಿ
ಸುರರ ಮಸ್ತಕ ಮಣಿ ವಿಜಯ ವಿಠ್ಠಲರೇಯಾ
ಸ್ಮರಿಸಿದ ಸುಜನಕೆ ತಿಳಪುವ ಇದರಂತೆ ೨

## ತ್ರಿವಿಡಿ ತಾಳ

ಪಾಕಶುದ್ಧಿಗೆ ಪುಷ್ಕರ ಹಂಸನಾಮಕದೇವ
ಬೇಕಾದ ಸ್ವಾದರಸಗಳಿಗೆ ರತಿ ವಿಶ್ವಾ
ಕಾಕುಲಾತಿ ಸಲ್ಲ ವಲಿಗೆ ಪಾವಕ ಭೃಗು
ನೀ ಕೇಳು ಶುಷ್ಕ ಗೋಮಯ ಪಿಂಡಕ್ಕೆ ಈರ್ವರ
ಓಕುಳಿ ನಾಮಕ ವಸಂತ ಋಷಭನು
ಪಾಕಕರ್ತಳು ಶ್ರೀದೇವಿ ವಿಶ್ವಂಭರ ವೇ
ದಿಕ ಮಂಟಪ ಸಹ ಭೂದೇವಿ ಸೂಕರ
ಆಕಾಶಭಾಗಕ್ಕೆ ಗಣಪತಿ ಕುಮಾರ
ಶ್ರೀ ಕಾಂತನೀತನೊ ಅವರ್ಣಕ್ಕಭಿಮಾನಿ
ಸಾಕಾರವಾಗಿದ್ದ ವಿಷ್ವಕ್ಸೇನ ಪುರುಷಾ
ಲೋಕ ಪವಿತ್ರ ತುಲಸಿಯಲ್ಲಿ ರಮಾ ಕಪಿಲ
ರಾಕೇಂದುವಿನಂತೆ ಪಾಕ ಪಾತ್ರಿಗೆ ಕೇಳು

ಕಾಕೋದರನ ರಾಣಿ ವಾಣಿ ಅನಂತಾ (ಅನ್ನದಾ)
ಲೋಕಾಂಬಕನಂತೆ ಪೊಳೆವ ಭೋಜನ ಪಾತ್ರಿಗೆ
ಲೋಕ ಜನನಿ ದುರ್ಗಾ ಹರಿರಾಣಿ ಸತ್ಯ
ಶೋಕ ಕಳೆವ ನಾನಾ ಮಾಡ ತಿದ್ದಿದ ಮಾ
ಣಿಕಮಯ ಬಟ್ಟಲಿಗೆ ಸೌಪರ್ಣಿದತ್ತನು
ಶ್ರೀ ಕಳತ್ರ ನೆಮ್ಮ ವಿಜಯವಿಠಲರೇಯ ವೀ
ವೇಕವಂತರ ಚಿತ್ತದಲ್ಲಿ ಕೈಕೊಂಬನು ೩

## ಅಟ್ಟತಾಳ

ಓದನ ಸರಸ್ವತಿ ಪರಮೇಷ್ಠಿ ಮಾಳ್ಪರು
ಶ್ರೀದೇವಿ ಚೆನ್ನಾಗಿ ಸೂಪಾ ಮಾಳ್ಪಳು ಕೇಳಿ
ಆದಿ ಜಗದ್ಗುರು ಭಕ್ಷಮಾಳ್ಪನು ರುಚಿ
ಯಾದ ಪರಮಾನ್ನ ಭಾರತಿ ಮಾಳ್ಪಳು
ಸ್ವಾದ ಶಾಖೋ ಪಶಾಖಾದಿಗಳು ಇಂದ್ರಾದಿ ಶ
ಚ್ಯಾದ್ಯರು ಮಾಡುವರು ಇನಿತು
ಮಾಧವನ ಮುಂದೆ ನೈವೇದ್ಯ ಇಡ ಬೇ
ಕಾದ ಲಕ್ಷಣ ತಿಳಿ ತಾರತಮ್ಯ ದಿಕ್ಕು
ಭೇದಗಳಿಂದಲಿ ಅಗ್ನಿ ಕೋಣೆಗೆ ಭಕ್ಷಾ
ಐದು ಮೌಳಿಯ ದಿಕ್ಕಿನಲ್ಲಿ ಪರ ಮಾನ್ನಾ
ವಾದವಿಲ್ಲದೆ ನೈಋತ್ಯ ಕೋಣೆಲಿ ಲೇ
ಹ್ಯಾದಿಗಳಿಡಬೇಕು ಭೂತ ವಾಯುವಿನಲ್ಲಿ
ಆದರಿಸಿ ವ್ಯಂಜನ ಪದಾರ್ಥಂಗಳು
ಮೋದದಲಿ ಇಟ್ಟು ಇದರ ಮಧ್ಯದಲ್ಲಿ
ಓದನ ಪಾತ್ರೆಯ ಇಡಬೇಕು ಪರಮಾನ್ನ
ಓದನದೆಡೆಯಲ್ಲಿ ಘೃತಪಾತ್ರದಧಿ ಮೊದ

ಲಾದವು ಸ್ಥಾಪಿಸಿ ಬದಿಯಲ್ಲಿ ತಾಂಬೂಲ
ಸ್ವಾದೋದಕವಿಟ್ಟು ದೇವಂಗೆ ಕೈಮುಗಿದು
ವೇದ ಮಂತ್ರಗಳಿಂದ ತುತಿಸಿ ಕೊಂಡಾಡುತ
ಬೋಧ ಮೂರುತಿ ನಮ್ಮ ವಿಜಯ ವಿಠ್ಠಲರೇಯ
ಆದಿ ಪೊರಬೊಮ್ಮ ಆತ್ಮನೆಂದು ನೆನಿಸೊ (ತಿಳಿಯೊ) ೪

## ಆದಿತಾಳ

ಭೋಜನ ಪಾತ್ರಿ ಮಂಡಿಸಿ ಮೊದಲು ದಿವ್ಯಾನ್ನ ವಿ
ರಾಜಿಸುವ ಲವಣ ವ್ಯಂಜನಾದಿ ದ್ವಿತೀಯದಲ್ಲಿ
ಮಾಜದೆ ಸಾರುವೆ ಇದರ ತರುವಾಯಾ
ತೇಜವಾಗಿದ್ದ ಭಕ್ಷ ಸರ್ವವು ಇಡಬೇಕು
ಮೂಜಗತ್ಪತಿ ರಂಗಾ ಇನಿತು ಕೈಕೊಂಬನೆಂದು
ನೈಜಭಾವದಿಂದ ಚಿಂತಿಸಬೇಕು ನೋಡಿ
ಭೋಜ್ಯ ಭೋಜಕ ಭೋಕ್ತಾ ಭೋಗನು ಹರಿ ಎಂದು
ಪೂಜ್ಯ ಪೂಜ್ಯಕನೆಂದು ಅಂತರ ಮುಖನಾಗೋ
ಈ ಜಡ ದ್ರವ್ಯದಿಂದ ತೃಪ್ತಿಯಾಗುವದೆಂತೊ
ರಾಜೀವ ನೇತ್ರ ಕೃಷ್ಣ ಹೊರಗೆ ಒಳಗೆ ಇಪ್ಪ
ವ್ಯಾಜ ರಹಿತನಾಗಿ ಮಾಡೆಲೊ ಮಾಡೆಲೊ
ರಾಜ ಪದವಿ ಉಂಟು ಎಂದಿಗೂ ನಾಶವಿಲ್ಲಾ
ಬೀಜ ಮಾತು ಪೇಳುವೆ ಹಲವು ಹಂಬಲ ಸಲ್ಲಾ
ಮೂಜಗದೊಳಗಿದ್ದ ವರ್ಣಂಗಳು ಶುಭ್ರ
ರಾಜಸ ಭಾಗ ಮತ್ತೆ ಪೀತ ಕಪ್ಪು ಪದಾರ್ಥ
ರಾಜಿಸುತಿಪ್ಪ ನಾಲ್ಕು ಬಗೆ ದ್ರವ್ಯಾಭಿಮಾನಿ
ರಾಜೀವ ಪೀಠ ವಾಯು ಸರಸ್ವತಿ ಭಾರತಿ
ರಾಜಶೇಖರ ಮೊದಲಾದ ತತ್ವದಲಿದ್ದ

ಸುಜನರು ಕೇಳಿ ಶುಭ್ರಾದಿ ವರ್ನಕ್ರಮಕೆ
ಪೂಜಿವಂತರು ಅಲ್ಲಿ ವಾಸುದೇವ ಸಂಕರುಷಣ
ರೈಜನಕ ಪ್ರದ್ಯುಮ್ನ ಅನಿರುದ್ಧ ಮೂರ್ತಿವಾಸ
ಆ ಜನ್ಮಾರಭ್ಯವಾಗಿ ಇದೇ ಮಾತ್ರ ತಿಳಿದು ಮಹಾ
ರಾಜಾಧಿ ಲೋಕದಲ್ಲಿ ವಾಸವಾಗುವದು
ರಾಜ ರಾಜಾಪ್ತ ಪ್ರೀಯ ವಿಜಯ ವಿಠ್ಠಲ ಪರಮಾ
ಸೋಜಿಗನು ಕಾಣೋ ಸಾಲಕಾಮಂಧ ಹರಣಾ ೫

## ಜತೆ

ಚಿಂತನೆ ಪ್ರಕಾರ ವಿನಿಯೋಗ ಮಾಡು ಶ್ರೀ
ಕಾಂತ ವಿಜಯ ವಿಠ್ಠಲ ಕೃಷ್ಣಗೆ ಪದಾರ್ಥಗಳಾ ೬

## ೧೦

## ಧ್ರುವ ತಾಳ

ಅಪದ್ಧ ತಿದ್ದುವುದು ಅಪಶಬ್ಧ ಮ[ನ್ನಿಪು]ದು
ಅಪ ಪ್ರಯೋಗವಿದ್ದರು ಕ್ಷಮಿಸುವುದು ಸಜ್ಜನರು
ಅಪಹಾಸ್ಯ ಮಾಡಿದರೆ ನಿಮಗೆ ದೊರಕುವುದೇನು
ಅಪವರ್ಗಕೆ ಸಾಧನವಲ್ಲ ಅನುದಿನಾ
ಅಪಶ್ರುತಿವಿಡಿದು ಕೂಗ್ಯಾಡಿದ ಮಾನಸಂಗೆ
ಅಪವಾದ ಹೊರಿಸಲು ಚಿಂತಿಸುವೆನೇ
ಅಪಕೀರ್ತಿಗೊಳಗಾಗಿ ಕಚಕುಚ ವರ್ನಿಸಿ
ಅಪಗತಿಗೆ ಪೋಗುವ ಕವನವಲ್ಲ
ಅಪಗಾ ಜನಕ ಲಕುಮಿ ಬೊಮ್ಮಾದಿಗಳ ಚರಿತೆ

ಅಪರಮಿತವಾಗಿ ತೋರಿದನಿತೂ
ಅಪದ್ಧವೆನಿಸಿದಂತೆ ಪೇಳಿದೆ ಗುರುಗಳು
ಅಪರಾಧದದನೆಂದು ನುಡಿಯದಂತೇ
ಅಪಮೃತ್ಯುಮಿಗಿಲಾದ ಬಾಧಿಸುವ ಕ್ಲೇಶ
ಅಪಜಯವಾಗುವದು ತೊಲಗೀ ಪೋಗಿ
ಅಪರಂಪಾರ ಮಹಿಮ ವಿಜಯ ವಿಠ್ಠಲನಂಘ್ರಿ
ಅಫಲನಾಗಿ ಭಜಿಸು ಭಕುತಿ ಪ್ರಧಾನವೆನ್ನಿ ೧

## ಮಟ್ಟತಾಳ

ಎಚ್ಚರವಿದ್ದಾಗ ಕಲಿ[ತ] ವಿದ್ಯಗಳೆಲ್ಲ
ಅಚ್ಚವಳಿಯದಂತೆ ಹೃದಯ ದೊಳಿಪ್ಪವು
ಎಚ್ಚರವನುತಪ್ಪಿ ತವಕದಿಂದ ಕಣ್ಣು
ಮುಚ್ಚಿಕೊಂಡು ಗಾಢನಿದ್ರೆಯೊಲಿಪ್ಪಾಗ
ನಿಚ್ಚಟವಾಗಿದ್ದವಿದ್ಯ ನಿನಗೆ ಉಂಟೋ ?
ಎಚ್ಚರ ಪಟ್ಟಿದರೆ ಮರಿಯದಲೆ ಅವನೇ
ಉಚ್ಚರಿಸುವದಕ್ಕೆ ಬರುತಿಪ್ಪವು ಮನಕೆ
ಅಚ್ಯುತ ಸಿರಿ ವಿಜಯವಿಠ್ಠಲನ ಆವಾಗ
ಮೆಚ್ಚಿಸಿ ಪೂಜಿಸಿದ ನರಗೆ ಪುಣ್ಯಪ್ರಾಪ್ತಿ ೨

## ತ್ರಿವಿಡಿತಾಳ

ಜನುಮಾಂತರದಲ್ಲಿದ್ದ ಜ್ಞಾನವೇನಿದ್ದದ್ದು
ಪುನರಪಿ ದೇಹವ ತೆತ್ತುವಾಗೆ
ದಿನದಲ್ಲಿ ಮಲಗಿ ಎಚ್ಚತ್ತೋಪಾದಿಯಂತೆ
ನೆನಪಾಗಿ ಇಪ್ಪಾವು ಮೊದಲು ಜ್ಞಾನ

ಮನದಲ್ಲಿ ಮರಿಯದು ಏಸು ಕಾಲವಾಗೆ
ಘನ ಜ್ಞಾನಿಗಳ ಪುಣ್ಯವಿಂತು ಕಾಣೋ
ಎನಗವರ ದಯದಿಂದ ಫಲಿಸಿ ಇಪ್ಪದು ಇದಕೆ
ಅನಮಾನ ಸಲ್ಲದು ನೋಳ್ಪರಿಗೆ
ವನಜನಾಭನೆ ಮುಖ್ಯ ಕಾರಣನಾಗಿಪ್ಪ
ಮುನಿ ದೇವತಿಗಳಿಗೆ ಸರ್ವರಿಗೇ
ಗುಣವೆ ತಂದಿತ್ತು ಉತ್ತಮರ ದ್ವಾರದಿಂದ
ಅನುದಿನದಿ ಉದ್ಧಾರಮಾಡುವನು
ಜನಕೆ ಸಂಶಯ ಸಲ್ಲ ಜ್ಞಾನಿಗಳಿಗೆ ಈಗ
ಜನುಮವಿಲ್ಲವೆಂದು ನುಡಿಯದಿರೀ
ಎಣಿಕೆ ಇಲ್ಲದೆ ವೇದ ಶಾಸ್ತ್ರ ಪುರಾಣದಲ್ಲಿ
ಘನವಾಗಿ ಪೇಳಿದ ಪ್ರಮೇಯವಲ್ಲ
ಕೊನಿಯಗಂಡವರಾರು ಎಲ್ಲಿ ಇಲ್ಲವೆಂಬೊ
ದಣುಕೊಂಡು ಮಾತುಗಳು ನುಡಿಯಾಲ್ಯಾಕೆ
ಅನಿಮಿತ್ಯ ಬಂಧು ಸಿರಿ ವಿಜಯ ವಿಠ್ಠಲರೇಯ
ಗನಗೆ ತಾನೆ ವ್ಯಕ್ತನಾಗಿ ಭಕ್ತರನ ಪೊರೆವಾ ೩

## ಅಟ್ಟತಾಳ

ಮಧ್ವವಿಜಯದಲ್ಲಿ ಪಂಡಿತಾಚಾರ್ಯರು
ಮಧ್ವರಾಯಗೆ ಉಪದೇಶ ಮಾಡಿದ ಪ್ರ
ಸಿದ್ಧ ಅಚ್ಯುತ ಪ್ರೇಕ್ಷಾತಮುನಿ ಧರ್ಮಜ
ಅಧ್ವರ ಮಾಡಲು ದ್ವಾಪರಯುಗದಲ್ಲಿ
ಪದ್ಧತಿಯಿಂದಲಿ ದ್ರೌಪದಿ ಕೈಯಿಂದ
ಮೆದ್ದನ್ನದಿಂದಲಿ ಅಧಿಕಾರಿಗಳಾಗಿ
ಮಧ್ವರಾಯರಿಗೆ ಗುರುಗಳಾದರೆಂದು

ಸಿದ್ಧ ಪ್ರಮೇಯವನ್ನು ಪೇಳಿದ್ದದೆ ಸತ್ಯ
[ಈ][ಧ]ರೆ ಯೊಳಗೆ ಜ್ಞಾನಿಗಳು ಸಂತತವಾಗಿ
ಉದ್ಧವರಾಗಿ ಸಂಚರಿಸುವುದಕೆ ನಿ
ಬದ್ಧವಾಗಿ ಕೇಳಿ ಪಂಡಿತಾಚಾರ್ಯರ
ಮುದುವಾಕ್ಯವಿದು ನಿಮಗೆ ಸಾಕ್ಷಿ
ಶುದ್ಧ ಮೂರುತಿ ನಮ್ಮ ವಿಜಯ ವಿಠಲನ್ನ
ಪೊದ್ದಿದ್ದ ದಾಸರ ಜ್ಞಾನವೆ ಕೆಡಗೊಡ

## ಆದಿತಾಳ

ಕಲಿಯುಗದಲ್ಲಿ ದೇವಾದಿಗಳ ಜನ್ಮ
ನೆಲಿಯಾಗಿಪ್ಪದು ಜ್ಞಾನಿಗಳು ಒಂದೇ
ತಿಳುಪಿನ ತರುವಾಯ ಅನುಸರಿಸಲಿಬೇಕು
ಹಲವು ಬಗೆಯಲಿಂದ ಪೇಳಿದ ವಚನವು
ಛಲಮಾಡಿದರಿಂದ ಲಾಭ ಬರುವುದೇನು
ಖಳರು ಕಲಿಯುಗದಲ್ಲಿ ಪುಟ್ಟುವರೆಂದು ಪ್ರ
ಬಲವಾಕ್ಯ ಇರುತಿರೆ ಅವರ ಪ್ರತಿಕಕ್ಷಿ
ಬಲವಂತ ಮುಕ್ತರು ಪುಟ್ಟದೆ ಇಪ್ಪರೇ
ಪ್ರಳಯವಿದೂರ ನಮ್ಮ ವಿಜಯ ವಿಠ್ಠಲನ್ನ
ಒಲಿಸಿದವರ ಕೃಪೆ ಎನ್ನ ಮೇಲೆ ಉಂಟು ೫

## ಜತೆ

ಆವಾವುದಾದರು ತಪ್ಪೆ ಲೇಶಭಂಗವಿಲ್ಲ
ಶ್ರೀ ವಿಜಯ ವಿಠ್ಠಲನ್ನ ನಾಮಾ ಬಿಟ್ಟರೆ ಭಂಗಾ ೬

# ೧೧

## ಧ್ರುವತಾಳ

ಅರಣಿ ಮಥನ ಪ್ರಮದಾದ್ವಾರ ಆದ್ವಾರದಿಂದ
ಪುರುಷನಿಂದ ಪುರುಷಾಪೇಕ್ಷನಿಂದಾ
ಸ್ಪರ್ಶ ಸ್ಮರಣೆ ವಾಸನೆಯಿಂದ ಸಿದ್ಧ ಗಾ
ತುರ ಪ್ರವೇಶದಿ೦ದ ನಾನಾಪರಿ ಸರ್ವ ಸಾ
ಧಾರಣ ಕಲಿಯುಗದಲ್ಲಿ ನಿಂ
ದಿರದೆ ಮಿಥುನ ಭಾವದಲ್ಲಿ ಜನನ
ಹರಿ ನೀನೆ ನೇಮಿಸಿದ್ದೆ ಯುಗ ಯುಗದಲ್ಲಿ ನಿ
ರ್ಜರ ಮುನಿ ಮನುಜರಿಗೆ ತಪ್ಪದಂತೆ
ಪರಮಪುರುಷ ನಾನಾ ಈ ಪರಿಯಿಂದಾದುದಕ್ಕೆ
ತಿರಿಗಿ ಆವಾವ ಜನನದಲಿ ಬಂದೆನೋ
ಕರಣಂಗಳೆಲ್ಲ ಒಂದೆಸೆಯಲ್ಲಿ ನಿಲ್ಲಿಸಾದೆ
ಮರಳೆ ಮರಳೆ ಮರಳೆ ಪುನರಾವರ್ತಿಲೋಕದಿ
ನರಕಾನರಕದಲ್ಲಿ ಬಿದ್ದು ಎದ್ದು ಎದ್ದು
ಬರಲಾರದಲೆ ಬಂದೆನಯ್ಯಾ ಜೀಯಾ
ಕರುಣಿ ಕಾಮಿತ ಫಲದಾ ಮೊರೆಬಿದ್ದೆ ಮೊರೆಕೇಳೊ
ಮರಹೆ ನಿಶ್ಚಯ ಎನಗೆ ಹಿಂದಣ ಭವಣೀ
ಧರ ಜಲ ಔಷಧಿ ಪುರುಷವಾಣಿ ರುಕ್ಸನಿಮ (?)
ಎರಡೈದು ಮೂರ್ತಿಗಳ ಮಹಿಮೆಯನ್ನು
ತರತಮ್ಯ ನಿರ್ಭಿನ್ನವಾಗಿ ತಿಳಿದು ಕೊಂಡಾಡಿ ಸಂ
ತರ ಒಡನೆ ಬಾಳದಲೆ ಬರಿದೆ ತಿರಿದು
ಚರಿಸಿದೆ ಧೂಮ್ರ ವಾಯು ಮೇಘಾ

ಭ್ರ ರಾತ್ರಿ ತದನಂತರ ಕಷ್ಣಪಕ್ಷ ದಕ್ಷಿಣಾಯನ
(ಪರಕ್ಷುದುಕ್ಷಣ)ಮಾಸಸಂವ
ತ್ಸರ ಪಿತೃ ಗಗನ ಚಂದ್ರ ಸ್ವರ್ಗಕೆ ಪೋಗಿ
ತಿರಿಗಿ ಪಂಚಾಹುತಿಯಲ್ಲಿ ಬಿದ್ದು ಈ ದೇಹ
ಧರಿಸಿ ಬೆಳದೆ ವಿಷಯಕೂಪದಲ್ಲಿ
ಜರೆ ನರೆ ಮೊದಲಾದ ಹೇಯ ಬಂದ ಕಾಲಕ್ಕು
ನಿರಯಕ್ಕೆ ಪೋಗದಂತೆ ತೊಲಗದಿದಕೊ
ಹರಿಯೆ ಮುಂದೆ ದಾವ ಜನುಮ
ಬರುವದು ಕಾಣೆನಕಟಾ ಹರುಷವಾಗೋದು
ನೋಡು ಇದರೊಳಗೆ
ಎರಡೆರಡು ಒಂದು ಪರ್ವ ಶ್ರವಣಾದಿಯಲ್ಲಿ ಇಷ್ಟ
ಭಾರವನ್ನೆ ವಿಚಾರಿಸದೆ ಮೋಸವಾದೆ
ನಿರುತ[ಪಾಂ]ಡಿ[ತ್ಯ][ಬಲದಿ] ಮುನಿ ಮೌನದಿಂದ
ಕರುಣಾ ಸಂಪಾದನಿಗೆ ಮಾರ್ಗಕಾಣೆ
ಹರಿಯ ನಿನ್ನವತಾರ ಮತ್ಸ್ಯಾದಿ ರೂಪಶ್ರೀಯ
ಸ್ಮರಿಸೆ ಒಂದೇ ಭಾರಿ ಎಲ್ಲಿ ನಾನೂ
ವರ ವಿದ್ಯಾ ವಂಶಾವೃದ್ಧಿ ಭರ ಭಯ ಮೋಹ
ದಾರಿಂದರೆಲ್ಲಾರಿಷಡ್ವರ್ಗ ನಾಶನ ಮಾಡಿಕೊಂಡು
ಸರ್ವ ಸಂಪತ್ತು ಲಾವಣ್ಯಯೈದು ದುಃಖ
ಪರಿಹಾರದಿಂದ ಬಿಂಬಾ ಬಿಂಬಾ ನಿನ್ನಾ
ವರ ಮೂರ್ತಿಗಳ ನೋಡಿ ಸುಖಿಸಿ ಬರುವ ಜನನ
ವಿರಹಿತನಾಗದೆ ಪೋಪೆನಯ್ಯಾ
ಕರುಣಾಕರ ನಮ್ಮ ವಿಜಯವಿಠ್ಠಲ ಎನ್ನ
ಪೊರೆವ ದಾತಾರ ಹೃತ್ಕಮಲದಲ್ಲಿ ವಾಸ ೧

## ಮಟ್ಟತಾಳ

ಹೃದಯಾ ವ್ಯಾಪ್ತಿ ಮೂರ್ತಿ ಪ್ರಾದೇಶದೊಳಗೆ
ಪದುಮಕರ್ನಿಕೆ ಗರ್ಭ ಮಧ್ಯದಲ್ಲಿ ಇಪ್ಪ
ಪದುಮೆಯರಸ ಪ್ರಾಜ್ಞ ನಿನ್ನ ಕಾಂಬುದೆಂತೊ
ಪದೋಪದಿಗೆ ವಿಷಯ ಧ್ಯಾನವ ಮಾಡುವೆ
ಮಧ್ಯದಲ್ಲ್ಯೆ ವಿಧ್ಯಾ ಪಂಚಕಾಲವನ್ನೆ ತಿಳಿದು
ಇದರಿಂದಲಿ ನಿನ್ನ ಪೂಜಿಸಲಿಲ್ಲೈಯ್ಯಾ
ಪದುಮಗರ್ಭನಯ್ಯಾ ವಿಜಯವಿಠ್ಠಲ ನಿನ್ನ
ಪದಗಳ ನೋಡುವ ಭಾಗ್ಯವೆ ಕೊಡು ನಿತ್ಯ ೨

## ತ್ರಿವಿಡಿ ತಾಳ

ವ್ಯಾಪಾರ ಆವರ್ಕ ಅವಿಷ್ಟ ಕ್ಷೋಭಕ ಪ್ರ
ತಿಪಾದ್ಯ ಸ್ಥಿತಾ ನಿಯಾಮಕ ಪ್ರವರ್ತಕ ಸ
ರ್ಗ ಪಾಲಣ ಸಂಪೃತಿ ಅವಕಾಶ ಭಯಮೋಚಕ
ಉಪರಾಶ್ರಯ ಕರ್ತ್ಯು ಮುಕ್ತ ವಿಭಾಗವು
ಅಪದ್ರಕ್ಷಕ ಅಭೀಷ್ಟಪ್ರದ
ಸಂಪ್ರಾಪುತ ಸಂಯೋಗ ವಿಯೋಗವು
ರೂಪ ಪಂಚನ ಪರಿಮಿತ ಅವಸ್ಥಾ ಪ್ರೇರಕ
ಪಾಪ ಪುಣ್ಯ ಬಂಧವೆ ಶತ ತತುತದಾಕಾರ
ಈ ಪರಿ ನಿನ್ನ ಮೂರ್ತಿಗಳನೇಕ
ಶ್ರೀಪತಿ ಪರಬೊಮ್ಮ ಅಸುರ ಸಂಹಾರ ಪ್ರ
ಳಾಪ ವಿದೂರ ವಿದುರ ವಂದಿತ
ಅಪಾರ ಮಹಿಮನೆ ಏಕವಿಂಶತಿ ಶ್ವೇತು

ದ್ವೀಪ ಮೂರುತಿ ಕೂಡಾ ಇಪ್ಪತ್ತೆರಡೂ
ಗೋಪಾಲ ನಿನ್ನ ಮೂರುತಿಗಳೊಂದೊಂದು ಬಗೆ
ವ್ಯಾಪಾರ ಮಾಡುತಿರಲು ಜಗದೊಳು
ಲೇಪ ನಿರ್ಲೇಪದಲ್ಲಿ ಅನಂತಾನಂತ ಗುಣ
ರೂಪ ಕ್ರೀಯಾ ಪರಿಪುರ್ಣವಾಗೀ
ಪೋಪ ಬರುವ ಕುಳಿತು ಪವಳಿಸಿ ಓಡುವ
ಭಾಪುರೆ ಒಂದೆ ಕಾಲದಲ್ಲಿ ಮಾಡುವ ಚಿತ್ರಾ
ಆಪನ್ನ ಪರಿಪಾಲಾ ಇದರೊಳಗೆನಗೊಂದು
ನೀ ಪಾಲಿಸು ನಿತ್ಯ ಅವರವರ ತಕ್ಕದ್ದು
ಕೋಪಾನಂದದಿಂದ ನೀನೊಲಿದು ದುಃಖ
ವ್ಯಾಪಿ ವ್ಯಾಪಿಗೆ ನಗುವ ಮೂರ್ತಿಯ ಮನದಲ್ಲಿ
ಲೋಪವಿಲ್ಲದೆ ಕರುಣದಿಂದ ಸ್ವಾಮಿ
ಚಾಪಧರಾಗ್ರಣಿ ವಿಜಯ ವಿಠ್ಠಲ ಸರ್ವ
ತಾಪತ್ರಯ ವಿನಾಶ ಸಮಸ್ತ ಗುಣನಿಧಿ ೩

## ಅಟ್ಟತಾಳ

ಆವನ್ನ ಚೇತನ ಅನಾದಿಯಿಂದಲಿ
ಆವನ್ನ ಅಹಂಕಾರ ದಾಸೋಹಂ ಎನ್ನದು
ಆವನ್ನ ಬುದ್ಧಿ ಭೇದ ನಿಶ್ಚೈಸದು
ಆವನ್ನ ಚಿತ್ತ ತತ್ವ ವಿಚಾರಿಸದು
ಆವನ್ನ ಮನಸು ಸಂಕಲ್ಪ ಮಾಡದು
ಆವನ್ನ ಮಸ್ತಕ ಅಚ್ಯುತಗೆರಗದು
ಆವನ್ನ ಕರ್ನ ಸತ್ಕಥೆ ಕೇಳದು
ಆವನ್ನ ನಯನ ಹರಿ ಮೂರ್ತಿಯ ನೋಡದು

ಆವನ್ನ ನಾಸಾ ನಿರ್ಮಾಲ್ಯವೆ ಕೊಳ್ಳದು
ಆವನ್ನ ವದನ ಶ್ರೀ ಹರಿ ಕೃಷ್ಣನೆನ್ನದು
ಆವನ್ನ ನಾಲಿಗೆ ಹರಿಯನ್ನ ಪಾಡದು
ಆವನ್ನ ಕರಗಳು ಹರಿಪೂಜೆ ಮಾಡದು
ಆವನ್ನ ಚರಣವು ಯಾತ್ರಿಯ ತಿರುಗವು
ಆವನ್ನ ಶರೀರ ಹರಿಗಷ್ಟಬೀಳದು
ಆವನ್ನ ಭೂಮಿಯದಾನವ ಮಾನವ
ಆವನ್ನ ನರಕವಾಸಿಗನೆನ್ನಿ ಎಂದಿಗೂ
ಜೀವನಾಶ್ರಯವೆನ್ನಿ ಪಾವನವಲ್ಲವೊ
ಓವನ್ನ ವಿಜಯ ವಿಠ್ಠಲನೊಲಿಸಲು
ಬಾವನ್ನವಾಗುವ ಧ್ರುವನ್ನ ಪದವಿ ಐದಿ ೪

## ಆದಿತಾಳ

ಕತ್ತೆಯ ಅಂಗಕ್ಕೆ ಕಸ್ತೂರಿ ಗಂಧಪೂಸಿ
ಮುತ್ತು ಮಾಣಿಕ ಹಾರ ಸುತ್ತಲು
ಸುತ್ತಿ ಕರವೆತ್ತಿ ನಮಸ್ಕರಿಸಿ
ಸತ್ತಿಗೆ ನೆಳಲಲ್ಲಿ ನಿಲ್ಲಿಸಿ
ತುತ್ತಿಸಿ ಚುಂಬನ ಕೊಟ್ಟ ಪರಿಯಂತೆ
ಸತ್ಯ ಸಂಕಲ್ಪ ನಿನ್ನ ಪಾತ್ರರ ಸಹಿತಬಿಟ್ಟ
ನಿತ್ಯ ಅನ್ಯದೇವತೆಯ ಪೂಜಿಸಲು ವ್ಯರ್ಥ
ಭೃತ್ಯ ವತ್ಸಲ ನಮ್ಮ ವಿಜಯ ವಿಠ್ಠಲರೇಯ
ಉತ್ತಮ ಶ್ಲೋಕ ನಿನ್ನ ಕೀರ್ತನೆ ಕೊಡು ಪೊಳೆದು ೫

ಜತೆ

ಈಸು ಮೂರ್ತಿಗಳಲ್ಲಿ ಒಂದು ಮೂರ್ತಿಯ ಧ್ಯಾನ
ಲೇಸಾಗಿ ಕೊಡುವುದು ವಿಜಯ ವಿಜಯ ವಿಠ್ಠಲ ಪೂರ್ಣ ೬

## ೧೨

### ಧ್ರುವ ತಾಳ

ಅರಸಿನಾ ಭೀತಿಯಿಂದಾ ಆತನ ಪಾದರಕ್ಷಾ
ಪರಿಚಾರಕನೊಬ್ಬ ಸತತ ಬಿಡದೆ
ಪರಮ ವಿಶ್ವಾಸದಲ್ಲಿ ಜೋಕೆ ಮಾಡಿದಂತೆ
ಹರಿ ನಿನ್ನಾ ಶರಣಾರ ಸರಸಿಜಭಾವಾದ್ಯಾರೋ
ನಿರುತಾರಾಮದಾಡಿ ತೊಲಗಿ ಪೋಗದೆ
ಪೊರೆವಾರು ಪಾರಿಪಾರಿ ಬಗೆಯಿಂದ್ಯೋದೂಲಿ
ದುರಿತಾದ ಕಡಿಗೆ ನಿನ್ನಾ ನಂಬಿದನಾ
ಕರಣಂಗಾಳೆರಗಾಗೊಡದೇ ಆವಾಗ
ಹಾರಿ ಭೀತೀ ನರನಿವಾ ನಿಜಾನದಾಡಗಲಿ
ಕರಣಾ ಪಯೋನಿಧಿ ಭಕ್ತಾರಾಧಿನನಾದ
ದೊರೆಯೆ ನಿನ್ನಾ ಬಾಲ ಲೀಲೆಗೆ ನಮೋ ನಮೋ
ಮರದೊಮ್ಮೆ ನೆನೆದಾರೆ ಚನ್ನಾಗಿ ಬೆನ್ನಾಗಿ
ಬರುವ ಸ್ವಾತಂತ್ರ ಚಿನ್ಮಾತ್ರ ಮುನಿ ಸ್ತೋತ್ರ
ಧರೆಯೊಳು ನಿನ್ನರಿಯಾದ ದೈವಾವ
[ಕ]ರುಣಾ ಕಾಣೆನೊ ಕುಜನರಿಗೆ ಕುಠಾರ
ತಿರುವೆಂಗಳಪ್ಪ ತಿಮ್ಮಪ್ಪ ಶ್ರೀನಿವಾಸ

ಗಿರಿವಾಸ ವಿಜಯವಿಠಲ ವೆಂಕಟ ತಂದೆ
ಶರಣಾಗು ಕರೆವ ಸೊಲ್ಲಿಗೆ ಸೋಲುವ ಮಹಿಮಾ ೧

## ಮಟ್ಟತಾಳ

ನೆಲ್ಲೂ ಸರಿಮೇರುವಿಗೆ ಸಲ್ಲದು ಬೆಲೆ ಮಾಡಲು
ಮಲ್ಲನರನ ಪಾದದಲ್ಲಿ ಕಟ್ಟಿರಲಾದೆ
ಸಲ್ಲುವುದು ಬಿರಿದು ಎಲ್ಲ ಲೋಕದ ಮಧ್ಯ
ಹುಲ್ಲಿಗೆ ಆದಾರು ಬಲ್ಲಿದನಾ ಬಳಿಯಲ್ಲಿ ಸೇರಿದರಿಂದ್ಯಾ
ಬಲ್ಲಿದಾತನವದಕೆ ಬರುವುದು ಕಾಣಿರೋ
ಕಲ್ಲುನಾರಿಯ ಮಡಿದ ವಿಜಯ ವಿಠಲರೇಯ
ಎಲ್ಲಿದ್ದಾರು ನಿನಗೆ ಭೀತಿಯಿಲ್ಲ ೨

## ಝಂಪೆ ತಾಳ

ನಾನಾಯೋನಿಗಳಲ್ಲಿ ನಾನಾದೇಶಗಳಲ್ಲಿ
ನಾನಾ ಠಾವಿನಲ್ಲಿ ವಾಸವಾಗಿ ಇದ್ದು
ನಾನಾ ಉದಕ ಧ್ಯಾನ್ಯ ಸವಿದುವುಂಡೂ
ನಾನಿದ್ದರೂ ದೇವ ಅಲ್ಲಲ್ಲಿ ಪೊಂದಿದವನಾ
ಜ್ಞಾನವೇ ಕೇಡಾದಂತೆ ರಕ್ಷಿಸುವರೋ ಬಿಡದೆ
ಏನೆಂಬೆನಯ್ಯ ನಿನ್ನ ದೊರೆತನಕೆ
ನಾನೆಲ್ಲಿ ಸರಿಗಾಣೆ ತ್ರಿಲೋಕದಲ್ಲೀ ಜಗ
ತ್ರಾಣನ ಒಡೆಯನೇ ದಿವ್ಯಾಕಾಯಾ
ಜ್ಞಾನಾದ್ರಿ ವೆಂಕಟಾ ವಿಜಯ ವಿಠಲರೇಯ
ನಿನೆಂದವಾನೀಗೆ ನಿತ್ಯಾ ನೀನೆ ಬೆನ್ನೊ ೩

## ಅಟ್ಟ ತಾಳ

ಕಾಮಾಂಜುತ್ತಲಿದೆ ಕ್ರೋಧಾಂಜುತ್ತಲಿದೆ ಮ
ಹಾ ಮೋಹವಂಜುತ್ತಲೀದೇ
ಕಾಮಂಜುತಲಿದೇ ತಾಮಸಜನಗಳೂ ವಂದ್ಯೋದರು ನಿನ್ನಾ
ನಾಮವೆ ಕೇಳಲಂದುತ್ತಲಿಪ್ಪರು
ಸ್ವಾಮಿ ತೀರ್ಥವಾಸ ವಿಜಯ ವಿಠಲ ವೇಂಕಟ
ಈ ಮಹಿಮಾಳು ನಿನ್ನಾ ದೊರೆತನ ಮಿಗಿಲೋ ೪

## ಆದಿತಾಳ

ಜಗತ್ಪಾವನ ಜಗಜೀವನ ಜಗತ್ಕಾರಣಾ ಕಾಮನಯ್ಯಾ
ಜಗವ ಸೃಜಿಸಿ ಜಗವಾ ನಿಲ್ಲಿಸಿ ಜಗವಾಡಿಸುವಿ
ಜಗವೇ ನಿನ್ನಾ ಭೀತಿಯಿಂದಲಿ ಚಲಿಸುತ್ತಿಪ್ಪಾದು
ಜಗವಾ ಬಲ್ಲೆ ನಿನ್ನ ಸರ್ವ ಜಗವರಿಯದು
ರಗಾಗಿರಿ ವೆಂಕಟ ಪರಮದಯಾನಿಧೆ ವಿಜಯ ವಿಠಲ
ಜಗವೇ ನಿನ್ನಾಧೀನವಯ್ಯಾ ೫

## ಜತೆ

ಅರಸಿನಿಂದಲಿ ಅಧಿಕಾ ಭೃತ್ಯನಿಗೆ ಪಾಲಿಸುವ
ಹಿರಿಯರಿಪ್ಪರು ಬಿಡದೆ ವಿಜಯ ವಿಠಲರೇಯ ೬

## ೧೩

## ಧ್ರುವ ತಾಳ

ಅರ್ಚಾ ಅರ್ಚನೆ ಮಾಡು ಅಧಿಕಾರ ಭೇದದಿಂದ
ನಿಚ್ಚ ವರ್ಜಿತ ಕಾಮನಾಗಿ ಬಾಗಿ

ಅಚ್ಯುತ ದೈವವೆಂದು ಆಹ್ಲಾದದಿಂದ ಸದಾ
ಸಚ್ಚಿದಾನಂದಾತ್ಮಾದಿ ಗುಣಗಳಿಂದ
ಮೆಚ್ಚಿಸು ಮನಸು ಪೂರ್ವಕ ದಿಂದ ಯೋಗ್ಯತಾದನಿತು
ಮೆಚ್ಚಿಸು ಹರಿಯ ಒಳಗೆ ಹೊರಗೆ ತಿಳಿದು
ಸಚ್ಚಿದಾನಂದಾದಿಗಳ ಗುಣಗಳಿಂದ ಧ್ಯಾನಗೈದು
ಎಚ್ಚರನಾಗು ನಿನ್ನ ಯೋಗ್ಯತಾದನಿತು
ನೆಚ್ಚಿದವರ ಪ್ರಾಣ ಪ್ರಕೃತಿ ರಮಣ ಹರಿ
ಸುಚ್ಚರಿತ್ರನು ಕಾಣ್ಗೋ ತನ್ನ ತೋರಿ
ಅರ್ಚರಾದಿ ಲೋಕ ಐದಿಸಿ ತಾತ್ವಿಕರ
ಹೆಚ್ಚು ಹೆಚ್ಚಾಗಿ ಒಳಗೆ ಪೊಳೆವ ದ್ವಿವಿಧ
ಅಚ್ಯುತಾನಂತ ರೂಪಗಳಾನಂತ ನಿಚ್ಚಳವಾಗಿವೆ ನೋಡಿದಲ್ಲಿ
ಬಚ್ಚಿಡತಕ್ಕದ್ದು ಈ ಪ್ರಮೇಯ ಕಂಡಲ್ಲಿ
ಬಿಚ್ಚುವುದಲ್ಲ ಬೀದಿ ಬೀದಿ ತಿರುಗಿ
ಅಚ್ಚಟ ಜ್ಞಾನಿಗಳಿಗೆ ಕೇಳಿದಾಕ್ಷಣ ಬೆಲ್ಲ
ದಚ್ಚಾಗಿ ಯಿಪ್ಪದು ಸವಿದೋರುತ
ಸುಚಿತ್ತದಲ್ಲಿ ನಿತ್ಯ ವಿಚಾರಿಸಿ ಕೊಳುತ
ಚಚ್ಚರದಲ್ಲಿ ಗುಣವಂತರಹರೋ
ಕೊಚ್ಚಿ ಪೋಗುವದಘ ಘೋರ ದೈತ್ಯರಿಗೆ ದಿ
ಗಿಚ್ಚಾಗಿ ಯಿಪ್ಪೊದು ಸರ್ವಕಾಲಾ
ಹುಚ್ಚು ಹರಳು ಮಾತಿನಿಂದ ಫಲವಿಲ್ಲಾ
ಮುಚ್ಚು ಬಾಗಿಣದಂತೆ ಸುಕೃತವುಂಟು
ಎಚ್ಚರನಾಗು ಹರಿದಾಸರಲ್ಲಿ
ಅಚ್ಚ ಸುಖ ಬರುವುದು ವರ್ಣಾಶ್ರಮ ಧರ್ಮ
ಸಚ್ಚರಾಚರಮೊಳು ಲೇಶಮಾಡೆ

ವೆಚ್ಚವಾಗದು ಕಾಣೋ ಒಂದಾನಂತಾ
ಚೊಚ್ಚಲ ಮಗನಂತೆ ಪಾಲಿಸುತಿಹರು
ಪಚ್ಚದ ಮಣಿಗೆ ಸರಿಯೆ ಗಾಜು ಮಣಿಹಾರ
ಹಚ್ಚಿದ ಕಾಲಕ್ಕೆ ಶೋಭಿಸುವುದೇ
ನುಚ್ಚುಗಳ್ಳ ದೇವರ ಎಂತ ಪೂಜಿಸಲೇನು
ಬಚ್ಚಲ ಮೋರಿ ನೀರು ಕೂಡಿದಂತೆವೋ
ಕುಚ್ಚಿತವಲ್ಲದೆ ಜಗದೊಳು ಜನನವಿಡಿದು
ರಚ್ಚೆಯಲ್ಲದೆ ಭಂಡು ಭೂತ ಪೂಜೆ
ಅಚ್ಯುತ ಪದವಿಗೆ ಇದೆ ಇದೆ ಉಪಾಯ
ಬೆಚ್ಚದೆ ಮಾಡಿರಯ್ಯಾ ಮಾನದಲಿಟ್ಟು
ಬೆಚ್ಚಿಸಿದಂತೆ ಮನಸು ಹರಿಪಾದ ಪೊಂದುವುದು
ಸಚ್ಛಾಸ್ತ್ರ ಶ್ರವಣ ಮನನ ಧ್ಯಾನೋಪಾಸನದಿಂದ
ತಚ್ಛಬ್ಧವಾಚ್ಯ ಹರಿಯ ನೋಡಬೇಕು
ಎಚ್ಚರ ದೈವ ನಮ್ಮ ವಿಜಯ ವಿಠಲರೇಯನ್ನ
ನಿಚ್ಚ ಈ ಪರಿಯಿಂದ ಚಿಂತಿಸಬೆಕು ಸತತ ೧

## ಮಟ್ಟತಾಳ

ಧರಣಿ ಉದಕ ವೈಶ್ವಾನರ ಮಾರುತ ಗಗನ
ಎರಡೆರಡು ಒಂದು ಭೂತಗಳಿದ್ದಲ್ಲಿ
ಹರಿಯ ವ್ಯಾಪಾರಗಳು ಚಿಂತಿಸು ಚನ್ನಾಗಿ
ಪರಿಪರಿ ಬಗೆಯಿಂದ ಗುಣಿಸುವುದು ಬಿಡದೇ
ವರ ಗುಣ ರೂಪ ಕ್ರೀಯಗಳಾನಂತ
ಚರಿಸುವ ಬಗೆ ತಿಳಿದು ಚತುರತೆ ನೀನಾಗೊ
ಇರಳು ಹಗಲು ಭೂತಾ ಭೂತಾಭಿಮಾನಿಗಳ

ಶರೀರ ತದಿಷ್ಠಾನ ಸಿರಿ ನಾರಾಯಣ ಸಿರಿ ಲಕುಮಿ ಬೊಮ್ಮ
ಹರ ಮಿಕ್ಕಾದ ನಿರ್ಜರಗುಣ ನಾನಾ
ತರತಮ್ಯದಿಂದಲಿ ಜ್ಞಾನೇಚ್ಛಾ ಪ್ರಯತ್ನ ಸ್ವಾಭಾವಿಕವೆಂದು
ನಿರುತ ತದಾಕಾರ ನಿಃ ಸಂಗರುಯೆಂದು
ಅರಿತು ಸಂತಸನಾಗು ಸಜ್ಜನರನೊಡನಾಡಿ
ದುರಿತಾಂಬುಧಿ ತಾರಿ ವಿಜಯ ವಿಠಲರೇಯ
ಕರುಣಾಕರ ಮೂರ್ತಿಯ ಚರಣವ ನೆರೆ ನಂಬಿ ೨

## ರೂಪಕ ತಾಳ

ಹೃದಯಾದ ರೋಮ ಕೂಪಗಳೊಂದೊಂದು
ಉದರನಾಸ ಶ್ರವಣ ನಯನ ರಾಜಿಸುವ
ವದನ ಹಸ್ತ ಚರಣ ಸಂಧಿಗಳ ವಿವರ
ಹೊದರು ಗುಹ್ಯ ಒಂಭತ್ತು ದ್ವಾರಕ್ಷುದ್ರ ಛಿದ್ರ
ಮುದದಿಂದ ಘಟಮಠಾಕಾಶ ಜಾಲ ರಂಧ್ರ
ಮದುವೆ ಛಪ್ಪರ ಯಜ್ಞಶಾಲಿ ಮುಡಿಗೆ ಮರು
ತ್ವದ ಚತುರ್ವಿಧಗಳು ತತ್ತತ್ತು ಶ್ರೇಣಿಗಳು
ಚತುರಂಗಾಕ್ಷ ಮನೆಗಾವದ ಹರದಾರಿ ಲೆಖ್ಖವ ಬೈಲು
ವರಣಾ ವರಣಗರ್ಭ ದಿಗ್ಭಾಗಾ
ಹದಿನಾಲ್ಕು ಲೋಕ ವಿರಾಡ್ರೂಪ ವೈಕುಂಠ
ಪದುಮ ಭವಾಂಡ ಸಪ್ತಾವರಣ ಮೇಲೆ
ತದನಂತರ ವ್ಯಾಕೃತಾಕಾಶ ಭೂತ ಈ
ತುದಿ ಮೊದಲು ಗುಣಿಸೋದು ಆಕಾಶಪ್ರಭೇದ
ಇದರಲ್ಲಿ ಹರಿ ಚಿಂತನೆಮಾಡು ಪರಿ ಪರಿ
ಹೃದಯಾರಂಭಿಸಿಕೊಂಡು ಅಲ್ಲಿ ಪರಿಯಂತ

ತದಕಾರ ತನ್ನಾಮ ವಿಜಯ ವಿಠಲರೇಯ
ವಿಧಿದೂರ ತದ್ಭಿನ್ನಾತನ್ನ ತನ್ಮಧ್ಯಾ ಎನ್ನು ೩

## ಝುಂಪೆ ತಾಳ

ನಾಸ ಮೊದಲಾದ ಶ್ವಾಸೋಚ್ವಾಸ ಮತ್ತೆ ಉಪ
ಶ್ವಾಸ ಸರ್ವ ಜೀವ ರಾಶಿಯಲ್ಲಿ
ಬೀಸುವ ವ್ಯಜನ ಚಾಮರ ನವಿಲಗರಿ
ಕೋಶ ವಾರಿಧಿ ತೆರೆ ಊದುವ ವಾದ್ಯ
ಲೇಸು ಪಕ್ಷಯಗರಿಯಿಂದ ಬರುವ ಗಾಳಿ
ಗ್ರೀಷ್ಮಋತು ಬಿರಿಸುತ್ತ ವಾಯುಪಟ ಮಿಕ್ಕ
ಈ ಸಮೀರ ಭೂತ ತತ್ತ ಲೋಕದಗತಿ
ಶೇಷ ವಿಶೇಷ ವಿರಾಟ ಬ್ರಹ್ಮಾಂಡದಲ್ಲಿ
ಭೂ ಸಲಿಲಭಾಗ ಮೇಲಾವರಣಾಚೆಯಲಿ
ಸೂಪಿಕೊಂಡಿದ್ದ ಮಾರುತ ಚಂಡವಾತಗಳ
ಈಸು ಬಗೆಯನು ಪೂರ್ವದಂತೆ ಎ
ಣಿಸುವದು ವಾಯು ಪರಮಾಣುಗಳಲ್ಲಿ
ವಾಸುದೇವನೆ ಯಿಪ್ಪನೆಂದು ಚಿಂತಿಸು ಮನ್ಮಜಾ
ದೋಷದೂರನಾಗು ಇದರಿಂದಲಿ
ಈಶ ಸರ್ವೇಶ ನಮ್ಮ ವಿಜಯ ವಿಠಲರೇಯನ್ನ
ಬೇಸರದಲೆ ಮನದೊಳಗೆ ನಿಲಿಸೋ ೪

## ತ್ರಿವಿಡಿ ತಾಳ

ನೇತುರಾಗ್ನಿ ಜಠರಾಗ್ನಿ ಪಾವಕ ಕಣ
ಜ್ಯೋತಿ ಜ್ವಾಲೆ ದೀಪ ಪಂಚ ವಿಧ ಪಂಚಾಗ್ನಿ

ಜಾತ ಕರ್ಮ ವಿವಾಹ ವೈಶ್ವದೇವ ಉಪ
ನೀತ ಶಾಂತಿ ಕರ್ಮ ಅಭಿಚರಾಗ್ನಿ ಪಿತೃ
ನೀತಾ ನಿತ್ಯಾಗ್ನಿ ಹೋತ್ರ ನಾನಾ ಬಗೆ ಯಾಗಾ
ಜಾತ ವೇದ ದಾವಾ ವಡಬಾಗ್ನಿ ಧೂಮ್ರಾದಿ
ಭೂತಳ ವಿಡಿದು ವಿರಾಟ ಪರಿಯಂತ
ಜ್ಯೋತಿ ಪ್ರಕಾಶಗಳು ಪದ್ಮಜಾಂಡ ತೃತಯ
ಭೂತಾವರಣ ಸಹ ಚಿಂತಿಸು ಪರಮಾಣು
ಬಿಂದುಗಳಿನ್ನು ಪ್ರತಿ ಪ್ರತಿಕ
ಭೀತಿರಹಿತ ನಮ್ಮ ವಿಜಯ ವಿಠಲರೇಯ
ಈ ತೆರದಲ್ಲಿಪ್ಪ ಬಲ್ಲವಗೆಲ್ಲೆಲ್ಲಿ ೫

## ಧ್ರುವ ತಾಳ

ರಸನೆ ಮಿಕ್ಕಾದೋದಕ ಶ್ರೀಕರ ವರಷಧಾರಿ
ಬೆಸನೆ ಅಗ್ರೋದಕ ನೈವೇದ್ಯ ವಾರಿ ತೃಷಿ
ಬಿಸಿ ನಿಧಿ ನದಿ ಕ್ಷುದ್ರ ನದಿ ತಟಾಕ ವಾಪಿ
ಕುಶಲ ಕೂಪ ದೇವಖಾತ ವರತೆ ಮಡವು
ಪ್ರಸರ ಸರೋವರ ಕ್ರೀಡಾಜಲವ ಸಂ
ದಿಸಿ ಪೂರ್ವ ಪ್ರವಹ ಸುಳೆಫೇನ ಬುದ್ಬುದ
ಎಸೆವ ತೆರೆ ಬಹುರಸ ಸಮಸ್ತ ಬೊಮ್ಮಾಂಡ
ಮುಸುಕಿದ ಸುತ್ತುಮಿತಿ ತಿಳಿದು ಕೊಂಡಾಡುವುದು
ವಸುದೇವ ಪುತ್ರನಿದೆ ರೂಪದಿಂದಿಪ್ಪನೆಂದು
ನಸುನಗುತ ತಿಳಿವುದು ಯೋಗ್ಯಜನಕ್ಕೆ
ಅಸಮ ಸಾಹಸ ನಮ್ಮ ವಿಜಯವಿಠಲರೇಯ
ವಶವಾಗಿಯಿಪ್ಪ ಸಾಕಾರ ಸರ್ವೋತ್ತಮ ೬

## ಝಂಪೆ ತಾಳ

ಪುರಿ ಗೋಪುರ ದುರ್ಗ ಸಾಲಿ ಪ್ರಾಸಾದ ಮಂ
ದಿರ ಸಭೆ ಸಮಸ್ತ ದೇವಾಲಯ
ಪುರ ಅಗ್ರಹಾರ ಖೇಟಕ ಘೋಷ ವೇದಿಕ
ಅರವಂಟಿಗೆ ಆಸ್ಥಾನ ರಾಜಧಾನಿ
ಶರ ನಿಧಿ ನದಿ ಕೂಲ ದ್ವೀಪ ಪರ್ವತ ನಿಮ್ನ
ತರು ಮೊದಲಾದ ಭೂರುಹ ಜಾತಿ
ಮರಕತ ಮಿಕ್ಕಾ ನವರತುನ ರಜತ ಸ್ವರ್ನ
ಪರಿ ಲೋಹಕಾಂಶ ತಾಂಬ್ರಾದಿ ಧಾತು
ಪರಶು ನೇಗಲಿ ಶಕ್ತಿಗದ ಶಂಖ ಚಕ್ರ ತೋ
ಮರ ಪರೀಘ ಚಾಪ ನಾನಾಶಸ್ತ್ರವು
ಪರಿ ಪರಿ ಧಾನ್ಯ ರಥ ಫಲ ಪುಷ್ಪ ಹದಿನಾಲ್ಕು
ಧರಿಣಿತಳ ಉಪದ್ವೀಪ ಎಂಭತ್ತು ನಾಲ್ಕು ಲಕ್ಷ
ಶರೀರ ಧಾರಿಗಳ ಗಾತ್ರ ಚಿತ್ರಲೆಖ್ವನಿಂ
ದಿರದೆ ಬೆಮ್ಮಾಂಡ ಖರ್ಪರ ದ್ವಿಗುಣ
ಧರೆ ಮೀರಿ ಮೂಲ ಪ್ರಕೃತಿ ತನಕ ಯೋಚಿಸು
ಪರಮಾಣು ಮೂರುವಿಧ ಅಣಿ ಅಂಶಾ
ಭರಿತವಾಗಿವೆ ನೋಡು ಜಗವೆಲ್ಲ ಸರ್ವದಾ
ಇರುತಿಪ್ಪವು ಶುಭ್ರ ರಕ್ತ ಕಪ್ಪು
ಹರಿಯ ಚಿಂತಿಸು ಅಲ್ಲಿ ಒಂದೊಂದು ಭಾವದಲ್ಲಿ
ಮೆರೆವ ಆತುಮ ಜಗದಾತುಮನ್ನಾ
ಮರಿಯದಿರು ಆವಾವ ಕ್ರೀಯೆ ಮಾಡುವಾಗ
ಹೊರಗೆ ಒಳಗೆ ನೆನೆದು ಸುಖಿಸು ಸತತಾ
ಚರರಿಗೆ ಬದ್ಧವಾಗಿಪ್ಪ ಲಿಂಗ ಗಾ

ತುರದ ಸ್ಥಿತಿ ತಿಳಿದು ತಿಳಿದು ತಿಳಿಯೋ
ಪರಿಪೂರ್ಣ ಗುಣಪೂರ್ಣ ವಿಜಯ ವಿಠಲರೇಯ
ಸುರ ನರೋರಗರಲ್ಲಿ ಇನಿತು ನಿರ್ನೈಸಿ ೭

## ಅಟ್ಟತಾಳ

ಭೂತ ಪಂಚಕದಲ್ಲಿ ಬಹುವಿಧ ತಿಳಿದು ಗು
ಣಾತಿಶಯದಿಂದ ತತ್ತದ್ಗುಣಂಗಳ
ಮಾತುರ ಕರ್ಮಜ್ಞಾನ ತತ್ವ ಹುದುಗಿಸಿ
ಪ್ರೀತಿಯಿಂದಲಿ ಪ್ರಾಣ ಅನ್ನಮಯ ಕೋಶವು
ಈ ತೆರದಲಿ ಏಳು ವೊಂದೇಳು ತತುವವೊ
ಭೂತದಲ್ಲಿ ವುಂಟು ಐದು ಸ್ಥಾನದಲ್ಲಿ
ಶ್ರೋತರ ತ್ವಕು ಚಕ್ಷು ರಸಿಕ ನಾಶಿಕವನ್ನು
ಮಾತು ಮಾತಿಗೆ ಕೇಳಿ ಈಕ್ಷಿಸಿ ದ್ಯಾನಿಸಿ
ಕೌತುಕ ಐದುವ ಕಾಲಜ್ಞರ ಕೇಳಿ
ಧಾತು ಮೊದಲಾದ ಪ್ರತಿಮೆಯಲ್ಲಿ ಈ
ಭೂತಗಳಿಟ್ಟು ಒಂದೊಂದು ಬಗೆಯಿಂದ
ಶ್ರೀ ತರುಣೀಶನ್ನ ರೂಪಂಗಳಾನಂತ
ಜ್ಯೋತಿ ಪ್ರಕಾಶ ಮಯವಾದ ದೇವನ
ನೀತಿಯಿಂದಲಿ ನಿನ್ನ ಯೋಗ್ಯತ ಪ್ರಕಾರ
ಸ್ವೋತ್ತಮರಿಂದ ಉಪಾಸನೆ ಚಿಂತಿಸಿ
ಓತ ಪ್ರೋತದಂತೆ ಹರಿವ್ಯಾಪ್ತಿ ನಿಜ
ವಾಗಿ ಭೂತಕ್ಕೆ ಒಂದೊಂದು ಹೆಚ್ಚು ಕಡಿಮೆಯಿಂದ
ಧೌತ ಪಾಪನಾಗು ಪಾರಮಾರ್ಥಿಕದಲ್ಲಿ
ಶ್ವೇತದ್ವೀಪ ಸೂರ್ಯ ಮಂಡಲ ತನ್ನಯ
ಗಾತ್ರ ಸಾಲಿಗ್ರಾಮ ಪಂಚಭೇದಸ್ಥಾನ

ವಾತ ಪ್ರತೀಕದೊಳರ್ಚನೆ ಮಾಡು
ಆತುಮ ಮೂರುತಿ ವಿಜಯ ವಿಠ್ಠಲ ಸರ್ವಾ
ತೀತನು ಮೂರ್ತ್ಯಾ ಮೂರ್ತಿಯಲ್ಲಿ ನಿಲಿಸೊ ೮

ಆದಿತಾಳ

ಏಕೇಕ ಭೂತ ಲೌಕಿಕ ವೈದಿಕ
ನೇಕ ವ್ಯವಹಾರದಲ್ಲಿ ಶ್ರೀ ಕಾಂತನ ಮೂರ್ತಿಯ
ಸಾಕಾರವಾಗಿತಿಳಿ ಬೇಕಾದ ಪುರುಷಾರ್ಥಾ
ತಾ ಕೊಡುವನು ಜಗದೇಕ ವಂದ್ಯನು ಪುಣ್ಯಾ
ಶ್ಲೋಕ ಶೋಭನ ದೇವನಾಕಿ ವೃಂದರ ಸಹಿತ
ಆಕಾಶ ಮೊದಲಾದ ತತ್ವಂಗಳೆಲ್ಲ ಸರ್ವ
ಲೋಕವೆ ತುಂಬಿದೆ ಪರಮಾಣು ದ್ವ್ಯಣುಕವು ಎಂದು
ಅಕಾರ ಮಿಗಿಲಾದ ಎಂಟು ವರ್ಗ ದಿಂದ
ವೈಕುಂಠವಾಗುವುದು ದೇಶಕಾಲದಿವಿಡಿದು
ಪ್ರಾಕೃತ ರಹಿತನೆ ಹರಿಯೆಂದು ಕೊಂಡಾಡಿ
ಭೂತದೊಳು ಚರಿಸು ಸತ್ಕರ್ಮದಲ್ಲಿ
ವಾಕು ಬರಿದೆ ಮಾಡಿ ಬಾಳದಿರೆಲೊ ಮನುಜ
ಏಕಾಂತದವರ ಕೇಳು ಸುಖದಲ್ಲಿ ಬಾಳು ಬಾಳು
ಈ ಕಲಿಯುಗದಲ್ಲಿ ಇದನೆ ಕೈಕೊಂಡರೆ
ಶೋಕನಾಶ ಜನ್ಮ ಜನ್ಮಾಂತರದಲಿದ್ದ
ಏಕ ಚತುರಗುಣಾವಿಡಿದು ಪೂಜಿಸಿ ವಿ
ವೇಕನಾಗೆಲೊ ಪಂಚವಿಧರೊಳು ಒಬ್ಬನೆನಿಸಿ
ಕಾಕುಲಾತಿ ಬಿಟ್ಟು ವಿಜಯ ವಿಠ್ಠಲರೇಯನ್ನ
ಬಾಕುಳಿಗನಾಗಿ ಭಕ್ತಿಯಿಂದ ನಲಿದಾಡು ೯

## ಜತೆ

ಹರಿಯ ಚಿಂತಿಸು ಪಂಚಭೂತದಲ್ಲಿ ನಿತ್ಯ
ಕರುಣಾಳು ವಿಜಯ ವಿಠ್ಠಲ[ನೆ] ಏಕೀಭೂತಾ ೧೦

## ೧೪

## ಧ್ರುವ ತಾಳ

ಅರ್ಚಿಸು ಮನವೆ ನಿತ್ಯ ಅನಾದಿ ಮೂರುತಿಯ
ನಿಚ್ಚಳವಾಗಿ ನಿಸ್ಸಂಗದಲ್ಲಿ
ಅಚ್ಚಾ ಭಕುತಿಯಲ್ಲಿ ಪಂಚ ಭೇದಜ್ಞಾನ
ಎಚ್ಚತ್ತು ದಿವಾರಾತ್ರಿ ದೈನ್ಯ ವೃತ್ತಿ
ಯಾಚಕ ನಾನು ಬೊಮ್ಮಾದ್ಯರ ತಾರತಮ್ಯ ತಿಳಿದು
ಸಚ್ಚಿದಾನಂದಾತ್ಮಕ ಗುಣಗಳಿಂದ
ಅಚ್ಯುತಾನಂತ ಗೋವಿಂದ ಗೋಪಾಲಕೃಷ್ಣ
ಸುಚ್ಚರಿತಸಾರ ಸುಖಸಾಗರ
ನೆಚ್ಚಿದ ವರನೆಂಟಾ ನಿಗಮಾಗೋಚರನೆಂದು
ಮೆಚ್ಚಿಸು ಮುದದಿಂದ ಮುಂದಾಲಿಸಿ
ಬಚ್ಚಿಟ್ಟ ದ್ರವ್ಯದಂತೆ ಅನ್ಯರಿಗೆ ತೋರಿದರು
ಹುಚ್ಚು ಹುಚ್ಚಾಗಿರು ಬಾಹಿರದಲ್ಲಿ
ಹೆಚ್ಚುವದು ನಿನಗೆ ಇದರಿಂದ ಲಾಭ ಪ್ರಾಪ್ತಿ
ಬಿಚ್ಚಿ ಬಿಸಾಟಿದರು ಅಂತರಂಗ
ಸಚ್ಚರಾಚರದಂತೆ ಚರಿಸು ಚನ್ನಾಗಿ ಬಲು
ಚಚ್ಚರದಲಿ ಚಂಚಲ ಬೀರೂತ

ಹಚ್ಚಿಕೆ ಜನರನ್ನು ಒದೆದು ಓಡಿಸುವೊಳಗೆ
ಮೆಚ್ಚುಗೊಳಿಸು ತಿರು ವೈದೀಕವ
ಯಜ್ಞಾವಾಗದಂಥ ಪುಣ್ಯವೆ ಸಂಪಾದಿಸಿ
ಮುಚ್ಚು ಮರೆಯೆಲ್ಲೆ ಅನುಭವಿಸು
ಅಚ್ಚಟ ವೈರಾಗ್ಯ ಧೃಡವಾಗಿ ತಿಳಿದು ಕೆಂ
ಗಿಚ್ಚು ಬೀರೂವದು ಪಾಪದರಾಶಿಗೆ
ಲಚ್ಚು ಮನುಜನಾಗಿ ಲೋಕಕ್ಕೆ ಕಾಣಿಸು
ರಚ್ಚೆಗೆ ಹಾಕದಿರು ದಿವ್ಯ ಪ್ರಮೇಯಾ
ಸುಚಿತ್ರನಾದ ನಮ್ಮ ವಿಜಯ ವಿಠ್ಠಲರೇಯನ
ಅರ್ಚಾಗುಪ್ತ ಮಾರ್ಗದಲಿನಿಲಿಸು ಸಂತತವೊಲಿಸು ೧

## ಮಟ್ಟತಾಳ

ಕರ್ಮವ ಕಡೆಮಾಡಿ ನೆಲೆಗೊಂಡವನಾರು
ಧರ್ಮವನೆ ಮಾಡಿ ಕಡೆ ಬಿದ್ದವನಾರು
ಮರ್ಮ ತಿಳಿಯದನಕ ಏನೇನು ಮಾಡಿದರು
ನಿರ್ಮಳ ಪದವಿಗೆ ನಿಶ್ಚಿಂತ ಪಥವಲ್ಲಾ
ನಿರ್ಮತ್ಸರದಿಂದ ಎಳ್ಳನಿತದಾಗೆ
ಪೆರ್ಮೆಯಿಂದಲಿ ಬಹು ಅನುಭವ ಸಿದ್ಧಿಪದು
ಚರ್ಮಾ ಪಾಲಿಸಿಕೊಂಡು ಕಷ್ಟ ತರದಿಂದ
ದುರ್ಮತಿಯಾದರೆ ಫಲ ಪ್ರಾಪ್ತಿ ಉಂಟೆ
ಕರ್ಮ ಧರ್ಮದ ಒಡೆಯ ವಿಜಯ ವಿಠ್ಠಲರೇಯನ
ಮರ್ಮಗಳನು ತಿಳಿದು ವರ್ಣಿಸು ನಿನ್ನೊಳಗೆ ೨

## ತ್ರಿವಿಡಿ ತಾಳ

ಸ್ಥೂಲ ದ್ರವ್ಯಗಳ ಬಾಹಿರದಲಿ ತಂದು
ಕಾಲಕಾಲಕೆ ಆಯಾಸ ಬಡುವುದಲ್ಲಾ
ಕೇಳೋದು ಕಿವಿಗೊಟ್ಟು ಅನ್ಯರರಿಯದಂಥ
ಮೇಲು ಉಕ್ತಿಯನ್ನು ಕೇವಲ ಸುಲಭಾ
ಆಳು ಸಾಮಗ್ರಿಗಳು ಬೇಕಾದವಲ್ಲಾ
ವಿಶಾಲ ದೇಶ ಕೋಶ ಅರಸಸಲ್ಲಾ
(ವ್ಯಾ)ವೇಳ್ಯಗೆ ದೊರೆತದ್ದು ಪೂಜಿಸಲಿಬಹುದು
ಮೂಲ ಮುಟ್ಟದು ಕಾಣೋ ತಿಳಿಯದನಕಾ
ಸಾಲು ಸಾಲಾಗಿ ವೈಯ್ಯಾರ ತೋರುವುದಲ್ಲ
ಹೇಳುವೆ ಒಂದೊಂದು ದಿವ್ಯ ಮತುಗಳು ಹೀ
ಯಾಳಿಯಿಂದಲತಿ ನಿತ್ಯಮನದಾ
ಆಲೋಚನೆಯೆಲ್ಲ ಪೂಜಾವಿಧವೇ ಎಂದು
ವಾಲಯ ಹರಿಯ ಸಂಪ್ರೀತಿ ಬಡಿಸೂ
ಬಾಳು[ವು]ದನುದಿನ ಲೇಶವಾದರು ನಿನಗೆ
ಕಾಲ ಕರ್ಮದ ಭೀತಿ ಇಲ್ಲವಿಲ್ಲಾ
ಹಾಳು ಹರಟಿಯಮಾತು ಪೇಳುತ್ತಲಿದ್ದರೂ
ಓಲಾಡು ಅಂತರಂಗದ ಮಧ್ಯದಿ
ವಾಲಗವನೆ ಮಾಡು ಮರೆಯದೆ
ಏಳಲಾವೆನ್ನದಿರು ಎಲ್ಲಿದ್ದರು ನಿನಗೆ
ಕಾಲನ ಉಪದ್ರವಾಗದಿದಕೊ
ಶ್ರೀ ಲೋಲನಾದ ವಿಜಯ ವಿಠಲರೇಯನ
ಮಾಲೆಯಿಂದಲಿ ಎಣಿಸುತ ಚರಿಸುವದೂ ೩

## ಅಟ್ಟ ತಾಳ

ಸುಲಭವಾಗಿದ್ದ ಪೂಜೆಯ ನೋಡು ನಿನ್ನೊಳು
ಗಲಭೆಯಾಗದಿಪ್ಪದು ಕಾಣೊ ಎಂದಿಗೂ
ಎಲೊ ಎಲೊ ಮನವೆ ಇಂಥ ಯೋಗ ಸಂಪಾದಿಸಿ
ಬಲುಧನ್ಯನಾಗು ಬಾಹಿರಂಗಡಿಬಿಡು
ಕುಳಿತದ್ದು ನಿಂತದ್ದು ನಿಂತದ್ದು ತಿರುಗಾಡತಿದ್ದದ್ದು
ಮಲಗಿ ಕೊಂಡಿದ್ದದ್ದು ಇವು ನಾಲ್ಕರೊಳು
ಹಲವು ಬಗೆ ಉಂಟು ಹೆಜ್ಜೆಗೆ ಹೆಜ್ಜೆಗೆ ಕರ
ತಳದೊಳಗಿದ್ದ ಪದಾರ್ಥ ನೋಡಿದಂತೆ
ತಿಳಿದು ತಿಳಿಯಬೇಕು ಅನುಭವ ರೂಢದಲ್ಲಿ
ಕಲಿಭಂಜನ ನಮ್ಮ ವಿಜಯ ವಿಠ್ಠಲನಂಘ್ರಿ
ಜಲಜ ಕಾಂಬುವುದಕ್ಕೆ ಇದೆ ಇದೆ ಉಪಾಯಾ ೪

## ಆದಿತಾಳ

ಏಕಮೇವ ಸರ್ವ ಜಡದ್ರವ್ಯಂಗಳೆಲ್ಲಾ
ಲೋಕದೊಳಗೆ ಹರಿಯ ಆಕಾರವೆಂದು ಅರಿದು[ಅ]
ನೇಕ ವಾಕ್ಯಗಳೆಲ್ಲ ಒಡಿಯನಿಗೆ ಉಪಚಾರಾ
ನೇಕ ವಿಧದಿಂದ ನಿಜವೆಂದು ಹಿಗ್ಗುತಾ
ಈ ಕಳೇವರ ಮಿಕ್ಕಾದ ಇಂದ್ರಿಯಂಗಳು ತನ್ನ
ಜೋಕೆ ಮಾಡುವರು ಮಾನಿಸಿಕೊಂಬಾ ಸಕಲಜನರು
ಶ್ರೀ ಕಮಲಾಕ್ಷ ತನ್ನ ಅಧೀನವೆ ಎಂದು
ವ್ಯಾಕುಲ ಪಿಡಿಯದೆ ಚಿಂತಿಸಬೇಕು ನೀನೆ
ಲೌಕಿಕವಾದರು ವ್ಯರ್ಥವಾಗದು ವೈ
ದೀಕ ವೆನಿಸುವುದು ಎತ್ತಲಾದರೂ ನೋಡೆ

ಏಕೀ ಭೂತ ನಮ್ಮ ವಿಜಯ ವಿಠ್ಠಲರೇಯಾ
ಸಾಕುವ ಸಾಕುವ ಇಹ ಪರದಲ್ಲಿ ಒಲಿದೂ ೫

## ಜತೆ

ದ್ವಿವಿಧ ಕರ್ಮಗಳು ಹರಿಯಾಧೀನ ಚಿಂತನೆ
ವಿವರಿಸಿ ಮಾಡಲು ವಿಜಯ ವಿಠ್ಠಲಗೆ ಪ್ರೀತಿ ೬

## ೧೫

ಧ್ರುವತಾಳ

ಅಷ್ಟದಳದಲ್ಲೊಪ್ಪುವ ಕಮಲ ಹೃದಯಾಕಾಶದಲ್ಲಿ
ಅಷ್ಟದಿಕ್ಪಾಲಕರು ತಮ್ಮ ನಿಜದಳದೊಡನೆ
ಅಷ್ಟೈಶ್ವರ್ಯದಿಂದ ಶ್ರೀಶನ್ನ ಪದವಾಲಗ
ತುಷ್ಟರಾಗಿ ಮಾಡಿ ಸುಖಿಸುವರು
ಸ್ಪಷ್ಟನಾಗಿ ನಿರೂಪದಂತೆ ಕಾಲಕಾಲಕೆ ಬಿಡದೆ
ಶಿಷ್ಟಾಚಾರದಲ್ಲಿ ನಡೆಯುತಿದ್ದು
ವಿಷ್ಟು ಅಂಗುಷ್ಟ ಪ್ರಮಾಣ ವಿಶ್ವ ವ್ಯಾಪಕನಾಗಿ
ಅಷ್ಟ ಬಾಹ ಅಷ್ಟ ಆಯುಧ ಅತಿಸರ ಸೌಂದರ್ಯ
ಅಷ್ಟ ಪರಿಮಿತ ದ್ವಾತ್ರಿಂಶ ಲಕ್ಷಣ
ಸ್ಪಷ್ಟ ಕರ್ಣಿಕ ಪದ್ಮನಾಳ ಶೋಭಿಸುತಿಪ್ಪ
ಸೃಷ್ಟಿಯೊಳಗೆ ಇದು ತಿಳಿದ ಮನುಜ ಜ್ಞಾನಿ
ಇಷ್ಟಾರ್ಥ ಕೊಡುವ ಶ್ರೀ ವಿಜಯವಿಠಲ
ಕೃಷ್ಣ ಅಷ್ಟದಳ ಮಿಕ್ಕಾದಲ್ಲಿ ಸಂಚರಿಪಾ ೧

## ಮಟ್ಟ ತಾಳ

ಒಂದೊಂದು ದಳದಲ್ಲಿ ಒಬ್ಬೊಬ್ಬ ಪಾಲಕರು
ಪೊಂದಿಕೊಂಡಿಪ್ಪರು ಪ್ರತಿದಿನ ತೊಲಗದಲೆ
ನಂದದಲ್ಲಿ ತಮ್ಮ ಉಚಿತ ಸಾಧನಗಳ
ಅಂದದಿಂದಲಿ ಮಾಡಿ ಅತಿಹರುಷದಲಿದ್ದು
ಇಂದಿರೆ ಭೂ ಸಹಿತ ವಿಶ್ವಗುಣಪೂರ್ಣ
ನಿಂದಲ್ಲಿ ನಿಲ್ಲದೇ ನಾನಾವಿಧವನ್ನು
ತಂದು ಕೊಡುವನು ತವಕದಿ ಜೀವಕ್ಕೆ
ಸಿಂಧು ಶಯನನಾದ ವಿಜಯ ವಿಠಲ ಹೃದಯ
ಮಂದಿರ ದೊಳಗಿದ್ದು ಬಹು ಚರಿತೆಯಮಾಳ್ಪಾ ೨

## ತ್ರಿವಿಡಿ ತಾಳ

ಸುರಪನಲ್ಲಿಗೆ ಬರಲು ಪುಣ್ಯಮತಿಲಿ ಜೀವ
ನಿರುವ ಪಾವಕನಲ್ಲಿ ಬರಲಾಲಸ್ಯ ನಿದ್ರ
ತೆರಳಿ ಜವನಲ್ಲಿಗೆ ಹರಿ ಸಾಗೆ ಮಹಾಕ್ರೋಧ
ಬರುವುದು ಜೀವಕ್ಕೆ ಅಲ್ಲಿಂದತಿ ವೇಗ
ನಿರಋುತಿ ಯಲ್ಲಿಗೆ ಮೆಟ್ಟಿ ಪಾಪದ ಕೃತ್ಯ
ವರುಣನ್ನ ಬಳಿಯಲ್ಲಿ ನಾನಾವಿನೋದ
ಮರುತನಲ್ಲಿ ಹರಿ ಬಂದು ಪೋಗಲು ಜೀವ
ಪರಮ ಗಮನಾಗಮನವಾಗುವುದು
ತೆರಳಿ ಕುಬೇರನಮನಿಗೆ ಬರಲು ದ್ರವ್ಯ ಪ್ರದಾನಮಾಡಿಸುವ
ನಿರುತ ಈ ಪರಿಯಲ್ಲಿ ಪರಮ ಪುರುಷನು
ತಿರುಗುತಲಿಪ್ಪನು ಅವರವರ ಯೋಗ್ಯತ

ಇರವ ನೋಡಿ ಫಲವ ತಂದು ಕೊಡುವ
ಕರುಣಾಳುಗಳ ಒಡಿಯ ವಿಜಯ ವಿಠಲರೇಯಾ
ಎರಡೊಂದು ವಿಧದವರ ಪೊರೆವ ಕರ್ತನೆನಸಿ ೩

## ಅಟ್ಟತಾಳ

ಮಧ್ಯದಲ್ಲಿ ನಿಲ್ಲೆ ವೈರಾಗ್ಯ ಮಾಡುವ
ಬುದ್ಧಿ ಪಾಲಿಸುವನು ಸರ್ವ ಕೆಲಸದಲ್ಲಿ
ಪೊದ್ದಲು ಮುಕುಂದ ಜಾಗ್ರತೆ ತೋರುವ
ಸಿದ್ಧವು ಕರ್ಣಿಕೆ ಸೇರೆ ಕನಸುಗಳು
ಪದ್ಧತಿ ತಿಳಿವುದು ನಾಳದಿ ಸಾರಲು ಗಾಢ
ನಿದ್ರೆ ಆಗುವುದು ಜೀವಕೆ ಕಾಲ ತಿಳಿಯದೆ
ಶುದ್ಧಾತ್ಮ ಪರಿಚ್ಛಿನ್ನ ಮೂರುತಿ ಇದೆ ಅ
ನಾದ್ಯ ಅನಾದಿಕರ್ಮಂಗಳ ನೋಡಿ
ಶ್ರದ್ಧೆಯನ್ನು ಕೊಟ್ಟು ಮುಖ್ಯಪ್ರಾಣನ್ನ
ಪೊದ್ಧಿ ಬದುಕುವಂತೆ ಮಾಡುವನು
ಮುದ್ದು ಮೋಹನರಂಗ ವಿಜಯ ವಿಠಲ ಕರು
ಣಾಬ್ಧಿಯೆ ಕಾಣೊ ಭಜಕರ ವಂಶಕೆ ೪

## ಆದಿತಾಳ

ಹರಿ ಅಂತರಂಗದಲ್ಲಿ ಸರಿಯದೆ ವಾಸವಾಗಿ
ಇರಳು ಹಗಲು ಇಂಥ ಚರಿಯೆ ಮಾಡಿಸುತಿರೆ
ನರಲೋಕದೊಳಗೆ ಈಶ್ವರ ನಾನೆಂದು ನುಡಿವ
ಪರಮ ದುಃಖಿಷ್ಟರ ಗರ್ವಿಕೆಗೇನೆಂಬೆ ತಾ
ನರಿಯು ಸ್ವಸ್ಥಾನದಲ್ಲಿ ನೆರದು ತನ್ನ ಬಳಗಕ್ಕೆ

ಹರಿಯೆನಗೆನ್ನಿರೆಂದು ಒರಲಿಕೊಂಡರೆ ಅವು
ಶಿರ ದೂಗುವುದಲ್ಲದೆ ಸರಿ ಸರಿ ಎಂದು
ಹಿರಿದಾಗಿ ನೋಡಿದವರು ಪರಿಹಾಸ್ಯವೆಂದನ್ನರೆ
ನರಿಯ ಮಾತುಗಳೆಲ್ಲ ನರಿಗೆ ತಿಳಿದಂತೆ
ದುರುಳರಾಡುವ ಅರ್ಥ ದುರುಳರಿಗೆ ಸರಿ ಬಹದು
ಹರಿಯ ನರಿಯು ಮೆಚ್ಚುವುದೆ ಸರಕೆಂದರೆ ಓಡಿ
ಚರ ಹಾಕಿ ಪೋಗುವುದು ನರಿ ಕೇಸರಿಯಾಗುವುದೆ
ಉರಗನ ಕಾಣಲು ಸಾರಿರದೆ ಕೆಲಸಾರುವ
ನರನು ಈಶ್ವರನೇನೊ ಜರ ಮರಣ ಜನನದವ
ಹರಿಯೆಂದು ಒಮ್ಮೆ ಸ್ಮರಿಸೆ ದುರಿತ ಕೋಟಿಗಳು ಸಂ
ಹಾರವೆನ್ನಿರೊ ಇವನ ಸ್ಮರಣೆ ಇಂದೇನಾಹುದು
ಸುರರಾದಿಗಳ ಧೊರೆ ವಿಜಯ ವಿಠಲನ್ನ
ಚರಣವ ನೋಡಿದವ ಪರಮ ಜ್ಞಾನಿ ನಿತ್ಯ ೫

## ಜತೆ

ಉದಯಕಾಲದಲೆದ್ದು ವಿಜಯ ವಿಠಲನ್ನ
ಅದುಭೂತ ಕ್ರೀಡೆಯ ನೆನೆಸಿ ಮುಕುತಿಯ ಬಯಸಿ ೬

## ೧೬

## ಧ್ರುವ ತಾಳ

ಆಗರ ಸತಿ ಸುತ ಸೌಖ್ಯವೆಂದೆಂಬೊ ದುಃಖ ।
ಸಾಗರದೊಳಗೆ ಮುಳುಗಿ ಇರಳು ಹಗಲು।
ಲೋಗರಗೋಸುಗ ಚಿಂತಿಸಿ ಕಂಡ ಕಡೆ।

ಓಗರಕೆ ತಿರುಗಿ ಬೆಂಡಾಗುವೆ ।
ಭೋಗ ರಹಸ್ಯದಿಂದ ಭ್ರಮಣನಾಗಿ ಪ್ರ ।
ಜಾಗರವನ್ನು ಮರೆದು ಮಂದನಾದೆ ।
ಭಾಗಾರಮಾಡಿದರು ಸತ್ಯಾಧನ ಧರ್ಮ ।
ಯೋಗಾರಾಧನೆ ಕಾಣೆನೆಕಟಕಟ ।
ರಾಗರಾಗದಿಂದ ನಾನು ನನ್ನದು ಯೆಂಬೊ ।
ಈಗಾರಣ್ಯದ(?)ಮಧ್ಯ ಸುತ್ತುವೆನೊ ।
ಹಾಗರ ಹಾಗದಾಸೆ ಮಲದಿಂದ ಮಾತು ಪೇಳಿ !
ವೇಗ ರಾಜ್ಯ ಸಂಚರಿಸಿ ಜಠರ ಪೊರೆದೆ ।
ನಾಗರಾಜನ ಪೆಡೆಯ ಛಾಯಾದಲ್ಲಿದ್ದು ವೈ।
ಭೋಗದಾಸೆಯ ಬಯಸುವ ಮನುಜನಾಹೆ ।
ಸಾಗರಶಾಯಿ ನಮ್ಮ ವಿಜಯ ವಿಠ್ಠಲ ಸ್ವಾಮಿ ।
ಪೂಗಾರರಂತೆ ಮೆಚ್ಚಿಸದೆ ಭವಸಾರ್ದೆ ೧

## ಮಟ್ಟತಾಳ

ಸ್ವರ್ಗ ನರಕ ಭೂಮಿ ಚರಿಸಿದೆ ಸರ್ವದಲ್ಲಿ ।
ಮುಗ್ಗಿ ಮುಂಗಾಣದೆ ನಾನಾ ಪೊಟ್ಟೆಯಲ್ಲಿ ।
ವೆಗ್ಗಳಿಸಿ ಪೊಕ್ಕು ವ್ಯಥೆ ಪಟ್ಟು ಮತ್ತೆ ।
ನುಗ್ಗಾದೆನೊ ಬಲು ದೇಹವನೆ ಧರಿಸಿ ।
ತಗ್ಗಿ ಪೋಗಲಿಲ್ಲ ತಗಲಿದ ಈ ಕರ್ಮ
ಸುಗ್ಗಿಯೊಳಗೆ ಬಿದ್ದು ಸುಖದುಃಖವನುಂಬೆ ।
ಹಿಗ್ಗುವೆನೊ ವಿಷಯಾ ಹಿತವೆಂದು ನಂಬಿ ।
ಮಗ್ಗಲೊಳಗೆಯಿದ್ದ ಮಾರಿಯ ಕಾಣದಲೆ ।
ಸ್ವರ್ಗ ನರಕ ಭೂಮಿ ಚರಿಸಿದೆ ಕರುಣಾವೆ (ಕಾಣದೆ) ।

ಕಗ್ಗತ್ತಲೆ ಮಧ್ಯಸಿಲ್ಕಿ ಬಳಲುತಿಪ್ಪೆ ।
ಅಗ್ಗಳಿಕಾ ದೈವ ವಿಜಯ ವಿಠಲ ಎನ್ನ ।
ಯೋಗ್ಯತೆ ಬಲ್ಲವನೆ ಬಿನ್ನಪವನು ಕೇಳು ೨

## ತ್ರಿವಿಡಿ ತಾಳ

ಗಗನಾದಿಂದಲಿ ಮೇಘ ಪ್ರವೇಶವನು ಮಾಡಿ ।
ಮಿಗೆ ವರುಷದ್ವಾರದಲಿ ಧರಿಗೆ ಇಳಿದು ।
ಬಗೆ ಬಗೆ ಫಲದಲ್ಲಿ ಪೊಕ್ಕು ಪಕ್ವವಾಗಿ ।
ಹಗಲಿರುಳು ಬಳಲಿ ಅನ್ನಮುಖದಿಂದ ।
ವಿಗಡ ಮನುಜಾನಲ್ಲಿ ಪ್ರವಿಷ್ಠನಾಗಿದ್ದು ।
ಮಗುಳೆ ರೇತೋ ಕಣರೂಪದಿಂದ ।
ಜಿಗಳಿ ಮೂತ್ರ ದ್ವಾರಪೊಕ್ಕೆನಯ್ಯಾ ಅಕಟ ।
ತ್ರಿಗುಣದಲಿ ಬೆಳೆವಾ ಪರಿಯೇನಂಬೆ ।
ರಗಳೆ ವೊಂದು ದಿವಸ ತ್ರಿರಾತ್ರಿಗೆ ಕಲಿಲವು ।
ಬಗೆ ಪಂಚರಾತ್ರಿಗೆ ಬೊಬ್ಬುಳಿಯಂತೆ ।
ಸೊಗಡು ದಶರಾತ್ರಿಗೆ ಪೇಶಾಂಡವು ।
ತಿಂಗಳಿಗೆ ಶಿರಸು ಬಾಹು ವಿಗ್ರಹ ರೂಪ ।
ಮುಗಿದ ತರುವಾಯ ಮೂರನೆ ತಿಂಗಳಿಗೆ ರೋಮ ।
ಉಗರು ಚರ್ಮಸ್ಥಿ ನಿರ್ಮಾಣ ಛಿದ್ರ ।
ಬಿಗಿನ ಧಾತುಗಳು ನಾಲ್ಕನೆ ತಿಂಗಳಿಗೆನ್ನಿ ।
ದುಗುಡವಾಹದು ಐದನೆ ಮಾಸಕ್ಕೆ ಹಸಿವಿ ।
ತ್ರಿಗುಣಾತೀತ ನಮ್ಮ ವಿಜಯವಿಠ್ಠಲರೇಯ ।
ಯುಗಳ ಭಾವದಿಂದಲಿ ಈ ಪರಿಚರಿಸುವೆನು ೩

## ಅಟ್ಟತಾಳ

ಆರನೆ ಮಾಸಕ್ಕೆ ವಾಮಭಾಗದಿಂದ ।
ಭೋರನೆ ದಕ್ಷಿಣ ಭಾಗಕ್ಕೆ ಆವರ್ತಿ ।
ಈ ರೀತಿಯಲಿ ಶ್ರಮ ಜರಾಯು ಜನಾಹ ।
ಮೇರೆಯಿಲ್ಲದೆ ಸಪ್ತಮಾಸಕ್ಕೆ ಜೀವಕ್ಕೆ ।
ಪೂರ್ವ ಜನ್ಮದ ಕರ್ಮ ಸ್ಮರಣೆವುಂಟು ।
ಭಾರಿ ಭಾರಿಗೆ ನೆನಿಸುವ ಸುಖ ದುಃಖ ।
ಪಾರಗಾಣದಲಿಪ್ಪ ತಿಂಗಳೆಂಟಕ್ಕೆ ಕಟು ।
ಕ್ಷಾರ ತೀಕ್ಷ್ಣ ಉಷ್ಣ ಸೀತಾಮ್ಲರಸದಲ್ಲಿ ವಿ ।
ಕಾರ ಉಲ್ಬಣ ಯಾತನೆ ಬಾಧೆಯಾಗೋದು ।
ಭೋರನೆ ಒಂಭತ್ತು ತಿಂಗಳಿಗೆ ಕ್ರಿಮಿ ।
ಕ್ರೂರ ಕ್ಷತದಿಂದ ಸರ್ವಾಂಗ ಭಗ್ನದಿ ।
ಮೋರೆ ಕೆಳಗಾಗಿ ಮೊಳಕಾಲಸಂದಿಲಿ ।
ಘೋರ ನರಕ ಪೋಲುವ ಗರ್ಭದಲಿ ಬಿದ್ದು ।
ನಾರುವ ದುರ್ಗಂಧ ಸನ್ನಿ ರುದ್ಧವಾಗಿ ।
ದ್ವಾರಾಭಿ ಮುಖದಿಂದ ಅಳಲಿ ಬಳಲುತ ।
ಶಾರೀರ ಮುರಿದು ಮುಟ್ಟಿಗೆ ಮಾಡಿ ಕಟ್ಟಿದ ।
ಚೋರನಂದದಿಯಿಪ್ಪ ನಿರ್ಭಂದ ತೊಲಗದು ।
ಆರಿಗೆ ದೂರಲಿ ಆರು ಬಿಡಿಪರಿಲ್ಲ ।
ಆರಿಂದ ನಿರ್ವಹಿಸಿ ಆರು ಚಿಂತಿಪರಿಲ್ಲ ।
ಆರು ಎನಗೆ ಗತಿ ಕಾಣೆನೊ ಶೌರಿ ಮು ।
ರಾರಿ ಶ್ರೀವಿಜಯವಿಠ್ಠಲರೇಯ ।
ತಾರಿ ಬೆಂಡಾಗುತ ತ್ರೈತಾಪ ಓಡಿಸೊ ೪

## ಆದಿತಾಳ

ಸೂತಿಕ ಘಾಳಿಯಿಂದ ಹೊಡಿಸಿಕೊಂಡು ಬಲು ।
ಭೀತಿಗಾತುರನಾಗಿ ಸಂಕಟ ಬಟ್ಟು ಅಧೋ ।
ಪೂತಿ ಗಂಧದಿಂದ ಪೊರಟು ಪ್ರಳಾಪದಿಂದ ।
ಭೂತಳದೊಳು ಬಿದ್ದು ಹೊರಳುವೆನೊ ।
ವಾತ ಶೈತ್ಯ ಪೈತ್ಯಾಧಾತುವಿನಲ್ಲಿ ಹೀನ ।
ಆತುರವಂತನಾಗಿ ಭವದಲ್ಲಿ ಮುಣಗಿ ಸರ್ವ ।
ಜಾತಿಯಲ್ಲಿ ಪುಟ್ಟಿಸುವಿ ಈ ಪ್ರಕಾರದಿ ಗರ್ಭ ।
ಯಾತನೆ ಪೇಳಲಳವೆ ಅಹೊ ಅಹೊ ಅಯ್ಯೊ ।
ಪಾತಕ ಮತಿಯಿಂದ ಪುಣ್ಯವ ಕಳಕೊಂಡು ।
ಜ್ಞಾತ ನುಷ್ಠಾನ ಮರದೆ ಮಮತೆಯಿಂದ ।
ಆತುಮಾ ಅಹಂ ಮಮತೆಯಲ್ಲಿ ಸಂಚರಿಸಿ ಕಾಲಾ ।
ತೀತನಾದೆ ಸ್ವಧರ್ಮ ತೊರೆದು ।
ಮಾತು ಲಾಲಿಸಿ ಕೇಳೊ ಹೃದಯಾಕಾಶ ನಾಮಕನೆ ।
ಮಾತುರ ಕಾಲವಾದರೆ ಪೋತತನ ಧರಿಸಿ ಈ ।
ಮಾತೆ ಗರ್ಭದಲ್ಲಿ ಒಲ್ಲೆ ಒಲ್ಲೇ ।
ಭೂತಾದಿ ವರ್ತಮಾನ ಬಲ್ಲ ವೈಕುಂಠರಮಣ ।
ಭೌತಿಕ ಕಾಯವೆ ಬಿಡಿಸು ನಿನ್ನ ನಾಮವೆ ನುಡಿಸು ।
ಜ್ಯೋತಿರ್ಮಯ ಮೂರ್ತಿ ವಿಜಯವಿಠ್ಠಲರೇಯ ।
ಕೌತುಕವಾಗಿದೆ ನಿನ್ನ ವ್ಯಾಪಾರ ನಿತ್ಯ ೫

## ಜತೆ

ಪುಟ್ಟಿಸುವುದ ಬಿಡಿಸೊ ಪೂರ್ಣ ಕರುಣಾಂಬುಧೆ
ವಿಠಲ ವಿಜಯ ವಿಠ್ಠಲ ಅಪ್ರಮೇಯ ೬

## ೧೭

## ಧ್ರುವ ತಾಳ

ಆಚಾರವಂತನಾಗಿ ಅನುದಿನ ನಿನ್ನೊಳಗೆ
ಯೋಚಿಸು ಸುಷುಮ್ನ ನಾಡಿ ಮಧ್ಯ
ವಾಚಾಮಾದಿ ದೋಷ ಹಿಂಗಳೆದು ಚನ್ನಾಗಿ
ಆಚಮನಾದಿಯಿಂದ ಆಸನಹಾಕಿ
ಬಾಚಿ ತೊಡಕು ಬಿಡಿಸಿದಂತೆ ಭೇದವು ತಿಳಿದು
ಪ್ರಾಚೀನ ದಿಕ್ಕುಗಳ ವಿಚಾರಿಸಿ
ವಾಚಾರಂಭಣವಲ್ಲಾ ದ್ವಾದಶಾಂಗುಲಿ ಮೋಪ
ಈ ಚಕ್ರ ವಾಯು ಸಂಚಾರಗ್ರಹಿಸಿ
ಗೋಚರಿಸುವ ಮನ ಚಿತ್ತ ಬುದ್ಧಿಯಿಂದ
ಆ ಚೇತನಾಹಮ್ಮತಿ ಏಕಗೈದು
ಯಾಚಕ ವೃತ್ತಿಯಿಂದ ಪ್ರಾಣ ನಿ[ವಿ]ರೋಧ ಕರ್ಮ
ಮೋಚಕ ಮಾರ್ಗದಿಂದ ಬಹು ಶ್ರುತಿಯಲ್ಲಿ
ರೇಚಕ ಪೂರಕ ಕುಂಭಕ ನಿಲಿಸಿ ಆ
ಲೋಚನೆ ಮಾಡು ಆತ್ಮ ಅವಿಲದಿ (ಅವಿಲಂಬದಿ)
ಸೂಚನೆ ಕೇಳು ಮುನ್ನೆ ಪ್ರಸನ್ನ ವದನಾಂಭೋಜ
ಲೋಚನ ಹರಿಯ ಮೆಚ್ಚಿ ಮೆಚ್ಚಿಸಿ
ನೀಚ ಸಂಗವ ಬಿಟ್ಟು ನಿಜಭಕುತಿಯಿಂದ ನಿತ್ಯ
ಊಚ ಪ್ರವರ್ತಿ ದಿವಸ ದಿವಸಕ್ಕಧಿಕ
ಲೋಚನೇಂದ್ರಿಯ ಗೋಲಕ ಜೋತಿರ್ಮಧ್ಯಾಕಾಶ
ರೋಚಿಷ ವ್ಯಾಪ್ತಿ ಬಾಹ್ಯಪಂಚದಲ್ಲಿ

ಚಾಚುತ್ತ ಪೋಗುವದು ದಿಗ್ದೇಶ ಭೂಮಂಡಲ
ಈ ಚೇತನದ ವ್ಯಾಪಾರವದಿಂತೊ
ಸೂಚರಾಗಿದಕೆ ಅಪ ಭ್ರಷ್ಟ ದೇವತೆ ಸೂ
ರ್ಯ ಚಂದ್ರಮೌಳಿ ಪ್ರಾಣ ಶಿರಿ ಭಗವಂತ
ಪ್ರಾಚೀನ ಪುಣ್ಯ ಪಾಪದಿಂದ ಕರ್ಮ ಭೂಮಿಯಲ್ಲಿ
ಈ ಚರಾಚರ ಕಾಣಿಸಿ ಕೊಡುವರು
ಯೋಚನೆ ಬಿಡು ಹೇಯ ಅನಿತ್ಯ ಮುಂದೆ ಮುಗ
ಳಾಚರಣೆ ಮಾಡು ಇವರಿಗೆರಗಿ
ಭೂಚೋರ ಮೊದಲಾದ ರುಕ್ಷರಾಕ್ಷಸರು ಪಿ
ಶಾಚಿ ಈರ್ವರುಪದ್ರ ಓಡಿಸೆಂದು ದು
ರಾಚಾರವನ್ನ ಬಿಟ್ಟು ಹರುಷದಿಂದ
ನಾಚಿಕೆ ತೊರಿಯದೆಲೇ ಯಮನೇಮದಿಂದ ಸವ್ಯ
ಸಾಚಿ ಸೂತನ್ನ ನೆನಿಸು ತ್ರಿ ಬಗೆಯಿಂದ
ವಾಚಾಮ ಗೋಚರ ವಿಜಯ ವಿಠಲನ್ನ ಪ
ರಿಚಾರನಾಗು ಗುರುಗಳ ಉಪದೇಶದಿಂದ ೧

## ಮಟ್ಟತಾಳ

ಹೃದಯ ನಿಮ್ನದ ಮಧ್ಯ ಗ್ರಂಥಿಮಂಡಲವುಂಟು
ಇದರಲ್ಲಿ ಉಭಯ ಭಾಗದ ನಾಡಿಗಳು
ಎದುರೆದರು ಬೆರತು ಪೋಗಿವೆ ಅಧಲೋರ್ಧ್ವ
ಇದರ ವಿಭಾಗಗಳು ತಿಳಕೊಂಡವ ಧನ್ಯ
ಇದೆ ಎಡಬಲವಿಡಿದು ಸ್ತ್ರೀ ಪುರುಷರ ನಾಡಿ
ಇದೆ ಅರ್ಚಿರಾದಿ ಲೋಕದುಭಯ ಮಾರ್ಗ
ಇದರೊಳು ಬಲು ಭೇದ ಜ್ಞಾನ ಧ್ಯಾನದ ಬಲವೋ

ಸದಮಲ ಮೂರುತಿ ವಿಜಯ ವಿಠಲರೇಯನ
ಪದಗಳ ನೋಡುವ ಮಹಾತ್ಮ ಬಲ್ಲ ಕಾಣೋ ೨

## ತ್ರಿವಿಡಿ ತಾಳ

ಘನ ನಾಡ್ಯಾಂತರ್ಗತ ಎಂಟು ದಳದಕಮಲ
ಮಿನಗುತಿಪ್ಪದು ನೋಡಿ ಕಳಸದಂತೆ
ಅನುದಿನ ಅದರ ಮಧ್ಯದಿ ಒಂದು ಕರ್ಣಿಕೆ
ಕನಕಾದ್ರಿಯಂದದಲಿ ಶೋಭಿಸುತಿದೆ
ಅನಳಾರ್ಕ ಶಶಿ ಮಂಡಲ ಪೀಠದ ಮೇಲೆ
ಚಿನುಮಯ ಮೂರುತಿ ಕುಳಿತಿಹನೋ
ಅನಿಳ ಈತನ ಪಾದ ಮೂಲಾಶ್ರಯ ಮಾಡಿ ಭ
ಜನೆಯಿಂದ ಸುಖಿಸುವ ಜೀವ ಇಂತೊ
ಅನುಮಾನವಿದಕ್ಕಿಲ್ಲ ಅಧ್ಯಾತ್ಮನಿಶ್ಚಯ
ಇನನನುದಯ ದಿಕ್ಕಿನಲ್ಲಿ ಸಿದ್ಧವೆನ್ನಿ
ಇನಿತು ಗ್ರಹಿಸಿ ಮುಂದೆ ಜೀವ ಪ್ರಕರಣ ಕೇಳೊ
ಚಿನುಮಯಾತ್ಮನಯ್ಯಾ ಎಂದೆಂದಿಗೆ
ಗುಣತ್ರಯಾತ್ಮಕವಾದ ಲಿಂಗ ಬದ್ಧನಾಗಿ
ಎಣಿಸು ಆ ಮೇಲೆ ಅನಿರುದ್ಧ ದೇಹ
ಅನುವಾಗಿದೆ ಮತ್ತೆ ವೈಕಾರಿಕದಿಂದ
ಜನನವಾದ ಮನಸು ಪ್ರಕೃತಾದಿಂದ
ತನುವಾಗಿದೆ ನೋಡು ಮೂರು ವಿಧ ಕೂಡಿ
ಅನಿರುದ್ಧದಲಿ ಮೇಲೆ ತದಾಕಾರದಲ್ಲಿ
ವನಜ ಗರ್ಭಾದಿ ತತ್ವೇಶ್ವರರು ತಮ ತಮ್ಮ
ಮನಿಯಲ್ಲಿ ನಿಂದಿಹರು ಅಭಿಮತರಾಗಿ

ಮನಸು ಎಂಬೋದು ಕೇಳು ಒಂದೊಂದು ಪರಮಾಣು
ಎಣಿಸಿದರು ಅನಂತಾನಂತ ಅಂಶಿ
ಗಣನೆ ದೊರಕದು ಕಾಣೊ ಏನಂಬೆ ಸೋಜಿಗ
ಗುಣದ ಕಾರ್ಯದ ಸಂಗತಿ ಸಿಗಬಲ್ಲದೆ
ಮನಸು ಹೃದಯ ಇಂದ್ರಯೋನಿ ದಕ್ಷಣನಯನ
ದಿನ ರಾತ್ರಿ ಸಂಚಾರಾವಸ್ಥಿ ತ್ರಯವೋ
ಅನಿಳ ರುದ್ರ ಸೂರ್ಯರಾಮುಖ್ಯವಾಗಿ ಜೀ
ವನ ಪ್ರಕಾಶದಿಂದ ವ್ಯಾಪಾರವಾ
ಮನಸಿನ ವಶಮಾಡಿಸುವರೊ ಇದಕೆ
ಗುಣಪೂರ್ಣ ಪರಮಾತ್ಮ ಪ್ರಾಜ್ಞ ತೈಜಸ
ಪ್ರಣವ ಮೂರುತಿ ವಿಶ್ವ ಮೂರು ರೂಪಗಳೇಕ
ಕ್ಷಣಬಿಡದೆ ಸ್ಥಾನ ಸ್ಥಾನಕೆ ವೈವರು
ಅನಿಮಿಷ ತತಿಗಳಿಗೆ ಅಂಶದಿಂದಲಿ ಸಿದ್ಧ
ಮನುಜಾದಿಗಳಿಗೆ ಪ್ರಕಾಶ ವೃತ್ತಿ (ವ್ಯಾಪ್ತಿ)
ಅಣು ಜೀವವಾದರು ಪ್ರಕಾಶದಿಂದಲಿ
ಅನುಭವ ಮಾಡಿಸುವ ಹರಿಯ ಶಕ್ತಿ
ಮನಸಿನಲಿ ಜೀವನದ ಸಂಸ್ಕಾರವೀರ್ವಗೆ
ಜನುಮ ಜನುಮಾಂತರದು ತುಂಬಿಹದೊ
ದನುಜಾರಮರ ನಿಕರ ಒಂದೊಂದು ತತ್ವದಲಿ
ಗುಣ ಪ್ರವರ್ತಕರಾಗಿ ವಸತಿಯಯ್ಯಾ
ಗಣಿತ ವೆಂಬುದೆ ಇಲ್ಲ ತತ್ತತ್ಕರ್ಮಕೆ ತತ್ತ
ಜ್ಜನರು ನಿಯಾಮಕರು ನಿತ್ಯದಲ್ಲಿ
ಉಣಬೇಕು ಇವರಿಂದ ಸುಖದುಃಖ ಈ ಜೀವ
ಕೊನೆಗೆ ಯೋಗ್ಯತದಂತೆ ಸಾಧನವಾಹುದೊ

ಮನಸು ಕೇವಲ ಸೂಕ್ಷ್ಮ ಮಹವಲ್ಲ ಪ್ರದೇಶ
ಅನಿತು ಜನ್ಮದ ಸಂಸ್ಕಾರ ತುಂಬಿಹುದೊ
ತ್ರಣಕೆ ಗಜ ಜನುಮ ಆ ಗಜಕೆ ತೃಣಜನ್ಮಗಳು
ಅನಿತಾ ಬಂದರಾಗೇ ಒಂದೇ ಸಮನೋ
ಮನಸು ನೋಡಿದರೆ ಜೀವಕೆ ಭಿನ್ನ ಸುಷುಪ್ತಿ
ಕನಸು ಜಾಗರ ಕೊಡುವದೆಲ್ಲಿದ್ದರೂ
ಪ್ರಣವ ಪಾದ್ಯ ನಮ್ಮ ವಿಜಯ ವಿಠಲರೇಯನ
ನೆನಸು ನಾನಾ ಚಿತ್ರ ವ್ಯಾಪಾರವಪಾರ ೩

## ಅಟ್ಟತಾಳ

ಕಮಲ ಗರ್ಭಾಂತರ ಪ್ರಾಜ್ಞನ ಬಳಿಯಲ್ಲಿ
ತಮ ರಜ ಸತ್ವ ಗುಣಾತ್ಮಕ ಬದ್ಧ ಉ
ತ್ತಮ ಜೀವನಿರುತಿಪ್ಪ ಸಂಸಾರದೊಳು ಬಿದ್ದು
ಕ್ರಮದಿಂದ ವರ್ತಮಾನ ತಿಳಿ ಒಂದೊಂದು
ನಿಮಿಷ ಪಾಲಿಸುವಲ್ಲಿ ಸಪ್ತಾಂಗ ವಿಶ್ವನು
ಗಮಿಸಿ ಕಂಧರಭಾಗ ಇಂದ್ರಯೋನಿಯ ಮಧ್ಯ
ಸಮ ತೈಜಸ ದೇವನ್ನ ನೆರೆದು ಅಲ್ಲಿಂದ ಹೃ
ತ್ಕಮಲ ಮಧ್ಯದಲ್ಲಿದ್ದ ಪ್ರಾಜ್ಞನ ಕೊಡಲು
ತಮೋಗುಣದ ಕಾರ್ಯ ಮಿಗಿಲೋರ್ಧ್ವಗುಣದ ಮೇಲೆ
ಅಮಮ ಮನಸಿನಲ್ಲಿ ಚತುರ್ವಿಂಶತಿತತ್ವ
ಸಮ ಅಸಮವಾಗಿ ಸೂಕ್ಷ್ಮತರ ತೆರದಿಂದ ಪೂರ್ಣವಾಗಿಪ್ಪವು
ಅಮಿತ ಪ್ರಕಾಶ ಕಿರಣಮಯ ವಿಸ್ತಾರ
ರಮಣೀಯಾಗಿ ಜೀವಕಾಂತಿ ಮಿಶ್ರದಲಿ
ನಿಮಿಷಾರ್ಧದೊಳಗೆ ಅನಂತ ವಾಸನ ಮಯ

ಚಮತ್ಕೃತಿ ಯಿಂದಲಿ ಸೃಷ್ಟಿಯಾವದು
ಆಗಮಸಿದ್ಧ ನಿರ್ಣಯಸಿದ್ಧವಾಗಿದೆ ಇದೆ
ಪ್ರಮೇಯ ಭಾಗಗಳೆಲ್ಲಾ ಉಪದೇಶ ಗಮ್ಯಮೊ
ಉಮೆಯ ರಸ ತತ್ವ ಏಕಭಾಗದ ಕ್ರೀಯ
ಕ್ಷಮೆಯಲ್ಲಿ ವ್ಯಾಪಿಸಿಕೊಂಡಿದೆ ಬಲು ವಿಧ
ರಮೆಯರಸ ನಮ್ಮ ವಿಜಯ ವಿಠಲನ್ನ
ವಿಮಲ ಗತಿಯಿಂದ ಧ್ಯಾನವಮಾಡು ೬

## ಆದಿತಾಳ

ಕಂದ ಮೂಲದಿಂದ ಋಜುವಾಗಿ ಪೊಳೆವ ನಾಳ
ರಂಧ್ರವುಳ್ಳ ನಾಡಿಗಳು ಗ್ರಂಥಿಭೇದಿಸಿಕೊಂಡು
ಇಂದ್ರಯೋನಿಯ ಸಾರಿ ಅಗ್ರಭಾಗದಿಂದ
ಒಂದೊಂದು ಜ್ಞಾನೆಂದ್ರಿಯಕೆ ಪ್ರವೇಶವಾಗಿಹವೊ
ಅಂದವ ನೋಡು ಮುಖ್ಯ ಧ್ಯಾನಗೈಯ ಬೇಕಾದರೆ
ದ್ವಂದ್ವಾತೀತನಾಗಿ ದಕ್ಷಿಣಾಕ್ಷಿಯಲಿಂದ
ರಂಧ್ರವ ಬಂಧಿಸಿ ತಿರೊಭಾವ ಶ್ವಾಸದಿಂದ
ಸಂದಿದ್ದ ಭೌತಿಕ ತೊರದು ಪ್ರಾಕೃತದೇಹ
ಪೊಂದು ವಿಶ್ವತೈಜಸನ್ನ ಪ್ರಾಜ್ಞನೊಳಗೆ ಇಟ್ಟು
ಕುಂದದಲೆ ಭಜಿಪುದು ಇದೆ ಮಾನಸಪೂಜೆ
ಕೆಂದಳಾತ್ಮಕವಾದ ಕಮಲ ಕರ್ನಿಕೆ ಮೂಲಾಗ್ರ
ಒಂದೊಂದು ಸ್ಥಾನವೆನ್ನಿ ಹೃದಯ ವ್ಯಾಪ್ತಿ ಸಮೇತ
ನಿಂದು ಒಪ್ಪುತಲಿಪ್ಪ ಪುರುಷತ್ರಯನನು ವೊಲಿಸು
ವಂದಿರಸು ಹದಿನಾರು ಕಳಾಭಿಮಾನಿಗಳಿಗೆ
ಮುಂದೆ ಮುಂದೊಲಿದು ತಾರತಮ್ಯಂದ

ಸಂದರುಶನ ಮಾಡು ಉತ್ತಮೋತ್ತಮ ಭಕ್ತಿ
ಯಿಂದ ಮುಖ್ಯ ಪ್ರಾಣನ ಸೇವಿಸಿ ಅಲ್ಲಿಂದ
ಇಂದಿರೇಶನ ಮೂರ್ತಿ ನಿನಗಿಷ್ಟವಾದದ್ದು
ನಂದದಿಂದಲಿ ನೆನೆಸಿ ಏಕೀ ಭೂತವ ಮಾಡು
ಸಂದೇಹನಾಗದಿರು ಬ್ರಹ್ಮನಾಡಿಯ ಮಧ್ಯ
ತುಂದಿ ಊರ್ಧ್ವಭಾಗಕ್ಕೆ ದ್ವಾದಶಾಂಗುಲಿ ಹೃದಯ
ಮಂದಿರದೊಳು ಭಜಿಸು ದಹರಾಕಾಶದಲ್ಲಿ
ಎಂದೆಂದಿಗೆ ಇನಿತು ಇಷ್ಟ ಪುಣ್ಯ ಸಂಪಾದಿಸಿ
ನಿಂದಿತ ಕರ್ಮಗಳು ಪೋಗಾಡು ನಲಿದಾಡು
ಮಂದಮತಿಯಲ್ಲಿ ಕೆಡದಿರು ಬಾಳದಿರು
ಹಿಂದಕ್ಕೆ ಹಿಂದಕ್ಕೆ ಸರಿದು ಮೆಲ್ಲ ಮೆಲ್ಲನೆ ಮು
ಕ್ಕುಂದನ ಕಾಣುವುದು ಪಂಚಸ್ಥಾನದಲ್ಲಿ
ನಂದವಾದ ಜೀವಕ್ಕೆ ವಿಪರೀತ
ಬಂದಿಹುದು ನೋಡು ಅನಾದಿಯಿಂದ ಹರಿಯ
ಬಂಧಕ ಶಕ್ತಿಗೆ ಶರಣೆಂದು ಬಾಗಬೇಕು
ವೃಂದಾರಕರ ಪ್ರಿಯ ವಿಜಯ ವಿಠಲರೇಯ
ಸಂದರುಶನ ಕೊಡದೆ ಆವುದು ಸಿದ್ಧಿಸದು ೫

## ಜತೆ

ಶ್ರವಣ ಮನನ ಧ್ಯಾನೋಪಾಸನೆ ಮಾಡೋದು
ಜನುಮ ರಹಿತ ನಮ್ಮ ವಿಜಯ ವಿಠಲ ಸುಳಿವ ೬

## ೧೮

## ಧ್ರುವ ತಾಳ

ಆದಿಮೂರುತಿ ಪುರುಷ ಪೂರ್ಣ ಗುಣಾಂಬುಧಿ ಪ್ರಳ ।
ಯೋದಕಾತೀತ ವಟಪತ್ರಶಾಯಿ ।
ಮೋದಾ ಪ್ರಮೋದಾಕಾಯ ಶ್ರೀ ಭೂದುರ್ಗೇಶ ಅ ।
ನಾದಿ ಪ್ರಸಿದ್ಧ ಶುದ್ಧಾಂತಿಕಾಂತಿಕಾ ।
ವೇದ ವೇದಾಂತ ಗರ್ಭ ಗಂಭೀರ ಮಹಿಮಾ ಮಧು ।
ಸೂದನ ಪಾಪಸೂದ ಸುಲಭಾ ಸಹ್ಯತ್ ।
ಆದಿತ್ಯಾವರ್ನ ಕೋಟಿ ಅಪ್ರತರ್ಕ ಅಪ್ರತಿ ।
ಆದಿವರ್ಣಾ ಪ್ರತಿಪಾದ್ಯ ಪುಣ್ಯಶ್ಲೋಕ ।
ಪಾದತ್ರಿಪಾದ ಭಿನ್ನಾಭಿನ್ನಾ ವಂಶಾರೂಪಾ ಪ್ರ ।
ಸಾದ ವಿಗ್ರಹ ದೈನ್ಯಶ್ಯ ಕುಲಭಾಸ್ಕರೀ ।
ಪಾದವನಂಬಿದ ಜನರ ಯಾವತ್ಸಂಶಯ ।
ಛೇದಾಯಕಾ ಛೆತ್ರಾಧೀಶ ಪ್ರಭುವೆ ।
ಆದಾನಾದಿಕರ್ತ ಅಶೇಷ ಸಾಕ್ಷಿ ವಿ ।
ನೋದನಾನಾವತರಾತ ವಿಷ್ಣುತುರ್ಯ ।
ಯಾದವ ಶಿರೋರನ್ನ ಅಮೃತಾರ್ಣವಾ ಸಪ್ರಹ ।
ಲ್ಲಾದ ರಕ್ಷಕ ಗೋವ ತ್ರಾಣ ಪ್ರಾಣ ।
ಪಾದೋದರ ಪರಿಯಂಕ ವಿಜಯವಿಠ್ಠಲ ದಾ ।
ಮೋದರ ಸರ್ವವ್ಯಾಪ್ತನೆಂದು ಉಪಾಸನೆ ಮಾಡು ೧

## ಮಟ್ಟತಾಳ

ಶೂನ್ಯನಾಮಕನಾಗಿ ಮಲಗುವ ಮಹದೈವ ।
ಕನ್ಯಾಶಿರೋಮಣಿ ಲಕುಮಿಗೆ ಕೃಪೆಯಿಂದ ।
ಉನ್ನತವಾಗಿದ್ದ ಸೌಭಾಗ್ಯವ ಕೊಟ್ಟು ।
ತನ್ನಿಚ್ಛೆಯಿಂದ ಕ್ರೀಡಿಯಾಡುವನೆಂದು ।
ಅನಂತ ಜೀವರಾಶಿಗಳ ನೋಡಿ ।
ಪುಣ್ಯ ಪಾಪವುಳ್ಳ ಬೀಜ ಕರ್ಮಗಳಿಂದ ।
ಭಿನ್ನಲಿಂಗಗಳನೆ ಮಾಡುವೆನೆಂದು ಪ್ರ ।
ಸನ್ನನಾದನು ಕಾಣೋ ಪ್ರಕೃತಿಯ ಮಾತಿಗೆ ।
ಪನ್ನಗಶಾಯಿ ವಿಜಯ ವಿಠ್ಠಲರೇಯ ।
ಬಿನ್ನಾಣದಿಂದ ಮೆರೆವ ಮನ್ಮಥನಯ್ಯಾ । ೨

## ತ್ರಿವಿಡಿ ತಾಳ

ಆತ್ಮಸರ್ಗವ ಮಾಡಿ ಮುಕ್ತರ ಸಂಗಡ ।
ಅತ್ಯಂತ ಕ್ರೀಡೆಯ ನಾಡಿದಾ ಇರಳೂ ।
ಮತ್ತೆ ಆತುರವಾಯಾ ಏಕೀಭೂತನಾಗಿ ।
ಉತ್ತಮ ಶ್ಲೋಕನು ನಗುತವೇಗ ।
ಹೊತ್ತು ಉಳಿದಿರಲಾಗಿ ಪ್ರಥಮ ವಾಸುದೇವ ।
ವ್ಯಕ್ತಿಯಾದನು ಕಾಣ್ಣೊ ಶೂನ್ಯನಿಂದ ।
ಇತ್ತ ಲಾಲಿಸುವುದು ಈತನೇ ಸರ್ವರ ।
ಪೆತ್ತ ಪುರುಷಾದೇಹಾಧಾರಿಗಳ ।
ಪ್ರತ್ಯೇಕ ರೂಪಗಳಧರಿಸಿ ಅನಿರುದ್ಧಾದಿ ।
ಮೂರ್ತಿಯಿಂದ ಲಿಂಗೋಪಾದಾನವೊ ।

ಸತ್ಯವೆ ಸರಿಯಿದು ಮರಳೆಸರ್ವರನ್ನ ಮಾ ।
ಮಾರುತ್ತನಿಂದಲಿ ಕೇಳಿ ಪದವಿಯಿತ್ತ ।
ಚಿತ್ತದಲಿ ತಿಳಿ ಪುರುಷ ಸೂಕ್ತಗಳಿಂದ ।
ಸ್ತೋತ್ರ ಮಾಡಿಸಿಕೊಂಡ ಹಯಗ್ರೀವನೊ ।
ನಿತ್ಯ ಚತುರಮೂರ್ತಿ ಒಂದಾಗಿ ಸರ್ವರನ್ನ ।
ತುತ್ತು ಮಾಡಿದ ಕಾಣೊ ಅರುಣೋದಯ ।
ಚಿತ್ರಕೃತಿಯ ತನ್ನ ದೇಹಾದಿಂದ ।
ಪುಟ್ಟಿಸಿದ ವಿರಜನಾಮಕವಾರಿಯಾ ।
ಸತ್ವಜೀವಿಗಳಿಗೆ ಸ್ನಾನಾ ಮಾಡಿಸಿ ಲಿಂಗಾ ।
ಕಿತ್ತಿ ಪೋಗುವಂತೆ ನಿರ್ಣೈಸಿದ ।
ಸತ್ಯ ಸಂಕಲ್ಪನು ನಿಶ್ಶೇಷ್ಯವಾಗಿದ್ದ ।
ಚಿತ್ತುಗಳಿಗೆ ಜ್ಞಾನಿಚ್ಛೆಪ್ರಯತ್ನ ।
ಇತ್ತಾನು ಸ್ವ ಸ್ವಯೋಗ್ಯತಾದನಿತು ಅಂತಾ ।
ರಾತುಮ ವಾಸುದೇವನು ಪ್ರಥಮದಲ್ಲಿ ।
ತತ್ವಕೆ ನೇಮಿಸಿದ ಒಬ್ಬೊಬ್ಬಸುರರೀಗೆ ।
ಕರ್ತುನಮ್ಮಾ ವಿಜಯ ವಿಠ್ಠಲರೇಯ ।
ಕೀರ್ತಿ ಪುರುಷ ಇಂತು ನಲಿವಾನಂದದಿಂದಾ ೩

## ಅಟ್ಟತಾಳ

ಈತನಿಂದಲಿ ದೇವಾ ನಾರಾಯಣದೇವಾ ।
ಜಾತನಾದನು ಕಾಣೊ ಕ್ಷೋಭಕ ಸರ್ವ ।
ತೀತ ಸಮಸ್ತ ವರ್ತಮಾನರಿಗೆ ಕ್ಷು ।
ತಾತುರ ಪಿಪಾಸ ಪುಟ್ಟಿಸಿದನು ಅಂದು ।
ಚೇತನರಾಶಿಯ ಉದ್ಭವಮಾಡಿ ಈ ।

ಗಾತುರ ಮೊದಲಾದ ಜೀವರಾಶಿಯ ದೇಹ ।
ತಾ ತೋರಿಸಿಕೊಟ್ಟು ಸರ್ವರನ ನರಾ ।
ಗಾತುರಾದೊಳು ಪ್ರವಿಷ್ಠ ಮಾಡಿಸಿ ತನ್ನ ।
ಗಾತುರದೊಳಗಿಟ್ಟು ಅಲ್ಲಿಂದ ಚತುರ ಮೂ ।
ರುತಿಯಾದನು ವಾಸುದೇವಾ ಸಂಕರುಷಣ ।
ಖ್ಯಾತ ಪ್ರದ್ಯುಮ್ನ ಅನಿರುದ್ಧನಾಮದಿ ।
ಶ್ವೇತ ರಕ್ತ ಪೀತ ಕೃಷ್ಣವರ್ನದಿಂದ ।
ಭೂತಿ ಉಳ್ಳವನಯ್ಯಾ ಸಕಲ ರೂಪಸಮ ।
ಮಾತ್ರ ಕಾಲಾವಣೆ ಭೇದಾವೆಂಬೋದಿಲ್ಲ ।
ಈ ತೆರದಲಿ ಕೇಳಿ ದ್ವಿತಿಯ ವಾಸುದೇವ ।
ಪ್ರಾತಃಕಾಲದಲ್ಲಿ ಪುರುಷನಾಮಕ ಅಜಾ ।
ಜಾತನ್ನ ಪಡೆದನು ಮಹಾಲಿಂಗೋಪಾದಾನಾ ।
ಸೂತ್ರನಾಮಕ ಪ್ರಾಣನ್ನ ಸಂಕರುಷಣ ।
ಓತ ಪ್ರೋತ ಮಾರುತನೀತನೆಂಬರು ।
ಮಾತುಪುಶಿಯಲ್ಲ ಪ್ರದ್ಯುಮ್ನ ದೇವರಿಗೆ ।
ಜಾತರಾದರು ಕನ್ಯೆಯರು ಈರ್ವರು ನಿಜಾ ।
ವಾತಧಾತಗೆ ರಾಣಿಯರು ಎನಿಸಿ ಬಲು ।
ಆತುರದಿಂದಲಿ ಸಂತಾನ ಪಡೆದರು ।
ನೀತಿಯನ್ನು ನೋಡು ಪರಂಪರೆಸರ್ಗವ ।
ಚಾತರ್ಯ ಪ್ರದ್ಯುಮ್ನ ಅರ್ಧನಾರಿರೂಪ ।
ತಾತಾಳಿ ಸರ್ವಜೀವರ ನುಂಗಿ ತನ್ನಯ ।
ಗಾತುರ ಎಡಬಲದಿಂದ ಪುಂಪೆಂಗಳ ।
ಚಾತುರ್ವರ್ಣಾಶ್ರಮ ಪುಟ್ಟಿಸಿದನು ಗಡ ।
ಭೂತಳಾಧಿಪ ನಮ್ಮಾ ವಿಜಯ ವಿಠ್ಠಲರೇಯಾ ।
ದಾತಾನು ಕಾಣೋ ಸರ್ವಜೀವರಿಗೆ ೪

## ಆದಿತಾಳ

ಅನಿರುದ್ಧದೇವನು ಸರ್ವರಿಗೆ ಲಿಂಗದಿಂದ ।
ತನುವ ಪಾಲಿಸಿದನು ಅವರವರ ತಕ್ಕದ್ದು ।
ಮನಸು ಮೊದಲಾಗಿ ಪುಥವಿಪರಿಯಂತ ।
ತನವು ಪಾಲಿಸಿದಾನು ಇಲ್ಲಿಗೆ ಲಿಂಗಾಸರ್ಗ ।
ಘನವಾಗಿ ತಿಳಿವುದು ಹರಿ ಏಕ ಭೂತನಾಗಿ ।
ಪುನರಾವತಿ ವ್ಯಕ್ತನಾದ ಚತುರ ರೂಪ ।
ಗುಣ ಉಪಾದಾನದಿಂದ ಸರ್ವ ಜೀವರಿಗೆ ಸಾ ।
ಧನ ಕರ್ಮ ಪಾಪಪುಣ್ಯ ಭೋಗದೇಹವನಿತ್ತ ।
ಜನನ ಮರಣರೋಗಕೆ ಕಾರಣವೆನಿಸಿ ಜೀ ।
ವನರಾಶಿಗಣ ದವರನ್ನ ಸುತ್ತಿಸಿಸುವ ಒಳಗಿದ್ದು ।
ಅಣುರೋಣಿ ಮಹಾ ಪುರುಷ ಜಡ ತತ್ವದಿಂದಲಿ ಯೋ ।
ಚನೆ ಇಲ್ಲದೇವೆ ಪಂಚಾಕೋಶಾವರ್ಣ ಮಾಡಿ ।
ಮಿನುಗುವಾ ಐದು ರೂಪಕೇಳಿ ದೈವ ನಾರಾ ।
ಯಣ ದ್ವಿತಿಯ ವಾಸುದೇವ ಸಂಕರುಷಣ ಪ್ರದ್ಯುಮ್ನ ।
ಅನಿರುದ್ಧಾದಿಗಳಿವೆ ಆನಂದಮಯಾದಿಗಳೋ ।
ನೆನಿಸಿ ಅವ್ಯಕ್ತಾತತ್ವಾದಿ ಚತುರವಿಂಶತಿ ।
ವನಜ ಜಾಂಡಕೆ ಇದೇ ಅವರ್ಕರೂಪಾವೆನ್ನಿ ।
ಅನಿಮಿಷಗಣವುಂಟು ತತ್‌ಸ್ಥಾನ ತರತಮ್ಯ ।
ಗುಣವಂತ ಈ ಪರಿ ತಿಳಿದೈದು ರೂಪಗಳ ।
ಮನದಲ್ಲಿ ನಿಲಿಸಿ ಕೊಂಡಾಡಲು ಅಪರೋಕ್ಷ ।
ತೃಣ ಮಿಗಿಲಾದಲ್ಲಿ ಇದನೆ ಗ್ರಹಿಸುವುದು ।
ಅನುಭವವಾಗುವುದು ಆದ್ಯಂತ ಕಾಲ ಜ್ಞಾನ ।

ಮುನಿ ವೃಂದವಂದ್ಯ ನಮ್ಮ ವಿಜಯ ವಿಠ್ಠಲರೇಯ ।
ದಿನ ರಾತ್ರಿಯಲ್ಲಿ ಒಡನೆ ತಿರುಗುವಾ ಬಂದು ೫

## ಜತೆ

ಇರಳು ಹಗಲು ಇದನೆ ಯೊಚಿಸು ಮನದಲ್ಲಿ ।
ಕರುಣಾಕರ ಮೂರ್ತಿ ವಿಜಯ ವಿಠಲ ಒಲಿವ ೬

## ೧೯

## ಧ್ರುವ ತಾಳ

ಆವಪರಿಯಿಂದ ನಿನ್ನರ್ಚಿಸುವೆ ನಿಗಮಮಣಿ
ದೇವ ಮಹೋತ್ತಮ ಮಹಾ ಮಹಿಮಾ
ಜೀವೋತ್ತಮರು ಪೂರ್ವದಲ್ಲಿ ಜಪತಪ ವ್ರತ
ಪಾವಕಾಹುತಿಯಿಂದಲಾರಾಧಿಸೇ
ಭಾವದಲಿ ಕಾಣರು ಬಹುಕಾಳ ತೊಳಲೆ ರಾ
ಜೀವ ವದನನೆಂದು ಅನಂತವಾನಂತ ವೇ
ದಾವಳಿಗಳು ಕೂಗಿ ಪೇಳುತಿವಕೋ
ಹ್ಯಾವರಿಕೆ ಸಂಸಾರ ಡಾವಣಿಯನಡುವೆ ಕೊರ
ಳಾವಲಿಗೆ ಸಿಗಿಬಿದ್ದು ಮಿಡುಕುತಿಪ್ಪ
ಜೀವಾಧಮನು ನಿನ್ನ ಮೆಚ್ಚಿಸಲಾಪನೆ ವಸು
ದೇವನ ನಂದನ ದ್ವಿಜಾಪತಿ ಶಂದನಾ
ಪೂವಿಲ್ಲನಯ್ಯಾ ಅದೃಶ ವಿಜಯ ವಿಠಲ
ಸೇವಿ ಆಗುವದೆಂತೊ ಮತಿ ವಿಭ್ರಮನಿಗೆ ೧

## ಅಟ್ಟ ತಾಳ

ಅರ್ಚಿಸುವೆ ನಿನ್ನ ಅರ್ಚಿಸಲಾರೆನೋ
ಮೆಚ್ಚಿಸುವನೆ ನಿನ್ನ ಮೆಚ್ಚಿಸಲಾರೆನು
ನಿಚ್ಚ ಸಪುತವನಧಿ ಅಚ್ಚಲದೊಳಗುಳ್ಳ
ಅಚ್ಚ ಕುಸುಮ ಪತ್ರಾ ನಿಚ್ಚಯಾದಿಗಳೆಲ್ಲ
ಅರ್ಚನೆ ಮಾಡಿದರು ಮೆಚ್ಚಾಗುವುದೇನೊ
ಹೆಚ್ಚಿನ ದೈವವೇ ಮುಚಕುಂದ ವರದಾ
ಅಚಿಂತ್ಯನಾಮಕನೆ ವಿಜಯ ವಿಠ್ಠಲ ನೀನೆ
ಸಚ್ಚಿದಾನಂದೈಕನೆ ನೆಚ್ಚಿನ ಕರುಣಾಳೇ ೨

## ತ್ರಿವಿಡಿ ತಾಳ

ನಿತ್ಯ ತೃಪ್ತನು ನೀನು ನಿರ್ವಿಕಾರನು ನೀನು
ಸತ್ಯ ಸಂಕಲ್ಪ ಶುದ್ಧಾತ್ಮ ಅಂತರಾತ್ಮಕಾ
ಅತ್ಯಾಶ್ಚರ್ಯವ ತೋರುವ ಮಹಾಪುರುಷಾ
ದಿತ್ಯ ಸನ್ನಿಭ ಕೋಟಿ ನಿರ್ಮಲಾಂಗಾ
ಸತ್ಯಲೋಕದ ವಾಸಿ ಸಂತರ್ಪಣೆ ಮಾಡಿದರು
ಕೃತ್ಯವೇ ನಿನಗದರಲ್ಲಿ ಇಲ್ಲಾ
ಮರ್ತ್ಯ ಲೋಕದ ನೊರಜು ಏಕಾಗ್ರಮನದಲ್ಲಿ
ಅತ್ಯಂತವಾಗಿ ಪೂಜಿಸಬಲ್ಲನೇ
ಸತ್ಯಧರ್ಮ ನಾನು ವಿಜಯವಿಠ್ಠಲ ನಿನಗೆ
ಭೃತ್ಯರಂಗ ಸಂಗಾ ನಲಿವುದೇ ತೃಪ್ತಿ ೩

## ಅಟ್ಟತಾಳ

ಸದನದೊಳಗೆ ಮಾಡುಳ್ಳ ಪದಾರ್ಥ
ಮುದದಿಂದಲಿ ನಿನ್ನ ಸಮ್ಮುಖದಲ್ಲಿ ಇಟ್ಟು
ಎದುರಲಿನಿಂದ ಮನಸ್ಸಿಗೆ ತೋರಿದ ಹಾಗೆ
ಪದುಮನಾಭ ನಿನ್ನ ಪದಕೆ ಸಮರ್ಪಿಸ
ಲದರೊಳಗೊಂದು ಸ್ವಲ್ಪ ಕಡಿಮೆಯಾ
ಗದು ನೋಡು ನಿನ್ನ ಮಹಿಮೆಗೆ ನಮೋನಮೋ
ಅದೆ ಮಹಾಪ್ರಸಾದ ಭಕುತರು ಭುಂಜಿಸಿ
ಪದವಿಯಲ್ಲಿ ಅಧಿಕವಾದ ಸುಖವ ಬಡುವರು
ಸುದರಶನ ನಮೊ ವಿಜಯ ವಿಠ್ಠಲರೇಯಾ
ಇದರಿಂದ ನೀ ಕೃಪಾ ಉದಧೊ ಸದ್ಗುಣ ದೇವಾ ೪

## ಆದಿತಾಳ

ಮಿಗಿಲಾದ ದೈವಗಳು ಯುಗಳ ಕರಗಳನು
ಮುಗಿದು ದೂರದಲಿ ನೀನುಗುಳುವ ಬಾಯಿ ತೊಂಬ
ಲಿಗೆ ಶಿರವಾಗಿ ತಮ್ಮ ಮೊಗವನು ನೋಡುತ್ತ ನ
ಮಗೆ ಕೊಡುವನೋ ನಿಮಗೆ ಈವೆನೆನುತಲಿ
ಜಗುಳಿ ಪೋಗುವದೇ ಮನದೆಗಿಯದೆ ಸೋತಗಾರು
ಯುಗ ಯುಗಾಂತರಕೆ ಮರುಗಿ ಮರುಳಾಗುವರು
ಯುಗ ವರ್ತಿನಾಮ ಚನ್ನ ವಿಜಯ ವಿಠ್ಠಲರನ್ನ
ಹಗಲಿರುಳು ಅರ್ಚಿಸಿ ನಿನ್ನಗುರು ಕಾಣಲಳವೇ ೫

### ಜತೆ

ಯಾತರಿಂದಲಿ ನಿನ್ನ ಒಲಿಸಿಕೊಳಬಲ್ಲೆನೆ
ಧಾತಾರುತ್ತಮ ನಾಮಾ ವಿಜಯ ವಿಠಲ ಪೂರ್ವಿ ೬

## ೨೦

### ಧ್ರುವತಾಳ

ಉತ್ತಮ ಶ್ಲೋಕ ನಿನ್ನ ಪೂಜಿಸುವೆನೆಂದು
ಉತ್ತಮಾಂಗವಿಡಿದು ನಖಶಿಖ ಪರಿಯಂತ
ಚಿತ್ತದಲ್ಲಿ ಗುಣಿಸಿ ಎಣಿಸಿ ತಿಳಿ ಬಿಡದೆ
ಸ್ತುತಿಸುತ್ತಾ ಅರಸಿ ನೋಡಿದರೂ ಎತ್ತಲೂ ಕಾಣೆನಯ್ಯಾ
ಚಿತ್ತು ಶರೀರದಲ್ಲಿ ಹೊತ್ತು ಹೊತ್ತಿಗೆ ಹಾರೈಸಿ ನೋಡಿದರು
ದತ್ತ ಸ್ವಾತಂತ್ರದಲ್ಲಿ ಪೂರ್ಣವಾಗಿ ಬೊಮ್ಮಾಂಡ
ತತ್ವೇಶರೊಡನೆ ತುಂಬಿಹುದಯ್ಯಾ
ಭೃತ್ಯಾವರ್ಗರಾಗಿ ತಮ್ಮ ತಮ್ಮಾಯೋಗ್ಯತೆ
ಸತ್ಯವಾಗಿ ತಿಳಿದು ಭಜಿಸುವಾರು
ತೆತ್ತಿಗನಾನಹುದು ಎರದೆಂದಿಗೆ ಕೆ[ಲ]
ಉತ್ತಮ ಜ್ಞಾನಿಗಳು ಪೂಜಿಸಿದಾ
ಪ್ರತ್ಯೇಕ ಪ್ರತ್ಯೇಕ ಪ್ರದೇಶ ಎನಗೆಂತೊ
ಮತ್ತೊಂದಪೇಕ್ಷೆ ಉಂಟು ಪೂಜಿಸುತ್ತಾಲಿಪ್ಪದು ನ್ನಿನಂಗ ಎನಗೆ
ಹತ್ತಾದು ಕಾಣಯ್ಯ ಯಥಾರ್ಥ ಪೇಳಿದೆನೊ
ಇತ್ತ ಸಮ್ಮೊಗವಾಗೊ ಗುಣವಾರುಧಿ
ವಿತ್ತಾದಿ ಭಾಗ್ಯಒಲ್ಲೆ ಕರುಣವಿದ್ದರಾದಡೆ

ಹತ್ತೀಗರದು ಮುಕ್ತಾಮುಕ್ತ ನಿಕರ
ಅತ್ಯಣು ಮಹತ್ತು ರೂಪಗಳಂ ಬಿಡದೆ
ನಿತ್ಯದಲ್ಲಿ ಭಜಿಸಿದಂಥಾ ಸ್ಥಾನ
ಎತ್ತಲಾನಿಕೆ ತೋರಿ ಹರುಷ ಎನ್ನ ಮನಕೆ
ಹತ್ತುವಂತೆ ಮಾಡೊ ಮುದದಿಂದಲೀ ತರ್ಕ
ಕೀರ್ತಿವಂತ ವಿಜಯ ವಿಠಲ ನಿನ್ನ
ಕೀರ್ತನೆ ಒಂದೇ ಸರ್ವ ಸಾಧಾರಣ ಜನಕೆ ೧

## ಮಟ್ಟತಾಳ

ಚರಣ ತಳದಲ್ಲಿ ಪಾತಾಳಲೋಕ
ಇರುತಿಪ್ಪಾದು ಪಾದದಲ್ಲಿ ರಸಾತಳ
ಮಿರುಗುತಿದೆ ಜಂಘೆಯಲಿ ತಳಾ ತಳ
ಅರಳಿ ನೋಡಲು ಸುತಳ ಜಾನುಪ್ರದೇಶದಲ್ಲಿ
ನಿರುತಸಿದ್ಧವಾಹುದು ವಿತಳ ಲೋಕಭಾಗ
ಭರಿತವಾಗಿದೆ ದೇಹ ಅತಳ ಕೊಳೆಗಳಲ್ಲಿ ಕಟಿ
ತೇರವಿಲೀಹ ಅಂತರಿಕ್ಷ ಭುವರ್ಲೋಕ ನಾಭಿಲು
ಪರಿಭಾಗ ನಭೀಲಿ ಭೂಲೋಕ ಹೃದಯದಲಿ
ಸ್ವರ್ಗ ಕುಕ್ಷಿಲೀ ಮಹರ್ಲೋಕ
ಮರಳೆ ಜನೋ ಲೋಕ ಮುಖದಲ್ಲಿ ಪೋದು
ಪೊರೆನೊಸಳಲ್ಲಿ ಉಂಟು ತಪೋಲೋಕ ಮತ್ತೆ
ಶಿರಸಿನಲ್ಲಿ ಸತ್ಯಲೋಕದ ಅವಸ್ಥ
ಎರಡೇಳು ಭುವನ ಪರಿಪೂರ್ಣವಾಗಿ ನಿನಗೆ
ಭಾರವೆ ಶರಣಾರ ಪರಿಪಾಲ ವಿಜಯ ವಿಠಲರೇಯನ
ಸ್ಮರಣೆ ಒಂದಲ್ಲದೆ ಮನುಜಗೆ ಸ್ಥಳಕಾಣೆ ೨

## ತ್ರಿವಿಡಿ ತಾಳ

ಶ್ರವಣದಲ್ಲಿ ಧರ್ಮಾದ್ಯರು ದಿಗ್ದೇವತೆಗಳು
ರವಿಲೋಚನದಲ್ಲಿ ಇರುತಿಪ್ಪರು
ಪವನನು ತಿತ್ಯ ಮುಖದಲ್ಲಿ ಅಶ್ವಿನಿಯ ನಾಶಿಕ
ತವಕದಿಂದಲಿ ವರುಣ ಜಿಹ್ವೆಯಲಿ
ಭವ ಅಹಂಮತಿಯಲ್ಲಿ ಖಗ ಶೇಷಾದ್ಯರು ಸಹಿತ
ಪವಮಾನ ಪ್ರಾಣದಲ್ಲಿ ಬುದ್ಧಿ ಗಿರಿಜಾ
ದಿವಿಜೇಶ ಮನುಮಥ ಮನಶಿನಲ್ಲಿ ಉಂಟು
ಪವನಾಹಂಕಾರಿಕ ಕೊಕ್ಕಿನಲ್ಲಿ
ಶಿವನಿಂದ ಭಂಗನಾದವನು ಹಸ್ತದಲ್ಲಿ
ದಿವಿಜೇಶನ ಪುತ್ರಪಾದದಲ್ಲಿ
ಹವಣದಿಂದಲಿ ನೋಡೆ ಎಡ ಬಿಡದಲೊಂದೊಂದು
ಅವಯವಗಳಲ್ಲಿ ಉಳ್ಳಾದವರು ಉದು
ಭವರಾಗಿ ಅಲ್ಲಲ್ಲಿ ನಿನ್ನ ಪೂಜಿಸುವರೊ
ಅವಸರದಿಂದಲ್ಲಿ ವಾಲ್ಯೆಶಿ ಕೇಳುತ್ತಾ
ಕುವಲಯ ರಮಣ ಶ್ರೀ ವಿಜಯ ವಿಠಲರೇಯಾ
ಕವಿ ಜನರು ವಾಸವಗಿರಲು ಉತ್ತರವೇನೊ ೩

## ಅಟ್ಟತಾಳ

ರೋಮ ರೋಮದಲ್ಲಿ ಬೊಮ್ಮಾಂಡ ತುಂಬಿದೆ
ಆ ಮಹಾ ಮಹಿಮನೆ ನಿನ್ನ ಪ್ರತಿಮೆ ವೊಂದು
ನೇಮ ಮಾಡಿಕೊಂಡು ಪೂಜಿಸುವೆನೆಂದು
ಕಾಮಿಸಿದದರಿಂದ ಎಂತಾಹುದೊ ದೇವ

ಕಾಮರಸಾದಿ ಪೀಠ ದೇವಾದ್ಯರು ಎಲ್ಲಾ
ಯಾಮಯಾಮವನ್ನೂ ಬಿಡದೆ ಪೂಜಿಸುವರೊ
ರೋಮ ಒಂದರಲ್ಲಿ ತೆರನು ಗಾಣೆನೊ ನಾನು
ಸ್ವಾಮಿ ವೇದಾತೀತ ವಿಜಯ ವಿಠಲ ನಿನ್ನ
ನಾಮವೆ ಅನುದಿನ ಸುಲಭವಾಗಿದೆ ನೋಡೂ ೪

## ಆದಿತಾಳ

ಪ್ರತಿದಿನದಲ್ಲಿ ನಿನ್ನ ಭಕುತರು ಪೂಜಿಸಿದ
ಅತಿಶಯವಾಗಿದ್ದ ಲೀಲೆ ಯಾಕೆನಗೆ
ಪತಿತ ಪಾವನ ಕೇಳು ಆರು ಪೂಜಿಸದಿಪ್ಪಾ
ಮೃತ ಕಾಯದಲ್ಲಿ ಎನಗೊಂದು ಪ್ರದೇಶ ತೋರು
ಹಿತವಹದು ಇಂದು ನುಡಿದ ಉತ್ತರಕ್ಕೆ
ಪೃಥವಿ ಒಳಗೆ ನಿನ್ನ ನಾಮಗಳು ಅಗ
ಣಿತವಾಗಿ ತುಂಬಿ ಒಂದೊಂದಧಿಕವಾಗಿ
ತುತಿಸಿ ಕೊಂಡಾಡಿದತ್ತಿ ಕಡೆಮೊದಲು ಸಮಯವನ್ನು
ಮತಿವಂತರೊಡೆಯ ಶ್ರೀ ವಿಜಯ ವಿಠಲರೇಯ
ನುತಿಸುವೆ ನಾನು ವಿಲಕ್ಷಣ ಪುರುಷಾ ನಿನ್ನಾ ೫

## ಜತೆ

ನಖಶಿಖ ಪರಿಯಂತ ಭಜಿಸೆನೆಂದರೆ ಕಾಣೆ
ಸುಖನಿಧಿ ವಿಜಯ ವಿಠಲ ಗುಣ ಪೂರ್ಣಾ ೬

## ೨೧

### ಧ್ರುವತಾಳ

ಋಜುಗಣಸ್ಥರ ಪ್ರಕರಣವನ್ನು ಕೇಳಿ ನಿತ್ಯ ।
ಸುಜನರಿಗೆ ಬಲು ಸುಜನರಯ್ಯಾ ।
ಕುಜನ ಮಾರ್ಗದವರ ವ್ಯಾಪಾರ ಇವರಿಗಿಲ್ಲ ।
ರಜೋಗುಣದಿಂದ ಮಹಾ ಸತ್ವವೆರಸಿ ।
ತ್ರಿಜಗದೊಳಗೆ ಒಂದೊಂದಂಗವ ಧರಿಸಿ ವಾ ।
ರಿಜ ಕಲ್ಪ ಪರಿಯಂತ ಚರಿಸುವರು ।
ಅಜನ ಪಟ್ಟಕ್ಕೆ ಸಾರೆ ಚರಮದೇಹ ಚತು ।
ರ್ಭುಜ ಯುಕ್ತ ಜಪಮಾಲೆ ಕಮಂಡಲ ।
ದ್ವಿಜಗಮನ ವಾಣಿ ಪತಿ ಸರ್ವ ಜೀವಿಗಳನ್ನು ।
ಸೃಜಿಸುವ ಮಹಾಯೋಗ ಚತುರವದನ ।
ಭುಜಗೇಶ ಭೋಗ ತ[ಲ್ಪ] ಈತನಿಗೆ ಸ್ವಬಿಂಬ ।
ನಿಜ ವಾಸುದೇವನೆಂಬೋ ನಾಮವುಂಟು ।
ಭಜನೆ ಮಾಡುವ ತನ್ನಾಕಾರದಂತೆ ।
ವೃಜಗುಣ ರೂಪ ಕ್ರೀಯ ಭೇದದಿಂದ ।
ರಜದೂರನಾಗಿ ಒಂದರೊಳನಂತ ಕಾಣುತ್ತ ।
ಗಜ ಮೊದಲಾದ ತನ್ನ ದೇಹವಿಡಿದ ।
ರಜ ಮಾತುರವಲ್ಲ ಸರ್ವವು ವಿಸ್ತಾರ ಪಂ ।
ಕಜ ಪಾಣಿಗಿಂತ ನೋಡಾನಂತ ಕಡಿಮೆ ।
ಯಜಮಾನನೀತನಯ್ಯಾ ಮುಕ್ತಿಲಿ ಸಂಕರುಷಣ ।
ನಿಜ ರೂಪದಿಂದ ಚರಿಯವಿಲ್ಲ ಇತ್ತ ।

ಪ್ರಜಗಳಿಗೆ ಇವರು ಮುಖ್ಯ ಪ್ರೇರಕರು ವಾ ।
ರಿಜನಾಭನ ತರುವಾಯದಲ್ಲಿ ಬಿಡದೆ ।
ಯಜನಾದಿ ಕರ್ಮಂಗಳಿಗೆ ಪೂರ್ಣ ಫಲಕೆ ಪಾತ್ರರು ।
ಪ್ರಜಗಳು ಮಾಡಿದ ಪುಣ್ಯ ಇವರಿಗಕ್ಕು ।
ದ್ವಿಜಜಾತಿಯಲಿ ಶ್ರೇಷ್ಠನಾಗಿಪ್ಪ ಹರಿಯ ಮು ।
ಖಜನಾಗಿ ಜನಿಸಿ ವಿರಾಟದಲ್ಲಿ ।
ಬಿಜಯಂಗೈವನು ಇದೇ ದೇಹದಲ್ಲಿ ವಿ ।
ರಜೆಯಲ್ಲಿ ಮುಣುಗಿ ವಿಲಿಂಗನಾಗಿ ಸಾ ।
ಹಜಗತಿ ಐದುವ ಸರ್ವಾಂಗ ಸಾಯುಜ್ಯ ।
ರಜನಿಚರಾರಿ ವಾಸುದೇವಾನಲ್ಲಿ ।
ಭಜನೆಯಿಲ್ಲವು ಕಾಣೊ ಈತನು ಅ ।
ನುಜನಿತ್ತಶಾಪವನ್ನು ಮನ್ನಿಸಿದ ।
ವಿಜಯ ಸಾರಥಿ ನಮ್ಮ ವಿಜಯ ವಿಠ್ಠಲನ ವಾ ।
ರಿಜ ಪಾದ ಸಂತತ ಮನದಲ್ಲಿಟ್ಟ ಗುರುವೆ ೧

## ಮಟ್ಟ ತಾಳ

ತೊಂಭತ್ತೆಂಟು ಮಂದಿ ಲಾತವ್ಯರು ಕಾಣೋ ।
ಎಂಬುದು ನಿಜವೆನ್ನಿ ಒಬ್ಬಗೆ ನನ ಪದವಿ ।
ಅಂಬುಜ ಸಂಭವಗೆ ಸತ್ಯಲೋಕದ ಪದವಿ ।
ಉಂಬೋರು ಪ್ರಾರಬ್ಧಾ ಶತಸ್ಥರೊಂದೆ ಗಣ ।
ಒಂಭತ್ತು ವಿಧ ಭಕುತಿ ಇವರಲ್ಲಿ ನಿತ್ಯಾ ।
ತುಂಬಿ ಕೊಂಡಿಹದು ಅನಾರಬ್ಧ ಕಾಲಕ್ಕೆ ।
ಬಿಂಬನೋಳ್ಪದು ಮತ್ತೆ ಕಾಲ ವ್ಯವಧಾನ ।
ಕುಂಭಿಣಿಯೊಳಗಿವರು ಪುಟ್ಟಿದ ಕಾಲಕ್ಕೂ ।

ಡಂಭಕತನ ನಡತೆ ಸಲ್ಲದು ಸರ್ವರಲಿ ।
ಅಂಬುಜ ಪತಿ ನಮ್ಮಾ ವಿಜಯ ವಿಠ್ಠಲ ನಂಘ್ರಿ।
ಬೆಂಬಿಡದೇ ನೋಡಿ ನಲಿನಲಿದಾಡುವರು ೨

## ರೂಪಕ ತಾಳ

ಪದುಮಜಾಂಡಾವರಣ ಪುಟ್ಟದ ಪೂರ್ವದಲಿ ।
ಸದಮಲವಾಗಿದ್ದ ಲಾತವ್ಯಜನರೆಲ್ಲ ।
ಉದುಭವಿಸಿದರಂದು ಸೂಕ್ಷ್ಮ ಶರೀರದಲಿ ।
ಒದಗಿ ಇಪ್ಪತ್ತೊಂದು ಮೇಲೆ ಮೂರರ ಕೂಡಿ ।
ಅದುಭೂತವಾಗಿದ್ದ ಅನಿರುದ್ಧನಿಂದಲಿ ।
ಮದನಾರಿತತ್ವ ಆರಂಭಿಸಿಕೊಂಡು ।
ಇದೆಯಿದೆ ಗಾತ್ರದಲಿ ಅಭಿಮಾನಿಗಳಹುದು ।
ಅಧಿಷ್ಠನರಾಗಿ ಅಲ್ಲಿಗಲ್ಲಿಗೆಯಿದ್ದ ।
ಮುದದಿಂದಲಿ ತಮ್ಮ ಸಾಧನ ಮಾಡುವರು ।
ಎದುರಿಲ್ಲ ಈ ಜನಕೆ ಸ್ಥೂಲ ದೇಹ ಬರುವ ।
ದದು ಕಾಣೊ ಮನೋಮಯ ಮುಖ್ಯ ಪ್ರಾಣ ।
ವಿಧಿಗಳಿಂದಲಿ ಸಿದ್ಧ ವಿಶೇಷ ಜ್ಞಾನಿಗಳು ।
ಪದೋಪದಿಗೆ ಅಯತಾರ್ಥ ಸಂಶಯವಿಲ್ಲ ।
ಮಧು ವೈರಿಯ ಕರುಣ ವತ್ಸಲ ಇವರಲ್ಲಿ ।
ಪದವಿ ಐದುವದಕ್ಕೆ ತರತಮ್ಯವೊಂದುಂಟು ।
ನಿಧಿ ಪ್ರಧಾನ ಹರಿ ವಿಜಯ ವಿಠ್ಠಲನಲ್ಲಿ ।
ವಿಧ ಬಹುವಿಧದಿಂದ ಚಿತ್ತವೊಂದಿಸಿ ಇಪ್ಪರೊ ೩

## ಝಂಪೆ ತಾಳ

ವಾಸುದೇವನಿಂದ ಒಂದು ಸೂಕ್ಷ್ಮದೇಹ ।
ಲೇಸಾಗಿ ಬರುವುದು ಪ್ರಥಮದಲ್ಲಿ ।
ಭಾಸುರ ಅನಿರುದ್ಧ ದೇವನಿಂದಲಿ ಪ್ರ ।
ಕಾಶಿಸುವ ಗಾತ್ರ ಮೂರೊಂದು ಮೂರು ।
ಈಸು ಕಳೆದು ಮುಂದೆ ಇಪ್ಪತ್ತೊಂದು ಮುಂದೆ ।
ಕೋಶಗಳು ಶೇರಿದವು ವಾಣೀಶಗೆ ।
ತೋಷದಿಂದಲಿ ನೋಡೆ ಅನಿರುದ್ದನಿಂದಲಜ ।
ಗಾ ಶರೀರಗಳು ಅಷ್ಟ ವಿಂಶತಿ ।
ವಾಸುದೇವನ ದೇಹ ಒಂದು ಗೂಡಿಸಿ ಎ ।
ಣಿಸಿದರೆ ಒಂದು ಕಡಿಮೆ ಮೂವತ್ತು ।
ಭೂಷಣವಾಗಿಹವು ಪ್ರತ್ಯೇಕ ಪ್ರತ್ಯೇಕ ।
ಲೇಶ ಬಿಡದಲೆ ಸೂಕ್ಷ್ಮಲಿಂಗೋಪಾಧಿ ।
ಅಸತ್ವರಾಜಸ ತಾಮಸದಲ್ಲಿ ಒಂದೊಂದು ।
ಮೋಸವಿಲ್ಲದೆ ಮಹದಲ್ಲಿವಂದು ತೈ ।
ಜಸ ವೈಕಾರಿಕ ತಾಮಸ ಕೂಡಿದಲ್ಲಿ ।
ಸೂಸುತಿಪ್ಪುವು ಮೂರರಲ್ಲಿ ಮೂರು ।
ಶಾಶ್ವತವಾಗಿ ಮನಸಹಿತ ಇಪ್ಪತ್ತೊಂದು ।
ಅಸಮಸ್ತ ಚತುರ್ವಿಂಶ ತತ್ವದಲಿ ।
ವಾಸವಾಗಿ ಇಪ್ಪತ್ತೆಂಟು ದೇಹದಿಂದ ।
ಹ್ರಾಸ ವೃದ್ಧಿಗಳಿಲ್ಲ ಅಯತಾರ್ಥ ಜ್ಞಾನ ।
ಅಶರೀರಂಗಳು ಭೇದ ಮಾತ್ರವೋ ।
ಕೇಶವಾಚ್ಯುತನಂತ ವಿಜಯ ವಿಠ್ಠಲರೇಯನ ।
ರಾಶಿಗುಣಗಳನು ಎಣಿಸುವನು ವೇದೋಕ್ತದಲಿ ೪

## ತ್ರಿವಿಡಿತಾಳ

ಮೊದಲು ಪುಟ್ಟಿದ ದೇಹ ಮಹತತ್ವಾತ್ಮಕ ವೆನ್ನಿ
ಅದರ ತರುವಾಯ ಮಹಾಂಕಾರವೊ ।
ಇದೆಯಿದೆ ಪ್ರಕಾರ ಒಂದರ ಮೇಲೆ ಒಂದು ।
ಒದಗಿ ಕೊಂಡಿಪ್ಪವು ಸೂಕ್ಷ್ಮವಾಗಿ ।
ಅದುಭೂತ ಅಂಶಿ ಅಂಶಗಳಿಂದ ಯನಿತು ।
ಆದುದು ಕಾಣೋ ತತ್ವಪುಟ್ಟಿದ ಮುನ್ನಮೊ ।
ವಿಧಗೆ ಈ ಪರಿಯುಂಟು ಪೃಥ್ವಿ ತತ್ವದ ತನಕ ।
ವಿಧಿ ನಿಷೇಧ ಇವರಿಗೆ ಇಲ್ಲವೊ ।
ಮುದದಿಂದ ಕರ್ಮಗಳು ಮಾಡುವರು ಹರಿಯ ಪಾ ।
ದದ ಧ್ಯಾನ ಪ್ರವಾಹ ರೂಪದಲಿ ।
ಹದುಳವೆ ಕೇಳಿಸರಿ ಎಂದೆಂದಿಗಾದರು ।
ಚದರಿ ಪೋಗದು ಜ್ಞಾನ ಸಂಸಾರದೀ ।
ಉದರಕ್ಕೋಸುಗ ಪದವಿ ಬೇಡುವರಲ್ಲ ಮ ।
ತ್ತಿದಕೋ ಹರಿ ಪ್ರಿತ್ಯರ್ಥ ಬಯಸುವರು ।
ಮಧುರ ಪುರದರಾಯ ವಿಜಯ ವಿಠಲರಂಗನ ।
ಸುಧೆಯಲ್ಲಿ ನೆನಸುವ ಬ್ರಹ್ಮಾನಂತ ರೂಪ ೫

## ಅಟ್ಟತಾಳ

ಜ್ಞಾನ ಪೂರ್ವೋತ್ತರ ಬ್ರಹ್ಮನ ಸಾಧನ ।
ಆನಂದವಾಗಿದೆ ಇಷ್ಟಾಷ್ಟಾನಿಷ್ಟಾವೆಂದು ।
ಏನೆಂಬೆನಯ್ಯಾ ಈತನಿಗೆ ನಿಷ್ಕಾಮಕ ।
ನಾನಾ ಸಂಕಲ್ಪವು ಮುಖ್ಯ ಹರಿಯ ಗು ।

ಣಾನುಸಾರವಾಗಿ ಅನ್ಯಪ್ರೇರಣೆ ಸಲ್ಲ ।
ದಾನವರಿಗೆ ಭೀತಿಬಟ್ಟದ್ದು ಭಯ ಅ ।
ಜ್ಞಾನ ಶೋಕಂಗಳು ತೋರಿದುದೆಲ್ಲ ।
ಭಾನು ಮಧ್ಯಗತವಾಗಿ ತೋರಿದಂತೆ ।
ಮಾನವರಿಗೆ ಕಾಣಿಸುವುದು ನೋಡಲು ।
ವಾಣಿಯರಸನಿಗೆ ದೋಷ ಲೇಶವಿಲ್ಲ ।
ಏನೆಂಬೆ ಜೀವಕೋಟಿಗಳಲ್ಲಿ ಮೂರೊಂದು ।
ಅನನನಿಗೆ ಲಿಂಗವಿರಲು ವಿಲಕ್ಷಣ ।
ಜ್ಞಾನ ಕಾರ್ಯವೈಯ್ಯ ಆವಾವ ಕಾಲಕ್ಕೆ ।
ಮಾನಿತನಾಗಿ ಮುಕ್ತಾರೊಳಗಿರುತಿಪ್ಪ ।
ಶ್ರೀನಾಥ ವಿಜಯ ವಿಠ್ಠಲನ ಪಾದ ಪದ್ಮ ।
ಧ್ಯಾನವ ಮಾಡುವ ಸರ್ವಜೀವಾದಿಯಲ್ಲಿ ೬

## ಆದಿತಾಳ

ಬೊಮ್ಮಾಂಡ ವ್ಯಾಪ್ತರೂಪ ಬೊಮ್ಮಾಂಡಂತರ ರೂಪ ।
ರಮ್ಮೆಯರಸನ್ನ ನಾಭಿಯಿಂದ ಬಂದ ರೂಪ ।
ಸುಮ್ಮನಸರ ವಿಡಿದು ತೃಣಜೀವಾದಿಗಳಲ್ಲಿ ।
ಸಮ್ಮಾನವಾಗಿಪ್ಪ ಸತ್ಯಲೋಕದ ರೂಪ ।
ಕ್ರಮ್ಮಾನುಸಾರ ಶೇಷಾದ್ಯರನು ಪುಟ್ಟಿಸಿದನು ।
ಅಮ್ಮಮ್ಮ ಈತನ ಶಕ್ತಿ ಕೊಂಡಾಡಲೊಶವೆ ।
ಆಮ್ಮಹಾತತ್ವ ವಿಡಿದು ಸೂಕ್ಷ್ಮಸ್ಥೂಲ ಸಮುತ (ಸಮೇತ)
ಸಂಮಂಧವಾಗಿ ತಾನೆ ವ್ಯಾಪಿಸಿ ಕೊಂಡಿಪ್ಪ ।
ರಮ್ಯವಾದ ಪ್ರಕೃತಿ ತನಕ ಧ್ಯಾನ ಆಮೇಲೆ ।
ಅಮ್ಮೈಸಿ ತಿಳಿ ನೂರುಮಡಿ ವ್ಯಾಪ್ತತ್ವ ।

ಹಮ್ಮಿದ ದೈವ ಸಿರಿ ವಿಜಯ ವಿಠ್ಠಲರೇಯ ।
ಬೊಮ್ಮವಾಯು ಲಾತವ್ಯಮಿಕ್ಕಾದ ಋಜುಗಳ ಕಾವಾ ೭

## ಜತೆ

ಎಲ್ಲಿಂದುದ್ಭವರೆಲ್ಲಾ ಅಲ್ಲಿಗಭಿಮಾನಿಗಳು ।
ಬಲ್ಲಿದ ವಿಜಯ ವಿಠ್ಠಲನು ಬಲ್ಲನು ಕಾಣೋ ೬

## ೨೨

## ಧ್ರುವತಾಳ

ಎತ್ತಣ ಭೂತಂಗಳೊ ಎಲ್ಲಿ ಪೊಕ್ಕರೆ ಬಿಡವು ।
ಹತ್ತಿಕೊಂಡಿಪ್ಪವು ನಾನಾ ಜನುಮ ।
ಸುತ್ತಿದ ಕಾಲಕ್ಕು ತೊಲಗದೆ ವ್ಯಾಪ್ತವಾಗಿ ।
ಅತ್ತಲಿಕು ಪೋಗದೆ ಇರುತಿಪ್ಪವು ।
ಮೃತ್ತಿಕೆ ನೀರು ಬೆಳಕು ಘಾಳಿ ಬಯಲು ಎಂಬೊ ।
ಮತ್ತೆ ನಾಮಗಳಿದಕೆ ಸರ್ವಕಾಲ ।
ಉತ್ತರೋತ್ತರದಿಂದ ಗುಣಗಳು ಅಧಿಕವುಂಟು ।
ಅತ್ತಾಗಿಪ್ಪವು ಒಂದನ್ನೊಂದು ಬಿಡದೆ ।
ಹೊತ್ತು ಹೊತ್ತಿಗೆ ಲೋಕ ಪೇಳುವುದಾಡುವುದು ।
ಬಿತ್ತುವುದು ಬೆಳೆಯುವುದು ಚರಿಸುವುದು ।
ತುತ್ತು ಮಿಕ್ಕಾದ ಚೇಷ್ಟೆ ಈ ಭೂತಗಳಿಂದ ।
ನಿತ್ಯದಲಿಯಾಗುವುದು ಬೊಮ್ಮಾಂಡದಿ ।
ಮುತ್ತು ಮಾಣಿಕ ಹೇಮ ರಜತ ನಾನಾ ದ್ರವ್ಯ ।
ಮೊತ್ತಂಗಳಲ್ಲಿ ಈ ಭೂತಂಗಳು ।

ಸುತ್ತಿ ಕೊಂಡಿಪ್ಪವು ಬ್ರಹ್ಮಾಂಡ ಬಾಹಿರಕ್ಕೆ ।
ಹತ್ತು ಹತ್ತು ಮಡಿ ಆವರ್ಕದಿ ।
ಕಿತ್ತಿ ಬಿಸುಟಾಲಳವೆ ರುದ್ರಾದ್ಯರಿಗಾದರು ।
ಬತ್ತದಯ್ಯಾ ಕರ್ಮವುಳ್ಳ ತನಕ ।
ಉತ್ತಮೋತ್ತಮರಿದಕೆ ಆಶ್ರಯವಾಗಿಪ್ಪರು ।
ಪ್ರತ್ಯೇಕ ಗುಣ ತಾರತಮ್ಯದಿಂದ ।
ಅತ್ಯಂತ ಜಗದ್ಭರಿತ ವಿಜಯ ವಿಠ್ಠಲರೇಯ ।
ಕರ್ತನಾಗಿ ಪಂಚಭೂತಗಳ ಪೊಂದಿಸಿಪ್ಪ ೧

## ಮಟ್ಟತಾಳ

ಈ ಮಾತುಗಳಿಂದ ವೈಭವವಾಗುವುದು ।
ಈ ಭೂತಗಳಿಂದ ವೈಭೋಗ ದೊರಕುವುದು ।
ಈ ಭೂತಗಳಿಂದ ಶೋಭನ ಒದಗುವುದು ।
ಈ ಭೂತಗಳಿಂದ ಲಾಭವೆ ಬರುವುದು ।
ಈ ಭೂತಗಳಿಂದ ಸೌಭಾಗ್ಯ ತುಳುಕುವುದು ।
ಈ ಭೂತಗಳಿಂದ ಭೂ ಭೂಷಣ ಕಾಣೊ ।
ಈ ಭೂತಗಳಿಂದ ಪ್ರಭಾವವೆನಿಸುವ ।
ಈ ಭೂತಗಳಘ ಪ್ರಭಾವ ಯಿರಲಾಗಿ ।
ಶೋಭಿಸುವರು ವಿಪ್ರ ಭೂಭುಜ ಮಿಕ್ಕವರು ।
ಈ ಭೂತಗಳಿಂದ ಸಾಭಿಮಾನವೆ ವುಂಟು ।
ಈ ಭೂತಗಳಿಂದ ಲೋಕಕ್ಕೆ ಕಾರಣ ।
ವಿಭೂತಿವಂತ ವಿಜಯ ವಿಠ್ಠಲರೇಯ ।
ಈ ಭೂತಗಳಿಂದ ಭೂಭಾರ ಇಳುಹುವ ೨

## ತ್ರಿವಿಡಿ ತಾಳ

ಒಬ್ಬಗೈದು ಭೂತ ಹೊಡೆದಿರಲು ಅವನ ।
ಉಬ್ಬಿಸಿ ಮತ್ತೈದು ಭೂತಂಗಳ ।
ಅಬ್ಬರದಲಿ ತಂದು ಕಟ್ಟಿಹಾಕಲು ನೆರೆದ ।
ನಿಬ್ಬಣದ ಭೂತಂಗಳು ಒಂದಾಗಿ ।
ಗಬ್ಬಿನಲಿ ಇದ್ದಾ (ತ್ತಾ) ಕೆಲವು ಕಾಲಕೆ ಮದದ ।
ಗಬ್ಬು ತಾಕಲು ಹತ್ತು ಭೂತಾಕೂಡೆ ।
ಇಬ್ಬಗೆಯಿಂದಲಿ ಒಂದೊಂದು ಕೂಡಲು ।
ಹಬ್ಬಿತು ಭೂತದ ಬಳಗೆ ಸಂಖ್ಯ ।
ನಿಬ್ಬಿಡ ಕ್ರತವಾದ ಭೂತದೊಳಗೆ ಬಿದ್ದು ।
ಕಬ್ಬು ಬಾಯಲಿ ಕಚ್ಚೆ ಜಂಬೂಕನು ।
ಉಬ್ಬಸ ಬಟ್ಟಂತೆ ಭೂತಗಳ ಮೋಹ ।
ಇಬ್ಬಗೆಯನು ನೋಡಿ ಹೀನ (ವದು) ವಾದ ।
ಮಬ್ಬಿನ ಕಡೆಗೆ ಈ ಭೂತಗಳಟ್ಟದೆ ।
ಕಬ್ಬುಲ ದಾಟುವ ಉಪಾಯ ಹರಿಚರ ।
ಣಾಬ್ಜ ಕೊಂಡಾಡಿ ಕೊಳುತಲಿಪ್ಪೆ ।
ಒಬ್ಬರ ಮನೆಯಲ್ಲಿ ದ್ರವ್ಯ ಕದ್ದವನಲ್ಲ ।
ಒಬ್ಬರ ವಸ್ತಿಕೆ ಪೋಗಲಿಲ್ಲ ।
ಉಬ್ಬೀಗ ಉತ್ತುಮರ ಸರಿಯೆಂದು ಹಿಗ್ಗುತ ।
ಬೊಬ್ಬಾಟದಲಿ ಪೇಳಿಕೊಳ್ಳಲಿಲ್ಲವೊ ।
ಕಬ್ಬಿನಾಲಿಯಬಳಿಯ ಕುಳಿತು ಮಲಕೆ ಮೊರಿದ ।
ಅಬ್ಬು ಕುಡಿದವರ್‍ಯಾರೊ ಮಾನವರು ।
ಒಬ್ಬರ ಶ್ರೇಯಸ್ಸು ನೋಡಿ ಧರಿಸಲಾರದೆ ।

ಹಬ್ಬದಲ್ಲ್ಯುಪವಾಸ ಬಿದ್ದವನಂತೆ ।
ಹುಬ್ಬಿನ ಗೋಸುಗ ಕಣ್ಣು ತೆಗಸಿಕೊಂಡು ।
ದೊಬ್ಬಿಸಿ ಕೊಳುತಾ ತಾ ಬದುಕಿದಂತೆ ।
ಇಬ್ಬಳ ಮಣಿ ಕೊಟ್ಟು ತಿಪ್ಪಿ ಮೇಲಿನ ಬೂದಿ ।
ಬೊಬ್ಬುಳಿ ಗಿಡ ಕೊಯ್ದು ಹರಹಿದಂತೆ ।
ಒಬ್ಬರ ಪೋಗಲಾಡುವುದೇನು ನೀರಿನ ।
ಬೊಬ್ಬುಳಿ ಸಮ ಕಾಣೊ ಈ ಶರೀರ ।
ಶಬ್ದದಿಂದಲಿ ಪುಣ್ಯ ಪೋಗುವುದು ಪಾಪ ।
ದಬ್ಧಿಯೊಳಗೆ ಮುಣುಗೆ ಪೊರಗಾಗರು ।
ಅಬ್ಧಿಶಯನ ನಮ್ಮ ವಿಜಯ ವಿಠ್ಠಲನಂಘ್ರಿ ।
ದಭ್ರವಾದರು ಭಜಿಸುವೆನೆಂಬವ ಧನ್ಯ ೩

## ಅಟ್ಟತಾಳ

ಒಂದು [ಪಿ]ಶಾಚಿ ಹಿಡದವ ಮನಸಿಗೆ ।
ಬಂದಂತೆ ಒರಲುವ ಕಂಡಲ್ಲಿ ತಿರುಗುತ್ತ ।
ಒಂದಲ್ಲ ಎರಡಲ್ಲ ಐದು ಭೂತಂಗಳು ।
ಒಂದೇ ಪ್ರಕಾರವು ಅನಾದಿ ಕಾಲದಿ ।
ಲಿಂದ ಹಿಡಿದರೆ (ಹಿಡದಿರೆ)ತಮ್ಮ ಪುಣ್ಯಕೆ ಪಿ ।
ನಂದದೆ ಸರಿ ಪ್ರತಿ ಕೂಲರಾಗುವರು ।
ಬಾಂಧವ ತಾನಾಗಿ ಹರಿ ವೊಲಿದು ನಿತ್ಯ ।
ಗಂಧವಾದರು ತನ್ನ ಪರವಾದ ಸ್ತೋತ್ರಗ ।
ಳಿಂದವಾಗಲಿ ಮತ್ತಾಗದೆ ಪೋಗಲಿ ।
ಸಂಧಿಸಿ ಕೊಂಡಿದ್ದು ಭೂತಗಳೊಳು ತಾನೆ ।
ನಿಂದು ಈ ಪರಿಯಿಂದ ನಡಿಸಿದ ಯಿದರಿಂದ ।

ನಂದವಾದರೆ ಯೇನು ಆಗದಿದ್ದರೆ ಯೇನು ?।
ಮಂದಿಗವನ ಚಿಂತೆ ವ್ಯರ್ಥ ಹಚ್ಚಿಕೊಂಡು ।
ನಿಂದಿಸುವ ಬಗೆ ಅವಗತಿ ಮಾರ್ಗ ।
ಮುಂದೆ ಕಾಣದೆ ಪೋಗಿ ಮೂರ್ಖರಾಗುವರು ।
ಎಂದಿಗಾದರು ಯಮರಾಯನ ಸಭೆಯಲ್ಲಿ ।
ಬಂದು ಇವನ ಕರ್ಮಕ್ಕೆ ಅಡ್ಡಬಾಹನೆ ।
ತಿಂದನ್ನ ಮೈಗೆ ಹತ್ತದಂತೆ ಇಪ್ಪದು ।
ಛಂದವಲ್ಲವಿದು ತಿಳಿದ ಪ್ರಾಜ್ಞರಿಗೆ ।
ಕಂದುಗೊರಳಪಿತ ವಿಜಯ ವಿಠ್ಠಲರೇಯ ।
ಬಂಧನದೊಳಗಿರುವ ಭಕ್ತರಿಗಂದವನ್ನ ೪

## ಆದಿತಾಳ

ನಿರ್ದೋಷ ಹರಿಯೊಬ್ಬ ಆ ತರುವಾಯ ಸಿರಿ ।
ತದ್ದಾಸರು ಬ್ರಹ್ಮ ವಾಯು ಭಾರತಿ ।
ಶುದ್ಧರಿವರು ಕಾಣೊ ಉಳಿದಾದವರು ಮಹ ।
ರುದ್ರಾದ್ಯೆಲ್ಲರು ಸದ್ದೋಷಿಗಳು ಕಾಣೊ ।
ವಿದ್ಯಾವಂತರಹುದು ನಮಗಿಂದಧಿಕರು ।
ಪದ್ಮ ಬಾಂಧವರ ನೋಡೆ ಇವರು ನೀಚರಾದರು ।
ಬುದ್ಧಿಯ ಹಳಿಯರು ಹೊರ ಬೀಸ ಬಿಸಾಟರು ।
ಇದ್ದ ಮಾನವರಿನ್ನು ಸುಮ್ಮನಿರದೆ ನಿತ್ಯ ।
ಪೊದ್ದಿದ ಸುಕೃತ ಪೋಗಲಾಡಿ ಕೊಂಬರು ।
ಸದ್ಧ್ಯ ಸಂಸಾರವೆಂಬ ಮಾಯದುದ ಪಾಶ ।
ಬದ್ಧರಲ್ಲಿ ಶಿಲ್ಕಿ ಚರಿಸುವ ಮಾನವರು ।
ದುರ್ದೋಷಿಗಳು ಕಾಣೊ ಗುಣವ ಪೇಳುವುದೇನು ।

ಕದ್ದು ತಂದವನಲ್ಲ ಅನ್ಯರ ಮನೆ ಸೇರಿ ।
ಸುದ್ದಿಗಳಾಡಿಕೊಂಡು ಪೊಟ್ಟೆ ಪೊರೆದವನಲ್ಲ ।
ಸಿದ್ಧವಾದ ಮತ ಸಜ್ಜನರ ಸಮ್ಮತ ।
ಇದ್ದದೆ ಭೂತಂಗಳು ಪೇಳುತಲಿವೆ ಕೇಳು ।
ಕೃದ್ಧವ ತಾಳಿ ಜನರು ಪ್ರತಿ ಕೂಲವಾಗಿ ಅಪ ।
ಶಬ್ಧ ನುಡಿದರೆ ಇತರ ಜನರಿಗೇನು ।
ಈದ್ಧರಿಯೊಳಗಿದ್ದ ಭೂತವಾದರು ಬಂದು ।
ಪೊದ್ದಿದರೇನಯ್ಯ ಹರಿನಾಮ ನುಡಿವುದು ।
ಕ್ಷುದ್ರ ವತ್ತಿಯ ಪೋಗಿ ಕುಲಗೇಡಿಯಾಗಿದ್ದರೆ ।
ಒದ್ದು ಬಿಡರಿಬೇಕು ಗುಣವಂತರಾದವರು ।
ಸಿದ್ಧ ಮಹಿಮ ನಮ್ಮ ವಿಜಯ ವಿಠ್ಠಲರೇಯ ।
ಭದ್ರ ಕೊಡುತಿಪ್ಪ ಭೂತವುಳ್ಳವನಿಗೆ ೫

### ಜತೆ

ಎಲ್ಲ ಭೂತಗಳೊಡೆಯ ವಿಜಯ ವಿಠ್ಠಲನೊಬ್ಬ ।
ಬಲ್ಲಿದ ಒಲಿದರೆ ಅನ್ಯಭೂತಗಳಿಲ್ಲ ೬

## ೨೩

### ಧ್ರುವತಾಳ

ಎಪ್ಪತ್ತೆರಡು ಸಾವಿರ ನಾಡಿ ಅತೀಂದ್ರಿಯ ।
ಇಪ್ಪವು ದೇಹದೊಳಗೆ ನಾಭಿಮೂಲದಲ್ಲಿ ।
ಒಪ್ಪುತಿವೆ ಕೇಳಿ ಎರಡು ವಿಧವಾಗಿ ।
ಅಪ್ಪಸವ್ಯಾ ಸವ್ಯಾ ಅರ್ಧರ್ಧಾ ಲೆಖ್ಖದಲ್ಲಿ ।

ಅಪ್ಪಾರ ಮಹಿಮನು ಪುರುಷಾಯುಷ ಪ್ರಮಾಣ ।
ಸ್ತ್ರೀ ಪುರುಷ ರೂಪದಲ್ಲಿ ಮೆರೆವುತಿಹ ।
ಇಪ್ಪತ್ತೊಂದು ಸಾವಿರ ಆರುನೂರು ಮಂತ್ರ ಜಪಿಸುವ ।
ಅಪ್ರತಿಸೂತ್ರವಾಯು ಸತತ ಲಕುಮಿ ಪತಿಯ ।
ಅರ್ಪಣೆಯಿಂದಲಿ ಜೀವನ ಕೈಯಿಂದ ।
ಸುಪುಣ್ಯ ಮಾಡಿಸುವ ದಾಸೋಹಂ ಎಂದಾ ನುಡಿಗೆ ।
ಸಫಲವಾಗುವದು ಒಂದು ಕಾಸು ಕೊಟ್ಟರೆ
ಕೊಪ್ಪರಿಗೆ ಧನಮಾಡಿ ಉಣಿಸುವ ಜಗದ್ಗುರು ।
ಇಪ್ಪತ್ತು ನಾಲ್ಕು ನಾಡಿ ಮೊದಲಾದ ನಾಡಿಯೊಳು ।
ತಾ ಪ್ರಧಾನವಾಗಿ ಇಪ್ಪವು ಇದರೊಳು ।
ತಪ್ಪದೆ ನಾಲ್ಕು ನಾಡಿ ಬಲಗಡೆ ಪೊಂದಿಪ್ಪವು ।
ಒಪ್ಪದಿಂದಲಿ ನೋಡಿ ಉಳಿದ ನಾಡಿಗಳು ।
ಇಪ್ಪತ್ತುಯಿವೆ ಊರ್ಧ್ವ ಅಧೋ ಮುಖವರ್ಧರ್ಧಾ ।
ಗಪ್ಪನೆ ಮೇಲುಗಡೆ ಹಬ್ಬಿದ ಹತ್ತು ನಾಡಿ ।
ಯಪ್ಪೆಸರು ಲಾಲಿಸುವದು ಶ್ರುತುತಿಸ್ಮೃತಿ ಸಮ್ಮತ ।
ಅಪ್ರಧಾನನಾಡಿ ಸರ್ವ ಇದರೊಳು ।
ಇಪ್ಪದು ಸುಷುಮ್ನ ನಾಡಿ ಶ್ರೇಷ್ಠ ।
ಅಪ್ಪಡಿಯಾದಿದೆ ಧ್ಯಾನಕ್ಕೆ ಶ್ರೀಹರಿ ।
ಒಪ್ಪ ಸ್ಥಾನವೆ ತಿಳಿದು ನೋಪ್ಪರಿಗೆ ।
ಸರ್ಪವೈರಿ ಕೇತನ ವಿಜಯ ವಿಠಲ ಹರಿಯ ।
ಆಪನ್ನನಾಗುವನು ತಿಳಿದರೆ (ಯದೆ) ಗತಿಯಿಲ್ಲ ೧

## ಮಟ್ಟತಾಳ

೧ ಪಿಂಗಳ ೨ ಗಾಂಧಾರಿ ೩ ಲಂಬುಸ (ಶಿಖ) ೪ ಪೂಂಸ ।
೫ ಹಿಂಗದೆ ೬ ಹಸ್ತಿನಿ ೭ ಕುಹ ೮ ಶಂಖಿನಿ ೯ ಶಾರಧೀ ಇಡಾ ।
ಗಂಗೆ ಎನಿಸಿಕೊಂಬ ೧೦ ಬ್ರಹ್ಮನಾಡಿ ಸಹಿತ ।
ಅಂಗವಾಗಿಯಿದ್ದ ಹತ್ತು ನಾಡಿಯು ಕಾಣೊ ।
ಪಿಂಗಳ ಬಲಭಾಗ ಎಡಭಾಗಕ್ಕೆ ಇಡಾ ।
ಸಂಗತಿಯಾದಂತೆ ಮೂಗಿನಲಿ ಸಂಚಾರ ।
ತಿಂಗಳ ಸೂರ್ಯ ಸ್ವರಗಳೆನಿಸುವವು ।
ಮಂಗಳ ರಮಣನ್ನ ಚರಣ ಕಾಣುವ ಜ ।
ನಂಗಳು ಜ್ಞಾನದಲಿ ಸ್ವರಭೇದ ಗ್ರಹಿಸುವದು ।
ಅಂಗಜ ಪಿತ ನಮ್ಮ ವಿಜಯ ವಿಠ್ಠಲ ಅಂತ ।
ರಂಗದೊಳಗೆ ಯಿದ್ದು ತನ್ನ ತೋರಿಸಿಕೊಡುವ ೨

## ತ್ರಿವಿಡಿ ತಾಳ

ನಾಸಿಕದಲಿ ಇಡಾ ೧ ಪಿಂಗಳ ೨ ನಾಡಿಗಳು ।
ಪುಂಸಾ ೩ ಲಂಬು ಶಿಖಾ ೪ ಎರಡು ಕಣ್ಣಿನಲಿ ।
ಲೇಸು ಗಾಂಧಾರಿ ೫ ಹಸ್ತಿನಿ ೬ ಯೆಂಬೊ ನಾಡಿ ಪ್ರ ।
ಕಾಶವಾಹಿವೆ ನೋಡಿ ಕರ್ಣದಲ್ಲಿ ।
ಆ ಶಾರದ ೭ ಜಿಂಪ್ವೆಯಲ್ಲಿಪ್ಪುದು ।
ಭೂಷಣವಗಿದ್ದ ಕುಹವೆ ೮ ಗುದದಲ್ಲಿ ।
ಮೋಸವಿಲ್ಲದೆ ಲಿಂಗದಲ್ಲಿ ಶಂನಿ (೯) ನಾಡಿ ।
ಈಸು ನಾಡಿಗಳು ಅಲ್ಲೆಲ್ಲಿಪ್ಪವು ।
ಸುಷುಮ್ನ ೧೦ ನಾಡಿ ಮೂಲಾಧಾರ ವಿಡಿದು ।
ಶಾಶಿನಿಯಿಲ್ಲದೆ ಮೂರ್ಧ್ನಿ ತನಕ ।

ಶ್ವಾಸ ಅಲ್ಲಿಂದ ಪೋದವಗೆ ಪೂರ್ಣಜ್ಞಾನ ।
ಮಿಸಲ ಪದವಿಗೆ ಅರ್ಹನಯ್ಯಾ ।
ಈ ಸಮಸ್ತ ನಾಡಿಗಳಲ್ಲಿ ಶಿವಪುತ್ರರು ।
ದಾಸ ಪ್ರಾಣರು ಮತ್ತೆ ಮುಖ್ಯ ಪ್ರಾಣ ।
ಶ್ರೀ ಶನ ಸೇವೆಗೋಸುಗಾಧಿಷ್ಠಾನರಾಗಿ ।
ಈ ಶರೀರದ ಸ್ಥಿತಿ ನಡೆಸುವರು ।
ದೇಶ ಕಾಲ ಬಿಡದೆ ಆವಾವ ಕರ್ಮಗಳು ।
ಲೇಶ ತಪ್ಪದಂತೆ ಪ್ರೇರಿಪರೋ ।
ಲೇಶಿಗೆ ಇವರಯ್ಯಾ ಹೊಲ್ಲಿಗೆ ಇದೆ ನಾಮ ।
ಆಸುರಿ ಜನರಲ್ಲಿ ಮಾಡಿಸುವರು ।
ಈ ಶುಂಠರಿಗೆ ಮುಖ್ಯ ಕಲಿ ಪ್ರೇರಕನಾಹ ।
ವಾಸುದೇವನೆ ಅವಗೆ ಶಿಕ್ಷಕನು ।
ದೇಶ ಕಾಲ ವ್ಯಾಪ್ತ ವಿಜಯವಿಠಲ ಹರಿಯ ।
ದಾಸರೊಳಗೆ ಮುಖ್ಯಪ್ರಾಣನೆ ಬಲ್ಲಿದ ಕಾಣೊ ೩

## ಅಟ್ಟತಾಳ

ಪ್ರಾಣ ಹೃದಯದಿ ಶ್ವಾಸ ಕಾರಣ ಅ ।
ಪಾನನು ಮಲ ಮೂತ್ರ ಬಿಡಿಸುವ ಅಧೋದಿಂದ ।
ವ್ಯಾನ ಕಂಠದಲ್ಲಿ ತೃಷ್ಣೆಯಮಾಳ್ಪ ಉ ।
ದಾನ ತಾಲು ಸ್ಥಾನದಲ್ಲಿ ಆಹಾರ ।
ವಾನು ಭುಂಜಿಸುವ ಆಕಳಿಸುವ ।
ಈ ನಾಭಿಯಲ್ಲಿ ಸನೂನ ವಾಯು ಕೃ ।
ಶಾನುವಿಗೆ ಬೀಗೆ ದೀಪನವ ಮಾಡುವ ।
ಏನೆಂಬೆ ಸಮಸ್ತ ಸೂಕ್ಷ್ಮ ನಾಡಿಯಲ್ಲಿ ।

ತಾನಿದ್ದು ಆಹಾರವ ನಾಗನು ಕೊಡುತಿಪ್ಪ ।
ಏಣಿಸಿ (ಎಣಿಸಿ )ಗುಣಿಪದು ಇವರಿವರಿದ್ದಂಥ ।
ಸ್ಥಾನಂಗಳು ಅಲ್ಲಿ ಮಾಡುವ ವ್ಯಾಪಾರ ।
ಜ್ಞಾನಾಂಬುಧಿ ನಮ್ಮ ವಿಜಯ ವಿಠ್ಠಲ ಬಲು ।
ಜಾಣನು ಕಾಣೊ ಜಗದೊಳ ಗಾಡುವ । ೪

### ಆದಿತಾಳ

ಕಣ್ಣಿನಲ್ಲಿ ಕೂರ್ಮ ರೆಪ್ಪೆ ಪಾಕಿಸುವ ಮುಚ್ಚಿಸುವ ।
ಮುನ್ನೆ ಕೃಕಲ ವಾಯು ನಾಶಿಕದಲ್ಲಿ ವಾ ।
ಸನ್ನೆ ತೆಗೆದುಕೊಂಬ ನಾನಾ ವಿಚಿತ್ರವಾದ ।
ಧನ್ನಂ (ಧನಂ) ಜಯ ಯೆಂಬುದು ಎಂಟು ದಿಕ್ಕಿನ ಶಬ್ಧ ।
ಕರ್ನದಲಿ ಶುಭಾ ಶುಭ ಕೇಳಿಸುವುದು ಬಿ ।
ನ್ನಣ ದೇವದತ್ತನು ಜಿಂಪ್ವೆಯಲಿ ।
ಚನ್ನಾಗಿ ವಾಕ್ಯಗಳ ನುಡಿಸುವ ಕೊಡಿಸುವ ।
ಬನ್ನ ಬಡಿಸುವರು ಇವರೆ ದೈತ್ಯರೊಳಿದ್ದು ।
ಗುಣ್ಣಿಸೆ ದಶವಾಯು ಪ್ರವರ್ತಿಸುವರು ।
ಅನ್ನಂತ ಜೀವರಾಶಿಯೊಳಗೆ ವಾಸವಾಗಿ ।
ಭಿನ್ನ ಭಿನ್ನ ಚೇಷ್ಟೆ ಮಾಡಿಸುವರು ನಿಂದು ।
ಇನ್ನು ಇವರಿಗೆ ಅಧಿಷ್ಠಾನ ಮುಖ್ಯ ಪ್ರಾಣ ।
ತನ್ನೊಳಗೆ ಸಿರಿ ಹರಿ ಸಹಿತ ಇದ್ದಾ ।
ಗಣ್ಯವಿಲ್ಲದ ಕರ್ಮ ಮಾಡಿ ಮಾಡಿಸುತಿಪ್ಪನು ।
ಅನ್ಯ ದೈವವೆ ಇಲ್ಲ ಈತನೆ ಮುಖ್ಯ ಕರ್ತ ।
ಮನ್ನುಜ ಈ ಪರಿ ತಿಳಿದು ತನ್ನ ಗುರು ।
ವಿನ್ನ ಮೊದಲು ಮಾಡಿ ಮುಖ್ಯ ಪ್ರಾಣಾಂತರ್ಯಾಮಿ ।
ಸನ್ಮತಿಯಿಂದ ಸಮರ್ಪಣೆ ಮಾಡಿದರೆ ಪಾ ।

ವನ್ನವಾಗುವ ತನ್ನ ಕುಲ ಕೋಟಿ ಕೂಡಿಕೊಂಡು ।
ಬೆಣ್ಣೆಗಳ್ಳ ನಮ್ಮ ವಿಜಯವಿಠ್ಠಲನ ಕಾ ।
ರುಣ್ಯ ಪಡೆದು ಮಹಾ ಧನ್ಯರೆನಿಸುವದು ೫

### ಜತೆ

ತಿಳಿದು ಈ ಬಗೆಯಿಂದ ಧ್ಯಾನವ ಮಾಡಿಕೊ ।
ಒಲಿವನು ವಿಜಯ ವಿಠ್ಠಲ ನಾಡಿಯೊಳು ಪೊಳೆವ ೬

## ೨೪

### ಧ್ರುವತಾಳ

ಏನಾದರೇನು ನಿನ್ನ ಧ್ಯಾನವ ಬಿಡುವೆನೆ
ಏನಾದರಾಗಲಿ ಎನಗಿಂದೀಗ
ಶ್ರೀನಿವಾಸನೆ ನಿನ್ನ ಧ್ಯಾನದಿಂದಲಿ ಕರೆದು
ಆನೀಗ ನಿರುತಾರ್ಚನೆ ಮಾಡುವೆ
ನಾನಾ ಕರ್ಮದ ಶ್ರೇಣಿಯಿಂದಲಿ ಸೋ
ಪಾನವಾಗುವಗತಿಗೆ ಅನಂತ ಜನುಮದಲ್ಲಿ
ಕಾಣೆನೊ ಧ್ಯಾನ ಸಮಾನವಾದ ಭಕುತಿ
ಈ ನಿರಂತರದಲ್ಲಿ ಜ್ಞಾನಶೂನ್ಯ
ನಾನಾಗಿ ತಿಳಿಯದೆ ನೀನೆಂಬೋದು ಮರೆದು
ಧ್ಯಾನ ಹೀನನಾಗಿ ಮಾನಾವಳಿದೆ
ಕ್ಷೋಣಿಧರನೆ ನಮ್ಮ ವಿಜಯವಿಠ್ಠಲ ನಿನ್ನ
ಧ್ಯಾನವರಿದ ಮೇಲೆ ಮಾಣುವದೆಂತೊ ೧

## ಮಟ್ಟತಾಳ

ಧ್ಯಾನವೆ ಗತಿಗೆ ಪ್ರಧಾನವೆ ಎನುತಲಿ
ಜ್ಞಾನಿಗಳು ತಿಳಿದು ಆನಂದವಾಗುತ್ತ
ಗಾನವ ಮಾಡುವರು ಆನಂದ ಗತಿಯಲ್ಲಿ
ಗೇಣವನೀ ಇಲ್ಲಾ ಈ ನುಡಿಯನು ಕೇಳಿ
ನಾನು ನೆಚ್ಚಿದೆ ನಿನ್ನ
ಶ್ರೀನಿವಾಸ ಮೂರ್ತಿ ವಿಜಯ ವಿಠ್ಠಲ ಎನಗೆ
ಧ್ಯಾನ ವೆಗತಿ ನಿಧಾನದ ಪದವಿಗೆ ೨

## ತ್ರಿವಿಡಿ ತಾಳ

ಮನವೆ ನಿಲ್ಲದ ಧ್ಯಾನ ಗುಣವೆ ಇಲ್ಲದ ನಾರಿ
ಹಣವೆ ಇಲ್ಲದ ನೃಪತಿ ಕ್ಷಣವೆ ತಿಳಿಯದ ಜ್ಞಾನಿ
ಪ್ರಣವೆ ಇಲ್ಲದ ಮಂತ್ರಾ ಘನವೆ ಇಲ್ಲದ ದಾನಾ
ಪಣತಿ (ವೆ) ಇಲ್ಲದ ದೇಹ ಅನುವೆ ಇಲ್ಲದ ನಡತಿ
ಜನವೆ ಇಲ್ಲದ ಸಭಾ ಲಕ್ಷಣವಿಲ್ಲದ ಗುರು
ನೆನವೆ ಇಲ್ಲದ ಸಾಧನವೆ ಇಲ್ಲದ ಸಂಗತಿ
ದಿನವಸ್ತಮಾನಾ ನೂರು ಮನುಕಲ್ಪವಿರಲ ದರಂತೆ
ಜನವಾಗುವದೇನಾ ಜನ ಜನಕಾ
ತನು ಮನದಾಧೀನ ವಿಜಯ ವಿಠ್ಠಲ ಕೃಪಾ
ವನಧಿ ನಿನ್ನನು ಧ್ಯಾನವನು ಮಾಳ್ಪ ಮನವೀಯೋ ೩

## ಅಟ್ಟತಾಳ

ಪಾಪವೆಂಬೋ ರಾಶಿ ಅಪಾರವಾಗೆನ್ನ
ಕೋಪವ ಪುಟ್ಟಿಸಿ ತಾಪದಿಂದ ಬಲದಿಂದ
ಲೇಪಿಸಿಕೊಂಡು ಪ್ರಳಾಪ ಬಡಿಸುತಿದೆ
ನಾ ಪೋಗುವದೆತ್ತ ಶ್ರೀ ಪತಿ ಲಾಲಿಸು
ಆಪಾರ ಕರ್ಮದಲೀ ಪ್ರಜೆಮಾಡಲು
ಶ್ರೀ ಪದವೀಗಳ ಪ್ರಾಪುತವಾಗೊವೆ
ಪ್ರಾಪುತ ಮಹನಾಮಾ ವಿಜಯ ವಿಠ್ಠಲ ನಿನ್ನ
ಆಪಾರ ಮೌಳಿಯನೂ ಪತಿಕರಿಸುವೆ ೪

## ಆದಿತಾಳ

ಧ್ಯಾನವನ್ನು ಕೈ ಕೊಳ್ಳಲು ಜ್ಞಾನವನ್ನೆ ಪುಟ್ಟುವದು
ಹೀನ ಕರ್ಮವೆಂಬುದರಿತು ಕಾನನ ರಾಶಿಗೆ ಕೃ
ಶಾನ ನಾಗಿ ಪೋಗಗಳೆದು ಮಾನವಭಿಮಾನನೆನಿಸಿ
ಧ್ಯಾನ ಧ್ಯಾನ ಧ್ಯಾನವನ್ನು ದಿನ ದಿನಗಧಿಕವಾಗೆ
ಆನಂದಕ್ಕಾನಂದ ಏನೆಂದು ಪೇಳುವೆನೊ
ಧ್ಯಾನವಿನಾ ಗತಿಗೆ ಧ್ಯಾನದೊಳಗೆ
ಪೊಳೆವ ವಿಜಯ ವಿಠ್ಠಲರೇಯಾ
ದಾನಿ ದಯದಿಂದ ಉತ್ತುಮನ ಮಾಡು ಮನ್ನಿಸುತ್ತ ೫

## ಜತೆ

ಸ್ಥೂಲ ಸೂಕ್ಷ್ಮ ಧ್ಯಾನವ ಭೇದವೆನಿಸೋದು
ನೀಲವರ್ಣ ವಿಜಯ ವಿಠ್ಠಲ ಪ್ರಾಕೃತರಹಿತಾ ೬

## ೨೫

### ಧ್ರುವತಾಳ

ಕಂಕಣಾಕಾರವನ್ನು ಬರೆದು ಅದರ ಮಧ್ಯ
ಓಂಕಾರ ಎರಡು ಎಡ ಬಲದಿ ರಚಿಸಿ
ಶಂಕೆ ಇಲ್ಲದೆ ನಡುವೆ ಘೃಣಿ ಎಂದು ಲಿಪಿಸಿ ಮೀ
ನಾಂಕ ನಯನ ಪೀಠಸ್ಥಳವಿದೆಂದು
ಬಿಂಕದಲಿ ಸ್ವರದೊಳಗೆ ಕಡಿಯಣ ಸ್ವರವೆ ಎರಡಾ
ಲಂಕಾರವನೆ ಮಾಡಿ ಅದರ ಬಳಿಯ
ಕಂಕಣಾಕಾರವನ್ನು ಒಳಗೆ ಮಾಡಿಕೊಂಡು
ಮಂಕು ಮತಿಯ ತೊರೆದು ತ್ರಿಕೋಣ ಸುತ್ತಿಸಿ
ಶ್ರೀಂಕಾರ ಇಚ್ಛಾಶಕ್ತಿ ಕ್ಲೀಂಕಾರ ಕ್ರಿಯಾಶಕ್ತಿ
ಹ್ರೀಂಕಾರ ಜ್ಞಾನಶಕ್ತಿ ಮೂರುಮೂಲಿಗೆ ಬರಿಯೊ
ಪಂಕಜ ಪಾಣಿಯ ಶ್ರೀ ಭೂ ದುರ್ಗಾನಾಮಕಳು
ಪಂಕಜಾಕ್ಷನ ರೂಪ ಮೂರು ಉಂಟು

ಕಂಕಣಾಕಾರ ಮರಳೆ ತ್ರಿಕೋಣ ಮೇಲೆ ಬರೆದು
ಸಂಕೋಚವಾಗಿ ಇದೆ ದ್ವಿತಿಯ ವಲಯ
ಪಂಕಜ ಮಿತ್ರ ಸೋಮ ಅಗ್ನಿ ಜನರ ನಾಗ
ಕಂಕಣ ಅನಲ ವರುಣದಿಕ್ಕಿಗೆ ರಚಿಸಿ
ಕಿಂಕರ ಜನಪಾಲ ವಿಜಯ ವಿಠ್ಠಲ ಅಕ
ಳಂಕನ ಭಜಿಸುವುದು ಹೃದಯದಲ್ಲಿ ತಿಳಿದು ೧

## ಮಟ್ಟತಾಳ

ಕರಿ ಅಜ ರಥ ವೀಧಿ ಎಂದೆಂಬವೆ ಮೂರು
ಬರದು ಇದಕೆ ಹನ್ನೆರಡು ರಾಶಿಗಳ ವಿ
ಸ್ತರವಾಗಿ ಉಂಟು ಎರಡೆರಡೊಂದು ಕಡೆ
ಅರಿವದು ಸ್ತಿಮಿತ ಸಮಗತಿ ತ್ವರಗತಿ ಸೂರ್ಯನ್ನ
ಎರಡು ನಾಲ್ಕು ಕೋಣೆ ವಿರಚಿಸೆದರ ಮೇಲೆ
ಮರಳೆ ಮಧು ಮಾಧವ ಕರಸುವ ಋತು ಬಂದು
ಬರೆದು ಪ್ರಣವ ವಿವರ ಹೃದಯದಲ್ಲಿ ನಮ
ಸ್ಕರಿಸು ಜ್ಞಾನಾತ್ಮನೆಂದು
ಧರಿಸು ಈ ಪರಿ ಮೂರು ಎರಡು ಕೋಣೆಯ ಮಧ್ಯ
ತರುವಾಯ ಮಾಸ ಋತು ವರುಷ ತಾರಕ ಸಂ
ಸ್ಮರಿಸಿ ಕ್ರಮ ವರ್ಣ ಹರಿ ಐಶ್ವರ್ಯದಿ
ಪರಮ ಮೂರ್ತಿಗಳನ್ನು ಶಿರಸು ಮೊದಲು ಮಾಡಿ
ಕರತಳ ಪದತನಕ ಚರಿತೆಯ ಕೊಂಡಾಡು
ಗುರುತು ಆರುಕೋಣೆ ಸರಿ ಉಪರಿಭಾಗ
ಎರಡರ ಮಧ್ಯ ವರಣಂಗಳು ಉಂಟು
ಅರಹುದೆ ಪ್ರಥಮದಲ್ಲಿ ಎರಡೆರಡು ನಾಲ್ಕು
೧ ಅ, ಆ, ಕ, ಖ, ಡ, ಢ, ಮ, ಯ
೨ ಇ, ಈ, ಉ, ಊ, ಗ, ಘ, ಣ, ತ, ರ, ಲ
೩ ಸ್ಮರಿಸು ಮೂರನೆ ಮನಿಯಲ್ಲಿರುತಿಪ್ಪಮಾತ್ರ
ಋ, ೠ. ಙ, ಚ, ಥ, ದ, ವ, ಶ
೪ ಕರಿಸಿಕೊಂಡವು ಇನಿತು ನಾಲ್ಕನೆ ಸ್ಥಾನದಲಿ
ಎ, ಐ, ಛ, ಜ, ಧ, ನ, ಷ, ಸ
೫ ವರಣಂಗಳು ಗ್ರಹಿಸು ಐದನೆಮನಿಯಲ್ಲಿ

ಒ, ಔ, ಝ, ಞ, ಪ, ಫ, ಹ, ಳ
೬ ನಿರುತ ಇಪ್ಪದು ಕೇಳಿ ಕಡಿಯಣ ಮನಿಯಲ್ಲಿ
ಅಂ, ಅಃ, ಟ, ಠ, ಬ, ಭ, ಕ್ಷ ಬರೆದು
ಈ ಪರಿಯಲ್ಲಿ ಅರುವನಿ ಮಧ್ಯ
ಸರಿ ಇಲ್ಲಿಗೆಎನ್ನಿ ತರುವಾಯ ನಾಲ್ಕು
ಎರಡೂ ವಲಯಾಕಾರ ಎರಡು ಕೋಣೆಯ ಗಣಿತ
ನಿರೀಕ್ಷಿಸಿ ಮನದಲ್ಲಿ ಪರಿಶುದ್ಧನಾಗಿ
ಪರಮ ಪುರುಷ ನಮ್ಮ ವಿಜಯ ವಿಠಲ ಮೂರ್ತಿಯ
ಸ್ಮರಿಸು ಅಜಾದಿಗಳ ನರಸಿಂಹ ಪರಿಯಂತ ೨

## ರೂಪಕ ತಾಳ

ಆರು ಕೋಣೆಯ ಮೇಲೆ ವರ್ತುಳಾಕಾರವನ್ನು
ಚಾರುವಾಗಿ ಬರೆದು ಅದರ ಸುತ್ತಲು ಎಂಟು
ವಾರಿಜದಳವನ್ನು ರಚಿಸಿ ರಮ್ಯವಾಗಿ
ಸೌರಿ ಸ್ವರ್ಭಾನು ಗುರು ಬುಧ ಶುಕ್ರ ಚಂದ್ರಮ
ಧಾರುಣಿಸುತ ಕೇತು ಇವರನ್ನ ಮಧ್ಯ
ಹಾರೈಸಿ ಬರೆದು ಇವರಿವರ ಬಳಿಯಲ್ಲಿ ಓಂ
ಕಾರ ಸಹಿತವಾಗಿ ನಮೋನಾರಾಯಣನೆಂಬೊ
ಈರೆರಡು ನಾಲ್ಕು ವರ್ಣಗಳು ಒಂದೊಂದರಲ್ಲಿ
ಆರಾಧಿಸಿ ಬರೆದು ಬೀಜಾಕ್ಷರವೆನ್ನು
ಸಾರವನ್ನು ತಿಳಿ ಎಂಟು ವರ್ಣ ಮಿಳಿತ
ತಾರ ಮಂತ್ರವೆ ಸತ್ಯ ಇದರ ನಿಯಾಮಕ ವಿಶ್ವ
ಮೂರುತಿ ಮೊದಲದ ಅಷ್ಟರೂಪಂಗಳುಂಟು
ಸೌರಿ ರಾಹು ಮಧ್ಯ ಆದಿ ವರ್ಣವೆ ಲಿಪಿಸಿ
ದ್ವಿರಷ್ಟ ಮಾತಾ ವರ್ಗವ ಇದಕೆ ಇಂದಿರಾ

ಮಾರುತ ದೇವನ್ನ ಬರೆದ ಶ್ರುತಿ ಕಾಲಗಳ
ಈ ರೀತಿಯಿಂದಲಿ ವಿಶ್ವನ್ನ ಸ್ಮರಿಸೆ
ಕಾರುಣ್ಯ ಮಾಡುವನು ಮುಂದೆ ಕವರ್ಗ ಉ
ಕಾರ ತೈಜಸ ದೇವನ ಬರೆದು ಕ ವರ್ಗಕ್ಕೆ
ಧಾರುಣಿ ಉದಕಾಗ್ನಿ ವಾಯು ಗಗನ ಭೂತ
ಮೂರೆರಡು ಸ್ಥಾಪಿಸಿ ಅಲ್ಲಿ ಮಾನಿಗಳನ್ನು
ತಾರೇಶ ಸ್ವರ್ಭಾನು ಮಧ್ಯದಲ್ಲಿ ಸಿದ್ಧಾ
ಆ ರೋಹಿಣಿಯ ಗುರು ಈರ್ವರ ನಡುವೆ ಮ
ಕಾರ ಪ್ರಾಜ್ಞ ಮೂರುತಿ ಚವರ್ಗ ಒಂದೊಂದಕೆ
ಈರೆರಡು ಮೇಲೊಂದು ಜ್ಞಾನೇಂದ್ರಿಯಗಳುಂಟು
ವಾರ ವಾರಕೆ ಬಿಡದೆ ತತ್ವೇಶರುಗಳ ವಾಸ
ತೋರುವ ತುರ್ಯ ದೇವನು ಟ ವರ್ಗಕ್ಕೈದು
ಮೀರದೆ ಕರ್ಮೇಂದ್ರಿಯು ಪಾಣಿ ಪಾದದಿ ಪಂಚ
ಕಾರಣಿಕರಲ್ಲಿ ವಸ್ವಾದಿ ನಿರ್ಜರರೂ
ಸಾರಿರ್ಪೈ ಬುಧ ಶುಕ್ರ ಅಂತರಾಳದಲಿ ವಿ
ಸ್ತಾರ ಇದನೆ ತಿಳಿದು ಶುಕ್ರ ಚಂದ್ರನ ನಡುವೆ
ಭೋರನ್ನ ಆತ್ಮಾ ಮೂರುತಿ ಬಿಂದು ತ ವರ್ಗ
ಪೂರೈಸು ಪಂಚ ತನ್ಮಾತ್ರಗಳು ಶಬ್ದಾದಿ
ಮಾರುತಗಳೈದು ಪ್ರಾಣಾದಿ ನಾಮದಲ್ಲಿ
ಕಾರಣಿಕರಲ್ಲಿ ವಸ್ವಾದಿ ನಿರ್ಜರರೂ
ಸಾರಿರ್ಪೈ ಬುಧ ಶುಕ್ರ ಅಂತರಾಳದಲಿ ವಿ
ಸ್ತಾರ ಇದನೆ ತಿಳಿದು ಶುಕ್ರ ಚಂದ್ರನ ನಡುವೆ
ಭೋರನ್ನ ಆತ್ಮಾ ಮೂರುತಿ ಬಿಂದು ತ ವರ್ಗ
ಪೂರೈಸು ಪಂಚ ತನ್ಮಾತ್ರಗಳು ಶಬ್ದಾದಿ
ಮಾರುತಗಳೈದು ಪ್ರಾಣಾದಿ ನಾಮದಲ್ಲಿ

ಸೇರಿ ಕೊಂಡಿಪ್ಪರೈ ಮುಂದೆ ಲಾಲಿಸಿ ಕೇಳಿ
ಗೌರೀಶನ ಶಿರದಲ್ಲಿ ಇಪ್ಪ ಕುಜನ ನಡುವೆ
ಮೂರುತಿ ಅಂತರಾತ್ಮನು ಘೋಷ ಪವರ್ಗ
ಆರನೆ ಮನೆ ಎನ್ನಿ ಇಲ್ಲಿಪ್ಪದು ಅಹಂ
ಕಾರ ಬುದ್ಧಿ ಚಿತ್ತ ಮನಸು ಚೇತನ ತತ್ವ
ಮಾರಾರಿ ಮಿಗಿಲಾದ ದೇವತಿಗಳಕ್ಕು
ಧಾರುಣಿಸುತ ಕೇತು ಇವರ ಮಧ್ಯದಲ್ಲಿ
ಶ್ರೀರಮಣ ಪರಮಾತ್ಮ ಶಾಂತವೆಂಬೋದು ಓಂ
ಕಾರದೊಳಗಿನ ವರ್ಣ ಯ ವರ್ಗ ಚತುರ್ವಿಧಾ
ಆರೊಂದು ಧಾತುಗಳು ತ್ವಕುಚರ್ಮ ರಕ್ತಾದಿ
ವಾರಿಜ ವಿತ್ರನ್ನ ಮುಸುಕುವನ ಶನಿಮಧ್ಯ
ಬೀರುವೆನು ಜ್ಞಾನಾತ್ಮ ಅತಿಶಾಂತ ಶ ವರ್ಗ
ಕ್ಷಾರ ಸತ್ವರಜ ತಮ ತ್ರಯಾವಸ್ಥಿಗಳು
ತಾರ ನಮೋನಾರಾಯಣವೆಂಬೊವೆಂಟು
ಸೌರಿ ಮಿಕ್ಕಾದೆಂಟು ದಳದಲ್ಲಿ ಲಿಖಿಸೋದು
ವಾರಿಜ ಭವನಯ್ಯಾ ವಿಜಯ ವಿಠ್ಠಲರೇಯಾ
ಶರೀರದೊಳಗಿದ್ದು ತನ್ನವಂಗೆ ತಿಳಿಪುವಾ ೩

## ಝಂಪೆ ತಾಳ

ಹನ್ನೆರಡು ದಳವುಳ್ಳ ಕಮಲ ವಲಯಾಕಾರ
ಚನ್ನಾಗಿ ಬರೆವುದು ಇದರ ಮೇಲೆ
ಇನ್ನು ಒಂದೊಂದು ದಳದೊಳಗೆ ಲಿಖಿಸಲಿಬೇಕು
ಮುನ್ನಿಪದು ಜ್ಞಾನಿಗಳು ಬಾಲಬೋಧ
ಮುನ್ನಾದಿದಳದಲ್ಲಿ ಮೇಷರಾಶಿಯ ಬರೆದು
ಬಿನ್ನಣದಿ ಓಂ ಓಂ ಇದಕೆ ಕೇಶವ ಮೂರ್ತಿ

ಭಿನ್ನ ವರ್ಣಗಳು (ಅ,ಕ,ಡ,ಮ) ವೆಂಬವು ನಾಲ್ಕು
ಇನ್ನಿತು ರಚಿಸಿ ಎರಡನೇ ದಳದಲ್ಲಿ
ಸನ್ನುತಿಸು ವೃಷಭ (ಆ,ಖ,ಢ,ಯ) ಚತರವರ್ಣಗಳು
ಓಂ ನಂ ನಾರಾಯಣ ಮೂರ್ತಿ ನೆನೆದು
ಘನ್ನ ಮೂರನೆಯದಳದಿ ಮಿಥುನ ರಾಶಿಯ ಬಳಿಯ
ವರ್ಣಿಸಿ ಓಂ ಮಾಧವ ದೇವನ್ನ
ಗಣ್ಯ (ಇ,ಗ,ಣ,ರ) ನಾಲ್ಕು ಮಾತ್ರಗಳ ಬರೆದು ನಿಜ
ವೆನ್ನಿ ನಾಲ್ಕನೆದಳಕೆ ಮನಸುಮಾಡಿ
ಪುಣ್ಯವೆ ಉಂಟು ಕರ್ಕರಾಶಿ (ಈ,ಘ,ತ,ಲ)ವನ್ನು
ಓಂ ಭಂ ವರ್ಣ ಗೋವಿಂದನು
ನಿನ್ನೊಳಗೆ ತಿಳಿವದು ಐದನೆ ಪತ್ರದಲ್ಲಿ
ಪೆಣ್ಣುಗಳ ಮಧ್ಯದಾ ಪೆಸರಿನ ರಾಶಿ
(ಉ,ಊ,ಜ,ಥ,ವ) ಓಂ ಗಂ ಇದಕೆ ವಿಷ್ಣು ಮೂರ್ತಿ
ಕನ್ಯಯಲಿ (ಋ,ೠ,ಚ,ದ,ಶ) ಓಂ ವಂ ವರ್ಣ ಮಧುಸೂ
ದನ ದೇವನ ಭಜಿಸು ಷಡ್‌ದಳದಲ್ಲಿ
ಸನ್ಮತ ವಹದು ತುಲರಾಶಿ (ಛ,ಧ,ಷ)ಗಳು
ಇನ್ನು ತ್ರಿವಿಕ್ರಮ ಓಂ ತೇಂ (ಓಷ್ಠ) ಸಪ್ತದಳದಿ
ಮಣ್ಣು ಭಕ್ಷಿಪ ಕ್ರಿಮಿ (ಎ,ಐ,ಜ,ನ,ಸ) ವರ್ಣ
ವನ್ನು ಓಂ ವಾಂ ವಾಮನ ಅಷ್ಟದಳದಿ
ಹೊನ್ನಿನಂಥ ಮಾತು ಧನುರಾಶಿ ಲಿಪಿಸೆ ಸಂ
ಪನ್ನ (ಓ,ಝ,ಪ,ಹ) ಓಂ ಸುಂ ಶ್ರೀಧರ
ಇನ್ನು ನೋಡು ಪತ್ರ ನವಮದಲಿ ಈಪರಿ
ಎನ್ನು ಗ್ರಹಿಸುವುದು ಹತ್ತು ದಳದಿ
ಇನ್ನಿತಾದರು ಸತ್ಯಾಮಕರ (ಜ,ಞ,ಫ,ಳ) ಓಂ ದೇಂ
ಅನಂತರೂಪಾತ್ಮಕ ಹೃಷಿಕೇಶ

ಹನ್ನೊಂದನೆ ದಳದಲ್ಲಿ ಕುಂಭ
(ಅಂ,ಟ,ಭ,ಕ್ಷ) ಓಂ ಎನ್ನುರು ಇದಕೆ ಶ್ರೀ ಪದ್ಮನಾಭ
ಹನ್ನೆರಡು ದಳದಿ ಮೀನ (ಅಃ,ಠ,ಭ) ವರ್ಣ
ಚನ್ನಾಗಿ ರಚಿಸಿ ಓಂ ಯಂ ದಾಮೋದರ
ಹನ್ನೆರಡು ದಳದೊಳಗೆ ಇಷ್ಟ ಭಗವದ್ರೂಪ
ಹನ್ನೆರಡು ಮಾತ್ರಕಾ ಕೂಡಿಸಲು
ಓಂ ನಮೋ ಭಗವತೆ ವಾಸುದೇವಾಯ ಪ್ರ
ಸನ್ನ ದೇವನ್ನ ನೋಡಿ ಏಕ ಪಂಚಾಶ
ದ್ವರ್ಣ ಒಂದೊಂದರಲಿ ಹಂಚಿ ಹಾಕಿ
ಹನ್ನೆರಡು ರಾಶಿಗಳ ಬರೆದು ಸ್ತುತಿಸಿ
ಧನ್ಯನಾಗೆಲೊ ಮುಂದೆ ದಳದ ಸಂಧಿಗಳಲ್ಲಿ
ರನ್ನತಾರ ಯೊಗ ಒಂಭತ್ತು ಪದದಂತೆ
ಹನ್ನೆರಡುರಾಶಿಗೆ ವಿಭಾಗಮಾಡಿ
ಪನ್ನಗಶಾಯಿ ಸಿರಿ ವಿಜಯ ವಿಠ್ಠಲನ್ನ ಕಾ
ರುಣ್ಯವನು ಪಡೆದು ಚಿಂತಿಸು ಸುಹೃದಯದೊಳಗೆ ೪

## ತ್ರಿವಿಡಿತಾಳ

ದ್ವಾದಶದಳವುಳ್ಳ ಕಮಲದ ಮೇಲೆ
ದ್ವಿದ್ವಾದಶ ಪತ್ರದ ಕಮಲ ಬರೆದು
ಸಾಧಿಸು ಒಂದೊಂದು ದಳದ ಮಧ್ಯದಲ್ಲಿ ವಿ
ನೋದ ಚತುರ ವಿಂಶತಿ ವರ್ಣಂಗಳ
ವೇದ ಮಾತಾ ಮಂತ್ರ ಇದೆ ಎನ್ನು ಕೇಶವ
ಮಾಧವಾದಿ ವರ್ಣ ಮೂರ್ತಿಗಳ
ಪಾದವೆ ಸ್ಮರಿಸುತ್ತ ಮತ್ತೆ ಸೂರ್ಯನ ಗಮನ

ಭೇದದಿಂದಲಿ ತಿಳಿ ನವ ವೀಥಿಯ
ಐದಿಸು ಒಂದೊಂದು ಕಡೆ ಮೂರರ ಪ್ರಕಾರ
ಆದಾವಿಲ್ಲಿಗೆ ತಾರೆ ಇಪ್ಪತ್ತೇಳು
ಐದೇಳು ರಾಶಿಗಳು ಹಂಚಿಹಾಕಲಾಗಿ
ಪಾದ ಪಾದಾರ್ಧ ತ್ರಿಪದವಾಹದು
ಪಾದ ತ್ರಿಮಂತ್ರ ತತ್ಸವಿತುಃ ವರೇಣ್ಯಂಭ
ರ್ಗೋದೇವಸ್ಯ ಧೀಮಹಿ ಧಿಯೋಯೋನಃ ಪ್ರಚೋದಯಾ
ಆದಿ ಮೂರುತಿ ನಮ್ಮ ವಿಜಯ ವಿಠಲನ ಶ್ರೀ
ಪಾದವ ನೆರೆನಂಬು ಓಂಕಾರ ನುಡಿಯುತ್ತಾ ೫

## ಅಟ್ಟತಾಳ

ಇದರ ಮೇಲೆ ಏಕ ಪಂಚಾಶದ್ದಳವುಳ್ಳ
ಪದುಮವ ಬರೆದು ಪ್ರದಕ್ಷಿಣಿ ಮಾಡಿ
ಮುದದಿಂದ ದ್ವಿರಷ್ಟ ಮಿಕ್ಕ ಮೂವತ್ತೈದು
ಇದೆ ಇದೆ ದಳದೊಳು ಲಿಪಿಸಿ ಅಜಾದಿಯ
ಒದಗಿ ಸ್ತೋತ್ರವ ಮಾಡು ವರ್ಣದೇವತವೆಂದು
ತುದಿ ಮೊದಲಿದರ ವಿಸ್ತಾರವೆ ಈ ಪರಿ
ಇದೆ ಚಕ್ರಾಂಬುಜವೆಂದು ಕರೆಸುತಿಪ್ಪದು
ಹೃದಯಾಕಾಶ ವಾರಿ ಸ್ಥಂಡಿಲ ಗಗನ ಸೂರ್ಯ
ವಿಧು ಮಂಡಲ ಸಮಸ್ತ ಉತ್ತಮ ಸ್ಥಾನ
ಇದೆ ನಿರ್ಮಾಣ ಮಾಡಿ ಸತ್ಕರ್ಮದಲಿ ನಿತ್ಯ
ಪದೋಪದಿಗೆ ಶ್ರೀ ಹರಿಯ ಧ್ಯಾನ ಮಾಡಲಿ ಬೇಕು
ಇದರೊಳು ಏಳುಕೋಟಿ ಮಂತ್ರಾರ್ಥವೆ ಉಂಟು
ಅಧಿದೈವ ಅಧಿಭೂತ ಅಧ್ಯಾತ್ಮವೇ ಉಂಟು

ಅಧಿಕಾರತನಭೇದ ತಿಳಕೊಂಬ ಜೀವಿಗಳಿಗೆ
ಸದಮಲಾನಂದ ನಮ್ಮ ವಿಜಯ ವಿಠ್ಠಲರೇಯಾ
ಬದಿಯಲ್ಲಿ ಇರುತಿಪ್ಪ ಚಕ್ರಾಬ್ಜ ಬಲ್ಲವನಿಗೆ ೬

## ಆದಿತಾಳ

ಸ್ನಾನ ಉದಕ ಅಚಮನಿಯ ಸಂಧ್ಯಾರ್ಘ್ಯ ತ್ರಿಪದ
ಎಣಿಸುವಾಗ ನಾನಾ ಮಂತ್ರ ಜಪಿಸುವಾಗ
ಮೇಣು ಆರ್ಚಾ ಅರ್ಚನೆ ಪಾವಕಾಹುತಿ ಯಜ್ಞ
ಕ್ಷೋಣಿ ಸುರರ ಪೂಜೆ ಆತ್ಮ ಸಂತೋಷ ಅನ್ನ
ಪಾನಾದಿ ಕೊಡುವಾಗ ಇದನೆ ಚಿಂತಿಸಬೇಕು
ಏನೆಂಬೆನಯ್ಯಾ ಅವ ಅಪರೋಕ್ಷಿ ಎಂದಿಗೆ
ಧ್ಯಾನ ಸಂಪೂರ್ಣಸಿದ್ಧ ಜ್ಞಾನವಂತನಾಹಾ
ಪ್ರಾಣನಾಗಿ ಇಪ್ಪರು ಹರಿ ಸಿರಿ ಪ್ರಾಣಾದ್ಯರು
ಕಾಣಿಸಿ ಕೊಂಬರು ಒಂದೊಂದು ಮಂಡಲದಲ್ಲಿ
ಆನಂದಗತಿಗೆ ಸಾಧನ ಬೇಕಾದರೆ
ಮಾನವಾ ಇದನೆ ಕೈಕೊಂಡು ಆಲೋಚಿಸು
ಸ್ಥಾನ ಸ್ಥಾನಕೆ ನಿನಗೆ ಶುಭವಕ್ಕು ಪುಸಿಅಲ್ಲ
ದೀನನಾಥನಾದ ವಿಜಯ ವಿಠಲರೇಯನ್ನ
ಗಾನವ ಮಾಡಿರೊ ಗ್ರಹಿಸಿ ಈ ಪರಿಯಿಂದ ೭

## ಜತೆ

ಸಿದ್ಧ ಸಾಧನವಿದು ಬಿಂಬ ಕಾಣುವದಕ್ಕೆ
ಪದ್ಮಿವಲ್ಲಭ ನಮ್ಮ ವಿಜಯವಿಠಲ ಪ್ರಾಪ್ತಿ ೮

## ೨೬

### ಧ್ರುವತಾಳ

ಕೃತಿಕಾಂತ ಅರ್ಧನಾರಿ ರೂಪ ವಧರಿಸಿ ನ ।
ಗುತ ಯೋಗಸರ್ಗ ಮಾಡಿದ ಪಿತಮಹನ್ನ ।
ಶತ ವತ್ಸರ ಪರುಯಂತ ವರ್ಣಾಶ್ರಮಾಚಾರ ।
ಹಿತದಿಂದ ರಚಿಸಿದನು ಪ್ರತ್ಯೇಕದಿ ।
ಸತತ ಸರ್ವಜೀವರನು ಬೀಜಾಂಕುರದಂತೆ ।
ಅತಿಶಯದಿಂದಲಿ ಗೈಸಿ ಮುಂದೆ ।
ಗತಿ ಸಾಧನಕ್ಕೆ ಕೇಳಿ ಗುಣತ್ರಯದ ಗಾತ್ರ ಉ।
ತ್ಪತ್ತಿಯಾಗುವುದಕ್ಕೆ ಅನಿರುದ್ಧ ದೇವ ।
ಪತಿ ಕರಿಸಿ ತನ್ನ ಉದರದಿಂದಲಿ ನಿಜ ।
ಸತಿ ಶಾಂತಿಯಲ್ಲಿಯಿಟ್ಟ ಅಭಿಮುಖದಿಂದ ।
ಮತಿವಂತರು ಕೇಳಿ ಬ್ರಹ್ಮನ ಏಕವಿಂ ।
ಶತಿ ಅಬ್ದ ಪ್ರಥಮಾದಿ ದಿವಸದಲ್ಲಿ ಯೆನ್ನಿ ।
ಚ್ಯುತ ದೂರ ಅನಿರುದ್ಧ ಮಾಡಿದ ಸೃಷ್ಟಿಕೇಳಿ ।
ಸ್ಥಿತ ಮೂಲ ಪ್ರಕೃತಿ ನಾಮಗಳಿಂದಲಿ ।
ತೃತಿಯಾಗುಣಾಭಿಮಾನಿ ನಿಯಾಮಕನಾಗಿ ।
ಸತುವ ರಜೋ ತಮ ಪರಮಾಣು ರೂಪ ।
ಮಿತಿಯಿಲ್ಲದಲೊಂದೊಂದು ಸಾವಯವಂಗಳ ಸ ।
ಹಿತವಾಗಿ ಕಾಲಾದಿಯಂತೆ ನಿತ್ಯ ವ್ಯಾ ।
ಪುತವಾಗಿಯಿಪ್ಪುದು ಮಿಶ್ರವಾಗಿ ಉ ।
ನ್ನತ ಮಹಿಮೆ ಯೇನಂಬೆ ವಿಚಾರಿಸಿ ।
ಸ್ಥಿತಿಯಿಂತುವುಂಟು ಮೂಲ ಜಡ ಪ್ರಕೃತಿಯಿಂದ ।

ಪ್ರತಿಪ್ರತಿ ಬೊಮ್ಮಾಂಡ ಪುಟ್ಟುವದಿದಕೊ ।
ಗತಿಯ ಲಾಲಿಸುವುದು ಆರಂಭದಲ್ಲಿ ಉ ।
ತ್ಪತ್ತಿಗೆ ತೆಗೆದುಕೊಂಡ ಪ್ರಕೃತಿ ಗಣಿತ ।
ಸತುವ ರಾಜಸ ತಮೊ ಗುಣವೊಂದೊಂದಕ್ಕೆ ಕಡಿಮೆ ।
ಚತುರ (೪) ದ್ವಿ (೨) ಯೇಕ (೧) ಮುಷ್ಠಿ ಪರಿಮಿತಮನಕೆ ।
ಸತುವ ಗುಣರಾಶಿ ಸೃಷ್ಟಿಸಲ್ಲದು ಮು ।
ಕುತವಂತರ ಕ್ರೀಡಿಗೆ ಅನುಕೂಲವೊ ।
ಇತರ ಎರಡು ರಾಶಿ ಸೃಷ್ಟಿಗೆ ಕಾರಣ ।
ಮಿತವಾಗಿ ಒಂದೊಂದು ರಾಶಿಯೊಳಗೆ ।
ಪ್ರಥುಕು ಪ್ರಥುಕವಾಗಿ ಭಾಗ ವಿಶಿಷ್ಟ ವಿ ।
ಹಿತ ರಜೊರಾಶಿ ಮೂರು ಮೂರುವುಂಟು ।
ಜತೆವೊಂದು (೧) ಮಡಿತಮಸು ಅದರ ನೂರ್ಮಡಿ (೧೦೦) ರ
ಕುತ ಅದರ ನೂರ್ಮಡಿ (೧೦,೦೦೦) ಸತ್ವವೆನ್ನಿ ।
ಪ್ರತಿ ನಿಧಿಯಾದ ತಮಕೆ ವಿಶಿಷ್ಟಭಾಗ ಗು ।
ಣಿತ ಮಾಡುವೊಂದು ಮಡಿ ರಜಸು ಆಮ್ಯಾಲೆ ಅದರ ।
ಶತ (೧೦೦) ಮಡಿ ತಮಸು ಅದರ ದಶ (೧೦) ಮಡಿ (೧೦೦೦) ।
ಸತುವ ಈ ವಿಧಿ ವಿಂತ ಎರಡು ರಾಶಿಗಳು ಮಿ ।
ಳಿತವಾಗಿ ಇಪ್ಪುದು ತ್ರಿ (೩) ಪ್ರಕಾರ ।
ಪತಿತ ಪಾವನ ರಂಗ ವಿಜಯ ವಿಠ್ಠಲರೇಯನ ।
ತುತಿಸಿಕೊಂಡಾಡುವುದು ಪ್ರಕೃತಿ ವಿಚಾರ ತಿಳಿದು

## ಮಟ್ಟತಾಳ

೧ಒಂದು (೧) ಶತಾಯುತ (೧೦೦) (೧೦,೦೦೦)
ವಿಶಿಷ್ಟರಾಶಿ ರಜೊ ।
ಒಂದೆಂಬೊ ಭಾಗ ಮೂರು ಪರಿಯೊಳಗೆ ।

ಪೊಂದಿಪ್ಪವು ಕೇಳಿ ತಮೊ ರಾಜಸ ಸತ್ವ ।
ಒಂದೊಂದರ ಮದ್ಧ್ಯಸಮವಾಗಿ ಪೊಳೆವುತ್ತ ।
ಒಂದು ಮಡಿ ತಮಸುಇದಕೆ ವಿವರ ಸಂ ।
ಮಂಥ ತಮೊ ತಮೊ ರಜ ತಮೊ ಸತ್ವ ।
ಮುಂದೆ ನೂರು ಮಡಿ ರಾಜಸಕೆ ಇದ ।
ರಂದದಿ ರಜೊತಮ ರಜೊರಜ ರಜಸತ್ವ ।
ಸಂದಿದೆ ಆಯುತ ಮಡಿಸತ್ವಕೆ ಸತ್ವತಮ ।
ವೆಂದು ಸತ್ವರಜಸಿನ ಸತ್ವ ಸತ್ವಗುಣ ।
ದಿಂದ ರಜೊರಾಶಿಭಾಗ ವಿಶಿಷ್ಟದಲಿ ।
ಎಂದೆಂದಿಗೆ ಕರಸಿಕೊಂಬುವದುಯಿದೆ ।
ಸಂದೇಹವಿಲ್ಲ ಅಂತರಗರ್ಭಿತವೊ ।
ಮುಂದೆ ತಮೊಗುಣ ವಿಶಿಷ್ಟರಾಶಿಯ ಭಾಗ ।
ಒಂದು ಮಡಿ ರಜಸು ಹತ್ತು ಮಡಿ ತಮಸು ।
ಅಂದವಾಗಿ ನೂರು ಮಡಿಸತ್ವ ಲೆಖ್ಖ ।
ದಿಂದ ತಮೊಗುಣ ಯಿದರೊಳು ವಿಭಾಗ ।
ಒಂದೊಂದು ಮಡಿಯೊಳಗೆ ತ್ರಿವಿಧ ಗುಣವುಂಟು ।
ಒಂದು ಮಡಿ ರಕ್ತಕೆ ರಜೊರಜ ರಜೊತಮಸ ।
ಸಂದು ರಜೊಸತ್ವ ಆಮ್ಯಾಲೆ ಹತ್ತು ಮಡಿ ।
ಪೊಂದಿದೆ ತಮದಲ್ಲಿ ತಮೊ ತಮೊ ತಮ ರಾಜಸ ।
ಛಂದದ ತಮಸತ್ವ ಬೆರದಿದೆ ಮಿಗೆಯಿತ್ತ ।
ಲಿಂದ ನೂರು ಮಡಿ ಸತ್ವದೊಳಗೆ ಕೇಳಿ ।
ನಿಂದಿರದೆ ಸತ್ವತಮ ಸತ್ವರಜೊ ।
ಮುಂದೆ ಸತ್ವಸತ್ವ ಇನಿತು ನೋಡಿ ಮನಕೆ ।
ತಂದು ತಿಳಿದ ಇದೆ ತಮೊಗುಣದ ರಾಶಿ ।
ಹಿಂದೆ ವಿಸ್ತರಿಸಿದ್ದ ರಜೋಗುಣದ ರಾಶಿ ।

ಒಂದೊಂದು ರಾಶಿ ವಿಶಿಷ್ಟ ಭಾಗದವು ।
ಕುಂದದೆ ಎರಡರಲಿ ಮೂರರ ಪ್ರಕಾರ ।
ದಿಂದ ವಿಭಾಗಗುಣ ಸಿದ್ಧವಾಗಿವೆ ಮೂಲ ।
ಸುಂದರಾಂಗ ಸಿರಿ ವಿಜಯ ವಿಠ್ಠಲನಂಘ್ರಿ ।
ದ್ವಂದ ಧ್ಯಾನವ ಮಾಡಿ ಯೋಚನೆಯೊಳಗಾಗು ೨

## ತ್ರಿವಿಡಿ ತಾಳ

ಅಜನ ಪ್ರಳಯದಲ್ಲಿ ಗುಣ ಸಾಮ್ಯವಾಗುವ ।
ರಜೊರಾಶಿ ವಿಶಿಷ್ಟ ಭಾಗಾಂತರ ।
ರಜೊಮಡಿ ನೂರರೊಳು ವಿಭಾಗತ್ರಯವೆನ್ನಿ ।
ರಜೋತಮ ರಜೋರಜ ರಜ ಸತ್ವವ ।
ನಿಜವಾಗಿಯಿದರೊಳು ಹನ್ನೆರಡು (೧೨)ಬಿಂದು ।
ತ್ರಿಜಗವ್ಯಾಪಿಸಿ ಇಪ್ಪದು ಅಂಶದಿಂದ ।
ಪ್ರಜಸರ್ಗ ಮೊದಲಾದ ತತ್ವಕೆ ಉಪಾದಾನ ।
ರಜ ಸತ್ವ ಪೊಂದಿದ ವಿಭಾಗವೊ ।
ತೆಜಿಸು ಸತ್ವ ಅಯುತ ಮಡಿ ವೊಂದು ಮಡಿತಮಸು ।
ಸೃಜಿಸಿಕೊಳ್ಳದು ಕಾಣೊ ಬ್ರಹ್ಮಾಂಡಕೆ ।
ರಜಸತ್ವಬಿಂದು ಹನ್ನೆರಡು ವಿಭಾಗದಲಿ ।
ಅಜತತ್ವ ಪುಟ್ಟಿತು ತಿಳಿವಿಶೇಷ ।
ರಜೊರಾಶಿಯೊಳಗಿನ ಸತ್ವಮಡಿಯೊಳಗೆ ।
ಭಜಿಸು ಸತ್ವ ಸತ್ವ ಬಿಂದುಹತ್ತು ।
ರಜಸತ್ವ ಕೂಡಿದರೆ ಅದರಂತೆ ಒಪ್ಪಿದವು ।
ಭುಜಗ ತಲ್ಪಸಿರಿ ವಿಜಯ ವಿಠ್ಠಲರೇಯ ।
ವಿಜಮಾನ ತಾನಾಗಿ ಗುಣಕಾರ್ಯಂಗಳ ಮಾಡುವ ೩

## ರೂಪಕ ತಾಳ

ರಾಶಿ ಭೂತವಾದ ತಮೊದೊಳಗಿನ ವಿ ।
ಶೇಷ ಹತ್ತು ಮಡಿ ತಮೊಭಾಗದೊಳಗುಳ್ಳ ।
ಲೇಸು ತಮೊತಮ ಗುಣದ ಬಿಂದುವೊಂದು ।
ಭೂಷಣದಲಿ ಬಂದು ರಜಸತ್ವ ಕೂಡೆ ಸ್ವ ।
ರಾಶಿಮಧ್ಯದಲ್ಲಿಂದ ಒಂದು ಬಿಂದು ಸಹಿತ ।
ದೇಶತ್ಯಾಗವ ಮಾಡಿ ತೆರಳಲಾಗಂದು ಯೋ ।
ಚಿಸಲು ಮೂರು ಭಾಗಾದವು ಕೇಳಿ ।
ರಾಶಿಭೂತ ಮೂಲರಜಭಾಗ ವಿರಳ ।
ಅಸತ್ವ ಸತ್ವಾಂಶ ಮಿಳಿತವಾದದು ಯೇಕ ।
ರಾಶಿ ಭೂತ ಮೂಲ ರಜಭಾಗ ವಿರಳ ।
ಅಸತ್ವ ಸತ್ವಾಂಶ ಮಿಳಿತವಾದದು ಯೇಕ ।
ರಾಶಿಯೆನಿಸುವುದು ಅವ್ಯಕ್ತದಿಂದ ಪ್ರ ।
ಕಾಶವಾಯಿತು ಕೇಳಿ ಎರಡೆ ತತ್ವಾ ।
ವಾಸುದೇವಾತ್ಮಕಾ ವಿಜಯವಿಠ್ಠಲರೇಯ ।
ಆರಿಯಿಲ್ಲದೆ ಸರ್ವ ನಿರ್ಮಾಣ ಮಾಡುವ । ೪

## ಝಂಪಿ ತಾಳ

ಕೇಶವಾದಿ ಮೂರ್ತಿಗಳ ಸೂರ್ಯ ಪ್ರ ।
ಕಾಶ ವರ್ನವು ದಿಗ್ದೇಶ ಕೃತ್ಯವು । *

* ಈ ಸುಳಾದಿ ಪೂರ್ಣಭಾಗ ದೊರೆತಿಲ್ಲ.

## ೨೭

## ಧ್ರುವತಾಳ

ಗುಣಕಾಲ ದೇಶ ಕರ್ಮ ಕ್ರಿಯ ನಾಮ ತೀರ್ಥ ದೇಹ
ಜನನ ಮಿಕ್ಕಾದ ನಾಲ್ಕು ಬಗೆ ವ್ಯಾಪಾರ
ಜನನ ನಾನಾ ಜಂತು ವರ್ಷ ಖಂಡ ದ್ವಿಪಬ್ಧಿ ಗಗನ
ಪ್ರಣವ ಮಂತ್ರ ವರ್ಣ ಉಪಕರಣಾ
ಇನಿತಾರಲ್ಲಿ ಅಭಿಮಾನಿಗಳ ತಿಳಿದು ಉದಯಾಸ್ತ
ಮಾನ ಪರ್ಯಂತರ ಸಂಚರಿಸು
ದಿನ ದಿನದಲ್ಲಿ ಎಳ್ಳನಿತು ಬಿಡದೆ ಸಾ
ಧನ ಮಾಡು ಮರಿಯದೆ ಸರ್ವದಲ್ಲಿ
ನೆನೆಸು ಭಾರತಿ ಗರುಡ ಗಣಪತಿ ಪುಷ್ಕರ
ಅನಲಾಂಗನೆ ಉಷಾ ಪುಷ್ಕರ ಧನಪಾ
ಇನ ಶಶಿ ಭೂಮಿಧರ್ಮ ಮಿಗಿಲಾದ ದೇವತಿಗಳು
ಮನಸ್ಸಿಗೆ ತಂದು ತತ್ತದ್ಭಗವದ್ರೂಪ
ಮನನಮಾಡುವುದು ಮಾತು ಮಾತಿಗೆ ಬಿಡದೆ
ಜನನ ಮರಣದಿಂದ ದೂರ ಕಾಣೋ
ಇನಿತು ಚಿಂತನೆಯಿಂದ ನಿಖಿಳ ಕರ್ಮಮಾಡಿದ
ಘನ ಪುಣ್ಯಕ್ಕೆ ಮಿಗಿಲು ಅಡಿಗಡಿಗೆ
ತನುವು ದಂಡಣೆ ಇಲ್ಲಾ ಪರರಿಗೆ ಬಾಯ್ದೆರದು
ದಣಿದು ಬಳಲುವದಲ್ಲಾ ತಿರುಗೆ ತಿರುಗಿ
ಹಣ ಹೊನ್ನು ವೆಚ್ಚಮಾಡಿ ಬರಿದಾಗುವದಲ್ಲಾ
ಮನದೊಳಗೆ ಉಂಟು ಬಾಹ್ಯವಲ್ಲಾ
ಅನಿಮಿಷ ಗಣದವರು ವಶವಾಗಿ ಇಪ್ಪರು

ಅನುದಿನ ಕಾರುಣ್ಯವನು ಮಾಳ್ಪರೋ
ಮಿನಗುಜ್ಞಾನವಿದೆ ಭಕ್ತಿ ವೈರಾಗ್ಯ ಮಿಳಿತ
ಕೊನೆಗೆ ಇದು ದೊರೆಯದಲೆ ಮುಕ್ತಿಯಿಲ್ಲಾ
ಎಣಿಕೆ ಮಾಡೆಲೊ ಮನುಜಾ ನಾನು ನನ್ನದೆಂಬೊ
ತನು ಮನೆ ಸಮಸ್ತ ವಿಷಯದಲ್ಲಿ
ನಿನಗೆ ಸ್ವಾತಂತ್ರ್ಯವ ಹಚ್ಚಿಕಕೊಳ್ಳದೆ ಹರಿ
ಅಣು ಮಹತ್ತು ರೂಪಯುಗಪದನೆಂದು
ಗಣಿತ ಮಾಡುವುದು ಇದೆ ನಿನಗೆ ಗುಪ್ತಾ
ರ್ಚನಿಯು ಕಾಣೋ ಈ ಪರಿ ತಿಳಿದು ನಾಮಕೀ
ರ್ತನೆ ಗೈಯೊ ಲಿಪಿಸಿ ಕೊಂಡಾಡು ನಿತ್ಯ
ಗುಣಿಸಿ ನೋಡೆಲೊ ಧ್ಯಾನ ಜಪ ತಪಿಸಿದ್ಧಿಗಿಂತ
ಮಣಿಯಾಗಿಪ್ಪನು ನಾಮಸಿದ್ಧ ಮನುಜಾ
ಜನರಿಗೆ ಅರುಹುವಾತನು ಗ್ರಹಿಸುವ ಸಾ
ಧನದಲ್ಲಿ ಬಾಳುತಿಪ್ಪ ಕಲಿಯುಗದಲ್ಲಿ
ತೃಣ ಬೊಮ್ಮಪರಿಯಂತ ತಾರತಮ್ಯ ಭೇದದಿಂದ
ಗುಣ ಬಲ್ಲವನಿಗೆ ಈ ಮಾತು ಸಿದ್ಧಾ
ಪ್ರಣತಾರ್ತಿ ಹರ ನಮ್ಮ ವಿಜಯ ವಿಠ್ಠಲರೇಯ
ನೆನಿಸು ನೆನಿಸು ಭಗವದ್ಗೀತಾರ್ಥವನ್ನೆ ತಿಳಿದು ೧

## ಮಟ್ಟತಾಳ

ಪ್ರಾತಃಕಾಲದಲ್ಲಿ ನಾರಾಯಣನೆನ್ನಿ
ಶ್ರೀ ತುಲಸಿಯಲ್ಲಿ ವಿಷ್ಣುವಿನ ಸ್ಮರಣೆಮಾಡಿ
ಮೂತ್ರ ವಿಸರ್ಜನೆ ಸಮಯ ಕಾಲದಲ್ಲಿ
ನೀ ತಿಳಿಯೊ ಕೇಶವನಾಮಕ ಹರಿಯ ಮಾಡು ಮರಿಯದಿರು

ಮೃತ್ತಿಕೆ ಶೌಚಕ್ಕೆ ಶ್ರೀ ತ್ರಿವಿಕ್ರಮನೋ
ದಂತಧಾವನ ಹರಿ ನೇತುರ ಮೊದಲಾದ ಪ್ರಕ್ಷಾಲ್ಯಕ್ಕೆ ಮಾಧವ
ಗೋತಂಡವರಿಸುವ ಕಾಲಕೆ ಗೋವರ್ಧನ
ವಾತನೊಡಿಯ ನಮ್ಮ ವಿಜಯ ವಿಠ್ಠಲ ಮೂರ್ತಿಯ
ಮಾತ್ರಕಾಲ ಬಿಡದೆ ನೆನಿಸಿ ಧನ್ಯನಾಗೋ ೨

## ರೂಪಕತಾಳ

ನದ್ಯಾದಿ ಸ್ನಾನಮಾಡುವ ಕಾಲಕ್ಕೆ ವರಹಾ
ಊರ್ಧ್ವ ಪುಂಡ್ರಗಳಲ್ಲಿ ಕೇಶವಾದಿ ಸೂರ್ಯ
ಮುದ್ರೆ ಇಡುವಾಗ ಕ್ರದ್ಧೋಲ್ಕಾದಿ ಐದು
ಸಧ್ಯಾ ಸಂಧ್ಯಾಕಾಲದಲ್ಲಿ ರಾಮನೆನ್ನು
ಸಿದ್ಧವಾಗಿ ಪ್ರಾಣಗ್ರಾಸದಲ್ಲಿ ಅನಿ
ರುದ್ಧಾದಿ ಪಂಚ ಭಗವನ್ಮೂರ್ತಿಗಳ ಸ್ಮರಿಸು
ಮುದ್ದೆ ಮುದ್ದೆ ಕವಳ ಮೆಲುವಾರಂಭದಲಿ ವಾ
ಸುದೇವ ಆಪೋಶನಗಳಲ್ಲಿ ಶ್ರೀ ಹರಿ
ಪೊದ್ದುಡುವ ವಸ್ತ್ರದಲಿ ಉಪೇಂದ್ರ ಭಗ
ವದ್ರೂಪ ಚಿಂತಿಸು ಉಪವೀತ ವಾಮನ
ಶುದ್ಧ ಮಂಗಳಾರ್ತಿಕೊಂಬಾಗ ಭಾರ್ಗವ ವೈ
ಶ್ವದೇವಾದಿಯಲ್ಲಿ ಇದೇ ಮೂರ್ತಿ ನಿಜ್ಜಯ
ನಿರ್ದೋಷ ತೀರ್ಥದಲ್ಲಿ ಕೃಷ್ಣರಾಮ ವ್ಯಾಸ
ನಿರ್ದಾರ ತ್ರಿವಾರ ಶಂಖೋದಕ ಮುಕುಂದ
ಭದ್ರ ಮೂರುತಿ ನಮ್ಮ ವಿಜಯ ವಿಠ್ಠಲರೇಯ
ಹೃದ್ಗುಹದೊಳಲ್ಲಿ ನೆನಿಸಿ ಸಂತೋಷವನುಭವಿಸು ೩

## ಝಂಪೆತಾಳ

ತುತ್ತು ಪ್ರತಿತುತ್ತಿಗೆ ಗೋವಿಂದ ಭಕ್ಷಕವಳ
ಎತ್ತುವಾಗಚ್ಯುತ ಶಾಕಾದಿ ಧನ್ವಂತ್ರಿ
ಮತ್ತೆ ಪರಮಾನ್ನದಲಿ ಪಾಂಡುರಂಗ ನವ
ನೀತದಲಿ ತಾಂಡವ ಕೃಷ್ಣಸ್ವಾಮಿ
ಬುತ್ತಿ ಕ್ಷೀರಾನ್ನದಲಿ ಗೋಪಾಲ ಶ್ರೀನಿವಾಸ
ತತ್ತಳಿಪ ತೈಲ ಘೃತ ಪಕ್ವದಲಿ ವೈಕುಂಠ
ಉತ್ತತ್ತಿ ಕದಳಿ ಜಂಬು ಚೂತ ಮಧು
ಕಿತ್ತಳಿ ದಾಳಿಂಬ ನಾರಿಕೇಳ ನಾರಂಗ
ಧಾತ್ರಿ ಮಿಕ್ಕಾದ ಫಲ ಮೆಲುವಾಗಲಿ ಯದುಕು
ಲೋತ್ತದು ಬಾಲಕೃಷ್ಣನ್ನ ಸ್ಮರಿಸು ಮನವೆ
ಚಿತ್ತಜಪಿತ ನಮ್ಮ ವಿಜಯವಿಠ್ಠಲನಂಘ್ರಿ
ಚಿತ್ತದಲಿ ನಿಲಿಸಿ ಉದರ ಪೂರಗೈಸು ೬

## ತ್ರಿವಿಡಿ ತಾಳ

ಪಾನಕದಲ್ಲಿ ನಾರಸಿಂಹ ಮೂರುತಿ ಗಂಗಾ
ಪಾನದಲ್ಲಿ ವಿಷ್ಣು ತ್ರಿವಿಕ್ರಮಾ
ಮೇಣು ಗಮನಾಗಮನದಲ್ಲಿ ಗರುಡ ಕೇತನ
ಏನೆಂಬೆ ದ್ವಿಜರಲ್ಲಿ ಸರ್ವರೂಪಾ
ಗಾನಮಾಡುವ ಕಾಲ ಯೋಗೇಶ್ವರ ದೇವ
ಆನಂದ ಕಥಾಕಾಲ ಹಯಾಸ್ಯವ್ಯಾಸ
ಮಾಣದೆ ತುಲಸಿ ದೂರ್ವಾಂಕುರ ಸಕಲ ಪ್ರಾ
ಸೂನು ಮುಡಿವ ಕಾಲ ರಾಮ ದತ್ತ ಕಪಿಲ
ಸೂ ನೀತಿಯಲಿ ನರಸಿಂಹ ಪ್ರಣಾಮ ಪ್ರದ

ಕ್ಷಣೆಗೆ ಖಗ ಶೇಷಾಂತರ್ಗತ ಹರಿ ಎನ್ನಿ
ನೀನೆ ತಿಳಿಯೊ ಉದರ ಪೂರ್ತಿಗೆ ವಾಸುದೇವ
ದಾನದಾನದಲಿ ರಾಮ ವಾಮನ ಮೂರ್ತಿ
ಧೇನುದೂಹನದಲ್ಲಿ ಗೋಪಾಲ ವತ್ಸಸ್ತನ
ಪಾನದಧಿ ಮಥನದಲಿ ಕೃಷ್ಣಹರಿ ಕಾಣೊ
ಪ್ರಾಣನೊಳಗಿಪ್ಪ ವಿಜಯವಿಠ್ಠಲರೇಯ
ಮಾನಸದಲ್ಲಿ ಪೊಳೆವ ಇಚಿತು ಕೊಂಡಾಡಿದರೆ ೫

## ಮಟ್ಟತಾಳ

ಪುತ್ರಾದಿ ಚುಂಬನ ವೇಣುಹಸ್ತ ಕೃಷ್ಣ
ಮತ್ತೆ ತಾಂಬುಲಕಾಲದಲ್ಲಿ ಪ್ರದ್ಯುಮ್ನನು
ಚಿತ್ತಜನ ಕೇಳಿಯಲ್ಲಿ ಗೋಪೆರಾ
ವೃತ್ತ ಕುಜ ಕುಂಕುಮಾಂಕಿತ ಎಳೆದಳ
ಹಸ್ತ ಗೋಪಿಜನಜಾರ ಕೃಷ್ಣನೆನ್ನಿ
ಹೊತ್ತು ಹೊತ್ತಿಗೆ ಕ್ರೀಡೆ ಕಾಲಕ್ಕೆ ಗೋವಿಂದ
ಉತ್ತಮ ಶಯ್ಯಾಕಾಲಕ ಸಂಕರುಷಣ
ಇತ್ತ ನಿದ್ರೆಯಲ್ಲಿ ಪದ್ಮನಾಭದೇವ
ಅತ್ಯಂತವಾಗಿ ಕೊಂಡಾಡು ನಿರುತವಾಡು
ಸತ್ಯಸಂಕಲ್ಪನೊ ವಿಜಯ ವಿಠಲರೇಯ
ಭೃತ್ಯನಲ್ಲಿ ಮಹಿದಾಸನಾಗಿ ಇಪ್ಪಾ ೬

## ಆದಿತಾಳ

ಅಡಿಗಡಿಗೆ ಮಾಡುವ ಸಂಸಾರ ಯಾತ್ರೆಯಲ್ಲಿ
ಬಿಡದೆ ಕರ್ಮಾವಳಿ [ಎ]ಸಗುವ ಕಾಲಕ್ಕೆ
ಒಡನೊಡನೆ ಕೇಶವಾದಿ ಮೂರ್ತಿಗಳ ನೆನಿಸುವದು

ನಡೆನುಡಿ ಮರಿಯದೆ ಮನದಲ್ಲಿ ಚಿಂತಿಸಿ
ಪೊಡವೀಶ ರಂಗನ್ನ ಕರುಣ ಕಟಾಕ್ಷವ
ಪಡೆದು ಧನ್ಯನಾಗೋ ಇಂಥದಕೆ ಸತ್ಕರ್ಮ
ಕಡೆ ಬೀಳುವುದು ಕಾಣೊ ಸಂಸಾರಾಂಬುಧಿಯಿಂದ
ತಡಿಯದೆ ಹೆದ್ದಾರಿ ವೈಕುಂಠನಗರಿಗೆ
ಬಡವನಾದರೆ ಇನಿತು ತಿಳಿದು ಸಂಚರಿಸಿದರೆ
ಎಡೆಬಿಡದೆ ನೂರಾರು ಯಾಗಮಾಡಿದ ಫಲ
ಕುಡಿದ ನೀರು ಮೊದಲಾಗಿ ಸರ್ವಾಂತರಿಯಾಮಿ ಹರಿಯ
ಕಡುಪೂಜೆ ಎನಿಪದು ಆವಾವಬಗೆ ಇರಲು
ಒಡಲಿಗೋಸುಗ ಇದ ಮಾಡಿದಡೆ
ಕಡಲ ಥೆರೆಯಂತೆ ಪುಣ್ಯವೆ ಬಪ್ಪುದು
ದೃಢ ಮನದಲ್ಲಿ ನಿತ್ಯ ನೆನಿಸು ಕಾಯದಿಂದ
ಬಡುವ ಕ್ಲೇಶಗಳನ್ನು ಬಿಡು ಬಿಡು ಮತ್ತೆ ಬಿಡು
ಒಡಿಯ ವಿಜಯವಿಠ್ಠಲ ಸಕಲ ವಿಷಯದಲ್ಲಿ
ಹುಡುಕಿಸಿ ಕೊಳ್ಳದಲೆ ಮುಂದೆ ನಿಂದಾಡುವ ೭

### ಜತೆ

ರಸನದಲ್ಲಿ ಇಂತು ನುಡಿದರೆ ತನ್ನ ದ
ರುಶನಕೊಡುವ ನಮ್ಮ ವಿಜಯವಿಠ್ಠಲ ಒಲಿದು ೮

## ೨೮

### ಧ್ರುವತಾಳ

ಗುಣಕಾಲ ದೇಶ ವೇದ ಜೀವ ಲಕುಮಿ ನಾರಾ ।
ಯಣ ನಿತ್ಯ ವಸ್ತುವೆನ್ನಿ ಮಹ ಪ್ರಳಯದಲ್ಲಿ ।

ಇನಿತರೊಳು ಚಿತ್ರವುಂಟು ಪ್ರಮೇಯಗಳೊಂದೊಂದು ।
ತಿಳಕೊಂಬ ವಿಷಯದಲ್ಲಿ ಪರಿಪರಿಯಿಂದ ।
ಗಣನೆ ಮಾಡುವುದು ಶ್ರೀ ಶೂನ್ಯನಾಮಕ ಬ್ರಹ್ಮ ।
ಗುಣ ಪರಿಪೂರ್ಣ ನಿತ್ಯ ಸ್ವತಂತ್ರ ಪುರುಷ ।
ಗಣನೆ ಅಸಂಖ್ಯ ಜೀವರಿಗೆ ಪ್ರೇರಕ ಮಹ ಪರಮ ।
ಮಣಿ ಸ್ಥಾನಿಯಾಗಿಪ್ಪ ಪರಬೊಮ್ಮನೊ ।
ಅಣೊರಣಿ ಅಪರಿಚ್ಛಿನ್ನ ಜಡ ಜೀವ ಭಿನ್ನ ಬೊಮ್ಮಾ ।
ಗಣ ಜೀವಾದಿಸ್ಥಿತ ತತ್ತದ್ರೂಪ ।
ಪ್ರಣವ ಪ್ರತಿಪಾದ್ಯ ಮುಕ್ತಾಮುಕ್ತ ವಿವಿಧ ।
ಗಣರಾಶಿಗಳ ತನ್ನ ಗರ್ಭದಲ್ಲಿ ।
ಕ್ಷಣ ಕಾಲವಾದರು ಆಯಾಸವಿಲ್ಲದಲೆ ।
ಎಣೆಗಾಣೆ ಧರಿಸಿಹ ಲೀಲಾ ಮಾತ್ರ ।
ಭಣಗು ದೈವಂಗಳಿಗೆ ಇನಿತು ಪ್ರತಾಪವುಂಟೆ ।
ಗುಣಪೂರ್ಣ ಏಕೋಮೇವ ನಾರಾಯಣ ।
ಎಣಿಸಿ ಪೇಳುವುದೇನು ಅನಾದಿ ಸಿದ್ಧ ಈ ।
ಕ್ಷಣದಿಂದ ತ್ರಿಲೋಕವ ಸುತ್ತಿಸುವ ।
ಅಣುದ್ವ್ಯಣುಕ ತೃಣಕ ಕಾಲಾ ಮಿಗಿಲಾದ ಜೀವರಿಗೆ ।
ಹೊಣೆಯಾಗಿ ಜನ್ಮಂಗಳು ಮಾಳ್ಪುದು ಕಾಣೆ ।
ಪ್ರಣತಾರ್ತಿ ದೂರ ಹರಿ ಪ್ರಳಯಾಚ್ಛಿಯಲ್ಲಿ ಸ್ವ ।
ಗಣ ಮೂರ್ತಿ ಏಕನಾಗಿ ಜೀವರ ಸಹಿತ ।
ಎಣಿಕೆ ಬಾಲಕನಾಗಿ ವಟದಲ್ಲಿ ಮಲಗಿ ದ್ರು ।
ಹಿಣು ದ್ವಾದಶಾರ್ಧ ಉಳಿದಿರಲಾಗ ।
ಗುಣ ಕಾಲ ದೇಶ ವೇದ ಸರ್ವಾಭಿಮಾನಿ ಅಂ ।
ಭ್ರಣಿ ಸ್ತುತಿಯನ್ನೆ ಮಾಡೆ ಉತ್ಸಾಹದಲ್ಲಿ ।
ಮಣಿ ಭೂಷಣಾಂಗ ಸೃಷ್ಟಿ ನೆನದ ಆ ಕಾಲದಲ್ಲಿ ।

ಮಣಿದು ನಮೋಽಇನ್ನೆ ತಾತ್ವಿಕರಾಗಿ ।
ಫಣಿ ಶಯನ ಅದಿಮೂರ್ತಿ ವಿಜಯ ವಿಠಲ ಲ ।
ಕ್ಷಣ ಪುರುಷ ನಾನಾ ರೂಪ ದ್ವಿವಿಧ ಏಕ ಮೇವನೊ ೧

## ಮಟ್ಟತಾಳ

ಇರಳು ಎಂಟನೆ ಭಾಗ ಸೃಷ್ಟಿಕಾಲವೆಂದು ।
ಪರಮ ಜ್ಞಾನಿಗಳಿಂದ ಪೇಳುವುದೆ ಸಿದ್ಧ ।
ಹರಿ ತನ್ನ ರೂಪಗಳು ಮತ್ತೆ ಲಕುಮಿ ರೂಪ ।
ತರುವಾಯ ಸಕಲ ಮುಕ್ತರ ರೂಪಗಳು ।
ಹೊರಗೆ ತೆಗೆದು ಸರ್ವಬಗೆಯಿಂದ ಕ್ರೀಡೆ ।
ಹರುಷದಿಂದಲಿ ಆಡೆ ಇದಕೆ ಸಾಧನ ನಿಜ ।
ಪರಿಶುದ್ಧವಾದ ಸತ್ವ ಗುಣದಿಂದ ।
ಶರಧಿ ಪರ್ವತ ನದಿ ಸರೋವರ ಗಜ ಅಂದಣ ।
ತುರಗ ಪದಾತಿ ನಾನಾ ಭೋಗದ್ರವ್ಯ ।
ಪುರ ಪಟ್ಟಣದಲ್ಲಿ ಸತ್ಯ ವಿನಿರ್ಮಾಣದಲಿ ।
ಚರಿತೆ ಮಾಡಿದನಯ್ಯಾ ಸಿರಿ ಮುಕ್ತರ ಕೂಡ ।
ಪರಿ ಪರಿ ರೂಪಗಳ ಧರಿಸಿ ದಾನವಾರಿ ।
ಇರುತಿಪ್ಪದು ಇಲ್ಲಿಗೆ ರಾತ್ರಿಯ ಸಮ ಭಾಗ ।
ಸರಿಯಾಯಿತು ಮುಂದೆ
ಹರಿ ತನ್ನವತಾರ ಏಕೀ ಭೂತವಾಗಿ ।
ಸಿರಿ ಮುಕ್ತರ ಅಂಶ ವೊಂದೆ ಮಾಡ ಪೇಳಿ ।
ಬರಲು ಉದಯಕಾಲ ಆತ್ಮಸೃಷಿಯ ನೆನದ ।
ವರಮೂರ್ತಿ ವಾಸುದೇವಾದಿ ಚತುರದ್ವ್ಯೂಹ ।
ಸಿರಿ ಧರಿಸಿದಳು ಮಾಯಾ ಜಯಾ ಕೃತಿ ಶಾಂತಿ ಯೆಂದು ।
ಕರೆಸಿ ಕೊಂಡಳೆಂದು ಕಮಲೆ ಕೋಮಲ ಗಾತ್ರೆ ।

ಪುರುಷ ನಾಮಕ ಅಜನ ವಾಸುದೇವ ಪೆತ್ತ ।
ಮರುತ ಸೂತ್ರನ ಸಂಕರುಷಣ ಸೃಜಿಸಿದನು ।
ಸರಸ್ವತಿ ಭಾರತಿಯ ಪ್ರದ್ಯುಮ್ನ ದೇವನು ಪೆತ್ತ ।
ಪುರುಷನಾಯಕ ಬ್ರಹ್ಮಸೂತ್ರ ನಾಮಕ ವಾಯು ।
ಭರದಿಂದಲಿ ಜೀವಾಭಿದಾನ ಶೇಷ ಕಾಲಾಖ್ಯ ।
ಗರುಡರ ಪೆತ್ತರಯ್ಯಾ ತಮ್ಮ ಸತಿಯರಲ್ಲಿ ।
ಮರಳೆ ವಿರಂಚಿಯಿಂದ ಪ್ರಕೃತಿಯ ಗರ್ಭದಲಿ ।
ಮರುತ ಜನಿಸಿದ ತತ್ಪತ್ನಿಯ ಸಂಗಡದಲಿ
ಮರುತ ಸೂತ್ರನಿಗೆ ಶ್ರದ್ಧಾದೇವಿಯಿಂದ ।
ಗರುಡ ಶೇಷರೀರ್ವ ಜನರು ಪುಟ್ಟಿದರಂದು ।
ಪರಮ ರಹಸ್ಯವಿದು ಅಜನು ತನ್ನ ಪತ್ನಿ ।
ಸರಸ್ವತಿಯಿಂದ ಪುಟ್ಟಿದ ಪವನ ಸಹ ।
ಹರಿಯಿಚ್ಛೆಯಿಂಥಾದೆ ಪುನಹ ಪುರುಷ ಬ್ರಹ್ಮ ।
ಸರಸ್ವತಿಯಭಿಮುಖದಿ ವೈಕಾರಿಕ ಗುಣದಿ ।
ಉರಗ ರುದ್ರೇಂದ್ರರೆಂಬ ಕುವರರ, ಪೆತ್ತನಯ್ಯಾ ।
ಪರಣ ಭಾರತಿಯಲ್ಲಿ ತೈಜಸ ಗುಣದಿಂದ ।
ಗರುಡ ರುದ್ರರೆಂಬ ಮಕ್ಕಳ ಹೆರದನಯ್ಯಾ ।
ಉರಗ ನಾಮಕ ಜೀವ ತಾಮಸ ಗುಣದಿಂದ ।
ಹರನ ಪುಟ್ಟಿಸಿದನು ವಾರುಣಿ ಪತಿ ಕರಿಸಿ ।
ತರುವಾಯ ಇವರಿವರ ಸತಿಯರು ಜನನವಾ ।
ದರು ತಮತಮ್ಮ ಪತಿಗಳು ಪುಟ್ಟಿದಲ್ಲಿ ।
ಎರಡೊಂದಾಹಂಕಾರ ಪ್ರಭೇದ ಉತ್ಪತ್ತಿ ।
ಪುರುಷನಾಮಕ ಸೂತ್ರ ಜೀವನಾಮಕ ಫಣಿಯಿಂದ ।
ಮಿರುಗುತಿಪ್ಪದು ನೋಡೆ ಸೂಕ್ಷ್ಮ ಸೃಷ್ಟಿ, ಸರ್ಗ ।

ಸರುವ ನಾಮಕ ನಮ್ಮ ದಿಜಯ ವಿಠ್ಠಲರೇಯ ।
ಮೆರೆವ ಪುತ್ರ ಪೌತ್ರರಿಂದ ನಿಜೈಶ್ವರ್ಯ ೨

## ರೂಪಕ ತಾಳ

ಸಾವಿತ್ರಿಯಾದ ಪುರುಷನಿಂದಲಿ ಅಂದು ।
ಅ ವೈಕಾರಿಕ ರುದ್ರ ಸತ್ವಗುಣ ಪ್ರಾಚುರ್ಯ ।
ಭಾವದಿಂದಲಿ ತನ್ನ ನಾರಿಯನೊಡಗೂಡಿ ।
ದೇವೇಂದ್ರ ಕಾಮಾಹಂಕಾರ ಪ್ರಾಣಾನಿರುದ್ಧ ।
ದೇವಾಚಾರ್ಯ ಶುಕ್ರ ಶಶಿ ಭಾನು ಮೊದಲಾದ ।
ದೇವಾಂಶರ ಪೆತ್ತ ತೈಜಸ ತಾಮಸ ರುದ್ರ ।
ದೇವನು ಪ್ರಜಸರ್ಗ ನೆಸಗಲಿಲ್ಲವು ಕ್ಷಾಣೊ ।
ಈ ವಿಚಾರದೊಳು ಗರುಡೇಂದ್ರಾಹಿ ರುದ್ರ ಯಜ್ಞ ।
ಜೀವಾಭಿಮಾನಿಗಳು ಪ್ರಾಣನಿಂದುದ್ಭವ ।
ಶ್ರೀ ವಿಷ್ಣು ರಥನಿಂದ ಜಯ ವಿಜಯಾದ್ಯರ ಜನನ ।
ಕೋವಿದ ಪ್ರಾಣನಿಂದ ವಿಷ್ವಕ್ಸೇನೋದ್ಭವ ।
ದೇವಾನಿರುದ್ಧನು ತನ್ನಾಮಕ ದೇಹ ।
ಯಾವತ್ತು ಸಾಂಶ ಜೀವರಿಗೆ ಮಿಗಿಲಾದ ಜೀವರಿಗೆ ಕರುಣಿಸಿದ ।
ಆವಾವ ಬಗೆಯಿಂದ ಯೇಕ ಚತುರ್ವಿಂಶತಿ ।
ಈ ವಿಧ ತಿಳಿವುದು ಪ್ರದ್ಯುಮ್ನದೇವನು ।
ಸಾವಿರ ವರುಷ ತನ್ನುದರದಲ್ಲಿ ತಾಳಿ ।
ಜೀವ ಸಮುದಾಯಕ್ಕೆ ಈ ಪರಿ ಮಾಡಿಸಿದ ।
ಕಾವ ಸೋದರನ ವತ್ಸರ ಹತ್ತು ಗ್ರಾಹ್ಯವೊ ।
ದೇವಕಿನಂದನ ವಿಜಯ ವಿಠ್ಠಲರೇಯ ।
ಪಾವನ ಮೂರ್ತಿಯ ವೈಭವ ನೋಡಿರೋ ೩

## ಝಂಪಿ ತಾಳ

ಅನಿರುದ್ಧನಿಂದ ತೆಗೆದುಕೊಂಡ ಪ್ರ ।
ದ್ಯುಮ್ನ ನೆನದು ಅರ್ಧನಾರಿ ವೇಷವನ್ನು ।
ಘನವಾಗಿ ವಾಮ ಭಾಗದಿಂದಲಿ ಸರ್ವ ।
ಆನರ ಪುಟ್ಟಿಸಿದನು ವರ್ಣಭೇದ ।
ವನಿತೆ ಪುರುಷರನ್ನ ಒಂದೊಂದು ಪೆಸರಿನನಲಿ ।
ವನಜ ಭವಾದಿ ಮುಕ್ತಿಯೋಗ್ಯರು ।
ಅನಿತರೊಳು ಅಜವಬ್ದ ಹತ್ತು ಸವೆದವು ನೋಡ ।
ಗುಣಿಸು ವಿಂಶತಿ ವರ್ಷ ಪೂರ್ಣವಾಗಿ ।
ಅನಿರುದ್ಧ ಶಾಂತಿ ಪತಿ ಈ ಮೇಲೆ ಪ್ರಕೃತಿಯಾ ।
ಗುಣಸಾಮ್ಯ ವೈಷಮ್ಯ ಮಾಡಿ ಮುಂದೆ ।
ಗುಣತ್ರಯಾಂತರದಿಂದ ಸತ್ವರಜ ತಮ ಅಂಶ ।
ವನೆ ರಚಿಸಿ ಮಹದಾದಿತ್ವ ವೆನ್ನಿ ।
ಅನುಕ್ರಮ ನಿರ್ಮಾಣವೊ ಈ ಪರಿಯು ಲಾಲಿಪುದು ।
ಜನನವಾಜಯಿತು ಜಗಕೆ ಕಾರಣವಾದ ।
ಗುಣತ್ರಯೋಪಾದಾನದಿಂದಲಿ ಸಕಲರಿಗೆ ।
ತನುವು ಪ್ರಾರಬ್ಧ ವಾಯಿತು ಕರ್ಮಕ್ಕೆ ।
ವನಜ ಸಂಭವ ತಾನೆ ಮುನ್ನಿನಂತೆ ತನ್ನ ।
ವನಿತೆಯಲಿ ಪುಟ್ಟಿದನು ಪವನ ಸಹಿತ ।
ಇನಿತರೊಳು ಪೂರ್ವ ಮಾರುತ ಮರುತ ಜೀವಾಖ್ಯ ।
ಫಣಿಪನಿಂದಲಿ ರುದ್ರ ತಾರ್ಕ್ಷ್ಯ ಉರಗ ।
ಜನಿಸಿದರು ವೈಕಾರಿಕ ತೈಜಸ ತಮೋ ।
ಗುಣದಹಂಕಾರದಲಿ ಪ್ರತ್ಯೇಕ ಪ್ರತ್ಯೇಕ ।
ವನಿತೆಯರ ಸಮೇತ ಇದರಲ್ಲಿ ರುದ್ರಗೆ ।

ತ್ರಿಣಿ ರೂಪ ತಿಳಿವುದು ನಾಮ ಭೇದ ।
ಅನಿಮೇಷೇಶ್ವರ ಕಾಮ ಇವರ ಭಾರ್ಯರ ಜನನ ।
ಗುಣ ಭೇದದೊಳಗೆ ಎಣಿಕೆಯ ಮಾಳ್ಪದೊ ।
ಎಣೆಗಾಣೆ ಗುಣ ಭೇದರುದ್ರನ್ನ ಸೃಷ್ಟಿಯು ।
ಅನುವಾಗಿ ನೋಡಿರೊ ಪ್ರಥಕು ಪ್ರಥಕು ।
ನೆನೆಯದಲೆ ತ್ರೀರೂಪವೊಂದು ಮಾಡಿದನು ಮಾ ।
ನಿನಿ ಸಹಿತ ಅರ್ಧನಾರಿಯ ರೂಪದಿ ।
ಅನಲಾಕ್ಷ ಬಲವಂತ ಸವ್ಯಬಲಭಾಗದಿ ।
ಇನ ದ್ವಾದಶರು ಮರುದ್ಗಣ ಹತ್ತು ರುದ್ರ ।
ಜನ ವಿಶ್ವದೇವತೆ ಅಶ್ವಿನಿಯರು ಋಭು ।
ಗಣವೆಂಟು ವಸುಗಳು ಗಂಧರ್ವ ಉರಗ ।
ಶನಿ ಮೊದಲಾದ ಸಮಸ್ತ ಜನ ಗಜ ತುರಗ ।
ವನರುಹ ನಾನಾ ವಿಚಿತ್ರ ಜೀವ ।
ಗಣದವರ ಪಡೆದನು ಹರಿ ಕೃಪೆಯಿಂದ ।
ವನಜ ಲೋಚನ ನಮ್ಮ ವಿಜಯ ವಿಠ್ಠಲರೇಯ ।
ಘನ ಕುಟುಂಭಸ್ತನೊ ಕಲ್ಪ ಕಲ್ಪದಲಿ ೪

## ತ್ರಿವಿಡಿ ತಾಳ

ಮೂರು ರೂಪಗಳೊಂದೆ ಮಾಡಿ ಮಹ ರುದ್ರ ।
ಬೇರೆ ಬೇರೆ ಸೃಷ್ಟಿ ನೆಸಗಿದನು ವೈ ।
ಕಾರಿಕ ದಿಂದಲಿ ಮನಸು ದೇವತ ದೇಹ ।
ಚಾರು ತೈಜಸದಿಂದ ಜ್ಞಾನೇಂದ್ರಿಯು ।
ಮೂರೆರಡು ಕರ್ಮೇಂದ್ರಿಯು ಮಿಷ್ಟೆ ರಚಿಸಿ ವಿ ।
ಹಾರ ಮತ್ತೆ ಮತ್ತೆ ತಾಮಸದಿಂದಲಿ ।
ಮೂರೊಂದೊಂದು ಭೂತ ಪಂಚತನ್ಮಾತ್ರಗಳು ।

ವೈರಾಗ್ಯನಿಧಿ ತಾನೆ ಸೃಜಿಸಿದನು ।
ಈ ರೀತಿಯನು ತಿಳಿದು ಮುಂದೆ ಪ್ರಥಮಾಂಗ ।
ಮಾರುತನಿಂದಲಿ ಗರುಡ ಶೇಷ ।
ಶೌರಿ ಪಾದೋದಕಧರ ಇಂದ್ರರು ಕು ।
ಮಾರರಾದರು ಕಾಣೊ ಈ ತರುವಾಯ ।
ವಾರುಣಿ ಪತಿ ಶೇಷ ಗರುಡರ್ಕ ಶಶಿ ಅಹಂ ।
ಕಾರಪ್ರಾಣ ಮಿಗಿಲಾದುತ್ತಮ ।
ಧೀರರಿಂದಲಿ ಸರ್ವ ನೀಚ ದೇವತೆಗಳು ।
ದಾರ ಸೃಷ್ಠಿಯ ಪೇಳಿ ಈ ಮಧ್ಯದಿ
ವಾರುಣಿ ನಾಥಾನ್ನೆ ಪ್ರಜಾ ಸರ್ಗ ಮಾಡಿದ ।
ಕಾರಣವನೆ ನೊಡು ನೀಚ ಸುರರು ।
ಭಾರಣೆಯಾಗಿದ್ದ ಯಜ್ಞಾಭಿಮಾನಿಗಳು ।
ಸಾರಿರೈ ಈ ಪರಿ ಉದ್ಭವವೊ ।
ಮಿೂರ ಬಹುದೆ ದೇವತೆಗಳ ಸೃಷ್ಟಿ ವಿ ।
ಚಾರ ಮಾಡಿದರಾಗೆ ಬಲಇಪ್ಪದು ।
ಸಾರಿ ಪೇಳುವನಾರು ಇವರಿವರ ಉತ್ಪತ್ತಿ ।
ನಾರಾಯಣನು ಬಲ್ಲ ನಮೊ ನಮೊ ।
ನೀರೇರುಹ ನಯನ ವಿಜಯವಿಠ್ಠಲರೇಯ ।
ತಾರತಮ್ಯದಿಂದ ತಾನೆ ಸೃಷ್ಟಿ ಮಾಡಿದ ।

## ಧ್ರುವ ತಾಳ

ಇಲ್ಲಿಗೆ ಮೂವತ್ತೈದು ವರ್ಷಾದವು ವಾಣಿ ।
ವಲ್ಲಭ ಬ್ರಹ್ಮಮಾನದಿಂದ ಎಣಿಸಲಾಗಿ ।
ಅಲ್ಲಿಂದಿತ್ತಲು ಕೇಳಿ ಕ್ರಮದಿಂದ ಸೃಷ್ಟಿಶಾಂತಿ ।
ನಲ್ಲ ಮಾಡಿದ ನೈಯ್ಯ ಆವರಣ ಬೆಳಸಿ ಇದ್ದು ।

ಮೆಲ್ಲ ಮೆಲ್ಲನೆ ಒಂದರೊಳಗೆ ಒಂದು ಪೊಗಿಸಿ ।
ನಿಲ್ಲದೆ ಸಂಯೋಗ ಮಾಡಿದನು ದೇವ ।
ಅಲ್ಲಿ ಗಲ್ಲಿಗೆ ತತ್ವ ನಿಯಾಮಕರ ನಿಟ್ಟು ।
ಬಲ್ಲಿದ ತಾನೆ ವೊಳಗೆ ವ್ಯಾಪಿಸಿದ ।
ಇಲ್ಲವೆಂದೆನದಿರು ಈತನ ತೊರದು ತೃಣ ।
ಅಲ್ಲಾಡಿಸುವ ಶಕ್ತಿಯೊಬ್ಬನಿಲ್ಲ ।
ಸಲ್ಲಲಿತ ವ್ಯಕ್ತ ಮಹ ಅಹಂ ಗಗನ ।
ಚೆಲ್ಲಿಸುವ (ಚಲಿಸುವ) ವಾತಾಗ್ನಿ ಉದಕ ಧರಣಿ ।
ಎಲ್ಲ ತತ್ವಾವರಣ ಎಣಿಕೆಮಾಡಲು ಯಿದಕೆ ।
ಸಲ್ಲುವರು ಚತುರವಿಂಶತಿ ಜನರು ।
ಅಲ್ಲಿಂದ ಲೆಖ್ಖ ಮಾಡೆ ದಶ ಸಂವತ್ಸರ ವೆನ್ನಿ ।
ಎಲ್ಲ ತತ್ವಾವರಣ ಎಣಿಕೆ ಮಾಡಲು ಯಿದಕೆ ।
ಸಲ್ಲುವರು ಚತುರ ವಿಶಂತಿ ಜನರು ।
ಅಲ್ಲಿಂದ ಲೆಖ್ಖಮಾಡೆ ದಶ ಸಂವತ್ಸರ ವೆನ್ನಿ ।
ಎಲ್ಲ ನಾಲ್ವತ್ತೈದು ವರ್ಷ ವೆನ್ನಿ ।
ಮಲ್ಲಮರ್ದನ ನಮ್ಮ ವಿಜಯ ವಿಠ್ಠಲರೇಯ ।
ಇಲ್ಲಿಗೆ ಬಾಹ್ಯಾಂಡ ಮುಗಿಸಿ ಸ್ವೇಚ್ಛೆಯಿಂದ ೬

## ಝಂಪಿ ತಾಳ

ಉದಕ ಭೂಭಾಗದಲಿ ಮಲಗಿ ತುತಿಸಿ ಕೊಂಡು ।
ಸುದತಿ ಶ್ರೀ ಭೂದುರ್ಗಾ ದೇವಿಯಂದ ।
ಉದುಭವನಾದನು ಬ್ರಹ್ಮ ವಿಷ್ಣು ಮಹೇಶ ।
ಪದುಮನಾಭನೆ ತನ್ನ ಅಂಶದಿಂದ ।
ಪದುಮ ಜಾಂಡದ ಖರ್ಪರ ನಿರ್ಮಾಣವಾಹದಕೆ ।
ಮುದದಿಂದ ತತ್ವಗಳ ಮಿಶ್ರ ಭಾವ ಗಣಿತ ।

ತದನಂತರದಲ್ಲಿ ಸಂಕಲಿತ ಭೂತ ।
ಇದೆ ಮನುಜ ಜಲಚರ ಪಕ್ಷಿ ಪತಂಗ ಕ್ರಿ ।
ಮಿ ದೇಹ ಕಾರಣ ಪಿಶಾಚಾದ್ಯಕ್ಕೆ ।
ವಿದಿತವಾಯಿತು ನಾಲ್ವತ್ತು ನವ ವರ್ಷಕ್ಕೆ ।
ಒದಗಿತು ಸ್ವಲ್ಪ ದಿವಸಗಳು ಕಡಿಮೆ ।
ಪದುಮ ಜಾಂಡೋದ್ಭರಿವ ಹರಿ ಸಿರಿದೇವಿಯಿಂದ ।
ಉದಕದೊಳಗೆ ಕೋಟಿ ದಶಪಂಚಕ ।
ತದುಪರಿ ಬ್ರಹ್ಮಾಂಡ ಪರಿಮಿತ ವಿರಾಜ ರೂ ।
ಪದ ರೂಪ ಪ್ರವೇಶ ಅಭಿವೃದ್ಧಿಯು ।
ಮೊದಲು ವಿರಾಡ್ರೂಪ ಮಹತತ್ವ ತನಕದಲಿ ।
ಅದರಂತೆ ಎರಡನೆಯದು ಅಂಡಸಂಸ್ಥೆ ।
ಇದೆ ಸಿದ್ಧ ವಿರಾಟ ಮುಖದಿಂದ ವಾಯು ಮ ।
ತ್ತಿದಕೊ ಪ್ರಕೃತಿ ಸರ್ವ ತತ್ವ ಜನ ।
ಚದುರರು ನೋಡುವುದು ಲಿಂಗ ಗುಣ ವೈಷಮ್ಯ ।
ಪದೋಪದಿಗೆ ಪ್ರಜಸರ್ಗ ಅಂಕುರಾದಿ ರಚನೆ ।
ಮೃದ ಮೂಲ ಪ್ರಕೃತಿಯು ಉಪಾದಾನದಿಂ ।
ದುದು ಭವಿಸಿದ ತತ್ವ ಸುತ್ತ ಬಿಡದೆ ।
ಇದನೆ ಹಿಂಗಳೆದು ಬ್ರಹ್ಮಾಂಡ ಖರ್ಪರ ನಿಂ ।
ದಿರದೆ ವಿರಾಟ ರೂಪ ಪ್ರಕೃತಿ ರಚನೆ ।
ತುದಿಗೆ ಗಣ್ಯವ ಮಾಡೆ ಐವತ್ತು ವರುಷ ಸಂ ।
ದಿದವು ವಾಗೀಶನ ಮಾನದಿಂದ ।
ಸದಮಲಾನಂದ ಸಿರಿ ವಿಜಯ ವಿಠ್ಠಲರೇಯ ।
ಪದುಮನಾಭನಾಗಿ ಉದಕದೊಳು ಪವಳಿಸಿದ । ೭

## ರೂಪಕ ತಾಳ

ಸರಸಿಜ ಸಂಭವನ ಐವತ್ತೊಂದನೆ ವರುಷ ।
ಬರಲುದಯಕಾಲದಲಿ ಪದ್ಮ ಕಲ್ಪವೆಂದು ।
ಕರಸಿಕೊಂಬದು ಕೇಳಿ ಇದರ ಉತ್ಪತ್ತಿಯನ್ನು ವಿ ।
ವರಿಪೆ ವಿಸ್ತಾರ ಹರಿತಾನೆ ಬೊಮ್ಮಾಂಡ ಬುಡಭಾಗದಿಂದ ನಿಂ ।
ದಿರ ದೂರ್ಧ್ವ ಪ್ರದೇಶ ಜಲ ಮಧ್ಯದಲಿ ಕೋಟಿ ।
ಇರಡೈದು ಯೋಜನ ಪರಿಮಿತಿ ಬಿಟ್ಟು ।
ಸಿರಿದೇವಿ ಸಂಗಡ ಸುಖಿಸುತ್ತ ಮಲಗಿ ಸ್ತೋ ।
ತ್ತರ ಮಾಡಿ ಮೆಚ್ಚಿ ತನ್ನ ನಾಭಿಯಿಂದಲಿ ।
ಸರಸಿಜ ಪಡೆದನು ಚತುರ್ದಶ ಲೋಕಾತ್ಮಕ ।
ಪರಮೇಷ್ಠಿ ಅದರಲ್ಲಿ ಕುಳಿತು ಶೋಭಿಸುತಿರೆ ।
ನಿರುತ ವಿಜ್ಞಾನ ಪ್ರಭಾವಮಯ ಸುರಜೇಷ್ಠ ।
ಬೆರಗಾಗಿ ಯೋಚಿಸಿ ತನ್ನ ಕಾರಣ ಭೂತನ ।
ಅರಸುವೆನೆಂದು ನಾಳವ ಪೊಕ್ಕು ಕಾಣದಲೆ ।
ಇರುತಿರಲು ಗಗನದಿ ತಪೊ ತಪೊವೆಂದು ಸುಂ ।
ದರ ಉಪದೇಶದಲಿ ಧ್ಯಾನ ಸಮಾಧಿಯಲ್ಲಿ ।
ಪರಮಾತ್ಮನ ಮೆಚ್ಚಿಸಿ ಸ್ವರಮಣ ಭಕ್ತನಿಗೆ ಸಂ ।
ದರುಶನವಿತ್ತು ಕರುಣದಿಂದಲಿ ವಿದ್ಯ ಉಪದೇಶ ಮಾಡೆ ಸಾ ।
ವಿರ ವರುಷ ಧೃಡದಿಂದ ಒಲಿಸಿದನು ಬ್ರಹ್ಮ ।
ಮರಳೆ ಸೃಷ್ಟಿ ಮಾಡುವ ಗೋಸುಗ ತನಗೆ ।
ಪರಮ ಸಾಮರ್ಥಿಕೆ ನೋಡಿ ತಿಳಿದನಾಗ ।
ಸರಸಿಜ ಬೆಳಸಿದ ತ್ರಿಲೋಕ ಪರಿಯಂತ ।
ತಿರುಗಿ ಈ ಲೋಕಕ್ಕೆ ಆಧಾರ ರೂಪವಾದ ।
ಶರೀರವ ಧರಿಸಿದ ಹರಿವೊಳಗೆ ಪ್ರವೇಶ ।

ತರುವಾಯ ವೈರಾಟದಿಂದಲಿ ಉಪಸರ್ಗ ।
ಮರುತ ಪ್ರಧಾನ ಭಾರತಿ ರುದ್ರ ಇಂದ್ರ ಕಾ ।
ಮರು ಸರ್ವ ತಾತ್ವಿಕರು ವರ್ಣಗಳು ।
ಕರಣಾದಿ ತತ್ವ ಯಜ್ಞ ಸಾಧನ ದ್ರವ್ಯ ।
ಪರಿ ಪರಿ ಛಂದಸ್ಸು ವೇದ ವೇದಾಂಗಗಳು ।
ಗಿರಿ ಶರಧಿ ನದಿ ದ್ವೀಪ ನಖ (ಗ) ಶೃಂಗ ಶಫರದಂತ ।
ಇರುತಿಪ್ಪ ಮೃಗ ಪಕ್ಷಿ ಜಲಚರಾದಿ ಗುಲ್ಮ ।
ತರು ಭೂತ ಪ್ರೇತ ನಾನಾ ಲಕ್ಷಣದಿ ।
ಶರೀರದಿಂದ ಅಜಸರ್ಗ ಮಾಡಿದನು ।
ಸರಸಿಜ ಕಲ್ಪದ ಛಂದ ಸುವಾಸನದಲ್ಲಿ ।
ಹರಿ ಪ್ರೇರಣೆಯಿಂದ ಈ ಕಲ್ಪವನ್ನು ಸಂ ।
ಹರ ಮಾಡುವೆನೆಂದು ಯಿಚ್ಚೆಮಾಡಿ ।
ಸರುವ ಪ್ರಾಣಿಗಳನ್ನು ನುಂಗಿ ಸತ್ಯಲೋಕದಲಿ ।
ಹರುಷದಿಂದಲಿ ದ್ವಿತಿಯ ಪ್ರಕೃತಿಯಿಂದೀ ।
ಪರಿ ಪರಿಯಂಕದಲಿ ಪವಳಿಸಿದನು ಬ್ರಹ್ಮ ।
ಸರಿಯೆನ್ನಿ ಇಲ್ಲಿಗೆ ಪದ್ಮ ಕಲ್ಪ ।
ವರ ಮನೋಹರ ನಮ್ಮ ವಿಜಯವಿಠ್ಠಲ ಸಾ ।
ಸಿರ ಶೀರ್ಷನಯನ ಬಾಹು ಹಸ್ತದಿ ಪರಿಪೂರ್ಣ ೮

## ಝುಂಪಿ ತಾಳ

ಪುಟ್ಟಿಸಿದ ಲಿಂಗ ಪ್ರತ್ಯಂಗದಲ್ಲಿ ಸರಿಸಿಜಾಸನ ಇ ।
ನಿತು ಧ್ರುವ ಶ್ವೇತಾದಿ ವರಾಹ ಕಲ ।
ದ್ವಿತೀಯ ದಿವಸಾದಿಯಲಿ ।
ಖ್ಯಾತಿಯಾಗಿದೆ ನೋಡಿ ಗ್ರಂಥದಿಂದ ।

ಧಾತಕಾ ಚತುರವದನ ಇದ್ದು ನೆನೆದು ತನ್ನ ।
ತಾತನ್ನ ಚರಣವ ಹೃದಯದಲ್ಲಿ ।
ಪ್ರೀತಿಯಿಂದಲಿ ಜಗವ ಪುಟ್ಟಿಸುವದಕ್ಕೆ ಈ ।
ಭೂತಳ ವಿಲ್ಲವೆಂದು ಚಿಂತಿಸಲು ।
ಜಾತ ರಹಿತ ಹರಿ ಅಜನ ನಾಶಿಕದಿಂದ ।
ಶ್ವೇತ ಕೋಲನಾಗಿ ಜನಿಸಿದನು ।
ದೈತೇಯ ಪುಟ್ಟಿದ ಆದಿ ಹಿರಣ್ಯಾಕ್ಷ ।
ಭೀತ ರಹಿತನಾಗಿ ಇದ್ಧ ನದೆಕೋ ।
ಶಾಂತ ಕುಂಭೋದರನ ಸ್ತುತಿಯಿಂದ ಮೆಚ್ಚಿ ದೇವ ।
ಚಾತುರ್ಯದಿಂದಲಿ ಉದಕ ಪ್ರವೇಶಿಸೆ ।
ಭೂತ ಹಂಸಾ ಮಧ್ಯದಲಿ ದಾನವ ಅಡುಗೈಸೆ ।
ಘಾತಿಸಿದನು ತನ್ನ ಹಲ್ಲಿಸಿಂದ ।
ಸಿತ (ಶ್ವೇತ) ಗಾತುರ ವೇಗ ಬರುತಿರೆ ಮಧ್ಯದಲ್ಲಿ ।
ವಾತ ವಿಷ್ಟ (ವಾತಾವಿಷ್ಯ) ವುಳ್ಳ ಅಸುರರು ತಡೆಯೆ ।
ಪೋತ ಲೀಲೆಯಿಂದ ಮರ್ದಿಸಿ ಶೌರ್ಯ ಶೌರಿ ।
ಭೂತವ ಘಟ್ಟಿ ಮಾಡಿ ಆತನಿಗೆ ಇತ್ತ ।
ಪ್ರಾತೂರ್ಧ್ವ ಕಾಲದಲಿ ಸ್ವಶಕ್ತಿಯಿಂದ ಬ್ರಹ್ಮ ।
ನೀತಿಯಿಂದಲಿ ಪಂಚ ಪರ್ವವೆಂಬೊ ।
ಪಾತಕ ಪುಟ್ಟಿಸಿದ ಅವಿದ್ಯ ಪೆಸರುಂಟು ।
ಯಾತಕೆ ಬಾರದೆಂದು ಮರಳೆ ನೆನದ ।
ಲಾತವ್ಯ ದ್ವಯ ಕಲ್ಪದ ಮಹರಾಯ ಸನಕಾದಿಗಳ ।
ಕಾತುರದಿಂದಲಿ ಪುಟ್ಟಿಸಿದ ।
ಮಾತು ಕೇಳಿದ ಇವರ ಮೇಲಿನ ಕೋಪದಿಂದ ।
ನೇತುರ ಕೆಂಪು ಮಾಡಿದ ಭ್ರುಕುಟಿಯಿಂದ ।

ಪೂತುರೆ ಏನೆಂಬೆನೊ ತತ್ಕಾಲಕ್ಕೆ ಸದ್ಯೋ ।
ಜಾತಾಭಿದಾನವೆಂಬ ಶಿವನ ಪೆತ್ತ ।
ಈತಗಪ್ಪಣೆಯಿತ್ತ ಸೃಷ್ಟಿಗೋಸುಗ ಮಹ ।
ಭೀತಿವಂತರ ಪುಟ್ಟಿಸಿ ನಿಲಿಸಿ ತಾನೆ ।
ಗಾತುರ ಕರ್ನನಾಸಾ ಮುಖ ಜಿಂಹ್ವ ದಂತಹಸ್ತ ।
ನೇತುರ ಗುಹ್ಯ ಮೇಢ್ರ ಸರ್ವರೋಮ ।
ಈ ತೆರದಿಂದ ರೋಮ ಕೂಪದ ದೆಶೆಯಿಂದ ।
ಜಾತರಾದರು ಇಂದ್ರ ಸ್ಮರ ಅನಿರುದ್ಧ ।
ಜಾತ ವೇದಸ ಮಂತ್ರಿ ಕವಿ ಚಂದ್ರ ದಕ್ಷ ಖ ।
ದ್ಯೋತ ವರುಣ ಮನು ಪ್ರಾಣಸರ್ವ ।
ಜಾತಿ ಮಿಕ್ಕಾದವರು ಪರಮೇಷ್ಟಿಗೆ ।
ವಾತವಾಹನ ನಮ್ಮ ವಿಜಯ ವಿಠ್ಠಲರೇಯ ।
ಧಾತನ ದ್ವಾರದಿಂದ ಸೃಷ್ಟಿಯನೆಸಗಿದ ೯

## ತ್ರಿವಿಡಿ ತಾಳ

ಇವರಿಂದ ಪ್ರಜಾಸರ್ಗ ಪೂರ್ಣವಾಗದಿರಲು ।
ತವಕದಿಂದಲಿ ಬ್ರಹ್ಮ ದಶಪುತ್ರರ ।
ಪ್ರವರ ಮತಿಗಳಿಂದ ಒಪ್ಪುವ ಜನರು ಸಂ ।
ಭವಿಸಿದರು ಅತ್ರಿ ವಶಿಷ್ಠಾದ್ಯರು ।
ವಿವರಿಸುವೆನು ಮುಂದೆ ಇವರ ತರುವಾಯ ಉ ।
ದ್ಭವವಾದ ಜೀವಿಗಳ ಪೆಸರು ಕೇಳಿ ।
ಹವಣವಾಗಿದೆ ಸ್ಥಾನ (ಸ್ತನ) ಹೃದಯ ಹುಬ್ಬು ಜ್ಞಾ । (ಯಿನ್ನೆವೆ)
ನವೆ ಓಷ್ಠಮುಖ ಪ್ರಷ್ಠ ಮೇಢ್ರ ಛಾಯ ।
ಅವಯವಂಗಳು ರೋಮ ಸರ್ವಾಂಗದಲಿಯಿಪ್ಪ ।
ವಿವರದಿಂದಲಿ ಕಾಮ ಲೋಭಾದ್ಯರು ।

ಅವನಿಯೊಳಗೆ ಮನುಜ ವಾಕಾಭಿಮಾನಿ ಪೊ ।
ಳೆವ ವೇದ ತದಂಗಾಶ್ರಮ ಧರ್ಮದಿ ।
ಪವಿತುರವಾದ ದ್ರವ್ಯಗಳು ಪುಟ್ಟಿಸಿ ಬ್ರಹ್ಮ ।
ಪ್ರವರ್ತಕನಾದನು ಪೂರ್ತಿಯಲ್ಲಿ (ಪೂರ್ತಿಯಿಳಿ)
ಭವ ದೂರ ಭಕ್ತ ವತ್ಸಲ ವಿಜಯ ವಿಠಲ ।
ಅವಿಕಾರನಾಗಿ ತಾ ಸರ್ವರೊಳಗಿಪ್ಪ ೧೦

## ಮಟ್ಟತಾಳ

ಇನಿತು ಯೋಚಿಸಿ ಬ್ರಹ್ಮ ಆದಿ ಸ್ವಯಂಭುವ ।
ಮನು ಶತರೂಪಗಳ ಒಂದೆ ಕಾಲದಲ್ಲಿ ।
ಅನುನಯದಿಂದ ಪುಟ್ಟಿಸಿ ಮನಸು ತಿದ್ದಿ ।
ವಿನಯದಿಂದಲಿ ವೈವಾಹ ಮಾಡಲು ಮೈ ।
ಘುನಭಾವದಿಂದಲಿ ಮಕ್ಕಳಾದವು ಕೇಳಿ ।
ಗುಣವಂತ ಉತ್ತಾನಪಾದ ಪ್ರೀಯವ್ರತ ।
ಅನುಜೆಯು ಇವರಿಗೆ ಆಕುತಿ ಪ್ರಸೂತಿ ।
ಮನೋಹರ ದೇವಿ ದೇವಹೂತಿ ಮೂವರು ।
ಘನ ಪುಣ್ಯವಂತರು ಇವರನ್ನೆ ಋಚಿಯೆಂಬ ।
ಮುನಿ ದಕ್ಷ ಕರ್ದಮ ಮಹತ್ಮರಿಗೆ ಆದಿ ।
ಮನು ಮದುವೆ ಮಾಡಿ ಕೊಡಲಾಗಿ ಇಲ್ಲಿಗೆ ।
ಗಣಿತ ನೆಸಗುವದು ಮುಖ್ಯ ಮುಖ್ಯವೆಂದು ।
ಪುನಃ ಸೃಷ್ಟಿಯಾ ಕೇಳಿ ಮೂರೊಂದು ಬಗೆಯುಂಟು ।
ಎಣಿಸು ಶ್ವೇದಜ ಉದ್ಭಿಜ ಜರಾಯು ಜಾಂಡಜ ।
ಯೆನಿಪದು ಯೆಂಭತ್ತು ನಾಲ್ಕು ಲಕ್ಷ ಯೋನಿ ।
ಮನುಜ ಮೃಗ ಪಕ್ಷಿ ಕ್ರಮಿ ತರು ಜಲಜಾ ಇಂತಿ ।
ನಿತು ಭೇದನಾಮ ಜನಿಸಿದವು ತಿಳಿಯೆ ಮನದಿಂದಲಿ ಅಂದು ।

ಮುನಿ ಕಸ್ಯಪಮುನಿ ದಕ್ಷ ಪ್ರಜೇಶ್ವರ ತನ್ನ ।
ತನಯರಾಗಿದ್ದ ಹದಿಮೂರು ಮಂದಿಯ ।
ಅನುಮತಿಯಿಂದ ಲಗ್ನವ ಮಾಡಿಕೊಡಲಾಗ ।
ದನುಜ ದೈತ್ಯರು ದೇವತೆ ಉರಗಾದ್ಯರು ।
ಮನುಜ ಮೊದಲಾದ ಯಾವತ್ತು ಪ್ರಜಾ ಸರ್ಗ ।
ದಿನ ದಿವಸಕ್ಕೆ ಪುಟ್ಟಿಸಿದ ಬಹು ಪರಿ ।
ಪ್ರಣುತಾರ್ತಿ ಹರ ನಮ್ಮ ವಿಜಯ ವಿಠ್ಠಲರೇಯ ।
ಮನದಿಚ್ಛೆಲೀಲೆಯಿಂ ಕ್ರೀಡೆಯ ಮಾಡುವ

## ಅಟ್ಟತಾಳ

ಮಿಗಿಯಾಗಿ ತುಂಬಿತು ಕಶ್ಯಪ ಮನು ಸೃಷ್ಟಿ ।
ಜಗವೆಲ್ಲ ನಿಬಿಡವಾಯಿತು ನೋಡಿ ಒಂದು ಹೆ ।
ಜ್ಜೆಗೆ ಭೂಮಿಯಿಲ್ಲದಂತಾಗಲು ಅಜರಾಯ ।
ಮೊಗ ಮೊಮ್ಮಗನ ವಂಶ ಕಂಡು ಯೋಚಿಸಿ ತನ್ನ ।
ನಗೆಯಿಂದ ಮೃತ್ಯು ದೇವತೆಯ ಪುಟ್ಟಿಸಲಾಗಿ ।
ಮಗಳಾಗಿ ನಿಂದು ರೋದನ ಮಾಡಲಾಗಿ ಪ್ರಾ ।
ಣಿಗಳ ನಾಶಕೆ ಜ್ವರ ಉಳಿದ ರೋಗಗಳು ಧ್ರುವವಯ್ಯ ।
ಅಗಣಿತ ಗುಣನಿಧಿ ವಿಜಯ ವಿಠ್ಠಲದೇವ ।
ಆಗದು ನಿರ್ಮಾಣವ ಮಾಡಿದ ಮಹಧೀಯ ೧೨

## ಆದಿತಾಳ

ಸತತನ್ನೋದಕ ನೆವದಿ ಸ್ವೀಕಾರ ಮಾಡಿ ಉ ।
ತ್ಪತಿ ಸ್ಥಿತಿ ಸಂಹಾರ ಮಾಡುವ ಕರ್ತೃತ್ವ ।
ಮಿತಿಯ ಗೈಸಿದ ಬ್ರಹ್ಮ ಸ್ತ್ರೀ ಪುರುಷ ನಿಕರ ।
ಮತಿ ದುರ್ಮತಿಯಿಂದ ನಡೆದು ತಮ್ಮ ತಮ್ಮ ।

ಗತಿಗೆ ಪೋಗುವಂತೆ ಕರ್ಮವ ಕಲ್ಪಿಸಿ ।
ಕ್ಷಿತಿಯ ಸಾಕುತಲಿಪ್ಪ ತತ್ವ ತಾತ್ವಿಕರೊಡನೆ ।
ರತಿ ಪತಿ ಪಿತ ನಮ್ಮ ವಿಜಯವಿಠ್ಠಲರೇಯನ ।
ಪ್ರತಿಬಿಂಬ ಕಾಣೊ ಬ್ರಹ್ಮ ಜಗಕೆ ಕಾರಣ ಕರ್ತ ೧೨

## ಜತೆ

ಸೃಷ್ಟಿ ಕ್ರಮವು ಕೇಳಿ ತಿಳಿದಷ್ಟು ಪೇಳಿಪ್ಪೆ ।
ಸೃಷ್ಟೀಶ ಜನಕ ನಮ್ಮ ವಿಜಯ ವಿಠಲನ ದಯದಿಂದ ೧೪

## ೨೯

## ಧ್ರುವತಾಳ

ಗುಣ ಕಾಲಾ ದೇಶಾತೀತ ವ್ಯಾಪ್ತ ಪ್ರಕೃತಿ ರಮಣ ।
ಪ್ರಣವ ಮೂರುತಿ ಬ್ರಹ್ಮಭಿದಾ ।
ಗಣರಹಿತಾನಂದ ಸಾಂದ್ರ ವಟಪತ್ರಶಾಯಿ ನಾರಾ ।
ಯಣ ಏಕಮೇವ ಮೇಲುದೇವ ।
ಅಣು ಮಹತ್ತು ಯುಗಪದಿ ರೂಪಾನಂತ ರೂಪ ।
ಪ್ರಣತಾರ್ಥಿ ದೂರ ಪ್ರಭುವೆ ಸುಶುಭ ।
ಜನುಮ ಮೃತ್ಯುಂಜಯಾರಾತಿ ಸಂ ।
ಪೂರ್ಣೈಶ್ವರ್ಯ ಘನ ರುಗ್ಮಶುಭ ರಕ್ತಪೀತ ನೀಲಾ ।
ಇನಶಶಿ ಅಗ್ನಿ ನಾನಾವರ್ನ ವಾರಿಜನಯನ ।
ತೃಣ ಜೀವ ಪರಿಯಂತ ಚೇಷ್ಟ [ಪ್ರದ] ।
ಅನುಕಂಪನಾ ಆದಿ ಅನಾದಿ ಸ್ವಾತಂತ್ರ
ತನುರೂಹ ಸರ್ವಗಾನಂದ ಪರಮಾ ।

ಮಣಿಗಣ ಭೂಷ ನಾನಾ ವಸ್ತು ಭಿನ್ನಾ ನಿರ್ದೋಷ ।
ಅನಿಮಿತ್ತಾ ಬಂಧು ನಿಮಿತ್ತ ದೇವ ।
ಮಣಿದು ನಮಿಪೆ ನಿನ್ನ ಮಹಶಕ್ತಿ ಲೀಲಿಗೆ ।
ಮನದೊಳಗಾಡುವ ತತ್ವಾಧೀಶಾ ।
ವನಜಸಂಭವನಯ್ಯ ವಿಜಯ ವಿಠ್ಠಲರೇಯ ।
ಎಣಿಸಿ ಪೇಳುವನಾರು ನಿನ್ನ ಉನ್ನತಕ್ರೀಯ ೧

## ಮಟ್ಟತಾಳ

ಸರಸಿಜ ಸಂಭವನ ಮಾನದಿಂದಲಿ ಎಳು ।
ವರೆವರುಷ ಮ್ಯಾಲೆ ಎಂಭತ್ತು ಹಿಂದಾಗೆ
ಇರಳು ಒಂದು ಯಾಮ ಉಳಿದಿರೆ ದುರ್ಗಾ ಈ ।
ಹರಿಯಾಸ್ತುತಿಯ ಮಾಡೆ ಭಿನ್ನಪ ಕೈ ಕೊಂಡು ।
ತರುಣಿಯ ಸಂತೈಸಿ ತವಕದಿಂದಲಿ ಎದ್ದು ।
ಪುರುಷ ರೂಪವನ್ನು ಪ್ರಥಮದಿಂದಲಿ ತಾನೆ ।
ಧರಿಸಿದನೀತನೇ ವಾಸುದೇವನೆಂದು ।
ಕರೆಸಿದನಾದಿಯಲ್ಲಿ ತಮ ಪರಿಹರಿಸಿದನು ।
ದೊರೆಯೆಂದೆನಿಸಿದ ಸೂಕ್ಷ್ಮ ಅವ್ಯಕ್ತಕ್ಕೆ ।
ಮರುಳೆ ಈ ವಾಸುದೇವ ಚತುರ ತನದಲ್ಲಿ ।
ಎರಡೆರಡೊಂದು ರೂಪವನೆ ಧರಿಸಿ ।
ಚರಿಯ ತೋರಿದ ನೋಡಿ ಗುಣ ಕ್ಷೋಭಕ ರೂಪ ।
ಸಿರಿ ನಾರಾಯಣ ದೈವ ನಾಮಕನೆಂದು ಸರುವದ ಪೊಗಳುವರು ।
ಪುರುಷ ಪ್ರಧಾನೇಶಾ ವಿಜಯ ವಿಠ್ಠಲರೇಯ ।
ಪರಿಪರಿ ಸರ್ಗವನು ಮಾಡಿದ ಲಿಂಗದಿಂದ ೨

## ತ್ರಿವಿಡಿ ತಾಳ

ಜೀವಾವರಣ ಪ್ರಕೃತಿ ಸಾಮ್ಯವನೆ ಬಿಡಿಸಿ ।
ದೇವನಾರಾಯಣ ವೈಷಮ್ಯವ ।
ತ್ರಿವಿಧ ಪರಮಾಣು ಪುಂಜಗಳೊಂದಿಸಿ ।
ಮೂವತ್ತಾರು ತತ್ವನಾಮದಿಂದ ।
ಆವಾವ ಬಗೆಯಿಂದ ಸತ್ವ ರಾಜಸ ತಾಮಸ ।
ಭಾವಿಸುವುದು ದ್ವಾದಶ ಹತ್ತುವೊಂದು ।(೧೨+೧೦+೧)
ಆವಿರಂಚಿಗೆಯಿದೆ ಅವ್ಯಕ್ತದೇಹ ಗು ।
ಣಾ ವೈಷಮ್ಯದಿಂದ ಪ್ರಥಮಾವರ್ಕಾ ।
ದೈವ ನಾರಾಯಣ ಇನಿತು ರಚಿಸಿ ದ್ವಿತೀಯ ।
ಶ್ರೀ ವಸುದೇವನ್ನ ಕೈಗೆ ಕೊಡಲು ।
ಪಾವನ್ನ ಮೂರುತಿ ತನ್ನ ಹೆಂಡತಿ ಮಾಯಾ ।
ದೇವಿಯಲ್ಲಿ ವೀರ್ಯ ಧಿಟ್ಟ ಮಾಡಿ ।
ಕೋವಿದ ಬ್ರಹ್ಮನ ಪಡೆದ ಈತಗೆ ಪೆಸರು ।
ತಾವುಂಟಾಯಿತು ಮಹಾತತ್ವಾತ್ಮಕ ।
ಈ ವಿಧಾತಗೆ ಪುರುಷನೆಂಬೊ ನಾಮವೆ ಉಂಟು ।
ದೇವರೊಳಧಿಕನು ದ್ವಿತಿಯಾವರಣಾ ಮೂರ್ತಿ ಸೂ ।
ತ್ರವಾತನ ಪೆತ್ತಾಜಯ ಸತಿಯಿಂದ ।
ದೇವಿ ಪ್ರಕೃತಿ ಶುದ್ಧರೀರ್ವರ ಪಡೆದ ಕೃತಿ ।
ದೇವಿಯಾ ನೆರದು ಪ್ರದ್ಯುಮ್ನ ಮೂರ್ತಿ ।
ಈ ವಿಚಾರವೆ ತಿಳಿ ಅಜ ಪ್ರಾಣಾರೀ ಶುದ್ಧ ।
ಪಾವಿತ್ರ ಜನ ನಾಲ್ವರಸರ್ಗ ಕಣೋ ।
ಭೂಮಿವಲ್ಲಭ ನಮ್ಮ ವಿಜಯ ವಿಠ್ಠಲರೇಯ ।
ಲಾವಣ್ಯ ಮೂರುತಿ ನಾನಾ ರೂಪವ ಧರಿಪ ೩

## ರೂಪಕ ತಾಳ

ಸರಸಿ ಸಂಭವಗೆ ಮೊದಲು ಬಂದದೆ ।
ಪುರುಷ ತತ್ವಾತ್ಮಕ ಇದೇ ಮಹಪೆಸರಿಲಿ ।
ಕರಸಿಕೊಂಬುವದಯ್ಯಾ ಇತ್ತಲೂಯಿದೆ ।
ಪರಮಾಣು ಲಿಂಗಗಳ ಸಮ್ಮಂಧ ಪ್ರತ್ಯೇಕ ।
ಭರಿತವಾವೆ ನೋಡು ಅನಂತ ಪರಿಯಾಗಿ ।
ತರುವಾಯ ಅಲ್ಲಿಂದ ಅನಿರುದ್ಧದೇವನು ।
ಧರಿಸಿದನು ಬ್ರಹ್ಮಾದಿ ಜೀವರ ವುದರಂದಲ್ಲಿ ।
ಮರಳೆ ಸರ್ವರಿಗೆ ತನ್ನಾಮಕ ದೇಹವನು ।
ಕರುಣಿಸಿದನಂದು ತತ್ವ ಪುಟ್ಟದ ಮುನ್ನಾ ।
ಶರೀರಗಳಾದವು ಗುಣಿತ ನೋಡು ।
ಪರಮೇಷ್ಠಿಗೆ ಅವ್ಯಕ್ತ ಪರಿಚ್ಛೇದ ಮೂರು ಗಾ ।
ತುರ ನೇಮಿಸಿದನು ಪುರುಷ ದೇಹದ ಮ್ಯಾಲೆ ।
ತಿರಿಗಿ ಇದರ ಮ್ಯಾಲೆ ಮಹ ತತ್ವಾತ್ಮಕ ಕಾಯ ।
ವಿರಚಿಸಿದನು ಇದರಂತೆ ಸರ್ವವೂ ।
ಇರತಕ್ಕವಾದವು ಕ್ರಮೇಣ ಉತ್ಪತ್ತಿ ।
ಪರಮ ಪುರುಷರಂಗ ವಿಜಯ ವಿಠ್ಠಲರೇಯ ।
ನಿರುತ ಪ್ರಜಾಸರ್ಗ ಮಾಡುವ ಮುದದಿಂದ ।

## ಝಂಪಿ ತಾಳ

ಅನಿರುದ್ಧ ದೇವನು ಸರ್ವ ಜೀವರ ತನ್ನ ।
ತನುವಿನೊಳಗೆ ಇಟ್ಟು ಕೊಂಡು ಲಿಂಗ ।
ತನುವಿನಿಂದಲಿ ಪ್ರತ್ಯೇಕ ಪ್ರತ್ಯೇಕ ।

ಎಣಿಕೆಯಿಂದಲಿ ಕೊಟ್ಟು ಉಪಚಯದಲ್ಲಿ ।
ವನಜ ಸಂಭವಗೆ ಇಪ್ಪತ್ತೆಂಟು ಗಾತುರು ।
ಅನುವಾಗಿ ಬಂದ ವೈಯ್ಯಾತುರ್ಯನಿಂದ ।
ಗುಣಿಸು ಒಂದಾವರ್ಕವೆ ಮೊದಲು ದೇಹವೆನ್ನಿ ।
ಮಿನಗುತಿಪ್ಪದು ಮಹಾ ಕಾಂತಿಯಿಂದ ।
ಇನಿತು ಗ್ರಹಿಸು ಮುಂದೆ ಕ್ರಮೇಣಾವರ್ಕ ಬ್ರ ।
ಹ್ಮನಿಗೆ ದ್ವಿತೀಯ ತೃತೀಯ ಚತುರ್ಥ ಪಂಚ ।
ಮನಸು ಮಿಕ್ಕಾದ ತತ್ವ ಪರಮಾಣು ವ ।
ಖ್ಖಣಿಸಲಿ ಬೇಕು ರೂಪಾಂತರಗಳು ।
ತನುವು ಮಾತ್ರವೆ ಭೇದ ಆವಾವ ಕಾಲ ಸಾ ।
ಧನ ಜ್ಞಾನವೊಂದೆ ಸಮಕಾರ್ಯದಲಿ ।
ಅನಿಮಿಷರ ಪರಿಪಾಲ ವಿಜಯ ವಿಠ್ಠಲರೇಯ ।
ಗುಣ ವೈಷಮ್ಯ ಇಲ್ಲದ ಮುನ್ನೆ ಇತ್ತ ೫

## ಅಟ್ಟತಾಳ

ಗರುಡಾಹಿ ಈಶಾ ಮೂವರ ವಿಚಾರವ ।
ಪರಮೇಷ್ಠಿ ಪುರುಷಾನಿಂದಲಿ ಜೀವನಾಯಕ ।
ಉರುಗೇಂದ್ರಗೆ ಗಾತುರ ಖಗದೇವಗೆ ।
ಮರುತ ಸೂತ್ರನಿಂದ ಈರ್ವರುದ್ಭವರ್‍ಯ್ಯ ।
ಹರಿಗೆ ಮೂರು ದೇಹ ಬ್ರಹ್ಮ ಪವಮಾನ ।
ಉರಗಾನಿಂದಲಿ ಸತ್ವರಜೋತಾಮಸ ಭಾಗ ।
ಅರಿವುದು ಇದರೊಳು ಶೇಷ ಗರುಡರಿಗೆ ।
ಶರೀರಾವೆ ಒಂದೊಂದು ಪ್ರಾಪ್ತವಾಯಿತು ಕೇಳಿ ।
ಎರಡೊಂದು ಶರೀರ ಗರುಡಾಹಿಶರಿಗೆನ್ನಿ ।

ಎಣಿಕೆಯಿಂದಲಿ ಕೊಟ್ಟು ಉಪಚಯದಲ್ಲಿ ।
ವನಜ ಸಂಭವಗೆ ಇಪ್ಪತ್ತೆಂಟು ಗಾತುರು ।
ಅನುವಾಗಿ ಬಂದ ವೈಯ್ಯಾತುರ್ಯನಿಂದ ।
ಗುಣಿಸು ಒಂದಾವರ್ಕವೆ ಮೊದಲು ದೇಹವೆನ್ನಿ ।
ಮಿನಗುತಿಪ್ಪದು ಮಹಾ ಕಾಂತಿಯಿಂದ ।
ಇನಿತು ಗ್ರಹಿಸು ಮುಂದೆ ಕ್ರಮೇಣಾವರ್ಕ ಬ್ರ ।
ಹ್ಮನಿಗೆ ದ್ವಿತೀಯ ತೃತೀಯ ಚತುರ್ಥ ಪಂಚ ।
ಮನಸು ಮಿಕ್ಕಾದ ತತ್ವ ಪರಮಾಣು ವ ।
ಖ್ಖಣಿಸಲಿ ಬೇಕು ರೂಪಾಂತರಗಳು ।
ತನುವು ಮಾತ್ರವೆ ಭೇದ ಆವಾವ ಕಾಲ ಸಾ ।
ಧನ ಜ್ಞಾನವೊಂದೆ ಸಮಕಾರ್ಯದಲಿ ।
ಅನಿಮಿಷರ ಪರಿಪಾಲ ವಿಜಯ ವಿಠ್ಠಲರೇಯ ।
ಗುಣ ವೈಷಮ್ಯ ಇಲ್ಲದ ಮುನ್ನೆ ಇತ್ತ ೫

## ಅಟ್ಟತಾಳ

ಗರುಡಾಹಿ ಈಶಾ ಮೂವರ ವಿಚಾರವ ।
ಪರಮೇಷ್ಠಿ ಪುರುಷಾನಿಂದಲಿ ಜೀವನಾಯಕ ।
ಉರುಗೇಂದ್ರಗೆ ಗಾತುರ ಖಗದೇವಗೆ ।
ಮರುತ ಸೂತ್ರನಿಂದ ಈರ್ವರುದ್ಭವರ್‍ಯ್ಯ ।
ಹರಿಗೆ ಮೂರು ದೇಹ ಬ್ರಹ್ಮ ಪವಮಾನ ।
ಉರಗಾನಿಂದಲಿ ಸತ್ವರಜೋತಾಮಸ ಭಾಗ ।
ಅರಿವುದು ಇದರೊಳು ಶೇಷ ಗರುಡರಿಗೆ ।
ಶರೀರಾವೆ ಒಂದೊಂದು ಪ್ರಾಪ್ತವಾಯಿತು ಕೇಳಿ ।
ಎರಡೊಂದು ಶರೀರ ಗರುಡಾಹಿಶರಿಗೆನ್ನಿ ।

ತರುವಾಯ ಅನಿರುದ್ಧ ದೇವನು ಸರ್ವ ಜೀ ।
ವರನ ತನ್ನುದರಾದೊಳಿಟ್ಟು ಘುಕವಾಗಿ ।
ಪರಮೇಷ್ಠಿ ಮೊದಲಾದ ಸರ್ವ ಚೇತನಕೆ ಸ ।
ತ್ಕರುಣದಿಂದಲಿ ಇಪ್ಪತ್ತೆಂಟು ಇಪ್ಪತ್ತು ನಾಲ್ಕು ಇಪ್ಪತ್ತೊಂದು ।
ಶರೀರವ ಕರುಣಿಸಿ ಸರ್ಗವ ಮಾಡಿದ ।
ಪರಮ ಪುರುಷ ನಮ್ಮ ವಿಜಯ ವಿಠ್ಠಲರೇಯ ।
ನಿರುತ ಬಾಲಕ್ರೀಡೆಯಾಡುವ ಸ್ವಭಾವ ೬

## ಆದಿತಾಳ

ಹರಿ ನಿಮಿತ್ಯ ಕಾರಣ ಗುಣ ಉಪಾದಾನದಿಂದ ।
ಪರಿ ಪರಿ ಜೀವಿಗಳ ಪುಟ್ಟಿಸುವನು ನೋಡಿ ।
ಭರದಿಂದ ಅನಿರುದ್ಧ ದೇಹವನಿತ್ತು ।
ತರುವಾಯ ಪ್ರಕೃತಿಯಿಂದ ಸ್ಥೂಲ ದೇಹವನಿತ್ತು ।
ನರರು ಈ ಪರಿಯಿಂದ ಚಿಂತಿಸಿ ಮನದೊಳು ।
ಹರಿಯನ್ನು ಕಾಣಬೇಕು ತತ್ತಸ್ಥಾನದಲ್ಲಿ ।
ನಿರುತ ಸಂಪೂರ್ಣವ್ಯಾಪ್ತ ವಿಜಯ ವಿಠ್ಠಲರೇಯನ ।
ಚರಣವ ನೆರೆನಂಬಿ ಧ್ಯಾನವ ಮಾಡುವುದು ೭

## ಜತೆ

ದ್ವಿವಿಧ ಸರ್ಗವ ತಿಳಿದು ಯೋಚಿಸು ನಿನ್ನೊಳಗೆ ।
ಭವದೂರ ವಿಜಯ ವಿಠ್ಠಲರೇಯನೆ ಬರುವ ೮

## ೩೦

### ಧ್ರುವತಾಳ

ಗುಣಭಾಗತ್ರಯ ನಿತ್ಯ ಅನಾದಿಯಿಂದಲಿ ।
ಎಣಿಸಿ ಸತ್ವ ರಾಜಸ ತಮ ಪೆಸರು ।
ಗಣನೆ ಇಲ್ಲದೆ ಉಂಟು ಅಂಶಿ ಆಂಶಗಳಾಲೋ ।
ಚನೆ ಮಾಡಿದರೆ ಒಂದಾನಂತಾನಂತ ।
ಎಣಿಕೆ ಮಾಡುವುದಕ್ಕೆ ಅಂತುಗಂಡವರಾರು ।
ಮನಕೆ ತೋರದು ವಟ ಬೀಜದಂತೆ ।
ಇನಿತು ಪೇಳುವುದೇನು ಇದರೊಳು ಚತುರ ವಿಂಶತಿ ।
ಘನ ತತ್ವ ಸೂಕ್ಷ್ಮರಾಶಿ ತರಇಪ್ಪೊವೊ ।
ಗುಣ ಶುದ್ಧ ಸತ್ವ ಶುಭ್ರ ಪದ್ಮರಾಗ ರಾಜಸ ತಮ ।
ಮಿನಗುವ ನೀಲವರ್ಣ ಈ ಬಗೆ ಅಕ್ಕು ।
ತೃಣ ಸೂಕ್ಷ್ಮರಾಶಿ ಭೂತ ಜಗಕೆ ಉಪಾದಾನ ।
ಕಣ ರಾಶಿಯಿಂದ ಪರಿಣಾಮ್ಯೆಸಿ ವಲಯ ।
ಅನಿರುದ್ಧ ದೇವನಿಂದ ಯಿಂತು ಪಲ್ಲೈಸುವದು ।
ವನಜ – ಜಾಂಡಕ್ಕೆ ಆವರಣ ಭೂತ ।
ಮಣಿ ಪ್ರಕಾಶದಂತೆ ಯೇಕೇಕ ವರ್ಣ ಸ್ವಚ್ಛ ।
ಅಣು ಮಾತ್ರ ದೋಷವಿಲ್ಲ ಧೂಮಾದ್ರಿಯು ।
ಕೊನೆ ಮೊದಲು ನೋಡಿದರೆ ಒಂದಕ್ಕೆ ಒಂದು ಸ್ಥೂಲ ।
ಗುಣತ್ರಯದಿಂದಲಿ ಪೃಥಿವಿ ತನಕ ।
ಅನುದಿನ ಅವಕಾಶ ಕೊಡುತಿದೆ ನೋಳ್ಪರಿಗೆ ।
ನೆನೆದು ನೆನೆದು ಜ್ಞಾನಿ ಸಂಖ್ಯಿಮಾಳ್ಪ ।

ಗುಣ ಸತ್ವ ವಿಶಿಷ್ಟರಾಶಿ ವಿರಳವನ್ನು ।
ಕ್ಷಣ ದೊಳು ನಿರ್ಮಾಣ ಮಾಡಿದ ದೇವ ।
ಗುಣ ಸತ್ವಬಿಂದು ಸಾಂಶವುಳ್ಳವ ತೆಗೆದುಕೊಂಡು ।
ಮನದಿಚ್ಛೆಯಲಿ ಪ್ರದೇಶ ವ್ಯಾಪ್ತಿ ।
ಯನು ಮಾಡಿದ ಹರಹಿದ ರಾಜ ಸಾವರಣಕ್ಕೆ ದ್ವಿ ।
ಗುಣ ಪರಿಮಿತವಧಿಕ ವಲಯಾಕಾರ ।
ಗಣಿತ ಮಾಡೆಲೊ ಯಿದರ ಲೆಖ್ಖ ಅನೇಕ ಯೋ ।
ಚನೆ ವುಂಟು ನೋಡಿಕೊಂಡು ಮುಂದೆ ಅರುಣಾ ।
ಗುಣದಾವರಣ ಭೂತ ಪುಟ್ಟಿದ ಬಗೆ ಕೇಳು ।
ವಿನಯದಿಂದೇಕ ಭಾಗ ತಮ್ಮ ಮೂಲದಿ ।
ಇನಿತು ರಜೋ ಸೂಕ್ಷ್ಮರಾಶಿ ಭೂತಾಂತರದಿಂದ ।
ಗುಣಗಳು ಪೊರಟವು ನೂರು ಭಾಗ ।
ಎಣಿಕೆ ಮಾಡು ಪ್ರಥಮಾವರಣದಿ ದಶಭಾಗ ।
ಗಣಿತ ಮಾಡಲು ಇಷ್ಟರಿಂದಲಿದೆ ।
ಗುಣವಂತ ತನ್ನ ರಾಣಿಯರ ಸಹಿತ ಪ್ರವೇಶಿಸಿ ।
ಗುಣ ಮೂರರಿಂದ (ವನು) ಪರಿಣಾಮ (ಮಾಣ)ವನೆ ಮಾಡಿ ।
ದಿನದಿನಕೆ ಬೆಳಸಿ ಆವರಣ ಭೂತ ತಮೊದ್ವಿ ।
ಗುಣ ಮಾಡಿದನು ರಾಜಸ ಪರಿಚ್ಛೇದ ।
ಎಣಿಸು ಇದರ ಯೋಜನ ಅಸಂಖ್ಯವೆಂದು ।
ಮನದಲ್ಲಿ ತಮೊ ಭಾಗಾ ವರುಣೋತ್ಪತ್ತಿ ।
ನೆನಸು ಆವರಣ ಭೂತ ರಾಜಸರೊಳೊಂದಂಶ ।
ಗುಣ ತಮೊ ಸೂಕ್ಷ್ಮ ರಾಶಿ ಭೂತದೊಳಗೆ
ಅನುಕರಿಸು ರಾಜಸ ದ್ವಾದಶ ಮಡಿ ಕಪ್ಪು ಬಿಂದು ।
ಅನುಮಾನವಿಲ್ಲ ಕೆಲವು ಸತ್ವ ಭಾಗ ।

ಗುಣ ಸತ್ವ ವಿಶಿಷ್ಟರಾಶಿ ವಿರಳವನ್ನು ।
ಕ್ಷಣ ದೊಳು ನಿರ್ಮಾಣ ಮಾಡಿದ ದೇವ ।
ಗುಣ ಸತ್ವಬಿಂದು ಸಾಂಶವುಳ್ಳವ ತೆಗೆದುಕೊಂಡು ।
ಮನದಿಚ್ಛೆಯಲಿ ಪ್ರದೇಶ ವ್ಯಾಪ್ತಿ ।
ಯನು ಮಾಡಿದ ಹರಹಿದ ರಾಜ ಸಾವರಣಕ್ಕೆ ದ್ವಿ ।
ಗುಣ ಪರಿಮಿತವಧಿಕ ವಲಯಾಕಾರ ।
ಗಣಿತ ಮಾಡೆಲೊ ಯಿದರ ಲೆಖ್ಖ ಅನೇಕ ಯೋ ।
ಚನೆ ವುಂಟು ನೋಡಿಕೊಂಡು ಮುಂದೆ ಅರುಣಾ ।
ಗುಣದಾವರಣ ಭೂತ ಪುಟ್ಟಿದ ಬಗೆ ಕೇಳು ।
ವಿನಯದಿಂದೇಕ ಭಾಗ ತಮ್ಮ ಮೂಲದಿ ।
ಇನಿತು ರಜೋ ಸೂಕ್ಷ್ಮರಾಶಿ ಭೂತಾಂತರದಿಂದ ।
ಗುಣಗಳು ಪೊರಟವು ನೂರು ಭಾಗ ।
ಎಣಿಕೆ ಮಾಡು ಪ್ರಥಮಾವರಣದಿ ದಶಭಾಗ ।
ಗಣಿತ ಮಾಡಲು ಇಷ್ಟರಿಂದಲಿದೆ ।
ಗುಣವಂತ ತನ್ನ ರಾಣಿಯರ ಸಹಿತ ಪ್ರವೇಶಿಸಿ ।
ಗುಣ ಮೂರರಿಂದ (ವನು) ಪರಿಣಾಮ (ಮಾಣ)ವನೆ ಮಾಡಿ ।
ದಿನದಿನಕೆ ಬೆಳಸಿ ಆವರಣ ಭೂತ ತಮೊದ್ವಿ ।
ಗುಣ ಮಾಡಿದನು ರಾಜಸ ಪರಿಚ್ಛೇದ ।
ಎಣಿಸು ಇದರ ಯೋಜನ ಅಸಂಖ್ಯವೆಂದು ।
ಮನದಲ್ಲಿ ತಮೊ ಭಾಗಾ ವರುಣೋತ್ಪತ್ತಿ ।
ನೆನಸು ಆವರಣ ಭೂತ ರಾಜಸರೊಳೊಂದಂಶ ।
ಗುಣ ತಮೊ ಸೂಕ್ಷ್ಮ ರಾಶಿ ಭೂತದೊಳಗೆ
ಅನುಕರಿಸು ರಾಜಸ ದ್ವಾದಶ ಮಡಿ ಕಪ್ಪು ಬಿಂದು ।
ಅನುಮಾನವಿಲ್ಲ ಕೆಲವು ಸತ್ವ ಭಾಗ ।

ಅನುವಾಗಿ ಇವು ಮೂರು ಕಲಸಿ ಅದರೊಳು ತಾನೆ ।
ಚಿನುಮಯ ದೇಹದಲ್ಲಿ ಪೊಕ್ಕು ತನ್ನ ।
ವನಿತೆ ಸಹಿತ ವಲಯಾಕಾರ ಬೆಳಸಿ ತಮೊ ।
ಗುಣ ಪರಿಚ್ಛೇದ ಪುಟ್ಟಿಸಿದನು ಗಡ ।
ವನಜ ಪೀಠನ ತತ್ವದ ದಶ ಮಡಿ ಎನಿಸಿ ಯೋ ।
ಜನೆ (ನ) ಭೇದ ಮಾಡಿದ ಅವ್ಯಕ್ತಾವರಣ ।
ಜನರು ಕೊಂಡಾಡಿ ಇಂತು ಪ್ರಥಮಾವರಣ ಭೂತ ।
ಮಣಿ ಪ್ರಕಾಶದಂತೆ ಝುಗಿ ಝುಗಿಪುದು ।
ಘನ ಆನಂದಮಯ ವಿಜಯ ವಿಠ್ಠಲರೇಯ ।
ಮನದೊಳಗಾಡುವ ಅವ್ಯಕ್ತನಾಮದಿ ೧

### ಮಟ್ಟತಾಳ

ದ್ವಿತೀಯಾ ವರ್ಣ ಭೂತ ಮಹತತ್ವ ।
ಸತುವ ಭಾಗದಿ ಹತ್ತು ತಮೊ ಗುಣದಲಿವೊಂದು ।
ಅತಿಶಯವಾಗಿ ಲೋಹಿತ ಗುಣದಲಿ ವೊಂದು ।
ಮತಿವಂತರು ಕೇಳಿ ಗುಣ ಸಾಮ್ಯದಲಿ ರ ।
ಕುತ ಬಿಂದುಗಳಯ್ಯ ಅವ್ಯಕ್ತದಲಿ ಮಹ ।
ತತುವ ಉಪಾದಾನ ವೈಷಮ್ಯ ಕಾಲದಲ್ಲಿ ।
ತೃತಿಯ ರಜಸು ತೆರಳಿ ತಮೊದೊಳಗೊಂದು ಬಿಂದು ।
ಪ್ರತಿಕೂಲವಿಲ್ಲದಲೆ ಒಂದೊಂದು ವೆರಸಿ ।
ಸತಿ ಸಮೇತದಲಿ ಪರಮಾತ್ಮನು ಪ್ರವೇ ।
ಶಿತನಾಗಿ ಬೆಳಸಿ ವಲಯಕಾರದಲ್ಲಿ ।
ಚತುರಾನನ ತತ್ವ ಪುಟ್ಟಿಸಿದನುಗಡ ।
ಚತುರ ಪಂಚ ಭಾಗವೆಂದು ಪೇಳುವುದೇನು ।

ಮತ ಸಮ್ಮತವಿದೆ ಭಾಗಾಂತರ ಮಹ ।
ತತುವ ಸೂಕ್ಷ್ಮರಾಶಿಯೊಳಗಿನ ಇದೆ ಬಿಂದು ।
ಗತಿ ತಪ್ಪದಲೆ ಬಂದು ಕೂಡಿದ ಕಾರಣ ।
ಹಿತವಾಯಿತು ನೋಡಾ ತಜ್ಜಾತಿಯಾಗಿ ।
ಚತುರ ಮೊಗನು ಎಮ್ಮ (ಉಂಟು)ವಾಯುದೇವರು ಸರ ।
ಸ್ವತಿ ಭಾರತಿ ಉಂಟು ಅಭಿಮಾನಿಗಳಾಗಿ ।
ಸತತ ಅಹಂಕಾರಕ್ಕೆ ದಶ ಮಡಿಯಾಗಿದೆ ।
ಸತು ರಜೊ ತಮೊ ಬಿಂದು ಸಾಂಶಗಳು ಮಿ ।
ಳಿತವಾಗಿವೆ ನೋಡು ಲಕ್ಷ ಸಾವಿರ ನೂರು ।
ಶತ ಆರಂಭಿಸಿ ಒಂದೊಂದೀಪರಿಯು ।
ಪತಿ ವಿಜ್ಞಾನಮಯ ವಿಜಯ ವಿಠ್ಠಲ ನಿತ್ಯ ।
ತುತಿಸಿದವನ ಮಹಾಖ್ಯಾತಿ ಮಾಡುವ ಕಾಣೊ ೨

## ರೂಪಕ ತಾಳ

ಶಿವನ ತತ್ವದ ಮಹಿಮೆಯ ಏನು ಪೇಳಲಿ ವನಜ ।
ಭವನ ತತ್ವಾಂತರ್ಗತ ತದ್ಗತ ವಿಜ್ಞಾನಮಯ ।
ವಿವರ ತಮೊಭಾಗ ಅಹಂಕಾರ ಸೂಕ್ಷ್ಮಮಿಂ ।
ಚುವ ರಾಶಿಯೊಳಗೆ ತ್ರಿಭಾಗ ಕೂಡಿದ ಲೇ ।
ಶವ ತೆಗೆದು ಅದರಲ್ಲಿ ಹರಿ ಪ್ರವಿಷ್ಠನಾಗಿ ।
ದಿವಸ ದಿವಸಕೆ ಬೆಳಸಿ ವಲಯಾಕಾರದಿಂದ ।
ತ್ರಿವಿಧ ಬಗೆ ಮಾಡಿದ ವೈಕಾರಿಕ ತೈಜಸ ತಾಮ ।
ಸವನು ಇದರಿಂದ ಮಿಗಿಲಾದ ತತ್ವಜನನ ।
ಕವಿಗಳು ಕೇಳಿ ಈ ಅಹಂಕಾರದಿಂದ ಚಿ ।
ತ್ತವು ಬುದ್ಧಿ ಮನ ತತ್ತದ್ರಾಶಿಯಿಂದುತ್ಪತ್ತಿ ।

ತವಕದಿಂದಲಿ ನೋಡಿ ಚತುರವಿಂಶತಿ ತತ್ವ ।
ದಿವಿಜರ ಗಾತುರ ಬ್ಯಾರೆ ಬ್ಯಾರೆ ಉ ।
ದ್ಭವವಾಯಿತು ವೈಕಾರಿಕ ಅಹಂಕಾರ ಮನದಿಂದ ತೃತಿ
ಯಾವರಣಕೆ ಭೂತ ಗಗನ ತತ್ವಕೆ ಪರಿಮಿ ।
ತವಾಗಿದೆ ಹತ್ತು ಮಡಿ ಲೆಖ್ಖದ ವ್ಯಾಪ್ತಿ ।
ಪವನ ಪರಿಪಾಲ ವಿಜಯವಿಠ್ಠಲರೇಯ ।
ನವ ನವ ಭಕುತಿಯ ಕೊಡುವಾ ವಿರಕುತಿಯ ೩

## ಝಂಪಿ ತಾಳ

ಎರಡನೇ ಅಹಂಕಾರ ತೈಜಸವೆಂಬೋದು ।
ಅರುಣ ರೂಪದಲಿಂದ ಒಪ್ಪುತಿದಕೊ ।
ಪರಮಾತ್ಮ ತೈಜಸ ಭಾಗದ ದೆಶೆಯಿಂದ ।
ಪೊರಡಿಸಿದ ದಶವಿಧ ಬೀಜಾಂಕುರ ।
ಎರಡೈದು ಇಂದ್ರಿಯಗಳು ಇದರಿಂದ ವುಪಚಯ ।
ಸರಿ ಬೆರಸಿ ಇಪ್ಪವು ಸೂಕ್ಷ್ಮದಿಂದ ।
ಮರಳೆ ತೈಜಸ ಭಾಗ ಮೂಲದಲ್ಲಿದ್ದ ಶ್ರೋ ।
ತುರ ಶಬ್ದಾಕಾಶ ಸೂಕ್ಷ್ಮರಾಶಿಯಲ್ಲಿ ।
ಇರುತಿಪ್ಪದೊಂದೊಂದು ಭಾಗವನು ತೆಗೆದು ಶ್ರೋ ।
ತುರ ತತ್ವ ಪುಟ್ಟಿತು ಹರಿಯಿಂದಲಿ ।
ಎರಡೆರೆಡು ಶಬ್ದ (ರಬ್ದ)ದಿಂದಲಿ ಯಿದು ನಿರ್ಮಾಣ ।
ಪರಿಯಾಗಿಯಿಪ್ಪುದು ಬಲು ವಿಚಿತ್ರ ।
ಅರಿವುದು ಇದರಂತೆ ಉಳಿದ ಒಂಭತ್ತು ನೇ ।
ತುರ ಮೊದಲಾದ ಉಪಸ್ಥ ತನಕ ।
ಧರಿಯೊಳಗೇವೆ ಜ್ಞಾನ ಕರ್ಮೇಂದ್ರಿಯಗಳೆಂದು ।
ಕರೆಸಿಕೊಳುತಿಪ್ಪವು ಸರ್ವದಲ್ಲಿ ।

ತರುವಾಯ ತಾಮಸ ಅಹಂಕಾರ ಭಾಗಾಂತರದಿ ।
ಎರಡೈದು ವಿಭಾಗ ಮಾಡಿ ಶಬ್ದ ।
ಸ್ಪರಿಶ ರೂಪ ರಸ ಗಂಧ ಪಂಚ ತನ್ಮಾ ।
ತುರ ಗಗನ ಪೃಥಿವಿ ಪರಿಯಂತ ಸೃಷ್ಟಿ ।
ಮಿರಗುವ ತಾಮಸ ಅಹಂಕಾರಿಕದ ಬಗೆವೊಂದು ।
ವರ ಶ್ರೋತ್ರ ತತ್ವ ದಶಭಾಗವೊಂದು ।
ನಿರುತ ತಾಮಸದಲ್ಲಿ ಇಪ್ಪ ಸೂಕ್ಷ್ಮರಾಶಿ ।
ತರ ಭೂತದಲ್ಲಿ ಇದ್ದ ಶಬ್ದ ಗಗನ ।
ಎರಡು ಪೂರ್ವದಲೆರಡು ಪೇಳಿದವು ಕೂಡಿ ನಿಂ ।
ದಿರದೆ ಶಬ್ದ ತತ್ವ ಪುಟ್ಟಿತು ಗಡ ।
ಸ್ಪರಿಶ ಮೊದಲಾದ ನಾಲ್ಕು ಮಾತ್ರಾ ಇದರಂತೆ ।
ಪರಿಗ್ರಹಿಸು ಅಂತರಂತರ ತದ್ಗತ ।
ಚರಿತೆಯನು ತಿಳಿ ಚಿತ್ತ ಬುದ್ಧಿ ಮನಸ ದಶ ।
ಕರಣಗಳು ಪಂಚ ತನ್ಮಾತ್ರಗಳು ಆ ।
ವರಣ ಭೂತಗಳೆಲ್ಲ ಒಂದಂದರಲ್ಲಿಸು ।
ಸ್ಥಿರವಾಗಿ ಪೊಂದಿ ಕೊಂಡಿ ಪ್ಪವಯ್ಯಾ ।
ಮರುತ್ವದ ಮಿಕ್ಕಾದ ಪಂಚ ಭೂತದ ಸ್ಥಿತಿ ।
ಅರುಹು ಸಜ್ಜನರ ಮನಕಾಗಬೇಕು ।
ಪರಿಪೂರ್ಣ ಗುಣನಿಧಿ ವಿಜಯವಿಠ್ಠಲರೇಯ ।
ಸುರನಿಕರ ಸಿರಿ ಸಹಿತ ಅಲ್ಲಲ್ಲೆ ವಾಸನೊ ೪

## ತ್ರಿವಿಡಿ ತಾಳ

ಒಂದು ಅಂಶ ತಾಮಸಾಹಂಕಾರದಿಂದ ।
ಬಂದದ್ದು ಆಮೇಲೆ ಶ್ರೋತ್ರ ತತ್ವದ ಭಾಗ ।
ಒಂದಂಶಾ ಶ್ರೋತ್ರವು ಶಬ್ದ ತತ್ವ ವಿಭಾಗ ।

ಒಂದು ಈ ವಿಧದಿಂದ ಮೂರು ಇಣಿಸೆ ।
ಸಂದಿದೆ ಯಿದರಲ್ಲಿ ತಾಮಸಾವರಣ ಭೂತ ।
ಪೊಂದಿದನಭ ಸೂಕ್ಷ್ಮ ರಾಶಿಯೊಳಗೆ ।
ಒಂದು ಭಾಗವ ತೆಗೆದು ಆಕಾಶ ತತ್ವವ ।
ಅಂದದಲಿ ಮಾಡಿದ ಹರಿ ವಿನಯದಿಂದಲ್ಲಿ ।
ಕುಂದದಲೆ ಪ್ರಾದೇಶ ಗಣಿತವನ್ನು ತಿಳಿದು ।
ಬಂಧಾನ ಕಳಕೊಂಡು ಸುಖಿಸುವುದು ।
ಮುಂದಿನ ತತ್ವಗಳು ಇದರಂತೆ ಗ್ರಹಿಸಬೇಕು ।
ಒಂದು ತಮೊಭಾಗ ಜ್ಞಾನೇಂದ್ರಿ ಮಿಗಿಲಾದ ।
ಒಂದೊಂದಂಶವನೆ (ವೆ) ವುಂಟು ಸೂಕ್ಷ್ಮರಾಶಿಯ ಸಂ ।
ಮ್ಯಂಧ ವಾಯುವಾದಿ ಅನುಕ್ರಮದಿಂದ ।
ಛಂದ ಛಂದವಾಗಿ ಒಪ್ಪುತಿವೆ ನೋಡಿ ।
ಒಂದಕ್ಕೆ ವೊಂದೊಂದು ದಶಮಡಿ ಲೆಖ್ಖ ।
ಬಿಂದು ಬಿಂದುಗಳಿಂದ ಇಂತಾವರಣ ಭೂತ ।
ಗಂಧಾದಿ ಇದರಲ್ಲಿ ಅಂತರವಾಸ ।
ಎಂದಿಗೆಂದಿಗೆ ದೋಷ ಲೇಶವಿಲ್ಲ ಪ್ರತಿ ।
ಬಂಧಕವಿಲ್ಲದೆ ಸುತ್ತಿ ಒಪ್ಪವು ।
ಇಂದು ಪೇಳುವುದೇನು ಪಂಚಕೋಶದಲ್ಲಿ ಇದ ।
ರಿಂದಲೆ ತಿಳಿದರೆ ತತ್ತದ್ಭಾಗ ।
ಸಂದೇಹವಾಗದೆ ಮನಕೆ ಬರುವುದು ಆ ।
ನಂದ ವಾಹುದು ಹರಿ ಕರಣ ಮಾಳ್ಪ ।
ಇಂದ್ರಾದಿ ಜನರೆಲ್ಲ ಇವಕೆ ಮಾನಿಗಳು ಏ ।
ನೆಂದು ಕೊಂಡಾಡಲಿ ಹರಿಯ ಶಕ್ತಿ ।
ಸಂದೇಹದಿಂದಲಿ ಜ್ಞಾನ ಪುಟ್ಟದು ಕೇಳೊ ।

ಮಂದಮತಿಗಳಿಗಿದು ಸುಲಭವೇನಯ್ಯ ।
ಇಂದಿರಾಪತಿ ನಮ್ಮ ವಿಜಯವಿಠ್ಠಲರೇಯ ।
ಒಂದೊಂದು ಭಾಗ ವಿಭಾಗ ತ್ರಿಗುಣ ಬಲ್ಲ

## ಅಟ್ಟತಾಳ

ಕುರುಹು ತತ್ವಗಳು ಒಂದಕ್ಕೊಂದು ಕಾರಣ ।
ಪರಿಮಿತವಾಗಿವೆ ಸೂಕ್ಷ್ಮ ಸ್ಥೂಲತರ ।
ಧರಣಿ ವಿಡಿದು ಮಹ ಅವ್ಯಕ್ತ ತತ್ವವು ।
ಸರಿಸಿ ಜಾಂಡಕ್ಕೆ ಆವರ್ಕವಾಗಿವೆ ।
ವರ ತುರ್ಯಾ ಮೂರುತಿ ಅನ್ಮಯಾದಿ ನಾಮಾಂ ।
ತರದಿ ಇರುತಿಪ್ಪ ತದಾಕಾರ ಅವಿಕಾರ ।
ಪರಮ ಪುರುಷ ನಿತ್ಯ ಚತುರ ವಿಂಶತಿ ತತ್ವ ।
ಮರಿಯಾದೆ ಮಾಡಿದ ಬೊಮ್ಮಾಂಡ ಖರ್ಪರ ।
ಎರಡೇಳು ಲೋಕ ಸಮುದ್ರ ಪರ್ವತ ನದಿ ।
ವಿರಚಿಸಿ ತತ್ತದ್ದೇವತೆಗಳ ಸ್ಥಾಪಿಸಿ ।
ಭರತಾಖ್ಯ ಖಂಡ ಕರ್ಮ ಭೂಮಿಯಲ್ಲಿ ನಿ ।
ಬ್ಬರ ಯೆಂಭತ್ತು ನಾಲ್ಕು ಲಕ್ಷ ಜೀವರ ಗಾ ।
ತುರ ನಿರ್ಮೈಸಿದ ಸರ್ವ ತತ್ವಗಳಿಂದಲಿ ।
ಇರತಕ್ಕವಾಯಿತು ಪ್ರಚುರ ಭಾಗ ಭೂತ ।
ಭರಿತವಾಗಿದೆ ವಿರಾಟರೂಪದ ಮಧ್ಯ ।
ಕರುಣಾಕರ ನಮ್ಮ ವಿಜಯ ವಿಠ್ಠಲರೇಯ ।
ನಿರುತ ನಿಮಿತ್ತನೊ ಗುಣ ಉಪಾದಾನವು ೬

## ಆದಿ ತಾಳ

ಚತುರ ವಿಂಶತಿ ತಸತ್ವಾತ್ಮಕವಾದ ಗುಣತ್ರಯ ।
ಶಿತ ರಕ್ತಾಶಿತ ವರ್ಣ ಅನಾದಿ ನಿತ್ಯ ಸೂಕ್ಷ್ಮ ।
ಪ್ರತಿ ಪ್ರತಿ ಪರಮಾಣು ಒಂದನೇಕವಾಗಿ ।
ಗತಿ ತಪ್ಪದಲೆ ಬೀಜಾಂಕುರದೋಪಾದಿಯಲ್ಲಿ ।
ಅತಿಶಯವಾಗಿವೆ ಜಗತ್ತಿಗೆ ಉಪಾದಾನ ।
ಶ್ರುತಿ ತತಿಯಿಂದ ತಿಳಿದು ಕೊಂಡಾಡಬೇಕು ಇದಕೆ ।
ಇತರ ಸಂಶಯಸಲ್ಲ ಒಂದಕ್ಕೊಂದು ಸಂಯೋಗ ।
ತತುವ ವರ್ಣ ಭೂತವಾಗಿಪ್ಪವು ನೋಡೆ ।
ಚತುರರ ಮನಸಿಗೆ ಸೋಜಿಗವಾಗಿದೆ ।
ಅತುಳ ಬಲ ವೀರ್ಯ ಹರಿಯ ಸ್ವೇಚ್ಛ ಆ ।
ಚಿಂತ್ಯಾದ್ಭುತ ಶಕ್ತಿ ಗುಣ ರೂಪ ಕ್ರೀಯಕ್ಕೆ ನಮೊ ನಮೊ ।
ಚ್ಯುತದೂರ ಚಿನ್ಮಯ ಇವನೆಲ್ಲ ಕೂಡಿಸಿ ।
ಉತುಪತ್ತಿ ಸ್ಥಿತಿ ಮಾಡುವ ಕಡಿಗೆ ಸಾಮ್ಯಾವಸ್ಥಿ ।
ಪೃಥುವಿಗೆ ಜಲಜಲಕೆ ತೇಜ ತೇಜಕ್ಕೆ ಮರುತ ಮ ।
ರುತಗೆ ಗಗನ ಗಗನಕ್ಕೆ ನೋಡು ಅಹಂ ।
ಕೃತಿ ಇದಕ್ಕೆ ಮಹತತ್ವ ಮಹತತ್ವಕೆ ಅವ್ಯಕ್ತ ।
ಹಿತವಾಗಿಯಿಪ್ಪವೆ ಒಂದಂದಕ್ಕೆ ಕಾರಣ ।
ರತಿ ಪತಿ ಜನಕ ತಾನೆ ಇವಕ್ಕೆಲ್ಲ ಮೂಲ ಪ್ರ ।
ಕೃತಿಯ ಕಾರಣ ಮಾಡಿ ಸತಿ ಸಹಿತ ಕ್ರೀಡಿಸುವ ।
ಪ್ರತಿಮೆ (ಕಾ) ಸ್ಥಾನವೆಯಿದು ವಾಸುದೇವಗೆ ಇಂದು ।
ನುತಿಸಿ ನಾನಾಪರಿ ವಿಚಾರ ತಿಳಿದು ಉ ।
ಚಿತವಾದ ಮನುಜಂಗೆ ಪಂಚಕೋಶದ ಮಾರ್ಗ ।

ಸುತನಾಗಿ ತೋರಿಸುವ ಹರಿ ಮುಂಭಾಗದಿ ನಿಂತು ।
ಪತಿತ ಪಾವನ ಮೂರ್ತಿಯ ಕರುಣಕ್ಕೆ ಎಣೆಯುಂಟೆ ।
ಕೃತ ಭುಜ ತತಿಯೊಳಗಿಂತು ನೋಡಲು ಇಂಥ ।
ಅತಿ ಸುಲಭ ದೈವವ ಕಾಣೆನೊ ಕಾಣೆನೊ ।
ಕ್ಷಿತಿಯೊಳಗೀತನ ಬಿಟ್ಟವನ ಜನ್ಮಧಿಕು ।
ಕೃತ ಅನ್ನ ಪಾನವೆ ಧಿಕು ವಯಸು (ವ) ಕಾಯವೆ ಧಿಕು ।
ತುತಿಸಿಕೊಂಡಾಡುವ ಕಾವ್ಯವೇ (ವಾಕ್ಯವೆ) ಧಿಕುಧಿಕು ।
ಹಿತದಿಂದಲೆಸಗುವ ತೀರ್ಥಯಾತ್ರೆಯೆ ಧಿಕು ।
ಚತುರಾಶ್ರಮವೆ ಧಿಕು ಅವನ ಆಚಾರವೆ ಧಿಕು ।
ಗತಿಯ ಸತ್ಕರ್ಮ ಆವಾವ ಸಾಧನ ।
ಸತತ ಮಾಡುವುದೆಲ್ಲಿ ಧಿಕು ಧಿಕು ಎಂದಿಗೆ ।
ಮೃತ ಭರ್ತ ಸ್ತ್ರೀಯಳು ಋತುಸ್ನಾನ ಮಾಡಿದಂತೆ ।
ವ್ಯಥೆಯಲ್ಲದೆ ಸುಖ ಫಲ ಪ್ರಾಪುತವಿಲ್ಲ ।
ಸತುವ ಬುದ್ಧಿಯಿಂದ ನರನು ಬಿಂದೋದಕ ಅ ।
ರ್ಪಿತವೆಂದು ಕೊಡಲು ಪುಣ್ಯ ಮೇರು ತುಲ್ಯ ಮಾಡುವ ।
ಜಿತ ದೈತ್ಯ ಗುಣ ಪೂರ್ಣ ವಿಜಯ ವಿಠಲ ಶಾ ।
ಶ್ವತವಾಗಿ ಭಕ್ತರ ಮನದೊಳಗೆ ಆಡುತಿಪ್ಪ. ೭

## ಜತೆ

ಭೂತ ಭೂತಾಭಿಮಾನಿಗಳ ನೆನದು ಪರಂ ।
ಜ್ಯೋತಿ ವಿಜಯ ವಿಠಲ ಸರ್ವ ಕರ್ತನೆನ್ನು ೮

## ೩೧

### ಧ್ರುವತಾಳ

ಗುಪ್ತದಾರ್ಚನೆ ಮಾಡು ಗುಣವಂತನಾಗಿ ಬಲು
ಆಪ್ತಾಲೋಚನದಿಂದ ಧೈರ್ಯವಿಡಿದು
ಕ್ಲಪ್ತಿಗೆ ಎಳ್ಳನಿತು ಕಡಿಮೆಯಾಗದಂತೆ
ಪ್ರಾಪ್ತಿಯಾಗುವಂತೆ ಎಲೆ ಮನವೆ
ತೃಪ್ತಿಯಬಡು ಹರಿಯಧ್ಯಾನ ರಸದಿಂದ
ಲಿಪ್ತನಾಗದಿರೋ ದುಷ್ಕರ್ಮದೊಳು
ಸಪ್ತ ಪ್ರಾಕಾರ ಗ್ರಾಮದೊಳಗೆ ಶತ
ಸಪ್ತಾಶ್ವನಂತೆ ಜನ್ಮ ಜನ್ಮಕ್ಕೆ
ದೀಪ್ತನಾಗಿಪ್ಪನೀತಾ ಪರಿವಾರ ಸಹಿತಾ
ವ್ಯಾಪ್ತನಾಗಿಹನು ಸರ್ವ ಠಾವಿನಲ್ಲಿ ತೊಲಗದೆ
ಶಪ್ತ ಮಾಡಿದ ಮೇಲೆ ಪೊರಿಯದೆ ಬಿಡ ಸೂ
ಷುಪ್ತಿಲಿ ಸ್ವರೂಪಾನಂತ ಉದ್ರೇಕವೀವ
ಸಪ್ತ ಸಪ್ತ ಭುವನಪಾಲಾ ವಿಜಯ ವಿಠಲ
ಅಪ್ತನೊ ಅನಿಮಿತ್ಯ ಬಂಧುನೆಂಬೊದೆ ಸಿದ್ಧ ೧

### ಮಟ್ಟತಾಳ

ಛಳಿಮಳಿಯೊಳಗಿದ್ದು ಕೆಲಕಾಲ ಬಳಲಿ
ಅಳಲಿ ತೊಳಲಿ ದೇಹ ಬಳಲಿಪುದಲ್ಲ ಬಿ
ಸಿಲು ಬೇಸಿಗೆ ಸಲ್ಲ ಜಲದಲಿ ಮಿಂದು ತೊ
ಪ್ಪಲು ತೊಡಮೆ ತಿಂದು ಹಲವು ಯೋಚಿಸಸಲ್ಲ
ತಲೆ ಕೆಳಗಾಗಿ ಹಂಬಲಗೊಂಬುವುದಲ್ಲ

ಹಲಬು ಹಲಬಿ ವ್ಯರ್ಥ ತಳತಳ ಮಿಡಿಕಿ ಕ
ತ್ತಲೆ ಬೆಳಗೆನ್ನ ದಲೆ ಚಲ ಗಂಹ್ವರ ದೇಶಾ
ವಳಿ ವನದಲಿ ಪೋಗಿ ಕುಳಿತು ಕಂಗಳ ಮುಚ್ಚಿ
ಒಲಿಸುವ ಮಾತಲ್ಲ ತಿಳಿವುದು ಉತ್ತಮ
ಕುಲದಲ್ಲಿ ಜನಿಸಿದ ಮಲರಹಿತ ಜ್ಞಾನಿ ಸುಮನನಿಂದ
ಜಲಜದಳನಯನ ವಿಜಯ ವಿಠಲ ಹರಿಯ
ಒಲಿಸುವ ಉಪಾಯವ ಒಲಿವಿನಲಿ ಕೇಳಿ ೨

## ತ್ರಿವಿಡಿ ತಾಳ

ಡಿಂಬದೊಳಗೆ ಹೃದಯ ಅಂಬರದಲಿ ಪೊಳಿವಾ
ಲಂಬಿಸೀದ ನೂರು ಖಂಬದಿಂದ ಬಲು
ಸಂಭ್ರಮ ಮಂಟಪ ಕೊಂಬಿ ಕೊಂಬಿಗೆ ಶತ
ಕುಂಭ ಪವಳಮಯ ತುಂಬಿದ ರತುನಾ
ದುಭೋಳಿ ಜೋಡಿಸಿದ ಮುಂಬಿಗಿಸುತ್ತಾ
ಕೆಂಬಣ್ಣ ಕಟ್ಟು ಇಂಬಾಗಿ ಎಸೆಯೆ
ಶಂಬರಾರಿಯ ಜನಕ ವಿಜಯ ವಿಠಲ ಹರಿಯ
ಬಿಂಬಾ ತೋರುವ ಸ್ಥಾನ ಚನ್ನಾಗಿ ಗ್ರಹಿಸೋದು ೩

## ಅಟ್ಟತಾಳ

ದಳ ಅಷ್ಟವುಳ್ಳ ರಕ್ತಾಂಬುಜ ಮಧ್ಯ
ಪೊಳೆವ ಕರ್ನಿಕೆ ಮೇಲೆ ಮಂಡಲಾತ್ರಯ ವಪ್ಪೆ
ನಿಲವರ ಹೇಮಗದ್ದುಗೆಯಲ್ಲಿ ಸುರತರು
ಕೆಳಗೆ ಫಣಿಮಂಚ ಹಾಸಿಕೆ ಮನೋಹರ
ಲಲನಿಯರಿಬ್ಬರು ಎಡಬಲದಲಿಒಪ್ಪೆ ಕುಳಿತು
ಮೆರೆವ ಮನ್ಮಥಕೋಟಿ ಲಾವಣ್ಯಾ

ಜಲಧರ ವರ್ನ ಚತುರ್ಭುಜ ನಾನಾ
ಅಳವಳಿಸುವ ಭೂಷಾವಳಿಗಳು ರಂಜಿಸೆ
ಕಿಲಿ ಕಿಲಿ ನಗುವ ಶ್ರೀ ವಿಜಯ ವಿಠಲರೇಯ
ವೊಲಿಸಿದವರಘ ಅರಘಳಿಗೆ ಅಗಲನು ಕಾಣೊ ೪

## ಆದಿತಾಳ

ಒಂದೇಳುಭುಜದ ಲಕ್ಷ್ಮೀ ನಾರಾಯಣ
ಇಂದ್ರನಲ್ಲಿಗೆ ಬರೆ ಐಶ್ವರ್ಯ ಇನಕು
ಲೇಂದ್ರನಲ್ಲಿಗೆ ಬರೆ ತೇಜಸ್ಸು ಯವುನಲ್ಲಿ
ಬಂದು ಪೊಂದಲು ಧರ್ಮ ವರುಣನಲ್ಲಿಗೆ ಬರೆ
ಕುಂದದೆ ರಸಕಾಂಕ್ಷಿ ವಾಯುವಿನಲ್ಲಿ ಜ್ಞಾನ
ಇಂದುಧರಸಖನಲ್ಲಿ ಧನದಾಶೆ
ಇಂದು ಮೌಳಿಯಲ್ಲಿ ವೈರಾಗ್ಯಭಾಗ್ಯ
ತಂದು ತೋರುವುದು ನಿತ್ಯದಲ್ಲಿ ಮನ
ಸಂದೇಹವಿಲ್ಲವು ಇದು ಸಿದ್ಧಾಂತವೂ
ಎಂದೆಂದಿಗೆ ತಿಳಿದಾಲೋಚನೆ ಮಾಡು
ಕಂದರ್ಪಪಿತ ನಮ್ಮ ವಿಜಯ ವಿಠಲರೇಯನ
ಸಂದರುಶನವಾಗೆ ಅವನೇ ಜೀವನ್ಮುಕ್ತಾ ೫

## ಜತೆ

ಇಂತು ಚಿಂತನೆ ಮಾಡು ಸಚ್ಚಿದಾನಂದಾತ್ಮನ
ಅಂತು ತೋರದ ಮಹಿಮೆ ವಿಜಯ ಹರಿ ೬

## ೩೨

### ಧ್ರುವತಾಳ

ಗುರು ಭಕುತಿ ಪ್ರಧಾನ ಸಾಧನಾ
ಗುರು ಶುಶ್ರೂಷವೆ ಮಹಾಕರ್ಮನಾಶನಾ
ಗುರು ಉಪದೇಶವೆ ಜ್ಞಾನಮಾರ್ಗ
ಗುರು ಪ್ರಸಾದ ಲಿಂಗ ಭಂಗಕೆ ಕಾರಣ ಭಕುತಿ
ಗುರು ಪರಮಾನುಗ್ರಹ ಮಾಡಿದಡಂ
ನಿರುತ ಪಾರ ವಾರ ತತ್ವ ಪ್ರಮೇಯ
ಕರತಳದೊಳಗಿದ್ದ ತೆರದಿಂ
ಅರುಹುವಾಗುವದು ಮಾನವರಿಗೆ
ಸ್ವರೂಪ ಯೋಗ್ಯತಾದನಿತು ಗುರುಭಕುತಿ
ಗುರುಬಲ ಒಂದು ಇದ್ದಡಂ
ಧರೆ ಎಲ್ಲ ಗೆಲ್ಲವಕ್ಕು ಆವಾಗಂ
ಗುರು ಕರುಣ ಪಡದಡಂ ಧನ್ಯನೊ
ಗುರುಧ್ಯಾನ ಮಾಳ್ಪದು ಜನರಂ
ಗುರು ಚರಣಾಬ್ಜ ಭೃಂಗನಾಗೊ
ಗುರುಗಳಿಗೆ ಸರಿಗಾಣೆನೊ
ಗುರು ಒಲಿದಡೆ ಸರ್ವ ವಿದ್ಯ ಪ್ರಾಪ್ತಿ
ಗುರು ಮಂತ್ರ ಗುರೋರ್ಜಪ
ಗುರುನಾಮಸ್ಮರಣೆ
ಹಿರಿದಾಗಿ ಕೈಕೊಂಡು ಸುಖಿಸುವುದು ಜನರು
ಗುರು ಭವಾಂಬುಧಿ ದಾಟಿದನು ಸಿರಿ ವಿಜಯ ವಿಠ್ಠಲರೇಯನ
ಗುರುವಿಲ್ಲದವನಿಗೆ ಒಲಿಯನು ೧

## ಮಟ್ಟತಾಳ

ದುರುಳ ಏಕಲವ್ಯನು ಏಕಾಂತದಲೊಂದು
ಗುರು ಪ್ರತಿಮೆಯನ್ನು ನಿರ್ಮಾಣವ ಮಾಡಿ
ನಿರುತ ಭಕುತಿಯಿಂದ ಶಸ್ತ್ರಾಸ್ತ್ರವಿದ್ಯ
ಹರುಷೋನ್ನತದಿಂದ ಸಂಪಾದಿಸಿಕೊಂಡಾ
ಗುರು ಭಕುತಿಯಿಂದ ಮನುಜಗಾವಲ್ಲ್ಯಾಗೆ
ಸ್ಮರಿಸಿಬೇಡಿದ ವಿದ್ಯಪಾಲಿಸುವುದೊ ಸತ್ಯ ಮರುಳ
ದುರುಳನಾದರು ಕೇಳು ಮಾಡಿದ ವಿಶ್ವಾಸ
ಬರಿದೆಯಾಗದು ಕಾಣೊ ಮುಕ್ತಿವಂತರಿಗಿದೆ
ವರ ಮೂರುತಿ ನಮ್ಮ ವಿಜಯವಿಠ್ಠಲರೇಯಾ
ಗುರುದ್ವಾರದಿಂದ ಪೊಳೆವಾ ಪಾಪವ ಕಳೆವಾ ೨

## ತ್ರಿವಿಡಿತಾಳ

ಗುರುಗಳು ವರ ಶಾಪಕೊಟ್ಟರಾದಡೆ ಅವನು
ಸುರ ನರೋರುಗ ಲೋಕ ತಿರುಗಿದರೆ ತೊಲಗುವದೆ
ಸರಸರನೆ ಒಂದೆ ಜನುಮದಲ್ಲಿ ತಿಳಿವದಲ್ಲಾ
ಎರಡೊಂದು ಜನುಮಾಂತರದಲ್ಲಿ ಅನುಭವಾ
ಗುರು ಕರುಣವ ಮಾಡಿದಂತೆ ನಾನಾ ಭೋಗಾ
ಶರೀರವೆ ತೆತ್ತು ಉಣಬೇಕಾ ದ್ವಿವಿಧಾ
ಗುರುಪ್ರಸಾದದಿಂದ ಮರುತ ಮತವೆ ಪೊಂದಿ
ಚರಿಸುತಿಪ್ಪ ನರನನೋಡಿ ಜನರು
ಧರಿಸಲಾರದೆ ಮನುಜ ನುಡಿದರೇನಾಹದೊ
ಕರಣ ಶುದ್ಧವಿಲ್ಲದೆ ಕೆಟ್ಟು ಪೋಪಾ

ಗುರು ಕರುಣ ಬಂದು ಪಾವನ ಮಾಡಿದ ಮೇಲೆ
ದುರಿತದ ಭಯ ದೂಷಣೆ ಭಯವಿಲ್ಲಾ
ಅರರೆ ಅದ (ವ)ರ ಅಂತಃಕರಣ ಆವಾದಾ
ಪರಿಯಲ್ಲಿಪ್ಪದೋ ದೂಷಿಸಬಾರದು
ವರ ಸತ್ಯವತಿಸೂನು ನಾನೂರು ಕೋಟಿ ಮೇ
ಲೆರಡೊಂದು ಹತ್ತು ಕೋಟಿ ಗ್ರಂಥಮಾಡಿರೆ
ಹಿರಿಯರ ಪೇಳಿದ ಮಾತಿಗೆ ಮನತೆಗೆದು
ಸರಿಬಾರದೆಂದಾಡುವನೇ ಮೂರ್ಖ
ಉರುಗ ಶಯನ ನಮ್ಮ ವಿಜಯವಿಠ್ಠಲರೇಯನ
ಪುರವೆ ಬೇಕಾದರೆ ಉತ್ತಮ ಗುರುಬೇಕು ೩

## ಅಟ್ಟತಾಳ

ನದಿಯೊಳಗೊಂದು ಅಸ್ಥಿಯ ಹಾಕಿ ತನ್ನಯ
ಬದಿಯಲ್ಲಿದ್ದವರಿಗೆ ಮುಟ್ಟಬಾರದು ಬಂ
ತಿದಕೆ ದೋಷವೆಂದು ಪೇಳಿದರಾಮಾತು
ಬುಧರು ಮೆಚ್ಚುವರೇನೊ ಕೇಳಿದಾಕ್ಷಣಲ್ಲಿ
ಮುದದಿಂದಲಿ ತಮ್ಮ ಗುರುಗಳ ಪಾದಧ್ಯಾನ
ಹೃದಯದಲ್ಲಿಟ್ಟು ಪೇಳಿದ ಕಾಮ್ಯಕೆ ಲೇಸಾ
ತುದಿ ಮೊದಲಾದರು ಸಂಶಯ ಬರುವುದೆ
ಉದಧಿಯಂತೆ ತುಂಬಿದೆ ನೋಡು ಸತ್ಕೀರ್ತಿ
ಪದೋಪದಿಗೆ ಭಗವಂತ ಸಂಗಡ
ವಿಧಿ ತಪ್ಪದಲೆ ಆಡಿದ ಮಹಾತ್ಮರು
ನಿದರುಶನ ಇಲ್ಲದಲೆ ಹೇಳರು ಕಾಣೊ
ಎದೆಗುದ್ದಿಕೊಂಡು ಕಸಿವಿಸಿ ಬಟ್ಟರೆ
ಅದರಿಂದೆನಾಹೋದೊ ಮಿಥ್ಯಾವಾದವ್ಯಾಕೆ

ಸದನದೊಳಗೆ ತಾನು ಕಾಣದಿರೆ ಕುರುಡಾ
ಪದುಮಜಾಂಡ ಓರ್ವರು ಕಾಣರೆಂಬಂತೆ
ಮದಡ ಮಾನವನ ಅಟ್ಟಹಾಸವೇನೆಂಬೆ
ನದಿಗೆ ಚಾಂಡಾಲ ಯವನ ಕೋಟಿ ಸಮುದಾಯ
ಅಧಮರು ಬಂದು ನಿಂದಿಸಿ ಬೈದು ಕಾಲಿಲಿ
ಒದೆದು ಉಗುಳಿದರೆ ದೋಷ ನದಿಗೆ ಉಂಟೆ
ನದಿಸದೃಶವಾದ ಜ್ಞಾನಿಗೆ ಅಣಕವಾ
ಡಿದರೆ ಅವಗಿನ್ನು ಕ್ಷಣಿತಾ ಬರಲಿಲ್ಲಾ
ಮಧು ವೈರಿ ವಿಜಯ ವಿಠ್ಠಲನ ಪದಾಂಬುಜ
ಸದಮಲವಾಗಿ ಭಜಿಸುವರು ಗುರುವೆನ್ನಿ ೪

**ಆದಿತಾಳ**

ವ್ಯಾಸ ಮುನಿಯ ಭಾವಗರ್ಭ
ಶ್ರೀ ಮದಾಚಾರ್ಯರು ಬಲ್ಲರಯ್ಯಾ
ವ್ಯಾಸಶಿಷ್ಯರ ಭಾವಗರ್ಭ ಜಯ ಮುನಿರಾಯ ಬಲ್ಲನಯ್ಯಾ
ಲೇಸು ಜಯಾರ್ಯರ ಭಾವಗರ್ಭ
ಮುನಿವ್ಯಾಸರಾಯ ಬಲ್ಲರೈಯ್ಯಾ
ವ್ಯಾಸರಾಯರ ಭಾವಗರ್ಭ ವಿಜಯೀಂದ್ರ
ವಾದಿರಾಜರು ಬಲ್ಲರೈಯ್ಯಾ
ಈಸುಜನ ಬಲ್ಲದ್ದು ಕಾಣೊ ಎಣಿಸು
ಪುರಂದರದಾಸರ ಇದರೊಳು
ದೇಶದೊಳಗೆ ದಾಸರ ನಿಜ ಭಾವಗರ್ಭ
ಲೇಶಬಲ್ಲರು ಅವರ ಅ
ನುಸಾರಿಗಳು ಶ್ರೀಶ ವಿಜಯ ವಿಠ್ಠಲರೇಯಾ
ಕಾಶಿಯೊಳಗಿನ ಮಹಿಮೆ ಬಲ್ಲಾ ೫

## ಜತೆ

ನಮ್ಮ ಗುರುಗಳ ಕವನಾ ಮಿಥ್ಯಾಮತವೆಂದವನು
ಬೊಮ್ಮ ರಕ್ಕಸ ಕಾಣೊ ವಿಜಯವಿಠ್ಠಲ ಬಲ್ಲಾ ೬

## ೩೩

## ಧ್ರುವತಾಳ

ಚಿದ್ದೇಹಾಕಾರ ಆನಂದಮಯವಯ್ಯ ।
ಬದ್ಧ ದೇಹಾಕಾರ ವಿಜ್ಞಾನಮಯವಯ್ಯ ಅನಿ ।
ರುದ್ಧ ದೇಹಾಕಾರ ಮನೋಮಯವಯ್ಯ ।
ಶುದ್ಧ ಪ್ರಾಕೃತಾಕಾರ ಪ್ರಾಣಮಯವಯ್ಯ ।
ಶುದ್ಧ ಭೌತಿಕಾಕಾರ ಅನ್ನಮಯವಯ್ಯ ವಾ ।
ಸುದೇವಾದಿ ಮೂರುತಿ ನಾರಾಯಣ ।
ಚಿದ್ದೇಹದಲ್ಲಿ ತಿಳಿ ಆನಂದಮಯಗೆ ।
ಪದ್ಧತಿಯುಂಟು ಉಳಿದದಕೆ ಚತುರನಾಮ ।
ವಿದ್ಯುಚ್ಛುಭ್ರ ರಕ್ತ ಪೀತ ಶಾಮವರ್ನ ।
ಹೃದ್ಗತ ತತ್ತದ್ದೇಹವಾಸ ಅನಿ ।
ರುದ್ಧಾದಿ ಮೂರ್ತಿಗಳ ವ್ಯುತ್ಕ್ರಮದಿಂದ ಗುಣಿಸು ಅ।
ನಾದ್ಯ ವಿದ್ಯಾಕರ್ಮ ಕಾಲ ಗುಣತತ್ವ ।
ಹೊದ್ದಿಕೊಂಡಿಪ್ಪವಯ್ಯ ಆಲಿಂಗದಲ್ಲಿ ಅಯ್ಯ ಅಯ್ಯ ಅಯ್ಯಾ ।
ಚಿದ್ದೇಹಾತ್ಮಕ ಜೀವನ ಆಕೃತಿ ಅವ್ಯಕ್ತ ಮ ।
ಹದ್ದಾಹಂಕಾರ ಚೇತನ ಚಿತ್ತ ।
ಬುದ್ಧಿ ಮನಸು ಸರ್ವೇಂದ್ರಿಯಗಳು ಮಾತ್ರ ಭೂತ ಈ ಅ ।

ಭಿಧಾನ ಉಂಟು ನಿತ್ಯ ಕರೆಸುವವಯ್ಯ ।
ಪದ್ಮಾಲಯ ಆನಂದ ವಿಜ್ಞಾನ ಬೊಮ್ಮ ಪ್ರಾಣ ।
ರುದ್ರ ಮನೋಮಯ ಇಂದ್ರಾದ್ಯಮರರು ।
ಸದ್ದೇಶ ಮಿತ್ರಾದಿಗಳು ವಿಹಿತ ತಿಳಿದು ।
ತದ್ಭಕ್ತಿಯನ್ನು ಮಾಡು ತವಕದಿಂದ ।
ಪದ್ಧತಿ ಪಂಚಮೂರ್ತಿ ಪ್ರತ್ಯೇಕ ಪ್ರತ್ಯೇಕ ತ ।
ತ್ತ ದೇಹದಲ್ಲಿ ವಾಸ ಎರ ಭಾಗದಲ್ಲಿದ್ದ ಆತ್ಮನಾಮಾಂತರ ।
ಸದ್ಗುಣ ಗಣಸಾಂದ್ರ ತುರ್ಯ ಕೃತ್ವಾಸಾ ?ಉ ।
ರದ್ದೆಶಯಲ್ಲಿ ಆತ್ಮ ಪ್ರಾಜ್ಞ ಮೂರ್ತಿ ।
ನಿರ್ಧರ ಕೇಳಿ ಕಡಿಮೆ ನಾಲ್ಕು ಸ್ಥಾನಗಳು ।
ಹೃದ್ಗುಹ ಕಂಠ ಅಕ್ಷಿ ಮೂರ್ಧ್ನಿಭಾಗ ।
ಇದ್ದ ರೂಪಗಳಿಗೆ ನಾರಾಯಣನೆ ತುರ್ಯ ವಾ ।
ಸುದೇವ ವಿಶ್ವ ಸಂಕರುಷಣ ತೈಜಸ ।
ಪ್ರದ್ಯುಮ್ನ ಉರಭಾಗದಲ್ಲಿದ್ದ ಆತ್ಮನೆನ್ನಿ ಅನಿ ।
ರುದ್ಧ ಭಗವಂತ ಪ್ರಾಜ್ಞನೆನ್ನಿ ।
ಈ ಧರೆಯೊಳು ದೇಹ ಧಾರಿಗೆ ಸುಷುಪ್ತಿಯಾ ।
ಸಿದ್ಧ ಮೂರ್ಛಾವಸ್ಥಾ ಸ್ವಪ್ನ ಜಾಗ್ರತ ।
ವಿದ್ಯ ಅಪರೋಕ್ಷಿಯಿಂದ ಚತುರಾವಸ್ಥಿ ಅನಿ ।
ರುದ್ಧಾದಿ ಭಗವದ್ರೂಪ ಪ್ರಾಜ್ಞಾದಿನಾಮ ।
ಮಧ್ವವಲ್ಲಭ ನಮ್ಮ ವಿಜಯ ವಿಠ್ಠಲರೇಯ ।
ಮೂರ್ಧ್ನಿಗ ಮೇಲೆಯಿಪ್ಪ ತುರ್ಯ ಮುಕ್ತಿ ನೇಮಕ ೧

## ಮಟ್ಟತಾಳ

ಲಿಂಗ ಅನಿರುದ್ಧ ಪ್ರಾಕೃತ ಭೌತಿಕ ।
ಹಿಂಗದೆ ನಾಲ್ಕಕ್ಕೆ ಷೋಡಶ ಕಳೆಗಳು ।
ಸಂಗವಾಗಿವೆ ನೋಡು ಕಣ್ಣಿಗೆ ಕಾಣಿಸವು ಪು ।
ಷ್ಪಂಗಳಿಗೆ ಶುದ್ಧ ಗಂಧ ಲೇಪನವಾದಂತೆ ।
ಇಂಗಿತವಾಗಿ ಜಡ ಪ್ರಕೃತಿ ಕಲೆ ।
ಮಂಗಳ ಕಾಂತಿಯಿಂದ ನಾಮಾಂತರ ಭೇದ ।
ಜಂಗಮ ಸ್ಥಾವರಕೆ ನೆಲೆಯಾಗಿಪ್ಪವಯ್ಯಾ ।
ತುಂಗ ವಿಕ್ರಮ ಹರಿ ವಿಜಯ ವಿಠ್ಠಲರೇಯ ।
ಇಂಗಡ ಮಾಡುವ ಗುಣತ್ರಯಗಳ ಬೆರಸಿ । ೨

## ತ್ರಿವಿಡಿ ತಾಳ

ಪ್ರಾಣ ಶ್ರದ್ಧ ರುದ್ರ ಇಂದ್ರಾಗ್ನಿ ವರುಣ ಗ ।
ಜಾನನ ಪ್ರವಾಹ ಪಾವಕ ಪರ್ಜನ್ಯ ಕೃ ।
ಶಾನನ ಮಡದಿ ಮತ್ತೆ ಚಂದ್ರಸುತ ಉಷಾರವಿ ।
ಸೂನು ಪುಷ್ಕರ ಸೋಮ ಹದಿನಾರು ಜನರಾಂಭಿಸಿ ।
ಮಾನಿಗಳಾಗಿಹರು ಗುಣಗಳಲ್ಲಿ ।
ಈ ನಾಲ್ಕು ಸ್ಥಳದಲ್ಲಿ ವಿಚಾರಾಂಶವೆ ಉಂಟು ।
ಜ್ಞಾನಿಗಳು ತಿಳಿದು ನಿತ್ಯದಲ್ಲಿ ।
ಧ್ಯಾನವನ್ನೆ ಮಾಡಿ ಭೂತ ಪ್ರಾಕೃತ ಸಂ ।
ಧಾನಾನಿರುದ್ಧ ಲಿಂಗವಿಡಿದು ।
ನಾನಾ ಪ್ರಕಾರ ಉಪಚಾರಣೆ ಉಪಾಸನ ।
ಪ್ರಾಣಾ ಪ್ರಾಣರ ತನಕಾ ಅಪರೋಕ್ಷದಿ ।
ಮಾಣದೆ ಸಾಮಾನ್ಯ ಜ್ಞಾನ ಭಕುತಿ ಇನಿತು ಪೂಜಿಸಬೇಕು ।
ಶ್ರೀನಾಥ ಪ್ರತಿಮೆ ಬಹುವಿಧ ವುಂಟು ನಿ ।
ಧಾನಿಸು ಪರಮಾತ್ಮ ಪ್ರೇರಣೆಯಂತೆ ।

ಮೇಣಾವತಾರ ಅಂತರ ಬಾಹಿರ ಸರ್ವ ।
ಕಾಣುವ ಬಗೆ ಸಿದ್ಧ ಸಾಧನ ಭೇದ ।
ಆನಂದ ಮೂರುತಿ ವಿಜಯ ವಿಠ್ಠಲರೇಯ ।
ನೀನೆ ಇಂದವನಿಗೆ ನಿಶ್ಚಯ ಮತಿ ಕೊಡುವ । ३

## ಅಟ್ಟತಾಳ

ಮುಕ್ತ ಜಾಗ್ರತೆ ಸ್ವಪ್ನ ಮೂರ್ಛೆ ಸುಷುಪ್ತಿಯು ।
ಉಕ್ತ ಕ್ರಮದಿಂದ ನಿಯಾಮಕನಾಗಿ ।
ನಕ್ತ ಹಗಲು ಬಿಡದಾವವ ಕಾಲಕ್ಕೆ ।
ವ್ಯಕ್ತ ಮಾಡಿಕೊಡುವ ವೈಚಿತ್ರ ಸಂಪೂರ್ಣ ।
ಶಕ್ತ ಸಾರ್ವಭೌಮ ಸತತ ಪ್ರಾಕೃತ ನಿತ್ಯ ।
ಮುಕ್ತಳು ಮುಕ್ತರು ತುರಿಯನ್ನ ಧ್ಯಾನವ ।
ಮಕ್ತಾ ಪ್ರಾಯರು ಬ್ರಹ್ಮ ರುದ್ರ ಇಂದ್ರಾದ್ಯರು ।
ತ್ಯಕ್ತ ಪ್ರಾಯರು ಬ್ರಹ್ಮ ರುದ್ರ ಇಂದ್ರಾದ್ಯರು ।
ತ್ಯಕ್ತ ದೋಷರಾಗಿ ದೇಹದೊಳಿಪ್ಪರು ।
ಉಕ್ತಿಯ ಕೇಳೋದು ಇವೆ ಮೂರ್ತಿಗಳೆಲ್ಲ ।
ಭಕ್ತಿಯಿಂದಲಿ ತಮ್ಮ ಸ್ವದೇಹದಲ್ಲಿ ಆ ।
ಸಕ್ತರಾಗಿ ಧ್ಯಾನವ ಮಾಡಿ ಕೇವಲ ।
ಭಕ್ತ ಜನರು ಸ್ವಪ್ನದಲಿ ಸಾರಿ ಸಾರಿದರು ವಿ ।
ರಕ್ತಿ ಮಾರ್ಗದಿಂದ ರುದ್ರೇಂದ್ರ ಗಣಪರು ।
ಭುಕ್ತಶೇಷರು ಕಾಣೊ ಆ ತರುವಾಯ ಅ ।
ವ್ಯಕ್ತಾವರಣವೆ ಪಂಚಕೋಶದಲ್ಲಿದ್ದ ।
ಭಕ್ತವತ್ಸಲನೈದು ರೂಪವ ಭಜಿಸಿ ಅಭಿ ।
ವ್ಯಕ್ತ ಗುಣಗಳಿಂದ ಅಧಿಕಾರಿಗಳಾಗಿ ।
ಮುಕ್ತಿ ಸಾಧಿಸುವರು ಬಹು ರೂಪಗಳಿಂದ ।

ರಕ್ತ ರಮಣ ನಮ್ಮ ವಿಜಯ ವಿಠ್ಠಲರೇಯ (ನಿಮ್ಮನು) ।
ಮುಕ್ತರ ಮಾಡುವ ಧೇನಿಪ ಭಕ್ತರ ಭಕ್ತಿಯ ಕೈಕೊಂಡು ೪

### ಆದಿತಾಳ

ಪಂಚ ಪ್ರಾಜ್ಞ ಮೂರ್ತಿಗಳ ಉಪಾಸನೆಯ ಮಾಡು ।
ಪಂಚ ಸ್ಥಾನದಲ್ಲಿ ಭೂತಾದಿಯಲ್ಲಿ ತಿಳಿದು ।
ಪಂಚಸೂತ್ರ ರೂಪಗಳು ಅನುದಿನ ದೇಹದೊಳು ।
ಸಂಚಾರವನ್ನೆ ಮಾಳ್ಪ ಸಾಕಲ್ಯವನ್ನೆ ಗ್ರಹಿಸು ।
ಕಿಂಚಿತ್ಕಾಲವಾದರು ಆತ್ಮನ್ನ ಮರಿಯದೆ ಸ ।
ಕಿಂಚನನಾಗು ಮಹ ಜ್ಞಾನದಿ ವಿತ್ತದಿಂದ ।
ಮುಂಚಿನ ಸಂಸ್ಕಾರ ಕೆಡದಂತೆ ಪ್ರವರ್ತಿಸು ।
ಪಂಚ ಮುಖಾದ್ಯರು ಸರ್ವ ಪ್ರಾಜ್ಞನ ಭಜಿಸಿ ।
ಅಂಚ ಜ್ಞಾನದಿಂದ ತತ್ತ ತತ್ವಾದಲ್ಲಿ ಪ್ರ ।
ಪಂಚ ಹಿಂದುಗೈಸಿ ಸುಖಿಸುವರು ಚನ್ನಾಗಿ ।
ಚಂಚಲ ಬುದ್ಧಿಯ ಬಿಡು ದೇಹ ದೊಳಗೆ ನಿತ್ಯ ।
ಮಿಂಚುವ ದೇವನ್ನ ಸಕಲ ಠಾವಿಲಿ ನೋಡು ।
ಕೊಂಚವಲ್ಲವು ಕಾಣೊ ಸುಮ್ಮನೆ ದೊರೆವುದಲ್ಲ ।
ಹಿಂಚಿನ ಪುಣ್ಯದಿಂದ ಸಿದ್ಧಿಸುವದು ಇಂದು ।
ವಂಚಕರೊಡನಾಡಿ ವಾರ್ಧಿಕನಾಗದಿರು ।
ಸಂಚಿತಗಾಮಿ ಬಿಡದು ಈ ಪರಿ ನೆಸಗದಿರೆ ।
ಪಂಚ ವರ್ಣವಾಹನ್ನ ವಿಜಯ ವಿಠ್ಠಲನ್ನವಿ ।
ರಂಚಿ ಪದಸ್ಥನೊಳು ಧ್ಯಾನಿಸು ಮುನಿಯಾಗಿ । ೫

### ಜತೆ

ಅತೀಂದ್ರತಿ ಜ್ಞಾನದಲಿ ದೇಹದೊಳಗೆ ಇದ್ದ ।
ಚತುರ ಮೂರುತಿ ಪ್ರಾಜ್ಞ ವಿಜಯ ವಿಠಲನ ನೋಡು ೬

## ೩೪

## ಧ್ರುವತಾಳ

ಚಿಂತನೆ ಮಾಡು ಮನವೆ ಚಿನ್ಮಯ ದೇವನ್ನ ಏ ।
ಕಾಂತದಲಿಯಿದ್ದು ಎಲ್ಲಕಾಲ ।
ಸಂತರ ಒಡಗೂಡಿ ಸಾರಿಸಾರಿಗೆ ನಿನ್ನ ।
ಅಂತರಂಗದಲ್ಲಿ ಆಲೋಚಿಸಿ ।
ನಿಂತಲ್ಲಿ ಕುಳಿತಲ್ಲಿ ನಾನಾ ವ್ಯಾಪಾರದಲ್ಲಿ ।
ಚಿಂತಿಸು ಶ್ರೀಹರಿಯಾನಂತ ರೂಪ ।
ಇಂತೆಂತು ನೋಡಿದರಂತೆ ತೊರುತಲಿಪ್ಪ ।
ಮಂತ್ರ ತಂತ್ರಕ್ಕೆ ಶಿಲುಕನು ಭಕ್ತಿಗೊಶನೊ ।
ಸಂತತ ನಿರ್ದೋಷ ಭಕ್ತವತ್ಸಲ ಕರುಣಿ ।
ಅಂತಕನಂತಕವು ಉಭಯ ಜೀವಿಗಳಿಗೆ ।
ಸಂತೋಷದಲಿಚರಿಯಾ ಮಾತ್ರಾ ಲೀಲಾ ।
ಕಂತು ಕೋಟಿ ಲಾವಣ್ಯಮಿಗೆ ಶೋಭಿಸುವ ಆ ।
ದ್ಯಂತ ಕಾಲರಹಿತ ತ್ರಿಗುಣಾತೀತ ।
ಸಂತಾಪನಾಶ ಒಂದಾರಂಭಿಸಿಕೊಂಡ ।
ನಂತ ಸೂರ್ಯ ಪ್ರಕಾಶ ತರತಮ್ಯದಿ ।
ತಂತುನಾಳದಲಿಂದ ದಿಗ್ದಂತಿ ಬಿಡಿಸಿಕೊಂಡು ।
ನಿಂತಂತೆ ನಿಂತುಕೊಂಡಿಪ್ಪ ಮಹಿಮ ।
ಎಂತು ಭಾವಿಸಲು ಉಪಾಸ್ತಿಯ ಕೊಡುವ ಶ್ರೀ ।
ಕಾಂತನು ಪ್ರಸಿದ್ಧದಿಂದ ತಾನೆ ।
ಚಿಂತಾಯಕ ನಮ್ಮ ವಿಜಯವಿಠ್ಠಲರೇಯ ।
ಮುಂತಿ (ತೆ) ನಲಿದಾಡುವ ಭಾಗ್ಯವ ಬೇಡು ನೋಡು ೧

### ಮಟ್ಟತಾಳ

ಕ ಮೊದಲು ಕ್ಷಾ ಕಡೆ ಮೂವತ್ತೈದು ।
ಈ ಮಹವರ್ಣಗಳು ಇದರವಿವರ ತಿಳಿವದು ।
ಅ ಮರಿಯಾದಿಗಳು ಪದಿನಾರು ಉಂಟು ।
ವ್ಯೋಮ ವ್ಯಾಪಿಸಿದಂತೆ ಸರ್ವದ ವರ್ಣಗಳು ।
ಸಮಸ್ತ ಬಗೆಯಿಂದ ವ್ಯಾಪ್ತವಾಗಿವೆ ನೋಡಿ ।
ಸಾಮ ಮಿಗಿಲಾದ ಶಾಸ್ತ್ರ ವೈದಿಕ ಶಬ್ದ ।
ಭೂಮಿಯೊಳಗಾಡುವ ಲೌಕಿಕ ಶಬ್ದಗಳು ।
ಈ ಮಹವರ್ಣದಲಿ ಪ್ರವರ್ತಕವಲ್ಲದಲೆ ।
ಕಾಮಿಸಿದರೆ ಒಂದು ಪ್ರಯೋಗ (ಜನ) ವಿನ್ನಿಲ್ಲ ।
ಭೂಮ ಭೂತೇಶ್ವರ ವಿಜಯವಿಠಲರೇಯನ
ನಾಮ ಮೂರ್ತಿಗಳೆಂದು ಚಿಂತಿಸು ಪ್ರಣವದಲಿ ೨

### ತ್ರಿವಿಡಿತಾಳ

ಕಾವೊಂದು ಗುಣಿಸಿದರೆ ಹದಿನಾರು ಬಗೆವುಂಟು ।
ಆವಾವ ಕಾಲಕ್ಕೆ ನೋಡಿದರು ।
ಭಾವಿಸು ಕ ಕಿ ಕು ಕೆ ಕೈ ಕೊ ಕೌ ಕಂ ।
ಈ ವಿಧ ಹ್ರಸ್ವಯಿದರಂತೆ ನಿಜವೆಂದು ।
ಕೋವಿದನಾಗಿ ನೀ ತಿಳಿಯಬೇಕು ।
ಕಾ ವರಣವರೂಪದಿ ಕಪಿಲಾದಿ ಹದಿನಾರು ।
ಈ ಒಳಗಿನ ಹದಿನಾರುರೂಪ ।
ದೇವನ್ನ ನಾಮಗಳು ಅಜಾದಿಗಳ ಸಂಖ್ಯ ।
ಮೂವತ್ತೆರಡು ಭಗವದ್ರೂಪಗಳು ।
ಪಾವನ ಮೂರುತಿ ವಿಜಯ ವಿಠ್ಠಲರೇಯ ।
ಆವಾಗ ವರ್ಣಾಧಿಷ್ಟಾನದಲ್ಲಿಯಿಪ್ಪ ೩

## ಅಟ್ಟತಾಳ

ಇದರ ವಿಹಿತವೊಂದುಂಟು ವರಣಕ್ಕೆ ।
ಅದರಂತೆ ಕ ಚ ಟ ತ ಪ ಯ ಶ ವ ।
ರ್ಗದಲಿ ಇಣಿಸಿ ಕ ಷ ಮಿಳಿತವಾದ ।
ಇದನ್ನೆಲ್ಲ ಕೂಡಿಸಿ ಪಂಚತ್ರಿಂಶತಿ ಯಾ \
ದದು ಕಾಣೊ ಇದರೊಳು ಅ ಆ (ಇ) ವುಂ ಎಂಬ ।
ಹದಿನಾರು ಇಡಲಾಗಿ ಕ ಅಃ ವಾಹೆದು ।
ಇದನ್ನೆಲ್ಲ ವೊಂದೊಂದು ಏಕಾಕ್ಷರದಿಂದ ।
ಪದುಮ ನಾಭನು ಕರೆಸಿಕೊಂಬನು ಕೇಳಿ ।
ಆದೆ ಆದೆ ನಾಮ ಮತ್ತದೆ ಅದೆ ರೂಪದಿ ।
ಒದಗಿ ಎಣಿಸಲಾಗಿ ಮೂವತ್ತೆರೆಡು ನಾಮ ।
ಸದಮಲವಾಗಿವೆ ಅರವತ್ತು ನಾಲಕು ।
ಮೊದಲಾರಂಭಿಸಿ ಮೂವತ್ತೈದಕ್ಕೆ ನೋಡು ।
ಮುದದಿಂದ ಗುಣಿಸಲು ವೊಂದೊಂದು ವರ್ಣಕ್ಕೆ \
ಅದೆ ಪ್ರಕಾರದಲಿ ಅರವತ್ತು ನಾಲ್ಕುವುಂಟು ।
ಅಧಿಕಾರತನ ಭೇದ ಧ್ಯಾನ ಮಾಡುವುದಕ್ಕೆ ।
ಪದುಮಗರ್ಭನೈಯ್ಯ ವಿಜಯ ವಿಠ್ಠಲರೇಯ ।
ಪದವಿಯ ಕೊಡುವನು ಈ ಪರಿ ಕೊಂಡಾಡೆ ೪

## ಆದಿತಾಳ

ಆವನಾದರು ಹಳಿಯಲಿ ಉಗುಳಲಿ ।
ಆವನಾದರು ಬೈಯ್ಯಲಿ ಕಾಯಲಿ ।
ಆವನಾದರು ಹೊಡೆಯಲಿ ತಡೆಯಲಿ ।
ಆವನಾದರು ಪೊಗಳಲಿ ಅಟ್ಟಲಿ ।

ಆವನಾದರು ಉಣಿಸಲಿ ಉಡಿಸಲಿ ।
ಆವನಾದರು ಛೀ ಛೀ ಎನಲಿ ।
ಆವನಾದರು ಥೂ ಥೂ ಅನಲಿ ಆವನಾದರು ಭಂಗಿಸಲಿ ಮ ।
ತ್ತಾವನಾದರು ಹಿಂಗಿಸಲಿ ।
ಆವನಾದರು ಯೇನನಲಿ ।
ಆವನಾದರೋ ಈ ವರ್ಣಗಳು ಭಗವನ್ನಾಮಗಳೊ ।
ಜೀವನ ಮುಕ್ತನು ಈ ವಿಧದಿ ತಿಳಿದವನು ।
ನೋವು ನೋವುಗಳಲ್ಲಿ ಪಾವನವಾದ ಭಕುತಿಯಲಿ ಸ್ವ ।
ಭಾವಿತ ನೀನಾಗೊ ಜ್ಞಾನಿ ನೀನಾಗೊ ।
ಯಾವತ್ತು ಇಂದ್ರಿಯಗಳ ವ್ಯಾಪಾರಸೇವೆ ಶ್ರೀಹರಿಗೆನ್ನು ।
ತ್ರಿವಿಧ ಜೀವರು ಇದನೆ ತೊರೆದು ಮ ।
ತ್ತಾವದು ಆಡುವರೊ ವರ್ಣಗಳಿಲ್ಲದಲೆ ।
ದೇವದೇವೇಶನ್ನ ಒಲಿಸಬೇಕಾದರೆ ।
ಈ ಉಪಾಯವೆ ಬೇಕು ಎಲ್ಲಿದ್ದರು ಕೇಳು ।
ಕಾವ ಜನಕ ನಮ್ಮ ವಿಜಯ ವಿಠ್ಠಲರೇಯ ।
ಆವಾವ ವರ್ಣಗಳಂತೆ ಒಳಗಿದ್ದು ।
ಕಾವನು ಶರಣರನು ಒಡನೊಡನೆ ಬರುವ ೫

## ಜತೆ

ಅಕ್ಷರಾಕ್ಷರದಿಂದ ಭಗದನ್ನಾಮವೆ ಚಿಂತಿಸು ।
ಅಕ್ಷರ ಕ್ಷರ ಪುರುಷ ವಿಜಯವಿಠ್ಠಲ ಸುಳಿವ ೬

## ೩೫

## ಧ್ರುವತಾಳ

ಚೇತನಾಚೇತನಾಂತರ್ಗತ ಭಗವದ್ರೂಪ
ಚಾತುರ್ಯದಿಂದ ಉಂಟು ಅಣು ಮಹತ್ತು
ಆತುಮದೊಳು ನೆನೆಸಿ ನಾನಾ ಬಗೆಯಿಂದ
ಗಾತುರ ಇಂದ್ರಿಯಂಗಳ ಕಾರ್ಯ ತಿಳಿದು
ಭೌತಿಕ ನೆಚ್ಚದಿರು ಕಾಯ ನಿಂದಿರದು ಜೀ
ಮೂತ (ಭವ) ಛಾಯವೆನ್ನು ಇಹದ ಸೌಖ್ಯ
ಮಾತು ಈಪರಿ ತಿಳಿದು ಮುದದಿಂದ ಪುಣ್ಯಕ್ಕೆ ಸಂ
ಕೇತ ಮಾಡುವೆ ಮಾಳ್ಪ ಮಂತ್ರಗಳಿಗೆ
ಶ್ವೇತದ್ವೀಪವಾಸಿ ವಾಸುದೇವ ಮುಖ್ಯ
ವಾತ ಖದ್ಯೋತ ಗುರು ಇವರಲ್ಲಿಟ್ಟು
ಆ ತರುವಾಯ ತನ್ನ ಹೃತ್ಕಮಲದಲ್ಲಿದ್ದ
ಶ್ರೀ ತರುಣೇಶನ್ನ ಧ್ಯಾನಗೈದು
ಈತನು ಮಧ್ಯದಲ್ಲಿ ಅನಂತ ಅಂಶಾತ್ಮಕ
ಆತನ್ನ ತಂದು ಏಕ ಚಿಂತನೆಗೈದು
ವಾತ ಸ್ಪರಶವಿಲ್ಲದ ದೀಪದಂತೆ ಕುಳಿತು
ಜ್ಞಾತಾನುಷ್ಠಾನದಿಂದ ಗಮನಾಗಮನವ ನೋಡು
ಕೌತುಕವೆನಿಸುತಿದೆ ಈ ಮಂತ್ರವೊ
ಪೋತತನಾರಭ್ಯ ಯೌವನ ಜರಠವಿಡಿದು
ಪ್ರೇತ ಯಾತನಾ ದೇಹ ನರಕ ಸ್ವರ್ಗ
ಜ್ಯೋತಿರ್ಮಯ ಶರೀರ ಪುನರ್ಜನನ ಮರಣ
ಈ ತೆರದಲ್ಲಿ ಬಲು ಜನುಮ ಬರಲು

ಭೂತದೊಳು ನಾಲ್ಕು ಎಂಭತ್ತು ಲಕ್ಷಯೋನಿ
ಜಾತನಾದ ಕಾಲಕ್ಕೂ ಮೊಳಗಿಪ್ಪದು
ಭೂತ ಕೊಡುವುದಿದು ಅಪ್ರಯತ್ನ ಮಂತ್ರ
ತಾ ತೋರ ಗೊಡದಯ್ಯಾ ಅಜ್ಞಾನಿಗೆ
ಪ್ರಾತಃಕಾಲಾರಭ್ಯ ಅಪರೋದಯ ಪರಿಯಂತ
ಆತುಮದೊಳು ಸಿದ್ಧಾ ಶ್ವೇಚ್ಛಾವೃತ್ತಿ
ಜ್ಞಾತ ಕಾಲಾದಿಯಿಂದ ಗತ ಜನ್ಮಗಳು ಮಿಶ್ರ
ಮಾತೃಗರ್ಭಾದಿ ಸ್ಥಾನಾ ಶೇಷಾರಬ್ಧಾ
ಧೌತವಾಗುವ ತನಕ ಇದೆ ಪ್ರಾಣಮಂತ್ರವೆಂದು
ಪ್ರೀತಿಯಿಂದಲಿ ಜಪಿಸು ಧ್ಯಾನೋಕ್ತದಿ
ಪಾತಕ ನಿನಗಿಲ್ಲ ಕಾಲಕಾಲಕ್ಕೆ ಪುಣ್ಯ
ವ್ರಾತ ಒಂದೊದಗುವುದು ಆನಂದಕ್ಕೆ
ಶಿತಾಂಶುರವಿ ಹಸ್ತ ವಿಜಯ ವಿಠಲರೇಯ
ಭೀತರಹಿತನ್ನ ಮಾಳ್ಪ ಮಂತ್ರಾನುಸಂಧಾನಕ್ಕೆ ೧

## ಮಟ್ಟತಾಳ

ಮಂತ್ರ ಮಾಡುವ ಬಗೆ ತಿಳಿವುದು ಚನ್ನಾಗಿ
ತಂತ್ರಸಾರದಿಂದ ಅಂಗಾಂಗುಲಿನ್ಯಾಸ
ಸಂತೋಷದಲ್ಲಿ ಮಾಡು ಧೃಡತರ ಮನಸಿನಲಿ
ಅಂತರಂಗದಲಿ ಸರ್ವ ರೂಪಾತ್ಮಕ
ಮಂತ್ರದೇವತೆ ಮುಖ್ಯ ಪ್ರಣವ ಮೂರುತಿಯ ಏ
ಕಾಂತದಲ್ಲಿ ಹೃತ್ಕಮಲ ಕರ್ಣಿಕೆ ಮಧ್ಯ
ಇಂತಿಹ ಕಮಲಕ್ಕೆ ಚತುರಷ್ಟ ದ್ವಾದಶ
ಮುಂತೆ ಚತುರ್ವಿಂಶತಿ ಐವತ್ತೊಂದು
ಚಿಂತಿಸು ದಳಸಂಖ್ಯೆ ತ್ರಿಕೋಣ ಬೀಜಗಳು
ಯಂತ್ರವಾಹಕ ನಮ್ಮ ವಿಜಯ ವಿಠಲ ಸ್ವ
ತಂತ್ರ ಪುರುಷ ಸರ್ವ ಮಂತ್ರ ನಿಯಾಮಕನೊ ೨

## ತ್ರಿವಿಡಿತಾಳ

ಮನವೆ ಲಾಲಿಸಿಕೇಳು ಲಬ್ಧ ಮಂತ್ರಕೆ ಜಿತಾ
ಸನನಾಗು ಜಯವೆಂದು ಹರಿಯ ಸ್ತುತಿಸಿ
ಎಣಿಕೆಯಿಂದಲಿ ನೋಡು ಒಂದೊಂದು ಮಂತ್ರಕ್ಕೆ
ಘನವಾಗಿ ವರ್ಣಗಳು ಇಪ್ಪವೇಸೂ
ಎಣಿಸು ಒಂದೊಂದು ದಳದಲ್ಲೊಂದೊಂದು ವರ್ಣ
ಮಿನುಗುವ ಮತಿಯಿಂದ ಇಡಲಾಬಟ್ಟು
ಇನಿತು ಗ್ರಹಿಸು ಇವಕೆ ಒಂದೊಂದು ಹರಿರೂಪ
ಚಿನುಮಯ ಮೂರುತಿ ಸರ್ವಾಭಿನ್ನ
ಗುಣವಂತ ಮಂತ್ರಾತ್ಮಕನನ್ನು ಕೂಡಿಸಿ
ಮಣಿಗಣದಿಂದ ಜಪಿಸು ವಾಗಲಿ
ಅನುಭವವಿರಲಿ ಮಂತ್ರದೇವತೆ ಸಹಿತ
ಕ್ಷಣ ಕ್ಷಣಕೆ ನಿನ್ನೊಳು ವಲಯಾಕಾರ
ಗುಣಿಸು ವರ್ಣಾಖ್ಯರ ಆದ್ಯಮೂರುತಿಯಲ್ಲಿ
ಗಣನೆ ಮಾಡುತ ನಿತ್ಯ ಜಿಹ್ವಾಗ್ರದಿ
ಕೊನೆಯಿಂದ ವಾಕ್ವಯೋಗ ಮಾಳ್ಪದರೊಳು
ಮಣಿಯಿಂದ ಮಣಿಗೆ ಬೆರಳ ಚಾಚುವುದು
ಅನ ಭಾರತಿ ಪ್ರೀಯ ವಿಜಯ ವಿಠಲ ಸ
ದ್ಗುಣಿ ಮಣಿ ಖಣಿಯೆಂದು ಅನುದಿನ ನೆನೆ ನೆನೆ ೩

## ಅಟ್ಟ ತಾಳ

ಇದೆ ಮಂತ್ರ ಸಾರ್ಥಕ ಇದೆ ಮಂತ್ರಸಿದ್ಧಿಯೊ
ಇದೆ ಇದೆ ಮಂತ್ರವೊ ಇದೆ ಪ್ರಕಾರದಿಂದ ತತ್ತತ್ತು ಮಂತ್ರವ

ವಿಧಿಯಿಂದ ಜಪಿಸುವುದು ಹೃದಯದಲ್ಲಿ ಇಟ್ಟು
ಪದೆ ಪದಗೆ ಬಲುವೊದಗಿ(ರಿ) ಮಾಡುವ ದೇಕೆ
ಮುದ ಭಕುತಿಯಿಂದಲಿದರಂತೆ ಯೊಂದೆ ಸಾ
ರಿದರೆ ಸತ್ಪುಣ್ಯದ ಉದಧಿ ಸೂಸುವದಯ್ಯಾ
ಮಧು ಸೂದನ ಹರಿ ವಿಜಯ ವಿಠಲರೇಯ
ಪ್ರಧಾನವ ಕೊಡುವನೋ ಒಂದೇಯುಚ್ಚಾರಣೆಗೆ ೪

## ಆದಿತಾಳ

ಮಧ್ಯ ಮೂರುತಿ ಸುತ್ತ ಸೇವ ರೂಪದಿಂದ
ಪೊದ್ದಿಕೊಂಡಿಪ್ಪವು ಸ್ವ ಮೂರ್ತಿ ಪರಿವಾರ
ಸಿದ್ಧವಿದುದೆ ಕೇಳು ಜಪಿಸಿ ತಿಳಿಯಬೇಕು
ಹೃದ್ಗುಹದಲ್ಲಿ ಇನಿತು ಚಕ್ರಾಬ್ಜ (ಕಾ)ಮಂಡಲ
ಪದ್ಮ ಸುದರ್ಶ ನದಳದ ವಿಚಾರ ತಿಳಿದು
ಪದ್ಧತಿ ತಪ್ಪದಲೆ ಪರಿಭ್ರಮಣವಾಗುವುದು
ಪದ್ಮಬಾಂಧವ ನಮ್ಮ ವಿಜಯ ವಿಠ್ಠಲರೇಯ
ಉದ್ಧರಿಸುವ ಬಿಡದೆ ಉನ್ನತ ಗತಿಯಿತ್ತು ೫

## ಜತೆ

ಜನುಮದೊಳಗೆಯೊಮ್ಮೆ ಈ ಪರಿ ಜಪಿಸಲು
ಗುಣತ್ರಯ ನಾಶನ ವಿಜಯ ವಿಠಲ ಪೊಳೆವ ೬

## ೩೬

### ಧ್ರುವತಾಳ

ಜಡ ಕೇವಲತರ ಸೂಕ್ಷ್ಮ ಪ್ರಕೃತಿಯಿಂದ ।
ಬಿಡದೆ ಬದ್ಧವಾದ ಜೀವರ ಜೀವರಾಶಿ ।
ಕೆಡಲುಂಟೆ ಎಂದಿಗೂ ಅಚ್ಛೇದ್ಯ ಅಭೇದ್ಯವೆಂಬೊ ।
ನುಡಿ ಧೃಡವಾಗಿಪ್ಪದು ಸರ್ವಕಾಲ ।
ಪೊಡವಿಯೊಳಗೆ ಜೀವ ಪುಟ್ಟುವ ಬಗೆ ಕೇಳು ।
ಅಡಿಗಡಿಗೆ ಸಂಸಾರದಲ್ಲಿ ತಂದು ।
ಇಡುವುದಕ್ಕೆ ಮುಖ್ಯ ಹರಿಯೊಬ್ಬ ಸ್ವಾತಂತ್ರ ।
ತಡಿಯದೆ ಸಿರಿ ದೇವಿ ಆತರುವಾಯ ।
ಜಡಜ ಸಂಭವ ವಾಯು ವಾಣಿ ಭಾರತಿಗಳಿಗೆ ।
ಎಡಿಗೆಡಿಸಿದು ಲಿಂಗ ಜ್ಞಾನಾಂಶಕ್ಕೆ ।
ಮೃಡ ಮಿಕ್ಕಾದವರಿಗೆ ಜ್ಞಾನಕ್ಕೆ ತಿರೋಭಾವ ।
ಕೊಡುವಳು ದೇವಿ ಮೂರು ರೂಪದಲ್ಲಿ ।
ಕಡೆ ಭಾಗ ದುರ್ಗಾನಾಮ ಭೂ ದೇವಿ ಎಂಬ ನಾಮ ।
ನಡುವೆ ಎಣಿಸು ಕೊನಿಗೆ ಶ್ರೀದೇವಿಯು ।
ಕಡು ಸಮರ್ಥಳು ಸೃಷ್ಟ್ಯಾದ್ಯಷ್ಟ ಕರ್ತೃತ್ವವು ।
ಒಡಿಯಾನಿಂದಲೆ ತಾನೆ ಮಾಡುವಳು ।
ಬಿಡದೆ ಸುತ್ತಿದ ಲಿಂಗ ಮೂರು ಪರಿಚ್ಛೇದ ನಿ ।
ಬ್ಬಿಡಿಯಾಗಿಪ್ಪದು ಅವಕಾಶವ ।
ಕೊಡುತಲಿ ಜೀವಿಗಳ ಅಂಶ ಪ್ರಕಾಶಕ್ಕೆ ।
ಒಡನೊಡನೆ ತನ್ನ ಕಾಂತಿ ಮಿಳಿತವಾಗಿ ।
ನಡೆವ ನುಡಿವುದೆಲ್ಲ ಭವಕೆ ಕಾರಣವಾಗಿ ।

ಕಡಲ ಶಯನನಿಂದ ವಿಸ್ತಾರವೊ ।
ಸಡಲಿ ಪೋಗುವುದಲ್ಲ ವಿರಜಾ ಸ್ನಾನದ ತನಕ ।
ಎಡೆಬಿಡದೆ ಇಪ್ಪುದು ಇದರ ವರ್ನ ।
ನುಡಿವೆನು ನೀಲ ಪದ್ಮರಾಗ ವಜ್ರದ ತೆರದಿ ।
ಅಡಿ ಮೇಲಾಗಿ ಉಂಟು ಒಂದಕ್ಕೊಂದು ।
ಬಡವರಾಧಾರಿ ನಮ್ಮ ವಿಜಯ ವಿಠ್ಠಲ ಅವ ।
ಘಡವನೆ ದಾಟಿಸುವ ಈ ಪರಿ ತಿಳಿದವಗೆ ೧

## ಮಟ್ಟತಾಳ

ತ್ರಿವಿಧಾತ್ಮಕವಾದ ಲಿಂಗ ದೇಹದಿಂದ ।
ದೀವಿಗೆ ಕುಡಿ ವೇಗವುದರಿದಂತೆ ಬಿದ್ದು ।
ಶ್ರೀವರನೀಕ್ಷಿಸಲು ಅತಿ ಪರಮಾಣುಗಳು ।
ಆವಾವ ಗಣದಿಂದ ಶಂಕೆ ಯುಕ್ತವಾಗಿ ।
ಸಾವಿರ ಶತ ಹತ್ತುವುದರಿಂದ ಒಂದಾಗಿ ।
ಕೋವಿದರು ಕೇಳಿ ಗುಣ ವೈಷಮ್ಯವಿದು ।
ಗೋವರ್ಧನೋದ್ಧರಣ ವಿಜಯ ವಿಠ್ಠಲರೇಯ ।
ಪಾವನ ಮೂರುತಿ ಅಲ್ಲಲ್ಲೆ ಇರುತಿಪ್ಪ ೨

## ತ್ರಿವಿಡಿ ತಾಳ

ಬಿಂದು ಬಿಂದುಗಳಲ್ಲಿ ಪರಮಾಣು ಸಮೇತ ।
ಒಂದೊಂದು ಸೂಕ್ಷ್ಮ ತತ್ವಗಳಿಂದಲಿ ।
ಮುಂದೆ ಕಾರ್ಯಗಳಯ್ಯ ಅನಿರುದ್ಧ ಶರೀರ ।
ಪೊಂದಿಕೊಂಡಿಪ್ಪದು ಲಿಂಗದಂತೆ ।
ಹಿಂದಣಾಗಮ ಉಂಟು ಪ್ರಾಂತ್ಯಭಾಗಕೆ ಸ ।
ಬಂಧವಾಗಿಪ್ಪವು ಪ್ರಕೃತಿ ಎರಡು ।

ಕುಂದದೆ ಪೆಸರುಂಟು ಜೀವ ಪರಮಾಚ್ಛಾದಿಕಾ ।
ವೆಂದೆಂಬ ನಾಮಗಳು ಜಡತಮ ವರ್ನ ।
ಸಂದಿದೆ ಲಿಂಗ ಅನಿರುದ್ಧ ಮಧ್ಯ ।
ಬಂಧಕಾ ದೃಷ್ಟಜನ ಅಲ್ಲಿ ಇಲ್ಲ ।
ಇಂದಿದೆ ಅಜ ವಾಯು ಇವರ ಹೆಂಡರು ಆ ।
ನಂದಾಭಿಮಾನಿಗಳು ಲಕುಮಿ ನಿತ್ಯ ।
ಸಂದೇಹಗೊಳ ಸಲ್ಲ ಅನಿರುದ್ಧ ದೇಹದಲಿ ।
ಬಂದು ಪ್ರವೇಶವಾದರು ತತ್ವರು ।
ಒಂದೊಂದು ಪ್ರಕೃತಿಯು ಇದ ಕಾವರ್ಕವಾಗಿ ।
ಛಂದದಿಂದಲಿ ಇರೆ ಇಲ್ಲಿ ದೃಷ್ಯ (ದುಷ್ಯ)
ಮಂದಿಗಳಿಬ್ಬರು ಸ್ತ್ರೀ ವಾಚಕರಯ್ಯ ।
ಅಂದಕೆ ಪಾರಭಿಮಾನರಾಗಿ ।
ಸುಂದರ ಗುಣವುಳ್ಳ ವಾಣಿ ಭಾರತಿ ಗಿರಿಯ ।
ನಂದನೆ ಶಚಿಯಿವರು ಪ್ರೇರಕರೊ ।
ಹಿಂದಿನ ಪರಮೇಷ್ಠಿ ಕಲ್ಪದಲಿ ಆ ಗುಣ ।
ದಿಂದ ಈರ್ವರು ಸಾಧನ ಮಾಡಿ ಬಂದು ।
ದ್ವಂದ್ವಾಚ್ಛಾದಕದಲ್ಲಿ ಸ್ತ್ರೀಯರು ।
ನಿಂದು ಜೀವರಿಗೆ ಪ್ರತಿಕೂಲರವರು ।
ಇಂದ್ರ ಯೋನಿ ವಿಡಿದು ಕರ್ನಿಕೆ ಪರಿಯಂತದಲ್ಲಿ ।
ಒಂದೊಂದು ಅಣು ಮಾತ್ರ ಅಧಿಕವಾಗಿ ।
ಸಂದೇಹ ಬಡಿಸುವರು ಉತ್ತಮರ ಪ್ರೇರಣೆ ।
ಯಿಂದ ನೀಚರಿಗೆ ಕೇವಲ ಉಪಹತಿ ।
ಕಂದರ್ಪ ಪಿತ ನಮ್ಮ ವಿಜಯ ವಿಠ್ಠಲರೇಯ ।
ವೃಂದಾವನ ಪ್ರೀಯ ವೈಕುಂಠ ರಮಣ । ೩

## ಅಟ್ಟತಾಳ

ಇದು ಮೂಲಕಾರಣ ಅವಿದ್ಯ ಧರ್ಮವು ।
ಇದು ಕಲಿಯಿರಲಿಕ್ಕೆ ಆವಾಸ ಸ್ಥಾನವಾಗಿದೆ ।
ಇದು ಮಹ ಪ್ರಬಲವು ಸೂತಕ ಪ್ರಾರಬ್ಧ ।
ಒದಗಿ ಬಂದಾಗಲು ಕಲಿಯ ಒಡಗೂಡಿ ।
ಅಧಿಕ ಅಧಿಕವಾಗಿ ವ್ಯಥೆ ಬಡಿಸುವದು ।
ಮುದದಿಂದ ಬೊಮ್ಮಾಂಡ ಬಾಹಿರದಲಿ ಇದ್ದ ।
ತ್ರಿದಶರಲ್ಲಿ ಇವರ ಕಾರ್ಯವೆ ಕೊಳ್ಳದು ।
ಪದುಮ ಕಲ್ಪದಲ್ಲಿ ಪದುಮಜನಿಂದ ಪು ।
ಟ್ಟಿದ ಜೀವರಾಶಿಗೆ ವ್ಯಥೆ ಕಾರಣವೆನ್ನಿ ।
ಇದಕಿಂತ ಮೇಲವತಾರ ಧರ್ಮದಲ್ಲಿ ।
ತದುಪರಿ ಮನುಜರಿಗೆಂತು ಪೇಳುವದೇನು ।
ವಿಧಿ ಪಿತ ವಿಜಯವಿಠ್ಠಲರೇಯನ ಲೀಲೆ ।
ಅದು ಭೂತವಾಗಿದೆ ತುತಿಸಬಲ್ಲವರಾರು ೪

## ಆದಿತಾಳ

ಪ್ರತಿ ಪ್ರತಿ ಕಲ್ಪವಾಗಿ ಪ್ರತಿ ಪ್ರತಿ ಯೋಗ್ಯರಲ್ಲಿ ।
ಪ್ರತಿ ಪ್ರತಿ ಜೀವದ್ವಯ ಖತಿಗೊಳಿಪರು ಗತಿಗೆ ।
ಸತತ ಈ ಪರಿಯುಂಟು ಹಿತ ವಿಶೇಷವುಳ್ಳರೆ ।
ಮತಿವಂತರು ಪೇಳುವುದು ನುತಿಸುವೆ ತಲೆಬಾಗಿ ।
ಕ್ಷಿತಿಯ ಮಾನವ ಬಹು ಶ್ರುತಿಯಿಂದ ಬಲು ವೇಗ ।
ಗತಿಗೆ ಸಾಧನ ಮಾಡುತ ಮುಕ್ತನಾಗುವೆ (ವ) ।
ಪತಿತ ಪಾವನ ಸ್ವಾಮಿ ವಿಜಯವಿಠ್ಠಲರೇಯ ।
ಚತುರ ಮೂರುತಿ ತನ್ನ ಇಚ್ಛಾವ [ತಿ]ಸುತಿಪ್ಪ ೫

## ಜತೆ

ಜೀವಕೆ ಪ್ರತಿಬಂಧವಾಗಿದ್ದ ಜನರಿವರು ।
ದೇವೇಶ ವಿಜಯ ವಿಠ್ಠಲನಿಂದ ತೊಲಗುವರು ॥

## ೩೭

## ಧ್ರುವತಾಳ

ಜೀವ ಅಚ್ಛೇದ್ಯಾಭೇದ್ಯ ತೋಯ ಗರಳಶಸ್ತ್ರ
ಪಾವಕ ಮಿಗಿಲಾದ ಉಪಹತಿಯಿಂದ
ಸಾವಿಲ್ಲ ಸಾವಿಲ್ಲ ಆವಾವ ಕಾಲಕ್ಕೆ
ಪಾವನ್ನ ವಾಗಿಪ್ಪದು ಪರಮ ಸೂಕ್ಷ್ಮ
ಆವಿರಾನಂದ ಭಾವ ಭರಿತವಲ್ಲದೆ ಇದಕೆ
ನೋವಾಗದು ಕಾಣೊ ನಿಜರೂಪದಿ
ತ್ರಿ ವಿಕಾರದಿಂದ ಪ್ರವೃತ್ತಿ ಮಾರ್ಗ ಕಾಣೊ
ಈ ವಿಧ ತಿಳಿಯೋದು ಸತ್ವಂಥಕ್ಕೆ
ಜೀವಾಂಗುಟಾಗ್ರ ಮೂರ್ತಿ ಜೀವಾಂಗುಟ ಮೂರ್ತಿ ಈ
ಜೀವದಾಕಾರ ಮೂರ್ತಿ ಪುರುಷ ಮೂರ್ತಿ
ಜೀವೇಂದ್ರಿಯಗಳಲ್ಲಿ ತತು ತತ್ತು ಸ್ಥಾನವಾಸ
ಆವಾವ ರೂಪದಂತೆ ಇಪ್ಪ ಮೂರ್ತಿ
ಜೀವೋತ್ತಮವಿಡಿದು ತೃಣಜೀವ ಪರ್ಯಂತ
ಯಾವತ್ತರೊಳಗಿದ್ದಾನಂತ ಮೂರ್ತಿ
ಶ್ರೀ ವಾಸುದೇವ ಸಂಕರುಷಣ ಪ್ರದ್ಯುಮ್ನ
ಜೀವನಾಮಕ ಅನಿರುದ್ಧ ಮೂರ್ತಿ

ರೆನಿಸುವುದು ತಮೋ ಭಾಗದಲಿ ಒಂದು
ಒಂದನೆ ಪೇಳುವುದು
ತನ್ನದು ಸ್ವರಾಶಿಯಲ್ಲಿ ಇನಿತು
ಬಿಂದುಗಳಿಗೆ ಶಕ್ತ್ಯಾದಿ ಹನ್ನೆರಡು
ಚಿನುಮಯ ದೇವ ಸಿರಿ ಲಕುಮಿಗೆ ಇದೆ ಪೆಸರು
ಗುಣ ವೈಷಮ್ಯವಾಗೆ ಎರಡು ರಾಶಿಯಲಿದ್ದ
ಅಣು ಬಿಂದು ಹನ್ನೊಂದು ತತ್ತದ್ರಾಶಿಲಿವುಳ್ಳ
ಮಣಿವಜ್ರ ಪ್ರಕಾಶ ಭಾಗದಿಂದಲಿ ಉತ್ತಮವಾಗಿ
ರಜೋಬಿಂದು ಈರೈದು ಬರುವಾಗ
ವಿನಯದಿಂದಲಿ ತತ್ಪರಿಮಿತ ಬಿಂದುಗಳು
ಗುಣ ಸತ್ವ ಸ್ಥಳದಿಂದ ಹತ್ತು ಪೊರಡಿಸಿಕೊಂಡು
ಜಿನಗು ಒಂದೊಂದಕ್ಕೆ ಹತ್ತು ಯುಕ್ತವಾಗಿವೆ
ಎಣಿಕೆ ನೋಡುವುದು ತಮದಲ್ಲಿದ್ದಾ ಒಂ
ದನೆ ಬಿಂದು ಕೊಂಡು ತನ್ನಲ್ಲಿ ಪ್ರವೇಶಿಸಿತು
ವನಜರಾಗ ವರ್ಣ ಪರಿಚ್ಛೇದದಲ್ಲಿ ಸೂ
ಚನೆ ಸತ್ವ ಬಗೆ ಬಿಂದು ಹತ್ತು ತಮೊ ಬಿಂದೊಂದು
ಇನಿತು ಈರೈದೊಂದು ಸ್ವರಾಶಿವು ಹನ್ನೆರಡು
ಗುಣ ವೈಷಮ್ಯವೆಂದು ಲಿಂಗದಲ್ಲಿ ಆಯಿತು
ಗುಣವಂತ ವಿಜಯ ವಿಠಲರೇಯ ಅಲ್ಲಲ್ಲಿ
ವಿನಿಯಾಮಕನಾಗಿ ಇಪ್ಪ ಮತ್ಸ್ಯಾದಿ ರೂಪದಲ್ಲಿ ೩

## ಝಂಪೆ ತಾಳ

ಅರುಣ ಗುಣದಲಿ ಬಂದು ಬಿದ್ದ ಸತ್ವತಮೊ
ಎರಡು ರಾಶಿಯಬಿಂದು ಹತ್ತು ಒಂದು ಸ್ಥಿರ ರ

ಜೋರಾಶಿಯಲಿ ವೈಷಮ್ಯವಾದ ಹನ್ನೆರಡು
ಬಿಂದುಗಳು ಮುಂದಕ್ಕೆ ಸಾಗಿ
ತೆರಳಿದವು ಹತ್ತರಿಂದಲಿ ಹತ್ತು ಹತ್ತಾಗೆ
ಎರಡೈವತ್ತು ಸತ್ವ ಸಂಬಂಧ
ನಿರಿಕ್ಷಿಸು ಒಂದೊಂದು ಬಿಂದುಗಳಿಗೆ
ಸಾವಿರ ವಿಶಿಷ್ಟವಾದ ಬಿಂದುಗಳೆನ್ನು
ಅರುಣ ಭಾಗದಿಂದ ನೂರುಯುಕ್ತದಲಿ ಹ
ನ್ನೆರಡು ಬಿಂದುಗಳು ಬಂದವು ಕಾಣಿರೊ
ಕರುವಿನ ದೆಶೆಯಿಂದ ಹತ್ತು ಯುಕ್ತವಾಗಿ
ಪೊರಟಿತೊಂದೇ ಬಿಂದು ವೇಗದಿಂದ
ನೆರೆದು ಶತತ್ರಯೋದಶ ಬಿಂದುಗಳೇಕವಾಗಿ
ಕರಿಸಿಕೊಂಡಿತು ಅವ್ಯಕ್ತವೆಂದೂ
ಮರುತ ಸತಿ ಸರಸ್ವತಿ ಸೂತ್ರನಾಮಕ ಪ್ರಾಣ
ಪರಮೇಷ್ಠಿಗಳು ಇದಕೆ ಅಭಿಮಾನ್ಯರೂ
ಸಿರಿ ಲಕುಮಿ ರೂಪಗಳುಂಟು ಹದಿಮೂರು ಶತ
ನಿರುತ ಮಾನಿಯಾಗಿ ಒಪ್ಪುತಿಹಳು
ಪುರುಷನಾಮಕ ಹರಿಯ ರೂಪಗಳು ಪೊಳೆಯುತಿವೆ
ವರ ವಿಶ್ವಾ ಅನಿರುದ್ಧ ನಾರಾಯಣಾದಿ
ಸ್ಮರಿಸು ಒಂದಕೆ ಮೂಲ ಮೂರ್ತಿಯ ಬಿಡದಲೆ
ಕರಣ ಶುದ್ಧಿಯಲಿ ಕೊಂಡಾಡಿ ಸುಖಿಸು
ಹರ ಮೊದಲಾದವರು ಅವ್ಯಕ್ತದಲಿ ಇಲ್ಲ
ಕುರುಹು ತಿಳಿವದು ಅನಿರುದ್ಧದಲಿ
ಸಿರಿ ತತ್ವದಲಿಯಿದ್ದ ಬಿಂದುಗಳ ದೆಸೆಯಿಂದ
ತೆರಳಿದವು ಮೂರು ಪ್ರಕಾರದ ವರ್ನಾ
ಮರಳೆ ಸತ್ವದ ಬಿಂದುಗಳು ಒಂದೊಂದಕ್ಕೆ ಸಾ

### ತ್ರಿವಿಡಿ ತಾಳ

ಹೃದಯ ನಿಮ್ನದ ಮಧ್ಯ ಮಧ್ಯನಾಡಿಯ ಮಧ್ಯ
ಹುದಿಗಿಪ್ಪದನಿರುದ್ಧ ದೇಹವದಕೆ
ಹದಿನಾಲ್ಕು ದಳವುಳ್ಳ ಪೊಳೆವ ರಕುತವರ್ಣ
ಇದೆ ಅಷ್ಟದಳವೆಂದು ಎನಿಸಿತಿದಕೋ
ಅದರ ಕರ್ನಿಕೆ ಮೇಲೆ ರಾಮ (೩) ಮೂರುತಿಗಳುಂಟು
ಮೊದಲಗ್ರ ಮಧ್ಯ ಮೂಲೇಶ ಭಗವಾನ್
ಮುದದಿಂದ ಮೂಲೇಶನ ಪಾದಂಗುಟದಲ್ಲಿ
ವಿಧಿ ಪಟ್ಟಕ್ಕೆ ಸಾರುವ ಪ್ರಾಣವಾಸಾ
ಇದನೆ ಗ್ರಹಿಸಿ ಈತನ ಪಾದ ಮೂಲಾಶ್ರಯ
ಕದಲಾದಂತೆ ಜೀವ ಇಪ್ಪ ನೋಡು
ಪದುಮಾಷ್ಟದಳದಲ್ಲಿ ಲೋಕ ಪಾಲಕರುಂಟು ಸ
ನ್ನಿಧವಾಗಿಪ್ಪರು ತಮ್ಮ ಸೇವಕರೊಡನೆ
ಪದೆ ಪದಿಗೆ ಉಪೇಂದ್ರರಾಮ ಭಾರ್ಗವ ರಾಮ
ಅದು ಭೂ ಜನಾರ್ಧನ ಮತ್ಸ್ಯತುರಂಗಾ
ವದನ ಕಲ್ಕಿ ನೃಕೇಸರಿಯ ಪೂಜಿಪರಯ್ಯಾ
ಬುಧರು ಒಂದಾಗಿ ವಸುಗಳೇಳು ಜನ
ಸುದರುಶನ ಶಂಖ ಖಡ್ಗ ಚರ್ಮ ಗದ
ಪದುಮ ಕಾರ್ಮುಕ ಬಾಣ ಧರಿಸಿ ಅಷ್ಟಾ
ಯುಧ ನಾಲ್ಕೆರಡು ಬಾಹುವುಳ್ಳ ನಾರೇಯಣ
ಪದುಮೆ ಕೂಡಲಿ ಪಹರಿಯೆ ತಿರುಗುವ
ಪದುಮ ವಿಕಿಸಿತವಾಗೆ ಜಾಗ್ರತೆ ಎಂದೆನ್ನಿ
ಪದುಸ್ವಲ್ಪು ಮುದುರಿದರೆ ಸ್ವಪ್ನಕಾಲ
ಮುದುರಿ ಪೋದರೆ ಸುಪ್ತಿ ಜೀವ ಪ್ರಾಜ್ಞದೇವನ್ನ

ವದನದೊಳಗಿಳಿದರೆ ನಿಜೇಷ್ಟನೋ
ಇದರಂತೆ ಮೂರಾವಸ್ಥೆಯಾದಡೆ ವ್ಯಾಪಾರ
ಚದುರಾವೃತ್ತಿಯಲ್ಲಿ ಯಾಗುವುದು ಸಿದ್ಧಾ
ಪದುಮ ಈ ಪರಿಯಲ್ಲಿ ಐದುಕಡೆಇಪ್ಪದು
ಇದರಲ್ಲಿ ಪಂಚಭಗವದ್ರೂಪವು
ಬದಿಯಲ್ಲಿಯಿಪ್ಪಳು ಲಕುಮಿ ಐದುರೂಪ
ತ್ರಿದಶಗಣ ತುಂಬಿಹುದು ನಿಬಿಡವಾಗಿ
ಹೃದಯಾಖ್ಯ ಪಟ್ಟಣಕ್ಕೆ ಐದು ಬಾಗಿಲುವುಂಟು
ತದುಪರಿ ದ್ವಾರ ಪಾಲಕರಿಪ್ಪರು
ಸದರವಿಲ್ಲದೆ ಜನರು ಪ್ರತ್ಯೇಕ ಪ್ರತ್ಯೇಕ
ಮಧುಸೂದನನ ವಾಲಗವ ಮಾಡುವರು
ಇದು ಎಲ್ಲ ಪೇಳಿದ್ದು ಜೀವೇಶ ಪದುಮ ಬಹು
ವಿಧಗಳೆಲ್ಲ ನಾಡ್ಯಂತರ ಪ್ರವೇಶ
ಉದರ ಬೊಮ್ಮಾಂಡ ಭರಿತ ವಿಜಯ ವಿಠಲರೇಯ
ಬದಿಗನು ತಾನಾಗಿ ನಿರ್ಮಾಣ ಮಾಡುವಾ ೫

## ಧ್ರುವತಾಳ

ಎಪ್ಪತ್ತೆರಡು ಸಾವಿರ ಮೇಲೆ ನಾಡಿವುಂಟು
ಮುಪ್ಪುರ ವೈರಿ ಬ್ರಹ್ಮ ಇವಕೆ ಮಾನಿಗಳೆನ್ನಿ
ತಪ್ಪದಲೆ ತಮ ತಮ್ಮ ತತ್ವಾತ್ಮಕರೊಡಗೂಡಿ
ಇಪ್ಪರು ಸರ್ವರಲ್ಲಿ ನೇಮಿಸುತ್ತ
ಒಪ್ಪದಿಂದಲಿ ಕೇಳಿ ಇವಕೆ ಸ್ತ್ರೀ ಪುರುರೂಪ ಕಂ
ದರ್ಪನಯ್ಯನು ಇಹ ಅರ್ಧಾರ್ಧ ಮೇಲೊಂದು
ಒಪ್ಪುತಿಹವು ಲಕುಮಿ ಪ್ರಾಣೇಶಗಿಷ್ಟರೂಪಾ
ಸಪ್ತ ಧಾತುವುಳ್ಳ ಕಾಯದಲ್ಲಿ

ಇಪ್ಪತ್ತೊಂದು ಸಾವಿರ ಐದೊಂದುನೂರು ಶ್ವಾಸ
ಒಪ್ಪೋವು ಅಲ್ಲಿ ಭಾರತಿ ಪ್ರಾಣ
ಪ್ರಾಪ್ಯನಾಗುವ ಸತ್ಕರ್ಮ ಮಾಡಿದ ಜನಕೆ
ಅಪ್ಪಣೆ ಕೊಡುವ ತತ್ತ್ವೇಶಗಳಿಗೆ
ಅಪ್ರತಿಹತ ನಮ್ಮ ವಿಜಯ ವಿಠಲರೇಯ
ಅಪ್ಪಾರ ಮಹಿಮನೊ ಸರ್ವಗತನಾಗಿಪ್ಪಾ ೬

## ಝಂಪೆ ತಾಳ

ಈ ಲಿಂಗೋಪಾದನ ಅನಿರುದ್ಧಾಂಗತನಕಾ
ಲಾಲಿಸಿ ಅಲ್ಲಿಂದಿತ್ತಲಿ ಪ್ರತ್ಯೇಕ ಏಳು ಕ
ಮಲಗಳು ಸ್ಥಾನ ಭೇದದಿಂದರಿದು
ನೀಲ ರಕ್ತಾದಿ ವರ್ಣಾ ಮೂರ್ತಿಯು ಹೇಳಿಪ್ಪುದುಮೊ
ದಲೆ ಅದರಂತೆ ಗುಣಿಸು ಶುಂಡಾಲ
ಮುಖ ಮಿಕ್ಕಾದ ದೇವತಿಗಳಾ
ಕೀಲಾಲರುಹಕ್ಕೆ ಸುತ್ತ ಮೂವತ್ತೆರಡು
ಮೇಲೆ ಕೇಸರವುಂಟು ಭಗವಾನ್ ಮೂರ್ತಿ
ವಾಲಯ ಓಂಕಾರಕೂಡಿದ ಗಾಯತ್ರಿ
ಹೋಲಿಕೆಯಿದ್ದ ವರ್ಣಕೆ ಪ್ರತಿಪಾದ್ಯ
ಏಳು ಕಮಲಗಳಲ್ಲಿ ಭೂರಾದಿ ಭುವನದ
ಲೀಲೆ ಸಕಲ ಉಳ್ಳದಾಗಿಪ್ಪವು
ನಾಳವೊಂದರ ಮಧ್ಯ ಈ ಪರಿ ಇಪ್ಪದು ವಿ
ಶಾಲ ಮತಿವಂತರ ತಿಳಕೊಂಬದು
ಗೋಳಕವು ಹನ್ನೊಂದು ಇಂದ್ರಿಯಗಳು ಇಷ್ಟೆ
ಮೈಲಿಗೆ ಬೆರಸಿದರೆ ನಿರರ್ಥಕಾ
ಕಾಲ ಕಾಲಕೆ ಇಲ್ಲಿ ಅಧಿಪತಿಗಳಾಗಿ

ಸುರಪಾಲಕಾದ್ಯರು ಹರಿ ಸ್ಥೌಲ್ಯದಲಿಪ್ಪರು
ವಾಲಗಮಾಳ್ಪರು ಹರಿ ಆಜ್ಞೆ ಶಿರದಲ್ಲಿ
ತಾಳಿ ಜೀವನದ ಪ್ರಕೃತಿ ಮಾಳ್ಪರು
ಏಳೈದು ನಾಡಿಗಳು ಕರಣಗಳ ದ್ವಾರಕ್ಕೆ
ಕೀಲಿಸಿ ಅವೆಲ್ಲ ದ್ವಾದಶ ನದಿಗಳು
ಏಳೈದು ಪ್ರಾಣ ರೂಪಗಳುಂಟು ಬಿಡದಲೆ
ಭೂಲೋಕದನ್ನ ವಿಕಾರವಾಗಲು ಋತು
ಕಾಲದಲಿ ಜನಿಸುವ ಗರ್ಭದಲಿ
ಕಾಲ ವ್ಯವಧಾನದಲಿ ಬೆಳೆದು ಪರಿಮಿತನಾಹ
ಸ್ಥೂಲ ದೇಹವ ತಾಳಿ ಅಬ್ಜದಿಂದ
ಶೈಲಧರ ವಿಜಯ ವಿಠಲರೇಯ ವಿನಯದಿಂದ
ಬಾಲಕ್ರೀಡೆಯಾಡುವ ಭಕುತ ಭಕುತರಿಂದ ೭

## ತ್ರಿವಿಡಿತಾಳ

ಈ ರೀತಿಯನು ತಿಳಿದು ನಿನ್ನಾರಂಭಿಸಿಕೊಂಡು
ಈರೆರಡು ಲಕ್ಷ ಮಾನವರ ಇನಿತು ಗುಣಿಸು
ಹಾರೈಸು ಇವರಿವರ ವರ್ಣಾಶ್ರಮಾಚಾರ
ಬೇರೆ ಬೇರೆಯೆಂದು ಅನುಕರಿಸು
ಮೂರೊಂದು ಇಪ್ಪತ್ತುಲಕ್ಷ ಜೀವನ ವಿವರ
ಧಾರಣಿ ಮೇಲಿಪ್ಪವು ಉಣಿಸು
ಭೂರುಹ ವನಚರ ಕ್ರಿಮಿ ಖಗಮೃಗ ಸಂಚಯ
ಮೇಲೆ ಇಲ್ಲದೆವುಂಟು ನೋಡಲಿಲ್ಲ
ಆರೊಂದು ಆರೊಂದು ಅಧೋಭುವನ ಅತಳಾದಿ ಪೆಸರುಂಟು
ವಾರುತಿಯನೆ ತಿಳಿ ಅಲ್ಲೆಲ್ಲಿಯ
ವಾರುಣಿಪತಿ ಶೇಷ ಮಾರುತ ಕೂರ್ಮನು

ನಾರಾಯಣ ವರಹಾ ಹರಿ ಕೂರ್ಮನು
ಭಾರಹೊತ್ತಿಹರು ಚತುರ್ದಶಲೋಕಕ್ಕೆ ಆ
ಧಾರ ಭೂತರಾಗಿ ಶಕ್ತ ಸಹಿತ
ಘೋರ ಉಪ ನಾಯಕ ನರಕಾನರಕಾ ವಕ್ಕು
ಭಾರಣೆಯಾಗಿವೆ ಪಾಪಿಗಳಿಗೆ
ಕಾರಣ ಕರ್ಮಭೂಮಿಗೆ ಬಂದು ಚಿಂತಿಸು
ಭಾರತ ವರ್ಷದೊಳಗೆ ಇದ್ದ ಕ್ಷೇತ್ರ
ನಾರಾಯಣಾಶ್ರಮ ಮೊದಲಾದವು ಮತ್ತೆ
ವಾರಿತಾ ಪೂರಿತವಾದ ನದಿ ಕಾಸಾರಾ
ಮೇರುನಂದನ ಮಿಕ್ಕ ಪರ್ವತಗಳುಚ್ಚರಿಸಿ
ಧೀರನಾಗಿ ಮುಂದೆ ಮನವೆ ನಡಿಸು
ಮೇರು ಪರ್ವತ ನಾನಾ ನವಖಂಡ ನದಿ (ವ) ದ್ವೀಪ
ವಾರಿಧಿಗಳು ಶ್ವೇತ ದ್ವೀಪಾನೇಕ ರೂಪಾ
ಧಾರುಣಿಲೋಕ ಲೋಕಾದ್ರಿ ತಾಮಸು ಗಂ
ಭೀರ ಭುವನಾನಂತಾಸನ ಕುಂಡಲ ಕಾರ
ವಾರುಣಗಳುವುಂಟು ಎಂಟು ಸುತ್ತಲು ವಡಬಾ
ವಾರುಧಿಯೊಳಗಿಪ್ಪರು ಸುರರಿಗೆ ಮಹಿಮೆಯ
ತೋರುತ್ತ ಕಾರುಣ್ಯವನೆ ಬೀರುತ್ತ
ವಾರಿದಾ ಸ್ವರ್ಭಾನು ದಿವಾಕರ ಚಂದ್ರಮ
ತಾರಾ ಮಂಗಳ ಸೌಮ್ಯ ಬೃಹಸ್ಪತಿ ಭಾರ್ಗವ
ಸೌರಿ ಸಪುತ್ರ ಋಷಿಧ್ರುವ ಮಂಡಲ ವಿ
ಚರಣೆ ಮಾಡುವುದು ಅವರ ನೀತಿ
ಮೂರು ದಾರಿಯ ತಿಳಿ ಪಿತೃದೇವ ಬ್ರಹ್ಮ
ಸಾರಿ ಸಾರಿಗೆ ಸ್ಥಾನ ಸ್ಥಳದವರಾ
ಪಾರ ಸುಂದರ ಸಾರ ವಿಜಯ ವಿಠಲರೇಯನ
ಚಾರಿತ್ರವನೆ ಗುಣಿಸು ಸರ್ವತಾವಿನಲ್ಲಿ ೮

## ಧ್ರುವತಾಳ

ಮರಳೆಯೋಚಿಸು ವಿಮಾನಾವಳಿ ಸಂಕುಲ
ಕರೆಸಿ ಕೊಂಬೊದಿದೆ ಭುವರ್ಲೋಕವೆಂದೆನಿಸೆ
ಸುರಪತಿಯಿಲ್ಲಿಪ್ಪ ಪರಿವಾರದೊಡನೆ ಸಾ
ಧ್ಯರು ಉಭಯ ಗಂಧರ್ವರು ಯಕ್ಷಕಿನ್ನರಾದ್ಯರು
ತರುವಾಯ ಸುವರ್ಲೋಕ ಇದೆ ಸ್ವರ್ಗಲೋಕವೆನಿಸುತಿದಕೋ
ಪರಿ ಪರಿ ಭೋಗದಿಂದ ಇಂದ್ರನು ಸುಖ ಬಡುವ
ಸುರಧೇನು ಕಲ್ಪತರು ಉಚ್ಚೈಶ್ರವೇಕಾವತ ಕರಿ
ಊರ್ವಶಿ ರಂಭೇರು ವೈಜಯಂತಿ ನಗರಿ
ಗುರು ಮೊದಲಾದ ಪರಮ ಋಷಿಗಳು ಒಪ್ಪುತಿಹರು
ಹರಿ ಉಪೇಂದ್ರನಾಮಕ ಪೂಜೆಯಗೊಳುತಿಪ್ಪ
ಧರಣಿ ಯೆಳಗೆ ಯಾಗ ಸತ್ಕಾರ್ಯಾಚರಿಸಿದರು
ಮೆರವುತಿಪ್ಪರು ಅಲ್ಲಿ ನಾನಾ ಸೌಖ್ಯದಲ್ಲಿ
ಬರಿದೆ ಪುಣ್ಯದಿಂದ ತಲೆ ಕೆಳಗಾಗಿ ಬಿದ್ದು
ನರನಾರಿ ಈ ಸರ್ವಯೋನಿಯಲ್ಲಿ ಪುಟ್ಟುವರು
ವರ ಮಹರ್ಲೋಕ ಜನೋ ತಪ ಸತ್ಯದಲ್ಲಿ ವಿ
ಸ್ತರಿಸುವೆ ಬ್ರಹ್ಮರುದ್ರ ಕಾಮ ಸನಕಾದಿಗಳು
ಭರದಿಂದ ತಿರುಗುವ ನಾಟ್ಯಾಲಂಕಾರ ಜನ
ಸ್ವರವೆತ್ತಿ ಪಾಡುವ ಪರಿ ಪರಿ ಸೇವಿಯ
ಭರಿತಾಗಿಪ್ಪರು ಅಲ್ಲಲ್ಲಿ ತುಂಬಿಕೊಂಡು
ತರತಮ್ಯದಿಂದ ವಾಲಗ ಮಾಡುತ್ತವರ ಅ
ನಿರುದ್ಧ ಪ್ರದ್ಯುಮ್ನ ಸಂಕರುಷಣ ಹರಿ ಕೃಷ್ಣ
ನಾರಾಯಣ ವಾಸುದೇವಾ

ಎರಡೈದು ಮೇಲು ಲೋಕಾದಲ್ಲಿ ಭಗವದ್ರೂಪ
ಧೊರೆತನದಲ್ಲಿ ಪೂಜೆಗೊಳುತಿಪ್ಪವು
ಪರಮೇಷ್ಟಿ ಲೋಕದಿಂದಿತ್ತಲು ಮೇಲು ಭಾಗದಲ್ಲಿ
ದುರಿತವಿದೂರ ವೈಕುಂಠವೆನ್ನಿ
ಧರಿಯೊಳಗಿಲ್ಲದ ವಿಚಿತ್ರ ತರತಮ್ಯ ನಿರೀಕ್ಷಿಸುವ ಮು
ಕ್ತರ ಸಂದಣಿ ಬರಹದಲ್ಲಿ ಪೇಳುವೆ ಇದರ ವರ್ಣನೆ ಮುಂದೆ
ಅವು ಸಜ್ಜನರ ಚಿತ್ತಕ್ಕೆ ಆಗೋದು
ಚಿರ ಜ್ಞಾನಾನಂದ ಮೂರ್ತಿ ವಿಜಯವಿಠಲನ್ನ
ಕರುಣದಿಂದಲಿ ಕೇಳಿ ಕರಣ ಶುದ್ಧಿಯಲಿ

## ರೂಪಕ ತಾಳ

ಹತ್ತೈದು ಕೋಟಿ ಯೋಜನೆ ಬೊಮ್ಮಾಂಡವು
ಎತ್ತ ನೋಡಿದರತ್ತ ಅವಕಾಶವಾಗಿದೆ
ಮತ್ತ ಇರದ ಇಮ್ಮಡಿ ಬ್ರಹ್ಮಾಂಡ ಖರ್ಪರ
ಹತ್ತಿಕೊಂಡಿದೆ ನೋಡಿ ಸುತ್ತಲು ತೊಲಗದಲೆ
ಇತ್ತಂಡ ವಿರಾಟ ಮೂರ್ತಿಗಳು ಉಂಟು
ಸತ್ಯಲೋಕವೆ ಶಿರಸು ಒಂದಕೆಇಲ್ಲಿ ತನಕ
ತತ್ತಳಿಸುವ ಉದಕ ತೇಜೋ ವಾಯು ಗಗನ
ಚಿತ್ತಾದಾಹಂಕಾರ ಮಹಾ ಅವ್ಯಕ್ತಾ ವರ್ಣಾ
ಪ್ರತ್ಯೇಕ ಪತ್ಯೇಕವಾಗಿವೆ ಇವು ಏಳು
ಸತ್ಯವಾಗಿಪ್ಪವು ಅನಿತ್ಯ ಎಂದಿಗೂ
ತತ್ವ ಒಂದೊಂದಕ್ಕೆ ಹತ್ತು ಮಡಿ ವೆಗ್ಗಳಿಸಿ
ಸತ್ವಜೀವಿಗಳು ಬೊಮ್ಮಾದಿ ಸರ್ವ ದೇ
ವತ್ತಿಗಳಲ್ಲಲ್ಲಿ ತಮ ತಮ್ಮ ಸ್ಥಾನದಲ್ಲಿ

ಕರ್ತರಾಗಿಪ್ಪರು ತಮಗಿಂದ ನೀಚರಿಗೆ
ಉತ್ತಮ ಮತಿಯಲ್ಲಿ ಉಪದೇಶ ಮಾಡುತ್ತ
ವೃತ್ತಿ ರೂಪದಲ್ಲಿ ಅಂಶಿ ಅಂಶವ ಧರಿಸಿ
ಅತ್ಯಂತ ಹರುಷದಲ್ಲಿ ಬಾಳುತ್ತಲಿಪ್ಪರು
ಚಿತ್ತಜ ಪಿತ ನಮ್ಮ ವಿಜಯ ವಿಠಲರೇಯ
ನಿತ್ಯದಲ್ಲಿ ನೆನೆಸೆ ಮುಕ್ತಿಯ ಕೊಡುವನು ೧೦

## ಮಟ್ಟತಾಳ

ಬುದ್ಧಿಯಲ್ಲಿ ಮನಸ್ಸು ಪೊಗಿಸಿ ಪೊಂದಿಸಿ ಚಿತ್ತ
ಶುದ್ಧನಾಗಿ ನಿಂತು ತತ್ವ ವಿಚಾರಿಸಿ
ಬದ್ಧವಾದ ಪ್ರಕೃತಿ ಹಾರಿ ಪೋಗುವಂತೆ
ಸಿದ್ಧಾಂತವೆ ತಿಳಿದು ಭಕುತಿ ವೈರಾಗ್ಯದಲಿ
ಮಧ್ವಮತವ ಪೊಂದಿ ಮುದದಿಂದಲಿ ಧ್ಯಾನ
ಪದ್ಧತಿ ತಪ್ಪದಲೆ ಪಾವನ್ನ ನೀನಾಗೊ
ಸಿದ್ಧಿಸುವದು ನಿನಗೆ ಈ ಪರಿ ಆರೋಹಣ
ಇದ್ದದೆ ಚನ್ನಾಗಿ ಉಪಕ್ರಮಿಸಿ ಮಾಡು
ಸದ್ಭಾವದಿಂದ ಉಪಸಂಹಾರಣೆಯನ್ನು
ನಿರ್ಧಾರಗೈಸಿ ಒಳಗಿದ್ದ ನಿತ್ಯ
ಬುದ್ಧಿಯ ಮಧ್ಯದಲಿ ಧ್ಯಾನರೂಪದಲ್ಲಿಟ್ಟು
ನಿರ್ದ್ವಂದನಾಹದೆ ಇದೆ ಲಯ ಚಿಂತನೆಯೊ ಇದೆ
ಅವರೋಹಣವೋ
ಪದ್ಮವಲ್ಲಭ ನಮ್ಮ ವಿಜಯ ವಿಠಲನಂಘ್ರಿ
ಪದ್ಮ ಕಾಂಬುವುದಕ್ಕೆ ಇದೆ ಉಪಾಯಗಳು ೧೧

## ತ್ರಿವಿಡಿ ತಾಳ

ಆದಿ ಮಧ್ಯಾಂತದಲಿ ಮನಸು ಕಂಡಕಂಡಿಗೆ
ಪೋದರೆ ನೀನು ವ್ಯಾಕುಲನಾಗದೆ
ವೇದ ವೇದಾಂಗಗಳಲಿ ಪೇಳಿದಂತೆ ಪಂಚ
ಭೇದೋಕ್ತಿ ಮಾರ್ಗವ ಬಿಡದಿರೆಲೋ
ಸಾಧನವನೆ ಮಾಡು ಮರಳೆ ಮರಳೆ ಮರಳೆ ಸಂ
ಪಾದಿಸು ಧ್ಯಾನವ ನಿನ್ನೊಳಗೆ ಆ
ರಾಧನೆ ಮಾಳ್ಪುದು ನಾನಾ ವಿಚಿತ್ರದಲ್ಲಿ
ಸಾಧಿಸು ಮೆಲ್ಲ ಮೆಲ್ಲನೆ ಹರಿ ಪುರದ
ಹಾದಿಯ ಮೆಟ್ಟುವುದು ಸ್ಥೂಲ ಸೂಕ್ಷ್ಮ ಬುದ್ಧಿ
ಪಾದ ಮೂಲವಿಡಿದು ಮೌಳಿತನಕಾ
ಮೋದದಿಂದಲಿ ಹರಿಯಾ ತ್ರಿ ವಿರಾಟ ಮೂರ್ತಿ
ಶೋಧಿಸು ತಜ್ಜನ್ಯ ತದಾಶ್ರಯವೆನ್ನು
ಆದಿ ಪೊರಬೊಮ್ಮ ಸದ್ಗುಣ ನಿರ್ಗುಣ ತತ್ತ
ಛೇದನೆಂದು ತಿಳಿದು ಚಿಂತನೆ ಮಾಡು
ಆದಾ ಭುವನವೆಲ್ಲ ಆತನಲ್ಲಿ ಅನು
ವದ ಮಾಡು ಮನವೆ ವಾಣಿಯಲ್ಲಿ
ಶ್ರೀ ದೇವಿಯರಸ ನಮ್ಮ ವಿಜಯ ವಿಠಲರೇಯನ
ಆಧಾರ ನಮಗೆಲ್ಲ ಬೇಡಿದಾರ್ಥವ ಕೊಡುವಾ ೧೨

## ಝಂಪೆತಾಳ

ಅಧಿಕಾರತನ ಭೇದ ಇದರೊಳಗೆ ತಿಳಿವುದು
ಅಧಿದೈವ ಮೊದಲಾದ ಮುಕ್ತ ಜನರಾ
ಅದೆ ತನ್ನ ಸ್ವರೂಪ ಅವಲಂಬಿಸಿ ಲಿಂಗ

ಹೃದಯದಲ್ಲಿ ಕಂಡ ವಿಶಿಷ್ಟ ಮತ್ತೆ
ಮುದದಿ ಅನಿರುದ್ಧ ಸ್ಥೂಲ ದೇಹ ಆವಾದ
ಉದುಭವಿಸಿದ ಕಳೆವರದ ತೆರದಿ
ತದನಂತರದಲ್ಲಿ ಮರಿಯಾದಿ ಧರಣ ಯೋಜ
ನದ ಲೆಖ್ಖ ಉನ್ನತೋನ್ನತ ಎಣಿಸಿ
ಇದರಂತೆ ಚತುಸ್ರವಲಯಾಕಾರಧಿಕಧಿ
ವಿಧಿ ಪರಿಯಂತ ವ್ಯಾಪ್ತಿ ಸಿದ್ಧವೋ
ನಿದರುಶನದಿಂದ ಅಲ್ಲಿಗಲ್ಲಿ ಇದ್ದ
ಪದುಮನಾಭನ ಮೂರ್ತಿಯನು ಕಾಂಬೋರು
ವಿಧು ಜನರು ವಿಲಿಂಗರಾಗಿ ಸಂಸ್ಕೃತಿ ಯಲ್ಲಿ
ಪದೋಪದಿಗೆ ನೋಡಿದುದೆ ಸ್ಪಷ್ಟವಾಗಿ
ಇದರಲ್ಲಿ ಪ್ರತ್ಯಕ್ಷ ಕರಿಸಿ ನೋಡುವರಯ್ಯಾ
ಸದಮಲರಾಗಿ ಇಚ್ಛಾನುಸಾರ
ಉದಕ ಮಿಗಿಲಾದ ರೂಪವ ಧರಿಸಿ ಸೋತ್ತುಮರಾ
ಪದಪೂಜೆ ಮಾಡುವರು ವಿನಯನಿಂದ
ಮದನನ್ನ ಪೆತ್ತ ಸಿರಿ ವಿಜಯ ವಿಠಲರೇಯ
ಅದುಭೂತ ಮಹಿಮೆಗಳ ಪೊಗಳುತ್ತಲಿ ೧೩

## ಅಟ್ಟತಾಳ

ಮೋದ ಸುಖಾನಂದ ಹರುಷ ಸಂತೋಷ ಪ್ರ
ಮೋದ ಪಾರಾವರ್ಯ ಪಾವನ್ನ ಪ್ರೀಯಾಹ್ನ
ಲ್ಹಾದ ಜ್ಞಾನವು ವಿಜ್ಞಾನ ಪ್ರಜ್ಞಾನ ಸಂಮೋದ ಸಂವಿಜ್ಞಾ
ಅದುಭೂತ ಗಂಭೀರನಾದ ಧೀರ ಶೂರ ಅತ್ಯಂತ ಶಕ್ತ ವಿ
ರೋಧ ವಿದೂರ ಉದಾರ ಮುತ ಮುದ
ಆಧಾರ ಅವ್ಯಕ್ತ ಸಾಧು ಗುಣಾಂಬುಧಿ ಕ್ಷೇಮ ಅಭಯವಿ

ನೋದ ಅಂತರ್ಯಾಮಿ ಮಹಾ ಮಹತ್ತು ಅಣು
ಆದಿ ಪರಬೊಮ್ಮ ಸಂಭ್ರತಿಸಾಧ್ಯಾ ಅ
ನಾದಿ ಬ್ರಹ್ಮಚಾರಿ ಲೋಕ ಸಂರಕ್ಷಣ
ಆದಿ ವ್ಯಾದ ಶೂನ್ಯ ಏಕ ಸುಂದರ ಸತ್ಯ
ಆದಿತ್ಯ ಪ್ರಕಾಶ ಶಾಂತ ಪೂರ್ಣ ಕರು
ಣೋದಧಿ ಪ್ರಣತಾರ್ತಿಹರ ಶೋಕನಾಶನ
ಮಾಧುರ್ಯಾ ದಮ ಧರ್ಮ ದಿವ್ಯ ವಿಭೂಷಣ ಕಾ
ಲಾದಿ ಜಯ ಧೈರ್ಯ ಪೀತಾಂಬರಧಾರಿ
ವೈದಿಕ ಲಕ್ಷಣವಂತ ಅವಿರುದ್ಧಾ
ಕ್ರೋಧ ರಹಿತ ನಿತ್ಯ ತೃಪ್ತ ಜನನದೂರ
ನಿದಾನ ನಿಸ್ಸಂಗ ನಿಷ್ಕಳಂಕ ದಾತಾ
ಭೇದ ಜಡ ಪ್ರಕೃತಿ ಜೀವಿ ತ್ರಿವಿಧ
ಸಾಧ್ಯ ವಿಲಕ್ಷಣ ಬಹು ಕುಟುಂಬಿಪಾಲಾ
ಸೌದಾಮಿನಿ ತೇಜ ಅಮೃತಭುಕು ನಾನಾ
ರಾಧ್ಯಾ ದುರಾರಾಧ್ಯ ನಿತ್ಯ ಮುಕ್ತಾಶ್ರಯ
ಮೇದಿನೀಶ್ವರ ಪೂರ್ಣ ಐಶ್ವರ್ಯ ಅನುಪಮ
ಮೇಧಾದಿ ನೇಮನ ಸರ್ವಾಂತರ್ಯಾಮಿ
ಪ್ರಾದೇಶ ಮೊದಲಾದ ತತ್ತತ್ಪ್ರಮಾಣನೆ
ತ್ರಿಧಾಮ ಬಲ ತ್ರಿಗುಣಾತೀತ ಫಲಪ್ರದ
ಮಾಧವ ವಿಜಯ ವಿಠಲರೇಯ ಪರಮಾತ್ಮ
ಯಾದವಕುಲ ಶಿರೋಮಣಿಯ ಧ್ಯಾನವೆ ಮಾಡು ೧೪

### ಆದಿತಾಳ

ಸಾಕಾರ ಅಪ್ರಾಕೃತ ಶರಣಾಂಗತ ವತ್ಸಲಾ
ಲೋಕ ವಿಲಕ್ಷಣ ಅಚಲ ಅಚಂಚಲ
ಏಕಪತ್ನಿ ವ್ರತ ಭುಕ್ತಿ ಭುಕ್ತಿ ಪ್ರದಾ

ನೇಕ ಮಹಿಮ ಚಕ್ರವರ್ತಿ ಸರ್ವಭೌಮ
ವಾ (ಲೋ)ಕುಪಾಲಕ ಸರ್ವವರ್ಣ ಸರ್ವಾಶ್ರಮ
ನಾಕ ಜನರ ಪ್ರೀಯಾ ಸರ್ವಾಧಿಕ ಸುಹೃತೆ
ಭೂಕಾಂತ ಭವನಾಶ ನೀರದ ವರ್ನ ಪುಣ್ಯ
ಶ್ಲೋಕ ಶತ್ರುಸಂಹಾರ ನಿರ್ವಿಕಾರ ಅಗಮ್ಯ
ಬೇಕಾದ ಗುಣ ರೂಪ ಕ್ರಿಯಾ ಭಾವಂಗಳು ಅ
ನೇಕವಾಗಿ ಉಂಟು ಒಂದಾರಂಭಿಸಿಕೊಂಡು
ಈ ಕ್ರಮವನ್ನೆ ತಿಳಿದು ಮಾಡುವ ಬಗೆ ವಿ
ವೇಕ ಜನ ಇಪ್ಪದು ಅಧಿಕಾರತನ ಭೇದ
ಲೋಕೇಶ ಸರ್ವದಿಂದ ಆ ಮೇಲೆ ತರುವಾಯ
ಶ್ರೀ ಕಂಠಾದಿಗಳೆಲ್ಲ ತಮ್ಮ ಸ್ವರೂಪದಂತೆ
ಸಾಕಲ್ಯವಾಗಿ ಸರ್ವೊಪಾಸನೆ ಮಾಡುವರು
ಏಕಾರ್ಣವವಾಸ ಸಿರಿ ವಿಜಯ ವಿಠಲರೇಯ
ಸಾಕುವ ಈ ಪರಿ ತಿಳಿದ ಜ್ಞಾನವಂತರಾ ॥೫

### ಜತೆ

ಆರೋಹಣ ಅವರೋಹಣದಿಂದ ಹರಿಯ ಧ್ಯಾನಿಸಿ
ದಾರಢ್ಯನಾಹುದು ವಿಜಯ ವಿಠಲ ಪೊಳೆವಾ ॥೬

## ೩೮

### ಧ್ರುವತಾಳ

ಜ್ಞಾನ ವೆಂಬೋದಿದೆ ಕೇವಲಾಧಿಕಾರಿಗಳಿಗೆ
ಮೌನದಲ್ಲಿಪ್ಪೊದು ಮುಖ್ಯವಯ್ಯಾ
ಕಾನನ ಪಟ್ಟಣ ಸಮವಾಗಿ ತಿಳಿದ

ಜ್ಞಾನಿ ಯಂತಿರಬೇಕು ನೊಳ್ಪರಿಗೇ
ಏನೇನು ಅನ್ಯರಿಂದ ಮಾತು ವೆಗ್ಗಳಿಸಲು
ಸ್ಥಾಣೋಪಾದಿಯಲ್ಲಿ ತೋರಬೇಕು
ಕಾಣಿಸಿ ಕೊಳದಲೆ ಇರಬೇಕು ಕಂಡರು
ನಾನಲ್ಲವೆಂದು ಜಗದೀಶ ಹರಿಯ
ಧ್ಯಾನ ಮಾಡಲು ಬೇಕು ಅಡಿಗಡಿಗೆ ಮರೆಯದಲೆ
ಪ್ರಾಣೇಂದ್ರಿಗಳೆಲ್ಲ ನಿತ್ಯದಲಿ ಏನೇನು ಮಾಡುವ
ವ್ಯಾಪಾರ ಧರ್ಮಂಗಳು
ವಾಣಿಯರಸ ಮಿಕ್ಕ ಸುರರಾದ್ಯರು
ಕಾಣುವುದು ಪಿಡಿದು ಬಗೆ ಬಗೆ ವೃತ್ತಿಗಳು
ಶ್ರೀನಾಥ ತಾರತಮ್ಯವನ್ನೆ ಇತ್ತು
ತಾನಾಗಿ ದಯದಿಂದ ನಡಸುವಾನಂದದಲ್ಲಿ
ಮಾಣದೆ ಒಂದೊಂದು ಕರ್ಮಕಟ್ಟಿ
ಅನುಜ್ಞದೊಳಗಿಟ್ಟು ಲೇಶವಾದರಿವಗೆ
ಮೇಣದ ಬೊಂಬೆ ಮಾಡುವ ಸ್ವಾತಂತ್ರ
ಅನಂತ ಕಲ್ಪಕ್ಕೆ ಇಲ್ಲದಂತೆ ವಂಚಿಸಿ
ತಾನೊಳಗಿದ್ದು ಪ್ರವರ್ತಕ ಮಾಳ್ಪನೊ
ಹಾನಿ ವೃದ್ಧಿಗಳಿಗೆ ಇವರನ್ನೆ ಗುರಿ ಮಾಡಿ
ಕಾಣಿಸಿ ಕೊಳದಲೆ ತಿರುಗುತಿಪ್ಪಾ
ತ್ರಾಣನಾದರೂ ಹರಿ ಜೀವರ ಚೇಷ್ಟೆಯಂತೆ
ನಾನಾ ವಿಧದಲ್ಲಿ ಅನುಸಾರಿಯಾಗಿ
ತಾನೆ ನಡಿಸಿ ನಡಕೊಂಬಕಾಲ ಮೀರದೆ
ಏನೆಂಬೆನಯ್ಯಾ ಹರಿಯ ವಿಚಿತ್ರಕ್ಕೆ
ಏನಿನಿತು ಇನ್ನು ತಿಳಿದು ತಿಳಿಸಿ ಕೊಟ್ಟದದರಿಂದ

ನಾನೆಂಬ ಸೊಲ್ಲು ಹರಿ ಇತ್ತದೆಂದು
ಜ್ಞಾನಿ ಯಾದವಗಿಂತು ಇದ್ದರೆ ಅವನಿಗೆ
ಹೀನವೆಂಬೊದೆಲ್ಲ ಎಲ್ಲಿದೊ ಗುಣಿಸಿದರು
ನೀನು ನಾನೆಂಬೊದಲ್ಲಿ ಈ ವಿಧ ಮುಕ್ತಿ ಸಿದ್ಧವೆಂದು
ಶ್ರೀನಿವಾಸನ ಸ್ತೋತ್ರ ಗೈಯುತಲಿ
ಆನಂದಾದಿಂದಲಿ ಸರ್ವಕಾಲದಲ್ಲಿ ಮ
ದ್ದಾನೆಯಂದದಿ ನಲಿದು ತಿರುಗಿ ತಿರುಗಿ
ಮಾನವರೊಳು ಮೆಲ್ಲ ಮೆಲ್ಲನೆ ಜುಣಿಗಾಡುತ
ಕೇಣಿ ಸಂತೋಷವನ್ನು ಬೇಡಿಕೊಳ್ಳದೆ
ಕಾಣಿ ಮೊದಲಾದ ಲಾಭವ ಬಯಸದೆ
ಏನು ದೊರೆತದ್ದು ಭುಂಜಿಸುತ್ತ
ರಾಣಿ ಮಿಕ್ಕಾದವರು ಹರಿಯ ಸೇವಕರೆಂದು
ಮಾನಸ ಕಾಯಾ ವಾಚದಲಿ ನುಡಿದದ್ದು
ಗಾನ ನಟನೆ ನಗೆ ವಕ್ರಗತಿಯ ಸೊಬಗು
ಗೇಣೊದರದ ಚಿಂತೆ ಹಚ್ಚಿಕೊಳ್ಳದೆ
ಜ್ಞಾನ ಪರಿಪೂರ್ಣ ವಿಜಯವಿಠ್ಠಲನಂಘ್ರಿ
ರೇಣು ಕೊಂಡಾಡುವ ಭಾಗವತನಾಗೋ ೧

## ಮಟ್ಟತಾಳ

ಭೂತಪ್ರಾಣಿಗಳೆಲ್ಲ ಹರಿಯ ಪ್ರತಿಮೆಯೆಂದು
ಮಾತು ಮಾತಿಗೆ ತಾನು ಮರೆಯದೆ ಸ್ಮರಿಸುತ್ತ
ಈ ತೆರದಲ್ಲಿ ಸಾಂಖ್ಯಶಾಸ್ತ್ರ ನಿಶ್ಚೈಸಿ
ಸೀತೋಷ್ಣ ಸಮವೆಂದು ಸಂತತ ತಿಳಿದು ಪ್ರ
ಖ್ಯಾತಿಯಾಗದೆ ಜಗಕೆ ಪೊಳಿಯದೆ ಗುಪ್ತದಲ್ಲಿ

ಗಾತುರ ಮಲಿನನಾಗಿ ಸಂಚರಿಸುತಲಿದ್ದು
ಶ್ರೀ ತರುಣಿ ಸರ್ವ ಜೀವರಾಶಿಗಳು ಅ
ಜಾತನಾದ ಹರಿಯ ಅಧೀನವೆಂದು
ಆತುರದಲಿ ಅತಿಶಯವನೆ ತಿಳಿದು
ಆತುದುದೊಳಗನುಭವಕೆ ತರಲು ಬೇಕು
ಶೀತಾಂಶು ವದನ ವಿಜಯ ವಿಠ್ಠಲರೇಯನ
ದೂತರ ಸಂಗಡ ಲೋಲಾಡಲಿಬೇಕು ೨

## ತ್ರಿವಿಡಿತಾಳ

ನಿಂತಲ್ಲಿ ಕುಳಿತಲ್ಲಿ ನೆರೆ ಮಾತನಾಡುವಲ್ಲಿ
ಬಂದು ಪೋಗುವಲ್ಲಿ ತಿರುಗುವಲ್ಲಿ
ನಿಂದ್ಯ ಬೀಳುವಲ್ಲಿ ನಿಶ್ಚಿಂತನಾದಲ್ಲಿ
ವಂದನೆ ಗೈವಲ್ಲಿ ವಾಕ್ಯದಲ್ಲಿ
ಮಂದಿ ನೆರೆದಲ್ಲಿ ಮುದದಲ್ಲಿ ಇದ್ದಲ್ಲಿ
ಮಂದಿರದಲ್ಲಿ ಕೆಲಸ ಮಾಡುವಲ್ಲಿ
ತಂದು ಕೊಡುವರಲ್ಲಿ ತೆಗೆದು ಕೊಂಬುವರಲ್ಲಿ
ಬಂಧನವಾದಲ್ಲಿ ಭಾಗ್ಯದಲ್ಲಿ
ಗಂಧ ಪೂಸುವನಲ್ಲಿ ಹಚ್ಚಿಸಿಕೊಂಬಲ್ಲಿ
ಅಂದವೇರಿ ನಗುತ ಬರುವಲ್ಲಿ
ಮಂದಹಾಸದಲ್ಲಿ ಮೇಳವಾಡುವಲ್ಲಿ
ದುಂದುಭಿವಾದ್ಯಗಳು ಕೇಳುವಲ್ಲಿ
ಕಣ್ದೆರೆದು ನೋಡುವಲ್ಲಿ ಕವಳಮೆಲುವಲ್ಲಿ
ಗಂಧಾ ಕೊಂಬುದರಲ್ಲಿ ತರ್ಕೈಪರಲ್ಲಿ
ಮುಂದೆ ಪಿಡಿವಲ್ಲಿ ಗುಹ್ಯಕರ್ಮದಲ್ಲಿ

ಒಂದೊಂದು ಬಗೆಯ ವ್ಯಾಪಾರದಲ್ಲಿ
ಪೊಂದಿಕೊಂಡಿಪ್ಪರಲ್ಲಿ ದೂರ ಬಿಟ್ಟವರಲ್ಲಿ
ಹಿಂದೆ ಅಟ್ಟುವರಲ್ಲಿ ಹಿತದವರಲ್ಲಿ
ಸಂದೇಹ ವಿಡಿಯದೆ ವಿಜಯವಿಠಲಮೂರ್ತಿಯ
ಎಂದೆಂದು ನೆನೆಸುವದು ಮನದೊಳು ತಂದಿವನ ೩

## ಅಟ್ಟತಾಳ

ಪಶು ವಾಜಿ ಗಜ ಮತ್ತೆ ಶಿಶು ಮಡದಿ ಮಗ
ಕುಶಲ ಮನುಜ ಮಿತ್ರ ಸೊಸೆ ಬಂಧು ಬಳಗ ರಾ
ಜಿಸುವ ನಾನಾಪರಿ ವಶವಾಗಿದ್ದ ಮಾನಿಸರು ಮಿಕ್ಕ ಜೀವ
ಪ್ರಸರಗಳಿಗೆ ನಿತ್ಯ ರಸ ರಸಾಯನ ಉ
ಣಿಸುತ ಉತ್ತಮವಾದ ವಸನಭೂಷಣಾದಿ ದಿವ್ಯ
ಕುಸುಮ ತರುವಾಯ ಎಸೆವ ಧಾನ್ಯಗಳು
ಹಸನಾದ ತೃಣ ಸರ್ವ ವಸುಧೆಯೊಳಗೆ ಇದ್ದ
ದಶ ದಿಕ್ಕಿನೊಳಗುಳ್ಳ ಪೆಸರುಳ್ಳ ದ್ರವ್ಯವ
ನಸು ನಗುತ ಸಿರಿ ಬಿಸಿಜನಾಭಗೆ ಸಮ
ರ್ಪಿಸಿ ಜೀವಗಣಕೆಲ್ಲ ಬೆಸನೆ ಕೊಡುತ ಪಾಲಿಸಬೇಕು ನಿರುತದಿ
ಬಸಿರೊಳಗೆ ಲೋಕವಿಟ್ಟ ವಿಜಯ ವಿಠ್ಠಲ
ಅಸಮ ದೈವವೆ ನಡೆಸುವ ಭಾರವ ತಿಳಿ ೪

## ಆದಿತಾಳ

ಭಜನಿಯ ಮಾಡು ಬಿಡದೆ ಬಂದೆ ಭಕುತಿಯಲಿ
ಗಜ ತುರಗ ಮೊದಲಾದ ನಾನಾ ಠಾವಿನಲಿ
ಅಜದೇವಾರಭ್ಯವಾಗಿ ಮುಕ್ತಾಮುಕ್ತರಲ್ಲಿ
ನಿಜವಾಗಿ ಮಾಡುವ ಹರಿಯ ವ್ಯಾಪಾರವನ್ನು

ಋಜುವಾಗಿ ತಿಳಿದು ಸಂತತ ಹಿಗ್ಗು ದುರಿತದ
ವ್ರಜವನೊದೆದು ಬಲು ಸುಖ ವನಧಿಯೊಳಿರುವ
ತ್ರಿಜಗ ಮಧ್ಯದಲಿ ಯಾವಜ್ಜಸ್ಮತನಕ ವಿ
ರಜನಾಗು ಸರ್ವದ ಆವದಾದರು ಗ್ರಹಿಸಿ
ಸುಜನ ವಂದಿತ ನಮ್ಮ ವಿಜಯ ವಿಠಲರೇಯನ
ಭುಜಬಲವನ್ನು ಪೊಗಳು ಪರಿಹಾರ ಭವಂಗಳು ೫

## ಜತೆ

ನೀಚಾಧಿಷ್ಠಾನದಲಿ ಹರಿಯ ಪೂಜಿಸದಿರು
ಯೋಚಿಸು ವಿಜಯ ವಿಠ್ಠಲನಧಿಕಾರಿಯಲ್ಲಿ ೬

## ೩೬

## ಝಂಪೆ ತಾಳ

ತರ ತರ ತರ ತರ ತರ ತರ ತರನೆ ನಿನ್ನ ನಡುಗಿಸಿ
ಕರ ಕರ ಕರ ಕರ ಕರ ಕರ ಕರೆದು ನಿನ್ನ ನಿಲಿಸಿ
ಸರ ಸರ ಸರ ಸರ ಸರ ಸರ ಸರನೆ ನಿನ್ನ ಒಲಿಸಿ
ವರ ವರ ವರ ವರ ವರ ವರ ವರಗಳನು
ಪಡಿಯದಲೆ ಬಿಡುವೆ[ನೆ]
ಸಿರಿವೊಡೆಯ ಸುರರೊಡಿಯಾ ಎನ್ನೊಡಿಯಾ ಜಗದೊಡಿಯಾ
ಮರಿಯದಲೆ ನೋಡು ತಡಿಯ
ದಿರು ಮುಂದೆ ಎನಗೊಂದು ಪೇಳು
ತ್ತರವ ಇಂದೆ ಇರುಕೊಡದೆ ಬಿಡುವೆನೆ ಜಗದ ತಂದೆ
ಪರ ಮುಖ ನೀನಾಗೆ ನಿನ್ನಯ ಚರಣದಡಿಗಳಲಿ

ಸಿರಸಾ ಪವಡವನು ಕೊಡುವ ಜೀಯಾ
ಕರುಣಿ ನೀನೆಂದು ಮೊರೆಹೊಕ್ಕು ಬೇಡಿದರೆನ್ನ
ಸರಕು ಮಾಡದಲೆ ತೊಲಗುವುದು ಏನೋ
ಪರಿ ಪೂರ್ಣ ಗುಣ ನಿಧಿ ವಿಜಯ ವಿಠ್ಠಲ ನಿನ್ನ
ಚರಣದುಂಗುಟದ ಮಂದಿರದ ನೆಳಲೆ ಬೇಕು ೧

## ಮಟ್ಟತಾಳ

ಭಂಡು ದೇವರಿಗೆ ಲೆಂಡ ಪ್ರತಿ ಎಂಬೋದು
ಮಂಡಲದೊಳಗಿದು ಸಹಜ ನೀತಿ
ಭಂಡು ದೇವನೆ ನೀನು ನಂದ ಗೋಕುಲದಲ್ಲಿ
ಲೆಂಡ ಗೊಲ್ಲತಿಯರು ಅವರೆ ನಿನಗೆ ಮಟ್ಟು
ತೊಂಡನಾಗಿ ನಿನ್ನ ಕೊಂಡಾಡಲು ಶಿ
ಖಂಡಿಯಾಗಿ ಬುದ್ಧಿ ನಿನಗೆ ಅವರೆ ಮಟ್ಟು
ಕುಂಡ ಗೋಳಕರ ಮಂಡೆ ಮೇಲೆ ಇದ್ದು
ಭಂಡುಗಾರ ಗೊಲ್ಲ ವಿಜಯವಿಠಲಾ ೨

## ತ್ರಿವಿಡಿ ತಾಳ

ಕದ್ದಾ ಶುದ್ಧಿಗೆ ದಧಿ ಪಾಲಾಗೆ ವಶವಾಗೆ
ಬದ್ಧಾದಿಂದಲಿ ಬಂದು ಅವನು ಕೇಳಿದ ಮಾತು
ಸಿದ್ಧಾಂತವೆಲ್ಲಾ ಬಳಿಕ ಪೇಳುವರಾರು.
ಈ ಧರೆಯೊಳಗೆ ಧರ್ಮಕೆ ಕಾಲಾ ನಡೆಯದೂ
ನಿರ್ಧಾರವಾಗಿದೆ ಎನಗೆ ನೋಡಲಿ ಇಂದು
ಅಬ್ಧಿಶಯನ ನಿನ್ನ [ವ]ರ್ಮ[ಮ]ರ್ಮಗಳಾ
ಇದ್ದಾವು ಅಲ್ಲಲ್ಲಿ ದೂರಾದಲ್ಲದೆ ನೀನ

ಹೊದ್ದಿ ಇಪ್ಪುದು ಸಟೆ ವಿಜಯ ವಿಠ್ಠಲ ಸಿರಿ
ಮುದ್ದು ಮುಖದ ಚಲುವ ಸಿದ್ಧ ಪ್ರಸಿದ್ಧ ೩

## ಅಟ್ಟತಾಳ

ಪಾವ ಮಾನಿಯಂತೆ ಹರಿವಾ[ಣ][ಒಯ್ಯ]ಬೇಕು
ಗೋವಳರಂತೆ ಎಂಜಲು ಕಲನಲಿಬೇಕು
ರಾವಣಾನುಜನಂತೆ ನಿನ್ನ ಹೊತ್ತು ತಂದಿಡಬೇಕು
ದೇವ ನದಿಜನಂತೆ ಕದನ ಮಾಡಲಿ ಬೇಕು
ದೇವತಾ ಗಣದಂತೆ ಭಾರ ಹೊರಿಸಬೇಕು
ಈ ವಿಚಾರವಿರಲು ಆವಲ್ಲಿ ಪೋಗಾದೆ
ಕಾವುತ್ತಲಿತ್ತವರಾವಾದರು ಬೇಡೆ
ದೇವೇಶ ವಿಜಯ ವಿಠ್ಠಲ ನಿನ್ನ ಮಹಿಮೆಯ
ಆಘಾವ ಬಲ್ಲನು ನಮೋ ನಮೋ ಎಂಬೆ
ಹಾವಿಗೆ ತಡೆ ಬೇರು ಇದ್ದಂತೆ ಇರಬೇಕು ೪

## ಆದಿತಾಳ

ದೂರಿದ ಭಕ್ತರ ದೂರ ಮಾಡುವಿ ಪಾಪ
ದೂರ ಬೇಕು ನಿನ್ನ ದೂರಬೇಕು ನಿನ್ನ
ದೂರದಲೆ ಎನ್ನ ದೂರು ಮುಟ್ಟುವದಿಲ್ಲ
ದೂರಿದನೆ ಸಿರಿ ವಿಜಯ ವಿಠ್ಠಲ ವಿ
ದುರವಂದಿತ ಪಾದ ದೂರದೋಷ ಬಲು
ದೂರ ನೋಡದೆ ಎನ್ನ ದುರಿತ ಬಿಡಿಸೋ ೫

## ಜತೆ

ಹರನ ಶಿರ ಮುಕುಟ ನಿನ್ನ ಪಾದ ಪೀಠವೊ ರನ್ನ
ಪೊರೆವುದು ದಯದಿಂದ ವಿಜಯ ವಿಠಲ ಎನ್ನ ೬

## ೪೦

## ಧ್ರುವತಾಳ

ತತು ಪೂರ್ವದಲ್ಲಿ ಎನಗೆ ಹಿತವಾದ ಹಿರಿಯರು ।
ಪ್ರತಿಯಿಲ್ಲದ ಧನ ಸ್ಥಾಪಿಸಿರಲು ।
ಕ್ಷಿತಿಯ ಶೋಧಿಸಲಿಲ್ಲ ಕಂಡ ಕಡೆ ತಿರುಗಿ ।
ಮತಿ ಭ್ರಮಣನಾಗಿ ಅರಸಲಿಲ್ಲ ।
ಸಥೆ ಯಿಲ್ಲಿಟ್ಟಂತೆ ಬರುತಲೆ ಗುರುತ ಕಂಡೆ ।
ಮಿತಿ ಯಾವುದು ಎನ್ನ ಅತಿಶಯಕೆ ।
ಚತುರ ಬಾಹು ನಾಮ ವಿಜಯ ವಿಠ್ಠಲನ್ನ।
ನುತಿಸುವ ಭಾಗ್ಯ ಸುಕೃತ ಧನವೆಂತೊ ೧

## ಮಟ್ಟತಾಳ

ಚತುರ ವಿಂಶತಿ ಹಳೆ ನಾಣ್ಯಗಳಯ್ಯ ।
ಪ್ರತಿ ಪ್ರತಿ ಪೆಸರುಗಳು ಒಂದು ಒಂದರ ಮ್ಯಾಲೆ ।
ಪ್ರಥುವಿಗೆ ನೂತನದ ಶುದ್ಧ ಮುದ್ರೆ ಪಡಿ ।
ಶ್ರುತಿಯಲ್ಲಿ ಶೋಧಿಸಲು ಆದಿಯಲ್ಲಿ ಉಂಟು ।
ಚತುರ ಮೂರುತಿ ನಾಮ ವಿಜಯ ವಿಠ್ಠಲನ್ನ ।
ನತಜನಾತ್ರಯವೊ ಎನ್ನ ಪುಣ್ಯಭಾಗ್ಯವೊ ೨

## ರೂಪಕ ತಾಳ

ಬಣ್ಣ ನೋಡಲು ಷೋಡಶ ಬಣ್ಣಾಧಿಕಾನೇಕ ।
ಚಿನ್ನವಾದರು ಒರೆಗಲ್ಲಿಲಿ ನೋಡಲಿ ಸಲ್ಲ ।
ಚಿನ್ನಿವಾರರು ಇದಕೆ ಬೆಲೆಗಟ್ಟಲಾರರು ।
ಕಣ್ಣಿಂದ ಈಕ್ಷಿಸಿ ಪರಿಪರಿ ವರ್ನಗಳು ।
ತನ್ನಿಂದ ತಾನೆ ಉದ್ಭವವಾದುದಲ್ಲದೆ ।
ಅನ್ಯರಿಂದಲಿ ನಾಣ್ಯ ಕಲ್ಪಿತವಾದುದಲ್ಲ ।
ಚನ್ನ ಸುವರ್ನ ವರ್ನ ವಿಜಯ ವಿಠ್ಠಲ ।
ಚಿನ್ನಿ ವಾರನೆ ಇದರ ಮೂಲಾಗ್ರವನು ಬಲ್ಲ ೨

## ಝುಂಪಿತಾಳ

ಕಾಸುವುದಲ್ಲ ಕಂಡವರು ಅಲ್ಪರಿದರೆ ।
ಕಾಶಿನಷ್ಟು ಕಡಿದು ಕೊಡುವುದಲ್ಲ ।
ಕಾಶಿ ರಾಮೇಶ್ವರ ದೇಶವನು ತಿರುಗಿದರೆ ।
ಬ್ಯಾಸತ್ತು ಹೊರಲಾರೆನೆಂಬೊದಲ್ಲ ।
ಐಸು ದಿನ ಇದ್ದರು ಭಾರ ಕಿಂಚಿತು ಇಲ್ಲ ।
ಬೀಸ ಬಿಸುಟರೆ ಕೆಳಗೆ ಬೀಳುವದಲ್ಲ ।
ವಿಶೋಧನನಾಮ ವಿಜಯ ವಿಠ್ಠಲನ್ನ ।
ಪೋಷಿಸುವಿ ನೀ ನಾಣ್ಯ ಸೇರಿದವರ ೪

## ತ್ರಿವಿಡಿ ತಾಳ

ಒಂದು ನಾಣ್ಯದಿಂದ ಇಂದ್ರಾದಿ ನಿರ್ಜರರ ।
ಮಂದಿರ ಸಹಿತ ಬೆಲೆಗೊಳಲಿ ಬಹುದು ।
ಹಿಂದೆ ಮುಂದೆನ್ನ ನೂರೊಂದು ಕುಲದವರಿಗೆ ।

ಬಂದ ದೋಷ ದಾರಿದ್ರ ಕಳೆಯಬಹುದು ।
ಮಂದಮತಿ ಯೆಂಬೊ ಬಡತನ ಬಿ (ಬ) ಡದಿರೆ ।
ಒಂದು ಕ್ಷಣದಲ್ಲಿ ಬಿಡಿಸಬಹುದು ।
ಸಂದೇಹವಿದಕಿಲ್ಲ ಸಮ ವಿಜಯವಿಠ್ಠಲ ।
ಬಂಧು ಬಾಂಧವನಾಗುವ ಇಂದರ ದೆಶೆಯಿಂದ ೫

## ಅಟ್ಟತಾಳ

ನೃಪತಿ ಚೋರ ಪಾವಕನ ಭಯವೆಯಿಲ್ಲ ।
ಸ್ವಪನದಲ್ಯಾದರು ತೊಲಗಿ ಪೋಗುವುದಲ್ಲ ।
ತಪಶಿಗೆಯಾದರು ವೇಗ ಸಿಗುವುದಿಲ್ಲ ।
ಜಪಿಸಿದ ಹಾಗೆಲ್ಲ ಸಾಧ್ಯವೆ ಪುಸಿಯಲ್ಲ ।
ತಪಿಸುವ ದುರಿತಾನಲಕೆ ಶಾಂತನಾಗಿ ।
ಉಪಕಾರವೆಂಬೋ ಸೋನೆ ಕರೆವುದು।
ಸ್ವಪನ ನಾಮ ವಿಜಯ ವಿಠಲನ ಚರಣ ಸೇ ।
ವಿಪ ಮನುಜರಿಗೆ ಸಮೊಪದಲ್ಲಿಪ್ಪುದು ೬

## ಆದಿತಾಳ

ಸಂಚಿತಾರ್ಥ ಪುಣ್ಯದಿಂದ ವಂಚನೆಯಿಲ್ಲದೆ ಹಾಗೆ ।
ಸಂಚಿತಾದ ಮಂಗಳಧನ ಕೊಂಬೆಯಾಗದಂತೆ ಮನಕೆ ।
ಹಂಚಿಕೆ ಬೇಡುವುದಿಲ್ಲ ಪಂಚರಾತ್ರಿಯನಸಲ್ಲ ।
ಅಂಚೆ ಅಂಚೆ ಜನುಮಕ್ಕೆ ಪ್ರಾಪಂಚ ಬಿಡದಲ್ಲಿಪ್ಪುದು ।
ಮುಂಚೆ ಇದ್ದಲ್ಲಿದ್ದರ ಮಹಿಮೆ ಕಿಂಚಿತಾದರು ತಿಳಿಯದಿದ್ದೆ ।
ಹಿಂಚಿನ ಸುಕೃತದಿಂದ ಸಂಚಾರ ಫಲಿಸಿತು ।
ಪಂಚ ಮೊಗ [ದವ] ನ ವಿಷ್ಣು ವಿಜಯ ವಿಠ್ಠಲನ್ನ ।
ಪಂಚ್ಯದಲ್ಲಿ ಸೇರುವಂಥ ಚಂಚಲ ಘನವಾಯಿತು ೭

## ಜತೆ

ಕುಕ್ಷಿಯೊಳು ಸ್ಥಾಪಿಸಿ ಈ ಕ್ಷಿತಿಯೊಳು ಬೀರಿ ।
ಅಕ್ಷಯಾ ವಿಜಯ ವಿಠಲ [ನು]ಬಡ್ಡಿಗೆ ಈವ ೮

## ೪೧

## ಧ್ರುವತಾಳ

ತತುವ ಮೂರುತಿ ಪರತತುವ ಮೂರುತಿ
ಸತುವ ಮೂರುತಿ ಶುದ್ಧ ಸತುವ ಮೂರುತಿ
ತತುವೇಶರೊಳಗೆ ಅಗತವಾದ ಮೂರುತಿ
ತತುರೂಪಾದಾ ತತು ತತು ಮೂರುತಿ
ಅತಳಧೋಭುವನ ವ್ಯಾಪುತವಾದ ಮೂರುತಿ
ಕ್ಷಿತಿ ಸ್ವರ್ಗ ಸತ್ಯ ಪೂರಿತವಾದ ಮೂರುತಿ
ದ್ಯುತಿ ಐರಾವತಿಗೆ ಆಶ್ರಿತವಾದ ಮೂರುತಿ
ಸಿತಾಸಿತ ಪೀತ ರಕುತ ವರ್ನ ಮೂರುತಿ
ಶ್ರುತಿ ಸ್ಮೃತಿಯಲ್ಲಿ ಭರಿತವಾದ ಮೂರುತಿ
ಚತುರಾಶತಿ ಚತುರವಿಂಶತಿ ನಾಮ ಮೂರುತಿ
ಅತುಳ ಅಜಾದಿಯು ಶತಸಹ ಸ್ರ ಮೂರುತಿ ಅ
ಮಿತ ಮೂರುತಿ ಅಪರಿಮಿತವಾದ ಮೂರುತಿ
ಶತಿ (ತತಿ) ಆವರ್ಣ ಉತ್ಪತ್ತಿಗೈಸಿದ ಮೂರುತಿ
ದಿತಿಜ ಅದಿತಿಜ ಸಂತತಿಯಾಳುವ ಮೂರುತಿ
ಪ್ರತಿಯಿಲ್ಲೇಕಮೇವ ಅದ್ವಿತೀಯ ಶ್ರೀಮೂರುತಿ
ಪ್ರತಿ ಬೊಮ್ಮಾಂಡದಲ್ಲಿ ಪ್ರಕೃತಿಯೊಡನೆ ಮೂರುತಿ
ಚಿತು ಸದಾಶಾಶ್ವತ ವಿಜಯ ವಿಠ್ಠಲರೇಯ ಅಪ್ರಾ
ಕೃತಕಾಯ ಕಾಲ ಅತೀತನಾದ
ಉನ್ನತ ಮಹಿಮ ಗತಿ ಪ್ರದಾ ೧

## ಮಟ್ಟತಾಳ

ಪರಮೇಷ್ಠಿ ಮಾನದಿಂದ ನೂರು ವರುಷ ಪರ್ಯಾಂ
ತರ ಲಯಕಾಲ ಎರಡೊಂದು ರೂಪದಲ್ಲಿ
ಸಿರಿ ಸೇವಿಯೆ ಮಾಡುತಿರಲು ನೀನಂದು
ಧರಿಸಿದ ಅವತಾರ ಪರಮ ರೂಪಗಳಿಂದ
ಮಿರುಗುವ ತತ್ವ ನಿಯಾಮಕವಾದ ರೂಪಗಳಿಂದ ।
ಪರಮ ಪುರುಷ ನೀನೆ ಏಕೀಭೂತನಾಗಿ ।
ಚರಿಸಿದ ಅನಂತ ಜೀವರಾಶಿಗಳನ್ನು ।
ದರದಲ್ಲಿ ಪೊಂದಿಟ್ಟು ಮೆರೆವ ದೇವರ ದೈವ ।
ವಿಜಯ ವಿಠ್ಠಲರೇಯ ।
ಶರಧಿ ಯೊಳಿಟ್ಟಂತೆ ಅಚ್ಛೇದ್ಯಾಭೇದ್ಯಾ ೧

## ತ್ರಿವಿಡಿ ತಾಳ

ದೀಪದಿಂದಲಿ ದೀಪಾ ದೀಪಾಂತರ ತೆರದಿ ಮೂಲ ।
ರೂಪದ ದೆಶೆಯಿಂದ ಮತ್ತೆ ಅವತಾರ ।
ರೂಪಗಳು ಪ್ರಾದುರ್ಭಾವಿದಾತ್ಮ ಸೃಷ್ಟಿ ।
ಈ ಪರಿತಿಳಿ ಈಶಗೆ ವಿಕಾರವಿಲ್ಲ ।
ರೂಪವಂತೆ ಲಕುಮಿ ತಾನೆ ನಗುತಾನೇಕ ।
ರೂಪಾ ಧರಿಪುದು ಪರಾಧೀನ ವಿಶೇಷ ।
ವ್ಯಾಪುತ ಸೃಷ್ಟಿ ಕೇವಲ ಹರಿಯಾಧೀನ ।
ತಾ ಪೇಳಿಸುವಳು ಲಕುಮಿ ಕಾಲತ್ರಯದಲ್ಲಿ ।
ಶಾಪಾನುಗ್ರಹ ಶಕ್ತ ವಿಜಯವಿಠ್ಠಲರೇಯ ।
ಅಪಾರ ಸುಖಸಾಂದ್ರ ಅನಂತ ಲೀಲಾ ೨

## ಅಟ್ಟತಾಳ

ಮುಂದೆ ನಿತ್ಯ ವಸ್ತು ಬಾಹ್ಯವಸ್ತಕೆ ಸಂ ।
ಬಂಧವಾದರೆ ಇದು ಮಿಶ್ರ ಸೃಷ್ಟಿಯು ಎಂ ।
ತೆಂದು ಪೇಳುತಿದೆ ಕೇವಲಾ ಸೃಷ್ಟಿಯು ।
ಹಿಂದೆಯಾಗುವ ವಸ್ತುಗಳಿಗೆ ಉತ್ಪತ್ತಿ ।
ಎಂದೆಂದಿಗೆ ಇದು ಸಿದ್ಧವೆನ್ನಿರೊ ಮೂ ।
ರೊಂದು ಬಗೆ ಸೃಷ್ಟಿ (ನೆ) ರದು ಪರಮಾತ್ಮ ।
ಒಂದಾದಿಂದಲಿ ವಾಸುದೇವಾದಿರೂಪಗ ।
ಳಿಂದ ಧರಿಸಿದನು ಅಪತರೂಪ ।
ಇಂದಿರೆ ಮಾಯಾ ಜಯಾದಿ ನಾಮದಲ್ಲಿ ।
ಅಂದವಾದ ರೂಪ ಅನಂತವಾದಳು ।
ಅಂದು ಮುಕುತಾಜಾದಿ ಜೀವರಾಶಿಗ ।
ಳಿಂದ ಲಕುಮಿಯಿಂದ ಕ್ರೀಡನೆ ಆಡ ಬೇ ।
ಕೆಂದು ಸ್ವಾಭಾವನೆ ಇಚ್ಚೆ ಮಾಡಿದ ಗೋ ।
ವಿಂದನು ಅಪೂರ್ಣ ಅತೃಪ್ತನಲ್ಲದದೆ ।
ಪೊಂದಿದವರಿಗೆ ಅಧಿಕ ಸುಖಾ ।
ತಂದು ಕೊಡುವನು ತನಗೆ ಬೇಕಾದದ್ದು ।
ಒಂದಾದರು ಇಲ್ಲ ಬೇಸರಿಕೆಯವನಲ್ಲಾ ।
ಒಂದೇ ಸಮದೈವ ವಿಜಯ ವಿಠ್ಠಲನಿಗೆ ।
ವಂದಿಸಲು ಭವ ಬಂಧನ ಪರಿಹಾರಾ ೪

## ಆದಿತಾಳ

ತತೋಬೌಧ್ಯಾಯಸಿ ಯೆಂಬ ಶ್ರುತಿವಚನ ಇದೆ ಅರ್ಥ ।
ಪ್ರತಿದೈವ ತನ್ನ ನಿಜ ಸತಿಯ ಸಂಗಡ ನಾನಾ ।
ರತವನ್ನು ಸುಖಿಸಿ ಸಂತತ ಗೋಮತಿಗೆ ಬಲು ।

ನ್ನುತ ಪ್ರೇಮವ ನೀವೆ ಅತಿಶಯವಾಗಿ ಅಬ್ಜ ।
ಸುತಸರ್ವ ಜನರ ಮುಕುತಿಯಲ್ಲಿ ಅವರವರ ।
ಹಿತದಂತೆ ಪ್ರೇರಿಸಿ ಭಕುತಿ ಪೆಚ್ಚುವಂತೆ ಮಾಡಿ ।
ರಥ ಹಯ ಗಜಾಂದಣಕೆ ರಥಿಕಾ ರಾವುತನು ಮಾ ।
ವುತನಾಗಿ ಆಡುವನು ಚತುರತನದಿ ಮತ್ತೆ ।
ಮಿಥುನ ಭಾವಾದಲ್ಲಿ ಅಚ್ಯುತ ತನ್ನ ವರ ಕೂಡ ।
ಮಿತಿಯಲ್ಲದೆ ಮಿಸಿ ನಗುತ ಕ್ರೀಡಿಯಾಡುವನು ।
ಕಥೆ ರಾಮಾಯಣ ಭಾರತ ಮುಂತಾದ ರಹಸ್ಯ ।
ಚತುರಮೊಗಗೆ ಶಾಶ್ವತವಾಗಿ ತಿಳಿಸು ಮು ।
ಕುತಿಲಿ ಸುಖಿಸುತಿಪ್ಪ ಮತಿವಂತರ ಮನಕೆ ದೂರಾ ।
ರತಿ ಪತಿ ಪಿತ ನಮ್ಮ ವಿಜಯ ವಿಠ್ಠಲಾ ಉ ।
ತ್ಪತ್ತಿ ಸ್ಥಿತಿಲಯ ಕರ್ತ ಸುತ್ತಿಸೆ ಸಮೀಪ ನಿಲುವ ೫

## ಜತೆ

ಮುಕ್ತೀಲಿ ಈ ಪರಿ ಕ್ರೀಡೆಯಾಡುವ ಸರ್ವ ।
ಶಕ್ತಿಗುಣಪೂರ್ಣ ವಿಜಯ ವಿಠ್ಠಲ ಕಾಣೊ ೬

## ೪೨

## ಧ್ರುವ ತಾಳ

ದಾಸರಾ ನಿಜ ಕಾರುಣ್ಯ ಪಾತ್ರನು ನಾನು
ದಾಸರಾ ಹೆಬ್ಬಾಗಿಲ ಮುಂದೆ ಕಾಯ್ವುವ ನಾನು
ದಾಸರಾ ಮನೆಯಲ್ಲಿ ಅಂಗಣಾ ತೊಳಿವಾವಾ ನಾನು
ದಾಸರಾ ಭೋಜನಶಾಲೆ ಸಂಮ್ಮೂರ್ಜನಿಗಾ ನಾನು
ದಾಸರಾ ಸದನಕ್ಕೆ ಜಲವಾಹಕ ನಾನು
ದಾಸರಾ ಪೂಜಾ ಸಾಧನ ದ್ರವ್ಯತರುವಾವನಾನು

ದಾಸರಾ ಉತಾ ದೆಡೆಯಂಜಲತಗಿವಾವಾನಾನು
ದಾಸರಾ ಬಳಿಯಲ್ಲಿ ಸಮ್ಮೊಗಾದವಾ ನಾನು
ದಾಸರುಂಡದೆ ಉಂಡು ದಾಸರುಟ್ಟದ್ದೆ ಉಟ್ಟು
ದಾಸರಾಡಿದ್ದೆನಗ ವೇದವಾಕ್ಯವೆಂದು
ಲೇಸಾಗಿ ಪೇಳಿ ಕೊಳುತಾಲಿದ್ದಾವರಾ ಸಂಗಾ
ಲೇಶಾ ಬಿಡದೆ ಕಲಾಕಳೆವ ಜ್ಞಾನಿಗಳವರಾ
ದಾಸದಾಸೀ ಜನರಾಯಲ್ಲಿಗೆಲ್ಲಿಗೆ ನಿಜಾ
ದಾಸಾನು ದಾಸನು ನಾನು ಅನಂತಾ ಜನುಮಾದಲ್ಲಿ
ಭೂಷಣಾ[ವಾ]ಗಿದೆ ಮತ್ತಾವ ಸಂಪತ್ತು
ಸೂಶಿ ಪ್ರಾಪುತವಾಗಾಲದರಿಂದಾ ಲಾ ಭ ವೇನು
ದಾಸಜನ ಪ್ರೀಯ ವಿಜಯ ವಿಠಲರೇಯನ
ದಾಸನಾದವನಿಗೆ ಆವುದು ಕೊರತೆ ಕಾಣೆ ೧

## ಮಟ್ಟತಾಳ

ಸುಣ್ಣಕೆ ಗತಿ ಇಲ್ಲದ ಮನುಜ ಪಾಮರಗೆ
ಮುನ್ನೆ ಕುಳಿತಲ್ಲಿ ರನ್ನದೊಜ್ರದಖಣಿ ತನ್ನಿಂದಲಿ ತಾನೆ
ಕಣ್ಣಿಗೆ ಪೊಳೆದಂತೆ ಚನ್ನಾಗಿ ಬಳಿಯಲ್ಲಿ
ಬಣ್ಣಿಸಲರಿದು ಘನ್ನದುರಿತವೋ ಚನ್ನವಾದದಕೆ
ಎನ್ನ ಪುಣ್ಯವಲ್ಲಾ ಎನ್ನ ಸಾಧನವಲ್ಲಾ
ಮನ್ನಿಸಿ ಪಿರಿಯಾರು ಇನ್ನಿನಿ ಪಾಲಿಸಲು ಇನ್ನು ವೆಗ್ಗಳವಿದೆ
ಜನಾರ್ದನ ದೇವಾ ವಿಜಯ ವಿಠಲರೇಯನ
ಸನ್ನು[ತಿ]ಪರ ಮಹಿಮೆ ಬಣ್ಣಿಸುವರಾರೊ ೨

## ತ್ರಿವಿಡಿ ತಾಳ

ಅರವಿಂದಾ ಬೆಳೆಯಲ್ಲಿ ಖದ್ಯೋತಾ ಕ್ರಿಮಿ ಒಂದು
ಹರಿದಾಡತಿರಲಾಗ ಅದೆ ಕಾಲಾದಲ್ಲಿ
ತರಣಿ ಉದಿತಾವಾಗೆ ಮುದುರೀದಾ ಸರಸೀಜಾ
ಅರಳಾಲು ಕಾಣುತಲಾ ಖದ್ಯೋತವು

ಹರುಷಾ ಪಡುವುದೆಂದು ನರನು ನುಡಿಯಲದರಾ
ಚರಿತೆ ತಿಳಿಯಾದೇನೋ ನೋಳ್ಪರಿಗೆ
ಮರುಳೆ ಮನವೆ ಕೇಳು ಕವನಾ ನಿನ್ನಾ ಕೃತಿ
ಹಿರಿದಾಗಿಪ್ಪುದೆಂದು ಹಿಗ್ಗದಿರು ಎರಡು ಹೆಸರು ಒಂದಾ
ದರು ಮಹಾಖ್ಯಾತಿ ಬರುವುದು
ಕರುಣಿಗಲ್ಲಿದೆ ಖದ್ಯೋತಕ್ಕೆ ಏನಾ
ಗರುವಿತಿತ ನಾಸಲ್ಲಾ ವಿಜಯ ವಿಠಲರೇಯನ
ಶರಣಾರ ಕೃಪೆ ಇಂದಾ ಭಾಗ್ಯಾ ನಿಜಾವೆನ್ನಿ ೩

## ಅಟ್ಟತಾಳ

ಪರಮ ದಾರಿದ್ರಾನು ಸ್ಥಿರ ರೋಗಿಷ್ಟಾನು
ನಿದ್ರಾಕಾಮ[ಸ]ದುಃಖಿಷ್ಟ ಎಂದಿಗು
ಕುರುಡಾನು ಕುಂಟಾನು ಕಿವಡಾ ಮೂಕ ನಾನಾ
ಪರಿವ್ಯಾಧಿ ವ್ಯಾಕುಲದವ ಆರು ಇಲ್ಲದಿಪ್ಪ
ಪರದೇಶಿ ಕೇವಲ ಕೃಷಿ ಪೀಡಿತಾ ಸುಧಾ
ತುರನಾಗಿ ಬ್ಯಾಸಿಗೆ ಬಿಸಲೊಳೂ ತಪಿಸುತ್ತಾ
ಸ್ಮರಣೆ ಇಲ್ಲದೆ ನೀರು ಇಲ್ಲಾದಾರಣ್ಯಾದಿ
ಇರುತಿಪ್ಪ ಮಂದ ಮಾನವನ ತತ್ಕಾಲದಿ
ಭರದಿಂದ ಕೊಂಡೊಯ್ದು ಸಂಜೆವನಾದ್ರೀಲಿ
ಸುರ ತರುವಿನಾ ತಂಪನೆಳೆಲೊಳಾಗಿಟ್ಟು
ಪರಿಯಂತೆ ಎನಗಿಂದು ಸೋತ್ತುಮಾರಿಂದಾಲಿ
ದೊರಕೀತು ಇದೆ ಸುಖಾ ಸೌಖ್ಯವೆನ್ನು ಮನವೆ
ಧರಿಯೊಳೆ ದೈವವಾದ ವಿಜಯ ವಿಠಲನ್ನ
ಮರಿಯಾದೆ ಭಕ್ತಿಯಲಿ ಕೊಂಡಾಡು ನಲಿದಾಡು ೪

### ಆದಿತಾಳ

ಉಪಜೀವನಾಗಿದೆ ಎಲೊ ಮನವೆಕೇಳು
ಗುಪಿತಾದಲ್ಲಿ ಚರಿಸು ಅಂತಾರಂಗಾದಲ್ಲಿ
ಸುಪಥವಾಬಯಸುತಿರು ಸುಜನಾರಾ ಬಿಡದಿರು
ಅಫಲಾ ನಾನು ಅತಿ ಉಗ್ರಾ ಕರ್ಮಾ ಬಿಡು
ಉಪಚಾರವೆನ್ನಾದಿರು ಹರಿದಸರು ಒಲಿದು
ಕೃಪೆಮಾಡಿದಲ್ಲಾದೆ ಬರಿದೆ ಬಾಹುದೆ ಸುಖ
ವಿಪುಳಾದೊಳಗೆ ಹರಿದಾಸನಾಗುವುದಕ್ಕೆ
ಅಪರಿಮಿತವಾಗಿ ಸಾಧನಾ ದೊರಿಯಾಗಬೇಕು
ಉಪದೇಶ ಕರ್ತಾ ನಮ್ಮಾ ವಿಜಯ ವಿಠ್ಠಲರೇಯನ
ಜಪತಪಾಧ್ಯಾನದಿಂದಾ ಪಾಪಾ ಪೋಗಾಡುವುದು ೫

### ಜತೆ

ಇಂದ್ರನಾಮಕರಾದ ದಾಸರೊಲಿದಾ ಮ್ಯಾಲೆ
ಚಂದ್ರ ಪ್ರಕಾಶಕ ವಿಜಯಾ ವಿಠಲಾ ಪೊಳೆವಾ ೬

## ೪೩

### ಧ್ರುವ ತಾಳ

ದೀನ ಮಾನವನಿಗೆ ನೀನೇನು ಕರುಣಿಸಿದರೂ
ತಾನಿಲ್ಲಾದೆ ಪೋಗಿ ಹೀನವಾಗುವುದೊ
ಅನಂತ ದಿನಕೆ ನಿದಾನ ನಿಕ್ಷೇಪ ಸಂಪಾ
ದನೆ ಸವಿಯದಂತೆ ಆನಂದವಾಗಿರಲು
ನಾನೋತ ಪುಣ್ಯದಿಂದಾಧೀನವಾಗಿರಸದೆ

ಮೇಣು ಪೋಗಾಡಿದೇನು ದೀನ ಬಂಧೂ
ಜೇನು ಕಾನನದೊಳು ತಾನಿಟ್ಟು ಉಣದಂತೆ
ನಾನುಂಡು ಸುಖಿಸದೆ ನಾನಿದ್ದೆ ಬರಿದೇ
ದಾನವಾಂತಕ ಎನ್ನ ಪ್ರಾಣ ವಿಜಯ ವಿಠ್ಠಲ
ಧೇನು ನೀನಿರಲು ಯೋಚನೆ ಎನಗಿಷ್ಟು ಮಾಡ ಸಲ್ಲಾ ೧

## ಮಟ್ಟತಾಳ

ನಾಯಿಗೆ ಶಾವಿಗೆ ಪರಮಾನ್ನದ ತುತ್ತು
ಬಾಯೊಳಗಿಡಲದು ಉಂಡು ಜೀವಿಸುವುದೇ
ಶ್ರೀ ಯರಸ ನಿನ್ನ ಸೊಬಗಿನ ನಾಮದ
ಪೀಯೂಷವ ಕುಡಿಯೆ ದಕ್ಕುವುದೇ ಎನಗೆ
ಅಯೋಗ್ಯನು ನಾನು ಅಪ್ರಬುದ್ಧನು ನಾನು
ಕಾಯದೊಳಗೆ ಭರಿತಾ ವಿಷ ಪುಂಜರ ನಾನು
ಪಯೋನಿಧಿ ಶಯನ ವಿಜಯ ವಿಠ್ಠಲ ಎನ್ನ
ಕಾಯುವ ಬಿರಿದುಳ್ಳ ಕಪಟನಾಟಕ ರಂಗಾ ೨

## ತ್ರಿವಿಡಿ ತಾಳ

ಉದ್ಧಾರ ಮಾಡುವಲ್ಲಿ ಜ್ಞಾನಿ ನೀನಿರಲಿಕ್ಕೆ
ಕುದ್ದು ವ್ಯಾಕುಲದಿಂದ ನಾನಳಲುವದ್ಯಾಕೆ
ಇದ್ದವಿಲ್ಲದವೆಲ್ಲಾ ನೀನೆ ಪೇಳಿಸಿ ಕೃತಿ
ಸಿದ್ಧವೆಂದೆನಿಸಿದೆ ಸಕಲರಿಂದಾ
ಪದ್ಮನಾಭನೆ ನಿನ್ನ ಕಾರುಣ್ಯವನು ಪಡೆದು
ಇದ್ದವನಿಗೆ ಇಲ್ಲ ಸುಲಭ ಕಾಣೋ
ಬಿದ್ದು ಹೋಹೆ ಪತ್ರದ ಮೇಲೆ ಬರೆದರೆ
ಪೊದ್ದಿರದೆ ಪೋಗೋವು ತನಗಲ್ಲದೇ

ಮುದ್ದು ಮೋಹನ ರಂಗ ವಿಜಯ ವಿಠ್ಠಲ ಕರು
ಣಾಬ್ಧಿಯೆ ನೀನೊಲಿಯೆ ಯಾತರಾಲೋಚನೆ ೩

**ಅಟ್ಟತಾಳ**

ಒಳಗೆ ಪ್ರೇರಕನಾಗಿ ಒಲಿಮೆಯಿಂದಲಿ ಕಲಾ
ಘಳಿಗಿರಗೊಡದಲೆ ತಿಳುಹಿ ಕೊಡುತಾ ಬಪ್ಪಾ
ಚಲುವ ನಿನ್ನಯ ಪಾದಜಲಜಕೆ ನಮೋ ನಮೋ
ಬಲು ದಯುರಸ ಭಕ್ತಾವಳಿಗೆ ನೀನಲ್ಲಾದೇ
ಇಳೆಯೊಳು ಮತ್ತೊಂದು ನೆಲೆಬಲ್ಲ ದೇವತೆ
ಗಳು ಎಲ್ಲಿ ಕಾಣೆನೋ ಕೆಲಕಾಲ ನೋಡಲು
ಬಲವಂತ ಜಗದಯ್ಯಾ ವಿಜಯ ವಿಠ್ಠಲರೇಯಾ
ಸುಳಿ ಸುಳಿದಾಡು [ವೆ]ಗ್ಗಳಿಯಾ ದೇವೇಶ ೪

**ಆದಿತಾಳ**

ದಾತಾ ನೀನಾಗಿರೆ ಯಾತರಾಲೋಚನೆ
ಮಾತು ಮಾತಿಗೆ ಸಂಪ್ರೀತಿಯ ಬಡಿಸುತ
ಈ ತನುವ ಮನವ ಭೀತಿಗೊಳದ ತೆರದೀ
ತಾತ ನೀನಾಗಿರೆ ನೀ ತಡಿಯದಲೆ ಪೊರೆವುತಿರೆ ಎನ್ನದೇನು
ಪಾತಕ ಹರ ನಮ್ಮ ವಿಜಯ ವಿಠ್ಠಲ ಎನಗೆ
ಮಾತಾಪಿತನು ನೀನೆ ಭೂತಳಾಧೀಶಾ ೫

**ಜತೆ**

ಮುಗ್ಗಿದಲ್ಲಿಗೆ ಬಂದು ಒದಗುವ ಕರುಣಾಳು
ಕುಗ್ಗಗೊಡದೆ ಕಾಯೋ ವಿಜಯ ವಿಠ್ಠಲರೇಯಾ ೬

## ೪೪

### ಧ್ರುವತಾಳ

ದೇವ ನಿನ್ನ ಮಹಿಮೆಯನ್ಯಾವನರಿವನು
ಅವನ ಚರಣಕ್ಕೆ ಶರಣು ಎಂಬೆ
ಪಾವನಾಮೃತ ಸಂಜೀವನ ಈ ಶರೀರ
ಪಾವಿನ ತುಳಿದ ಪರಮ ಪುರುಷಾ
ಗೋವರ್ಧನಗಿರಿ ಪೂವಿನೋಪಾದಿಯಲ್ಲಿ
ಆ ವರುಷ ಗರಿಯಲು ಬೆರಳಲೆತ್ತಿ
ಗೋವಳರಾವುಗಳ ಪಾಲಿಸಿ ಗೀರ್ವಾಣ
ದೇವನ ಗರ್ವಾದ್ರಿ ಭಂಗಿಸಿದೆ
ಸೇವಕ ಜನರಿಗೆ ಆವಾಗ ಪಂಚಪ್ರಾಣ
ವಾವನೋ ನಿಧನ ರಹಿತ ಈ ವಸುಧೆಯೊಳು
ಗೋವಿಂದ ಅಚ್ಯುತ ಕೇಶವ ಅಂತೆಂದು ನೆನಿಯದವನು
ಕೀವು ಮೊದಲಾದ ನರಕದಲ್ಲಿ ಬಿದ್ದು
ಸಾವು ಪುಟ್ಟಿಲ್ಲದೇ ಮಿಡುಕುವನು
ನಿವರ್ತಾತ್ಮ ನಾಮ ವಿಜಯ ವಿಠ್ಠಲ ನಿನ್ನ
ಕಾವ ಸೋಜಿಗವು ಸರ್ವರಿಗೆ ಸಾಧ್ಯ ೧

### ಮಟ್ಟತಾಳ

ಏನು ಪೇಳಲಿ ಇಂದು ನೀನು ಪಾಲಿಪ ಲೀಲೆ
ಮಾನವ ಮುನಿ ನಿರ್ಜರನಿಕರ ಬಲ್ಲುದೆ
ನಾನು ನಾನು ಇಂದು ನಾನಾ ಜನ್ಮದಲ್ಲಿ
ಕೇಣಿಗೊಂಬುವ ಹೀನ ಕಾಣಲಾಪಪೆನೆ ನಿನ್ನ

ಶ್ವಾನಗೆ ಶಾವಿಗೆ ಏನು ಉಣಿಸಿದರೇ
ತಾನುಂಡು ಸಂತೋಷವನು ಪಡಬಲ್ಲುದೇ
ದೀನ ಜನೋದ್ಧಾರ ದೀನಜನಾಧಾರ
ದೀನ ವತ್ಸಲ ಧರ್ಮ ವಿಜಯ ವಿಠ್ಠಲರೇಯಾ
ನೀನು ಮಾಡುವ ಕರುಣ ನಾನೇನು ಬಲ್ಲೆನೊ ೨

## ತ್ರಿವಿಡಿ ತಾಳ

ನಿನ್ನ ಪ್ರಸನ್ನೀಕರಿಸಿಕೊಳ್ಳದ ನರನಜನ್ಮವೆ ಸುಡು ಸುಡು
ಇನ್ನ್ಯಾತಕೆ ದೇಹ ಎನ್ನ ಪೋಲುವ ಪಾಪಿಯನ್ನು ಆರಿಸಿದರೆ
ಅನಂತಾವಾನಂತದಲ್ಲಿ ಇಲ್ಲಾ ಕಣ್ಣಿದ್ದು ಕುರುಡನಾಗಿ ದಾ
ರಿ ನಡೆದ ಮೂರ್ಖನಂತೆ ಬದುಕಿದ ಘನ್ನ ಗರ್ವದಲ್ಲಿ
ಖನ್ನ ಸಂವಾದ ಸಂಸಾರದ ಮಣ್ಣಿನೊಳಗೆ ಹೊರಳಿ
ಭಿನ್ನಜ್ಞಾನದಲಿ ಸುಖಿಸುವೆನೋ
ಪೊನ್ನಾಂಬರನಯ್ಯಾ ವಿಜಯ ವಿಠ್ಠಲರೇಯಾ
ಬಣ್ಣಿಸಲಾಪೆನೆ ನಿನ್ನ ಪರಮ ಶಕ್ತಿ ೩

## ಅಟ್ಟತಾಳ

ವೀಂದ್ರವಾಹನ ರಾಮಚಂದ್ರನೆ ಗೋಕುಲ
ಚಂದ್ರನೆ ಅಖಿಳ ಕಮಲ ಜಾಂಡವ ಸೂಜಿ
ರಂಧ್ರ ದೊಳಗೆ ಪೋಗಿಸಿ ತಗೆವ ಮಾಯಾ
ಇಂದ್ರಸುರಾದ್ಯರು ಬಲ್ಲರೇನು ಉ
ಪೇಂದ್ರ ನಿನ್ನಯ ತವ ಘಟಿತವು
ನಿಂದ್ರಲಾಪವೆ ವೇದಾಸ್ತುತಿಸಿ ಸಹಜವೆಂದು
ಇಂದ್ರಿಗಗೋಚರ ಚಂದ್ರಾರ್ಕಾನುತ ಸ್ವೈ
ಳೇಂದ್ರಿಯ ಕಾಯ್ದು ಕಪಟನಾಟಿಕ ದೇವಾ

ತ್ರೀಂದ್ರಿಯನಾಮ ಶ್ರಿ ವಿಜಯ ವಿಠ್ಠಲ ಸ
ರ್ವೇಂದ್ರಿ ವ್ಯಾಪಾರಕ್ಕೆ ಮೀರಿದ ದೈವವೇ ೪

## ಆದಿತಾಳ

ಶ್ರೀ ಲಕುಮಿಗೆ ಪೇಳದೆ ಗಜೇಂದ್ರ ಕೇಳುವನಿತರೊಳು
ಆಲಸವಿಲ್ಲದ ಗಮನಾ ಆಳುಗಳು ಕೂಗಲು ನೀ
ಪಾಲಿಸುವ ಚತುರತನವೊ ಪೇಳಲೇನು ಬರುವ ಭಾರವ
ಬಾಲಲೋಲ ವಿನೋದನೆ ಕಾಲ ಕಾಲಕ್ಕೆ ನೆರೆ ನಂಬಿ
ದಾಳುಗಳ ಭಾರಕರ್ತಾ ಮೂಲೋಕದೊಳಗೆ ನಿನ್ನ
ಆಳುತನ ಮಾಯಾಶಕ್ತಿ ಮೇಲೆ ಗಮನ ವ್ಯಾಪಾರದಿ
ಸ್ಥೂಲ ಸೂಕ್ಷ್ಮವೆಲ್ಲಾ ಭೇದ ಶ್ರೀ ಲೋಲ ನಿನ್ನ ಮಹಿಮೆ
ಹೇಳಿ ಕೇಳುವರ ಕರ್ಣಕ್ಕೆ ಆಲಯದ ಮಧುರ ಪಾನಾ
ಮೇಲಗಿರಿ ತಿಮ್ಮಾ ಬ್ರಹ್ಮಾ ವಿಜಯ ವಿಠ್ಠಲ ದೇವಾ
ಸೋಲದವರೇ ನಿನಗಿಲ್ಲಾ ನಿನಗಿಲ್ಲಾ
ಕಾಲದೇಶ ಪಾತ್ರಪೂರ್ಣ ೫

## ಜತೆ

[ಆ]ವ ಧ್ಯಾನವೊ ನಿನ್ನದಾವ ಕ್ರೀಡೆಯೋ ತಿಳಿಯದು
ಆವ ನೂತನವು ಮಹಾ ಭೋಗಾ ವಿಜಯ ವಿಠ್ಠಲಾ ೬

## ೪೬

## ಧ್ರುವತಾಳ

ಧಾರಣ ಧ್ಯಾನಯೋಗ ಮಾಡು ಮನವೆ ಅಸಾ
ಧಾರಣ ಹರಿಯ ಮಹಿಮೆ ಪೂರ್ಣ ತಿಳಿದು

ತಾರತಮ್ಯನುಸಾರ ತಾತ್ವಿಕ ಜನರ ವಿ
ಸ್ತಾರವಾದ ರೂಪಾಂತರವ ಗ್ರಹಿಸಿ
ಆರೇಳೊಂದು ಭುವನ ಅಲ್ಲಲ್ಲಿ ಇದ್ದ ವಸ್ತು
ವಿರಾಟರೂಪ ವೈಕುಂಠನಗರ
ವಾರಿಜ ಜಾಂಡ ಖರ್ಪರ ಸಮಸ್ತಾವರಣ
ಸಾರಾಸಾರಾವನ್ನು ನೋಡು ಅಧಿಕವಾಗಿ
ಮೂರು ಗುಣದಿಂದ ಆಗುವ ಕಾರ್ಯ ತಿಳಿದು
ಸಾರಿ ಸಾರಿಗೆ ಹಿಗ್ಗಿ ಕೊಂಡಾಡುತ್ತ
ನಾರಾಯಣನೆ ಮುಖ್ಯ ಸಮಸ್ತರೊಡನೆ ಮಹಾ
ಧೀರನೆ ಅಪ್ರಮೇಯ ನಿತ್ಯ ಸುಲಭ
ಆರಾಧನೆ ಮಾಡೋದು ಓರ್ವೋರ್ವರಲ್ಲಿ ನಿಲಿಸಿ
ಬೇರೆ ಬೇರೆ ಬುದ್ಧಿಯಿಂದ ತಿಳಿದು
ಮೇರೆ ಇಲ್ಲದೆ ದೇವತೆಗಳ ಅಂಶ ಅವ
ತಾರ ಉಣಿಸಿ ಇವರ ಪ್ರಸಾದವ
ಮೂರು ಬಗೆಯಿಂದ ಸಂಪಾದಿಸಿ ಲಕುಮಿ
ನಾರಾಯಣನನ್ನು ಧ್ಯಾನಗೈದು ಮುಕ್ತಿ
ಸೂರೆಗೊಂಡು ನೀನು ಸುಖಿಸೋದು ಅಲ್ಲಿಗಲ್ಲಿ
ಕೀರುತಿವಂತನಾಗು ಇಹಪರದಲ್ಲಿ
[ಶ]ರೀರದೊಳಗಿದ್ದ ಮಾನಿಗಳೆ ಸರ್ವಾ
ಕಾರವಾಗಿಪ್ಪರೆಂದು ಚಿಂತಿಸಿ ನಿತ್ಯ
ವಾರ ವಾರಕ್ಕೆ ಪ್ರಾಣ ನಿರೋಧಮಾಡಿ ಶ್ವಾಸ
ಧಾರಣದಿಂದಲಿ ಮನ ನಿಲಿಸೋ
ಕಾರಣ ಕಾರ್ಯರೂಪ ಒಂದೊಂದು ನೆನಿಸಿ ಉಪಸಂ
ಹಾರಾದಿಂದಲಿ ಸರ್ವ ಮಿಳಿತಗೈಯೋ
ಚಾರು ಚರಿತ್ರ ನಮ್ಮ ವಿಜಯವಿಠಲನಂಘ್ರಿ
ವಾರಿಜದಳವನ್ನು ಭಕ್ತಿಯಿಂದಲಿ ನೋಡು ೧

## ಮಟ್ಟತಾಳ

ತಾತ್ವಿಕ ಕಾರ್ಮಿಕ ಮನುಜ ತೃಣ ತನಕ
ಸಾತ್ವಿಕ ಗುಣದವರು ಮುಕ್ತಿಯೋಗ್ಯರು ಮುಖ್ಯ
ಜಾತಿ ಭೇದವುಂಟು ಜಗದೊಳಗೆ ಎನ್ನಿ
ಪೂತುರೆ ಮೂವತ್ತು ಮೂರು ಕೋಟಿ ಸ್ವರ್ಗ
ಜಾತಸ್ತರ ಕಾಣೋ ಪಾತಾಳಮಾರಭ್ಯ
ಸತ್ಯಲೋಕವೆ ವಿಡಿದು
ಗಾತುರ ಭೇದದಲಿ ತುಂಬಿ ಕೊಂಡಿಹರಯ್ಯಾ
ಈ ತೆರದಲಿಯಿದ್ದ ದೇವರೊಳಗೆ ತ್ರಿವಿಧ
ಚಾತುರ ಬಗೆ ಸಂಖ್ಯೆ ಪಂಚ ಪ್ರಕಾರಗಳು
ಧಾತ ಮೊದಲ ಮಾಡಿ ಅಜಾನುಜ ಪರಿಯಂತ
ನೀತಿಯಿಂದಲಿ ಗ್ರಹಿಸು ನಿರ್ಣಯ ಉಕ್ತಿಯಲಿ
ಭೀತ ರಹಿತ ನಮ್ಮ ವಿಜಯ ವಿಠಲರೇಯ
ಸ್ವಾತಂತ್ರನೆಂದು ಇದರನ್ನೇ ಪ್ರಾರ್ಥಿಸೊ ೨

## ತ್ರಿವಿಡಿ ತಾಳ

ಮುಕುತಿ ಯೋಗ್ಯರ ಸರ್ಗ ಕ್ರಮಾಂತು ಚಿಂತಿಸು
ಭಕುತಿ ಸ್ನೇಹದಿಂದ ಅಡಿಗಡಿಗೆ
ಸಕಲಕ್ಕು ಮಹಾಶ್ರೇಷ್ಠ ಬ್ರಹ್ಮ ವಾಯುಗಳು ಕಾ
ರ್ಮುಕ ದೇವತಿ ಭಾರತಿ ನಾಗಾರಿ ಫಣಿ ಕಾಮಾ
ಹರ ಷಣ್ಮಹಿಷಿ ಜನ ಗರುಡಾದ್ಯರ ಸತಿಯರು
ಮಖಶತ ಮದನ ಅಹಂಪ್ರಾಣ ಅನಿರುದ್ಧ
ಅಕಳಂಕಾದಿ ಮನು ರತಿ ಗುರು ಶಚಿ ದ
ಕ್ಷಕ ಪ್ರವಾಹ ವಾಯು ಮನು ಪತ್ನಿ ಶಶಿ ಜಲಜ

ಸಖ ಧರ್ಮ ವರುಣ ನಾರದ ಮುನಿ ಭೃಗು ಪಾ
ವಕ ಪ್ರಸೂತಿ ವಿಶ್ವಾಮಿತ್ರಾದ್ಯರು
ಅಕಟ ಮಿತ್ರನು ತಾರಾ ಪ್ರಾವಹಿ ದನುಜ ನಾ
ಯಕ ವಿಷ್ವಕ್ಸೇನ ವೈದ್ಯರು ಧನಪ ವಿನಾ
ಯಕ ಉಕ್ತಶೇಷರು ಸಹವಾಗಿ ಮುಖ್ಯ ತಾ
ತ್ವಿಕರೆನ್ನಿ ಇವರಿಗೆ ಸಹಜ ದೇವತ್ವವೊ
ಅಖಿಳ ಬಗೆಯಿಂದಲಿ ನೋಡಲು ನಿಜ ಮಹ
ಭಕುತಿವುಳ್ಳವರಯ್ಯಾ ದ್ವಿವಿಧವೆನ್ನಿ
ಪ್ರಕಟವಾಗಿದೆ ತಾರತಮ್ಯನುಸಾರ ಹಾ
ಟಕಗರ್ಭವಿಡಿದು ಋಭುಗಣ ತನಕ ಎ
ಣಿಕೆ ಮಾಡಲಾಗಿ ತ್ರಿಶತೋತ್ತರ ತ್ರಿಸಹಸ್ರ
ಧಿಕರೆನ್ನಿ ವಿಷ್ಣುಪಾದೈಕಾಶ್ರಯ
ಸುಖಸಾಂದ್ರ ವಿಜಯ ವಿಠಲರೇಯನ ಸೇ
ವಕರಾಗಿ ಸರ್ವ ಲೋಕದಲಿ ತುಂಬಿಹರೋ ೩

## ಝಂಪೆತಾಳ

ಪಾವಕ ಪವಮಾನ ವನ್ಹಿಲ ಪುತ್ರರು ಷಡ್
ದೇವ ಬಲ್ಯಾದಿಗಳು ಮನುಗಳೇಕಾದಶ
ಚಾವನೊಚೇಥ್ಯಾದಿ ಋಷಿಗಳು ನವತಿ ಸಂ
ಭಾವಿಸುತ ಸನಕಾದಿ ಚಿತ್ರಾಂಗದ ಮಿಕ್ಕ
ದೇವಗಂಧರ್ವರು ಚಕ್ರವರ್ತಿಗಳು ಶತ
ಈ ವಿಧದಿ ಮಾನುಷ್ಯವಗಾಭಿಮನಿ ವಾ
ಗ್ದೇವಿ ರಾಕಾಧಿ ಶಾಂತನು ಶತಾನುಶೇಷ ಭಾರ್ಯಾ
ದೇವಿ ದಿಕ್ಪಾಲಕರು ಪ್ರಾಣಾನಿರುದ್ಧ ಋಭು
ಅವರುಗಳ ಹೆಂಡರನು ತಿಳಿದು ದೇವ ನದಿ

ಪರ್ಜನ್ಯರವಿ ಶಶಿ ಯಮಾದ್ಯ
ರ ವಧುಗಳು ಅನಿರುದ್ಧನ ಪತ್ನಿ
ಪಾವಕಾದ್ಯರು ಮನುರ್ವೈವತಾದ್ಯಸ್ತ್ರೀಯರು
ಕೋವಿದ ಜಯಂತ ಜಯಾದ್ಯ ಕಾಲಾಖ್ಯರು
ಧಾವಂತ ಯಮ ಭಟರು ಬಲ್ಯಾದಿಗಳ ಹೆಂಡರು
ದೇವತಿಗಳು ಕೆಲವು ಯಕ್ಷಗಣ ಪ್ರಧಾನ
ಪಾವಕ ಪವಮಾನ ಆರಂಭಿಸಿ
ಆವ ಬಗೆಯಿಂದ ಗುಣಿಸೆ ವಿಂಶತಿ
ನವ ಸಾವಿರದ ಏಳನೂರಜನರೆನ್ನಿ
ಸಾವಧಾನದಿ ಕೇಳೆ ಅಮುಖ್ಯತಾತ್ವಿಕ
ದೇವತೆಗಳು ಇವರೆ ಕಾರ್ಮಿಕರೊ
ದೇವಕಿ ಸುತ ನಮ್ಮ ವಿಜಯ ವಿಠಲರೇಯ
ಕಾವ ಈ ಪರಿಯಿಂದ ನೆನೆಸಿ ಧ್ಯಾನವ ಮಾಡೆ ೪

## ರೂಪಕ ತಾಳ

ಬುಧ ಶನಿ ಪತ್ನೇರು ತೀರ್ಥಾಭಿಮಾನಿಗಳು
ಇದರ ತರುವಾಯ ಪುಷ್ಕರ ಕರ್ಮಪಾಭಿದರು
ಇದನೆಲ್ಲ ಕೂಡಿಸಿ ಎರಡು ಕೋಟಿಯ ಮೇಲೆ
ಅಧಿಕ ನವಲಕ್ಷ ಅರವತ್ತೇಳು ಸಹಸ್ರ
ಹದಿನಾರು ಸಾವಿರ ಅಗ್ನಿ ಪುತ್ರರು ಈ
ವಿಧದಲಿ ಶತಕೋಟಿಗೆ ಶತನ್ಯೂನ ಋಷಿಗಳು
ತ್ರಿದಶ ಗಂಧರ್ವ ಅಪ್ಸರರು ಶತಾಶತ ಮಂದಿ
ಮುದದಿಂದ ಚಿರಪಿತೃ[ಗಳು] ಕೆಲವು ಪಿತೃ ಗಂಧರ್ವ
ಬದಿಯಲ್ಲಿ ಅಪ್ಸರರು ಸಿದ್ಧಸಾಧ್ಯ ಚಾರಣ

ಮೊದಲಾದ ವಿದ್ಯಾ ಧರರು ಕಿನ್ನರ ಕಿಂಪುರುಷ ಜನ
ಅದುಭೂತ ಭೂತ ಪ್ರೇತ ಪಿಶಾಚ ಯಕ್ಷ
ಹದುಳ ಬಯಸುವ ರಾಕ್ಷಸ ಭಿನ್ನರಾಗೆ
ಹದಿನಾರು ಜಾತಿಯೋಳ್ಗತರಾಗಿ ಇಪ್ಪರು
ತದುಪರಿ ಕೆಲವು ಅಪ್ಸರರು ನರಗಂಧರ್ವ
ಒದಗಿ ಇಲ್ಲಿ ಗುಣಿಸಿ ವಿ
ವಿಧ ಇವರೊಳಕ್ಕು ಪದಸ್ಥ ರಹಿತಕಾಣೊ
ಚದುರರು ಚತುರ್ವಿಂಶತಿ ಕೋಟಿ ಸಂಖ್ಯಾಕರು
ಇದನೆಲ್ಲ ಕೂಡಿಸಿ ಗಣಿತ ಮಾಡಲು
ಆದದ್ದು ಮೂವತ್ತು ಮೂರು ಕೋಟಿ ದೇವತಿಗಳು
ಯದುಕುಲ ಲಲಾಮ ವಿಜಯ ವಿಠಲಸಾರಾ
ಹೃದಯ ಮನಸ್ಸಿನಲಿ ಇದರಂತೆ ನುಡಿಸುವ ೫

## ಅಟ್ಟತಾಳ

ಉಳಿದಾದ ರಾಯರು ಮನುಜೋತ್ತಮರು ಖಗಾ
ವಳಿ ಮೃಗ ಉರಗ ಗಜಾದಿ ತೃಣಜೀವ
ತಿಳಿದು ಈ ಪರಿಯಿಂದ ಮುಕುತಿಯಿಂದ ಸವಿಶೇಷ ಗ್ರಹಿಸು ವಿ
ಮಲ ಮನಸಿನಿಂದಲಿ ಇದರೊಳು ನಿರಂಶರ ಆ
ಕೆಲಕೆ ಸಾರಿ ಮುಂದೆ ಸಾಂಶರ ಮಧ್ಯ
ಕೆಲರು ಅಜಾನಜರು ಕಾರ್ಮಿಕರು
ಕೆಲವು ತಾತ್ವಿಕ ಜನರು ಇನಿತು ಲೆಖ್ಖವನು ಮಾಡೆ ವಿವರವುಂಟು
ತಿಳಿ ಮುಖ್ಯ ತಾತ್ವಿಕ ಶನಿ ಪರಿಯಂತ ವಿಂಶತಿನವ
ಏಳು ಸಾವಿರ ಜನರೆನ್ನಿ ತೀರ್ಥಾಭಿಮಾನಿ ಪುಷ್ಕರ ಪರಿಯಂತ
ಮಿಳಿತವಾಯಿತು ಎಂಟು ತೊಂತೊಂಭತ್ತು ಲಕ್ಷ ಅರವ

ತ್ತೇಳು ಸಾವಿರ ಎಲ್ಲ ಕೂಡಿಸಿ ಒಂಭತ್ತು ಕೋಟಿ ಆಯಿತು
ಉಳಿದಾಜಾನಜ ಅಗ್ನಿ ಪುತ್ರ ಅಪ್ಸರ ಗಂಧರ್ವ ಚಿರಪಿತೃ ಮೊ
ದಲಾಗಿ ಸಿದ್ಧ ಸಾಧ್ಯ ಇಪ್ಪತ್ತು ನಾಲ್ಕು ಕೋಟಿ ಋಷಿ
ಗಳು ನೂರುಕೋಟಿ ಅಂತು ನೂರಾ ಮೂವತ್ತು ಮೂರು ಕೋಟಿ
ಮಿಳಿತವಾಯಿತು ಕೇಳಿ ಮಹಾತ್ಮರ ಲೀಲೆ
ಒಳಗೆ ಹೊರಗೆ ಭೂಮಂಡಲದಿ ತುಂಬಿದೆ
ನೆಲೆಯ ಬಲ್ಲವರಾರು ಅಚಿಂತ್ಯಾದ್ಭುತಶಕ್ತಿ
ಕೆಲಕಾಲ ಇವರಿಗೆ ಉಂಟು ಹರಿ ಕೃಪೆ
ಕಳಾಕಾಷ್ಟ ಮೊದಲಾದ ಕಾಲದೇಶ ಕರ್ಮಾ
ವಳಿಗುಣ ಭೂತ ಪಂಚಕ ದಶೇಂದ್ರಿಯ
ಬಲು ವೈರಾಗ್ಯ ಜ್ಞಾನ ಭಕುತಿ ಸಾಧನ ನಾನಾ
ಕುಲ ಯಾಗ ಯೋಗ ಭೋಗ ಭೋಜನಾಜನ
ಸಿಲಿನದಿ ಪರ್ವತ ದ್ವಿಸಪ್ತಾಂಬುಧಿ
ಪೊಳೆವ ಪಾತಾಳಾದಿ ಚತುರ್ದಶಭುವನ ಆಶಾ
ರೂಪ ವಾಗ್ವಾದಿ ವ್ಯವಹಾರ ಶಮಲವರ್ನಾದಿ
ರೂಪವ ದಿವ್ಯವಾಕಾರಾ
ಪೊಳೆವ ಪೋತ ಯವ್ವನ ವೃದ್ಧಾಪ್ಯತನ
ಇಳಿಯೊಳು ಎಂಭತ್ತುನಾಲ್ಕು ಲಕ್ಷ ಜೀವ
ಫಲ ಮರ ಮೊದಲಾಗಿ ಮನುಷ್ಯ ಪರಿಯಂತೆ
ಮಳೆ ಬೆಳೆ ಛಳಿ ಮಿಂಚು ನಾನಾ ವಾದ್ಯ ಶಬ್ಧ
ಸುಲಭ ವೇದಶಾಸ್ತ್ರ ಪುರಾಣ ಬಲು ವರ್ಣ
ಕಲಿಯುಗದೊಳಿದ್ದವೇನೇನು ಕ್ರಿಯಾದಿ
ಜಲಜ ಭವಾಂಡ ವಿರಾಡ್ರೂಪ ಖರ್ಪರ
ವಲಯಾಕರ ಸಪ್ತ ಪ್ರಕಾರ ತತ್ವವು

ಫಲ ಪರಮಾಣು ಲಿಂಗದೇಹ ಇಲಿಯಿದ್ದ
ಕಳೆ ಸಹಿತವಾಗಿ ಸರ್ವದಾ ಸಮಸ್ತ
ಸ್ಥಳದಲ್ಲಿ ಪೊಂದಿದ ಅಭಿಮತ ದಿವಿಜರ
ಬಳಿವಿಡಿದು ಅವತಾರಗಳಾವೇಶ
ಗಳನು ಚಿಂತಿಸಿ ಓರ್ವೋರ್ವರ ಪ್ರತಾಪ
ಒಲಿಮೆಯಿಂದಲಿ ತುತಿಸುತ್ತ ಹಿಗ್ಗುತ್ತ ಚಂ
ಚಲತನವನೆ ಬಿಟ್ಟು ಸರ್ವ ಏಕೀ ಭೂತ
ತಿಳಿದು ಆಮೇಲೆ ಉತ್ತಮರಾಧೀನ ಚಿಂತೆ
ನಲಿನಲಿದು ಮಾಡು ಅವರವರ ಕೋಟಿಯು
ಸಲೆ ಮೂರು ಬಗೆಯಿಂದ ಈ ಪರಿ ಎಣಿಕಿಲೀ
ಹಲವು ಸ್ಥಾನಂತರ ಬರುತ ಸೂರ್ಯ ಮಂಡಲ
ದಲಿ ಯೋಚಿಸು ತದನಂತರದಲಿ ಈ
ಕಳೇವರ ಪಾಲಿಪ ದೇವತಿಗಳಪಾದ
ಜಲಜಕ್ಕೆ ಬಿನ್ನೈಸಿ ಜಿತ ಗದ್ದುಗೆ ನಿರಾ
ಕುಲನಾಗಿ ರೂಪ ರೂಪಾಂತರ ಕೂಡಿಸಿ
ಒಲಿಸಿಕೋ ಒಲಿಸಿಕೋ ಒಲಿಸಿಕೋ ಇವರನ್ನ
ಥಳಥಳಾಯ ಮಾನ ಭೂಷಣ ವಸನ ಸೂ [ಸುವ]
ಎಳೆನಗೆ ಸರ್ವ ಲಕ್ಷಣೋಪೇತ ಸತಿ ಬಂಧು
ಬಳಗ ಪರಿವಾರ ಪರಿಪೂರ್ಣ ಕಾಮರು
ಗೆಳೆಯರಾಗಿಪ್ಪರು ನಮಗೆ ನಿರಂತರ
ಅಳಲಿಕೆ ಬಳಲಿಕೆ ನಾನಾ ಶೋಕ ದುಃಖ
ಕಳೆದು ಕರುಣದಿಂದ ತಮಗಿಂದಧಿಕರ
ಒಳಗೆ ತೋರುವರಯ್ಯಾ ಧರ್ಮ ಮಾರ್ಗದಿಂದ
ಸುಳಿ ಸುಳಿದಾಡೋರು ಮನದಲ್ಲಿ ಮಾಣದೆ

ಬಲಗೊಳ್ಳಲಿ ಬೇಕು ಪ್ರಾಣಪರಿಯಂತ
ಫಲಗಳ ಬಯಸದೆ ಉಪಸಂಹಾರದಿಂದ
ಹೊಲಬು ತಪ್ಪದೆ ಸ್ವರ್ಗ ಸುಸ್ವರ್ಗದಂತೆವೊ
ಹೊಲೆಗೊಡು ಮೆಚ್ಚಿಸಿ ನಡೆಯದಿರು ಕೆಡದಿರು
ನಳಿ ನಳಿಸುವ ಬಿಂಬಾ ಬಿಂಬನಗುಣ
ಬಲು ರೂಪ ಕ್ರಿಯಾದಿ ಸರ್ವವು ಪರಿಪೂರ್ಣ
ಸ್ಥಳ ದೇಶ ಗುಣ ಕಾಲ ವ್ಯಾಪ್ತ ನಿಜೈಶ್ವರ್ಯ
ಸುಲಭಾ ಸುಲಭ ಅಣು ಮಹತ್ತು ರೂಪ ಹಂ
ಬಲಿಸು ಈ ಪರಿಯಿಂದ ಅತ್ಯಂತಾ ಭೇದವೊ
ನಳಿನನಾಭನ ಮೂರುತಿಯ ಈಕ್ಷಿಸೋದು
ಇಳಿಯೊಳು ಇನಿತು ಮಾಡಿದವನೆ ಧನ್ಯ
ಬಲಿ ಮಥನ ನಮ್ಮ ವಿಜಯ ವಿಠ್ಠಲರೇಯ
ಕುಲಕೋಟಿ ಉದ್ಧಾರ ಮಾಡುವ ಪ್ರತಿದಿನ ೬

## ಆದಿತಾಳ

ಎಲ್ಲೆಲ್ಲಿ ತತ್ವತನು ಧರಿಸಿದ ದೇವಾಂಶಿಗಳು
ಅಲ್ಲಿಗಲ್ಲಿ ಚಿಂತಿಸಿ ಅವರವರ ನಿರ್ದೇಶವನು
ಮೆಲ್ಲಮೆಲ್ಲನೆ ತಿಳಿದು ಲಿಂಗಗಳು ರೂಪ
ಎಲ್ಲ ಉಪಸಂಹಾರದಿಂದ ವಾರಿಜಜಾಂಡ
ವೆಲ್ಲ ಏಕಾಮಾಡಿ ಮಾಡುತ್ತ ಬಂದು
ಸಲ್ಲಲಿತ ದೇಹದಲ್ಲಿದ್ದವರ ಜ್ಞಾನ
ದಲ್ಲಿ ಕೂಡಿಸು ಮಹಾ ಯೋಗಾಭ್ಯಾಸದಿಂದ
ಬಲ್ಲವನಾಗು ಹೃತ್ಕಮಲ ಪರ್ಯಂತ
ಅಲ್ಲಿದ್ದ ಚೇತನಾವರಣ ತ್ರಿಬಗೆಯಲ್ಲಿ

ಸಲ್ಲಿದವರ ನೋಡು ಕ್ರಮಾನುಸಾರದಿಂದ
ನಿಲ್ಲಿಸು ಹದಿನಾರು ಕಳೆಗಳು ವಿಧಾನದಲ್ಲಿ
ಗೆಲ್ಲುಮೊಬ್ಬಾರೊಬ್ಬರನ ಮಾಡಿ ವಿಡಿದು ಮಾ
ವಲ್ಲಭ ಪರಿಯಂತ ಅಧೀನಾಧೀನ ನೆನೆದು
ಹೊಲ್ಲೆ ಚಿತ್ತ ಮಾಡದೆ ಹರುಷದಿಂದಲಿ ನಿತ್ಯ
ದಲ್ಲಿ ಈ ಪರಿ ಧ್ಯಾನಿಸು ಅಂಗ ಬದ್ಧ ಮಾರ್ಗ
ವಲ್ಲೆನೆಂದೆನದಿರು ಇದರೊಳಗವರ
ಸಲ್ಲುವಾಭಿಮಾನಿಗಳು ತದ್ಗತರಾಗಿಹರು
ಎಲ್ಲರ ಕರುಣವ ಪಡೆದು ಭಕುತಿಯಿಂದ
ಇಲ್ಲಿ ನಲಿದು ವಾಯು ಪ್ರತೀಕಾ ಮಧ್ಯದಲ್ಲಿ
ಉಳ್ಳ ದೇವತೆಗಳನು ಸ್ಥಾನಸ್ಥಾನದಲಿ ಇಟ್ಟು
ತಲ್ಲಣಗೋಳದಲೆ ಅಂತರ ಪೂಜೆಯ
ಒಳ್ಳಿತಾಗಿ ರಚಿಸು ಪ್ರಾರ್ಥನೆ ಪೂರ್ವಕ
ಬಳ್ಳಿಯ ಕುಡಿ ಒಂದೊಂದು ದಿವಸಕ್ಕೆ ಬಿಡದೆ
ಪಲ್ಲೈಸಿದಂತೆ ಮನಸು ಸಾಗಿ ಸಾಗಿಸಬೇಕು
ಸಲ್ಲದು ಸಲ್ಲದಯ್ಯಾ ಸುಮ್ಮನಿದ್ದಡೆ ಗತಿ
ಇಲ್ಲವೊ ಹರಿಗುರುಗಳ ಕೃಪೆ
ಎಳ್ಳನಿತಾದರೆ ಇದನೆ ಕೈಕೊಂಡರೆ
ಪೊಳ್ಳಾಗದು ಕಾಣೊ ಮಾಡಿದ ಸತ್ಕರ್ಮ
ಕ್ಷುಲ್ಲಕ ಬುದ್ಧಿ ಬಿಟ್ಟು ಚತುರತನದಿಂದಲಿ
ಬಲ್ಲಿದ ಜನರ ಒಲಿಸಿಕೊಂಡು ನಲಿದಾಡು
ಎಲ್ಲಿ ನಿನಗೆ ಇಷ್ಟವಾದ ಸ್ಥಾನದಲ್ಲಿ
ಎಲ್ಲ ಧ್ಯಾನವಮಾಡು ಸಾಧಿಸು ಹರಿಪಾದ
ಮಲ್ಲಮರ್ದನ ನಮ್ಮ ವಿಜಯ ವಿಠಲರೇಯ
ಚಿಲ್ಲರ ಸಂಗತಿ ಬಿಡಿಸಿ ಶುದ್ಧನ ಮಾಳ್ಪಾ ೭

## ಜತೆ

ಒಂದಾರಂಭಿಸಿಕೊಂಡು ಹದಿನಾರು ಪರಿಯಂತ
ಸಂದಾ ಧ್ಯಾನವ ಮಾಡು ವಿಜಯ ವಿಠಲ ಹರಿಯ ೮

## ೪೨

### ಧ್ರುವತಾಳ

ಧ್ಯಾನವ ಮಾಡು ಮನವೆ ದೈನ್ಯವೃತ್ತಿಯಿಂದ
ನಾನೆಂಬೊ ಮಾತು ಮುಕ್ತಿಯಲ್ಲಿಪ್ಪದು
ಮಾಣಾದಿರೀ ಸೊಲ್ಲು ಸತ್ಯವೆ ಸಿದ್ಧ ದುರಭಿ
ಮಾನವಲ್ಲವು ಕಾಣೊ ಸ್ವರೂಪ ಭೂತಾ
ಈ ನುಡಿಯಲ್ಲದಿರೆ ಸೇವಕನೆಂಬೊ ನ್ಯಾಯ
ತಾ ನಿಲ್ಲದು ಕೇಳಿ ಸ್ವಾಮಿ ಭೃತ್ಯ
ಅನಂತ ಅನಂತ ಕಲ್ಪಕೆ ಇರಲೆ ಇರಲೇ ಬೇಕು
ಮೇಣು ಪುಸಿಯಾದರೆ ಜೀವೇಶ್ವರ
ಏನೆಂಬೆ ಇದೆ ಇದೆ ಸಂಸಾರವಸ್ಥಿಯಲ್ಲಿ
ಜ್ಞಾನ ವೈರಾಗ್ಯ ಭಕ್ತಿ ಎರಡು ವಿಧವು
ಆ ನಳಿನ ಸಂಭವ ತೃಣಜೀವರತನಕ ನಿ
ದಾನದಿಂದಲಿ ಉಂಟು ತರತಮವು
ಪ್ರಾಣ ಪ್ರಕೃತಿ ಪುರುಷ ಇವರಿಂದ ಈ ಜಗತ್ತು
ವೇಣಯಂದದಲಿ (?) ಪ್ರವಾಹವಕ್ಕು
ಪ್ರಾಣ ತ್ರಿ ಬಗೆವುಂಟು ಜಾತಿಭೇದದಿಂದ
ಶ್ರೀ ನಾರಿ ಅಭಿಮಾನಿ ಸಕಲಕ್ಕು ನಿತ್ಯ

ಇನಿತು ತಿಳಿವುದು ಇಂದಿರಾದೇವಿಗೆ
ಜ್ಞಾನ ಶರೀರವಹುದು ಶ್ರುತಿ ಸಿದ್ಧವೋ
ಪ್ರಾಣಿ ಮಾತುರಗಾಗೆ ಲಿಂಗದೇಹವೆ ಸಿದ್ಧ
ಅನಾದಿಯಿಂದ ಬಂದ ಪ್ರತಿಬಂಧಕ
ಏಣಿಸಿ ನೋಡುವುದು ಅವರವರ ಯೋಗ್ಯತ
ಆನಂದ ಮಿಶ್ರದುಃಖ ಬಾಧ್ಯಕರೋ
ಧ್ಯಾನವ ಮಾಡೂ ಮನವೆ ಮನೋಹರದಿಂದ ನೀ
ನೆನೆದು ಧನ್ಯನಾಗು ಪ್ರಥಮದಲ್ಲಿ ಸಿರಿ
ಪ್ರಾಣನಾಥನದ ನಾರೇಯಣ
ನಾನಾವತಾರಾವೇಶ ಅಂಶ ಅಂಶಿ ಅಧಿ
ಷ್ಠಾನವನ್ನು ಚಿಂತಿಸು ಅಪ್ರಾಕೃತ
ಆ ನಖಾಂಗುಲಿಯ ರೇಖ ಪಾರ ಪರಡು ಜಂಘೆ
ಜಾನೂರು ಜಘನ ಕಟಿನಾಭಿ ಉದರ ಪಾರ್ಶ್ವ
ಪಾಣಿ ರೇಖೋಪರೇಖೆ ಹಸ್ತಾಂಗುಲಿಯು ನಖರ
ಗೇಣು ಗೋಕರ್ಣ ಪ್ರದೇಶ ತೋಳು
ಗೋಣು ಸ್ಕಂಧ ಬಾಹು ಉರ ಉದರ ತಳ ವದನ
ಆನನ ನಾಸಾಕ್ಷಿ ಶ್ರವಣ ಕದಪು
ವಾಣಿ ಕುಂತಳ ಪುಬ್ಬು ಓಷ್ಠ ದಂತ ಪಕ್ತಿ ಮೃದು
ವಾಣಿ ಮಂದಹಾಸ ನೋಟ ನಟನೆ
ಗಾನವ ಸೊಗಸಾದ ಶಾಂತ ಘೋಷಣೆ ಕೋಪ
ತ್ರಾಣ ಅಹಂಬುದ್ಧಿ ಚಿತ್ತ ಮನಸು
ಪ್ರಾಣೇಂದ್ರಿಯಗಳೈಶ್ವರ್ಯ ಪ್ರಭೆ ತೇಜ ಶಕ್ತಿ ಕಾಂತಿ
ಜ್ಞಾನ ವೈರಾಗ್ಯ ಕರುಣ ವಿದ್ಯಾ ನಿದ್ರಾ
ಧ್ಯಾನ ಜಾಗರ ಶಬ್ದ ಸ್ಪರುಶ ರೂಪ ರಸ ಗಂ

ಧಾನುಲೇಪನ ಗಮನ ಕಾಲ ಶೌರ್ಯ ಧೈರ್ಯ
ಮೌನ ವಿಲಾಸ ಭೋಗ ನೀತಿ ನಿರ್ಣಯ ನಾಮ
ದಾನ ವ್ಯಾಪಾರ ಮತ್ತೆ ತನು ಶಿರೋರುಹ
ಏನೇನು ಇದ್ದವೆಲ್ಲ ಸರ್ವವು ಪರಿಪೂರ್ಣ
ಆನಂದಮಯವಯ್ಯಾ ಜ್ಞಾನ ಕಾರ್ಯಾ
ದೀನ ನಾಥ ಸಿರಿ ವಿಜಯವಿಠಲನಂಘ್ರಿ
ಧ್ಯಾನವ ಮಾಡುವುದು ಈ ಪರಿಯಲಿ ಗ್ರಹಿಸೋ ೧

## ಮಟ್ಟತಾಳ

ಜಡ ಜೀವ ವಿಧಿ ಸಿರಿ ರೂಪಗಳಾನಂತಾ
ಬಿಡದೆ ಇಪ್ಪದು ನೋಡಿ ಬಲ ಪರಿಯಿಂದಲಿ
ಕಡಲ ಶಯನ ಹರಿಯ ರೂಪಗಳಾನಂತ
ಅಡಿಗಡಿಗೆ ಉಂಟು ದ್ರವ್ಯ ಪೂರುತಿಯಾಗಿ
ಪಡಿಯಿಲ್ಲದೆ ಜಗದೊಳು ತುಂಬಿ ಕೊಂಡಿಹವಯ್ಯಾ
ತಡಿಯದೆ ದೇವನ್ನ ಮಹಿಮೆಯನ್ನು ತಿಳಿ
ಕೊಡುವನು ಪದದಿಂದ ನೋಡುವ ಕರದಿಂದ
ಪಿಡಿಯುವನು ಕಿವಿಯಿಂದ ಕೇಳುವ ಕಣ್ಣಿನಿಂದ
ನಡೆವನು ಮೂಗಿನಿಂದ ಓಡುವ ಜಿಹ್ವೆಯಿಂದ
ನುಡಿವನು ಬೆನ್ನಿಂದ ಹಾರುವ ಮುಖದಿಂದ
ಬಿಡುಬಿಡು ಇದು ಯಾತರ ಮಾತೆ ಪೇಳಲಿ ಸಲ್ಲ
ನುಡಿ ಮೊದಲಾದ ವ್ಯಾಪಾರಂಗಳ
ಸಡಗರದಲಿ ಸ್ವಾಮಿ ಯುಗಪದಿ ಮಾಡುವನು
ಕಡೆಗೆ ಅಣುವಾಗಿ ಅನಂತ ಬ್ರಹ್ಮಾಂಡ
ಒಡಲೊಳಿಟ್ಟುಕೊಂಬ ಪ್ರಯಾಸವಿಲ್ಲದೆ

ಜಡಜ ಸಂಭವ ಮಿಕ್ಕ ಸರ್ವ ಜೀವಿಗಳಒಂದೆ
ಡೆಯಲಿ ಮೇರುವಿಗೆ ಸಣ್ಣ ಇರುವಿನಂತೆ
ಉಡಿದು ಬೀಳದೆ ನೋಡಿ ಕಡುಸಾಹಸ ಮಲ್ಲ
ಅಡಿ ಶಿರ ಮೇಲಾಗಿ ನಾನಾಪರಿ ಸಂ
ಗಡಲೆ ದೇಶಕಾಲ ವ್ಯವಧಾನಗಳಾಗ
ನೋಡದೆ ಪೂರ್ಣವಾಗಿ ಸರ್ವಸ್ವತಂತ್ರದಲಿ
ಒಡನೊಡನಿರುತಿಪ್ಪ ಕಾಣಿಸಿಕೊಳದಿಪ್ಪ
ಜಡದಂತೆಯಿಪ್ಪ ಚೇತನದಂತಿಪ್ಪ
ತೊಡರು ಯಿಲ್ಲದೆ ಮಹಾಮಹಾ ಚೇತನವಾಗಿಪ್ಪ
ಕುಡಿ ವ್ಯಾಳಿಗೆ (ವೇಳೆಗೆ) ನಿತ್ಯ ಮಹಾ ಮಹತ್ತಾಗಿ
ಅಡಗಿಪ್ಪನು ಬಹು ದೇವತೆಗಳ ಸಹಿತ
ಗಿಡ ಫಲ ಮರ ಬಳ್ಳಿ ನಾನಾ ವೇಷವಧರಿಸಿ
ಮಡದಿಯರ ಬೆರಸಿ ಸರಸವಾಡುವ ಮೂರ್ತಿ
ಬಡವನಲ್ಲವ ಕಾಣೊ
ಮಾಡಿದದೇ ಮಾಟಾ ಭಳಿರೆ ಭಳಿರೆ ರಾಯಾ
ಪೂತುರೆ ಪೂತುರೆ ಜಯ ಜಯ ಜಗಜ್ಯೋತಿ
ನಮೊ ನಮೊ ಅನಿಮಿತ್ಯ ತ್ರಾಹಿ ತ್ರಾಹಿ ಕರುಣ
ಪಾಹಿ ಪಾಹಿ ಫಲದಾ ಅಹೊ ಅದು ಭೂತನೆ
ಅತಿ ವೈಚಿತ್ರಕನೆ ಅರೆರೆ ಪರ ಸುಪ್ರತು
ಅಚ್ಚರ್ಯ ಕಾರ್ಯ ಅಲೌಕೀಕ ವಸ್ತು
ಬಹು ವೈಲಕ್ಷಣ್ಯ ಒಂದು ಮೊದಲು ಮಾಡಿ
ಅನಂತ ಪರಿಯಂತ ಶಿಖನಖ ಸಮಸ್ತವುಳ್ಳ
ಉದಧಿ ಶಯನ ಇಂದು ನಲಿವ ಜಾಣ
ಸ್ವಲ್ಪಾಕಾಶದಲ್ಲಿ ನಿಂತು ಭಕ್ತರ ಕೈಯಲಿ ಪೂಜೆಕೊಂಬ ರಾಜ
ಕೊಡುವ ಬೇಡಿದ ವರವ ವಿಜಯ ವಿಠಲರೇಯನ
ಅಡಿಗಳ ಕೊಂಡಾಡಿ ಮನ ಮುಟ್ಟಿ ನೋಡಿ ೨

## ತ್ರಿವಿಡಿ ತಾಳ

ನಿನ್ನ ಬಿಂಬನ ಸ್ಮರಿಸಿ ಇದೆ ಇದೆ ಅನಂತ
ಚಿನ್ಮಯ ರೂಪಗಳು ಸಿದ್ಧವೆಂದು
ಭಿನ್ನ ಜೀವರೊಳು ಇದ್ದ ಮೂರ್ತಿಗಳಲ್ಲಿ
ಚನ್ನಾಗಿ ನಿನ್ನ ಬಿಂಬನ ಅಂಶವ
ಮುನ್ನೀಗ ಪೊಗಿಸಿ ಏಕೀಭೂತವ ನೆನೆದು
ಸನ್ನುತಿಸಿ ತಿರಿಗಿ ಭಿನ್ನರ ಮಧ್ಯದಲಿ
ಮನ್ನಣೆಗೊಳುತಿಪ್ಪ ಅಗ್ರೇಶರೊಳಗೆ ಸಂ
ಪೂರ್ಣವಾಗಿದ್ದ ಅಂಶಗಳ ತೆಗೆದು
ನಿನ್ನ ಬಿಂಬನ ಕೊಡ ಕೂಡಿಸಿಕೊಂಡು ಸಂ
ಪನ್ನ ಭಕುತಿಯಿಂದ ಪೂಜೆ ಮಾಡೊ
ಇನ್ನು ಈ ಮಾತಿಗೆ ಸಂಶಯ ಬಡ ಸಲ್ಲ
ಗಣ್ಯ ಇಲ್ಲದೆ ಮನಸು ಮಾಡಲ್ಯಾಕೆ
ತನ್ನೊಳು ತಾನೆವೇ ತಿಳಿದು ಈ ಪರಿ ಭಕುತಿ
ಯನ್ನು ಮಾಡು ಸರ್ವ ಸ್ಥಾನದಲ್ಲಿ
ಸ್ತನ್ಯ ಪಾನದಿ ಹತ್ತದೆಂಬೊದಿದ್ದರೆ
ಪುಣ್ಯವೆ ಸಂಪಾದಿಸು ಅತಿ ತೀವರ
ಕಣ್ಣಿಗೆ ಕಾಂಬುವದಲ್ಲ ಅಂತರಂಗದ ಪೂಜೆ
ಘನ್ನ ಸುಲಭವೆನ್ನು ಸುಲಭ ವಿದ್ಯಾ
ಪುನ್ನಾಡಿಯೊಳು ಇದು ರಚಿಸಬೇಕು
ಅನುಗುಣ್ಯವಾದ ತತ್ವೇಶರ ನೆನೆದು
ಚನ್ನಾಗಿ ಕೇಶವಗೆ ಪೂಜಾ ಭಾಗಿಗಳೆಂದು
ಅನ್ನೋದಕ ಅಭಿಮಾನಿ ಜನರಾ

ಇನ್ನಿತು ನಮಿಸಿ (ನೇಮಿಸಿ) ಆತ್ಮನ್ನ ಅರ್ಚನೆ
ಬಿನ್ನಣದಲಿ ಮಾಡು ಧೃಡತರದಲ್ಲಿ
ಬಣ್ಣ ಬಣ್ಣದವರ್ಣ ಇಲದ್ದಂತೆ ಕಲ್ಪಿಸಿ
ಬಣ್ಣಿಸುವುದು ಹರಿಯ ಮುಂಭಾಗದಿ
ಮುನ್ನ ಮನು ಸನಕಾದಿ ದೇವತಿಗಳು ಅಬ್ಧಿ
ಕನ್ಯ ಇದನೆ ಮಾಡಿ ಸುಖಿಸುವರು
ನಿನ್ನ ಯೋಗ್ಯತದಷ್ಟು ಮಾತು ಬಿಡುವದಲ್ಲ
ಭಿನ್ನವಾದರು ಹರಿಯ ಮೆಚ್ಚಿಸಬೇಕು
ಅನ್ಯಥಾ ಉಪಾಯವು ಮತ್ತೊಂದುಇಲ್ಲ ಪ್ರ
ಸನ್ನನಾಗುವ ಹರಿವೊಳಗೆ ಪೊಳೆದು
ಉನ್ನತವಾಗಿ ಮಾಣಿಕ ಕನಕ ಕೋಟಿ
ಕನ್ಯಾದಾನ ವಸ್ತ್ರಗ್ರಹಾರಾಮ ಅಶ್ವ ಹಿ
ರಣ್ಯಗರ್ಭ ಕ್ಷೇತ್ರ ಮಿಕ್ಕಾದ
ಸನ್ಯಾಸ ಮೊದಲಾದ ವರಣಾಶ್ರಮ
ನಾನಾರಣ್ಯ ವೇದಾದಿಗಳು ಒಲಿಸಿದರಾಗೆ
ಧನ್ಯನಾಗನು ಕಾಣೊ ಹರುಷ ತೀರಿದ ಮೇಲೆ
ಬನ್ನ ಬಡಲು ಬೇಕು ವಿಮುಖನಾಗಿ
ಘನ್ನ ಪಾತಕವಲ್ಲದೆ ನೆಲೆಯಿಲ್ಲ ಗತಿಇಲ್ಲ
ಶೂನ್ಯನಾಗುವ ಅವನು ಜ್ಞಾನದಿಂದ
ಮನ್ಯು ವಿನಾಶ ನಮ್ಮ ವಿಜಯ ವಿಠಲ
ಕಾರುಣ್ಯ ಮೂರ್ತಿಯ ರೂಪಗುಣ ಕ್ರೀಯ ಯೋಚಿಸು ೩

## ಝಂಪೆ ತಾಳ

ಈ ಪರಿ ನಿನ್ನ ಮೂರ್ತಿಯೊಳಗೆ ಸರ್ವ
ರೂಪಾತ್ಮಕ ಹರಿ ಮೂರ್ತಿಯ ಸುಂದರ
ಆಪಾದ ಮೌಳಿ ಮಸ್ತಕ ಪರಿಯಂತರ
ಆಪಾರ ಮಹಿಮ ಅದುಭೂತ ಶಕ್ತಾ ಬಲು
ಶ್ವೇತದ್ವೀಪ ನಿವಾಸ ನಿತ್ಯ ಕಲ್ಯಾಣ ಗುಣ ನಿ
ರ್ಲೇಪಾಭಿಮಾನಿಯು ಸುಪ್ತಿ ಪ್ರೇರಕ ಕರು
ಣಾಪಯೋನಿಧಿ ಎಂದು ಸ್ತುತಿಸಿ ಎಂದಿಗೆ ನಿನ್ನ
ಆಪನ್ನ ನಾನೆಂದು ಇದಕೆ ಪ್ರೇರಕನೆಂದು
ಆಪತ್ತು ನಾಶವಾಗುವುದಕೆ ಇದೆ
ಪ್ರಾಪ್ತವಾಗದಲೇವೆ ಏನು ಫಲವಿಲ್ಲ
ಶ್ರೀಪತಿ ಸುರಪತಿ ಜಗಪತಿ ಯುಗಪತಿ
ತಾಪಸಪತಿ ಯಜ್ಞಪತಿ ಮುಕ್ತಪತಿ ಗೋಪತಿ
ಗುಣಪತಿ ವೇದಪತಿ ಗಗನಪತಿ
ಚಾಪ ಸುದರುಶನ ದರಗದಾ ಪದುಮ ಸ
ಲ್ಲಾಪ ಚರ್ಮ ಖಡ್ಗ ಶರ ಮಿಕ್ಕಾದಾಯುಧ
ದೀಪ ಪ್ರಭೆ ಸೋಲಿಪ ಕಾಂತಿಮಿಗೆ
ಭೂಪಾರ ತುಂಬಿದೆ ಬುಧ ಜನಪ್ರೀಯನ
ತಾಪಭಂಜನಗೆ ಷೋಡಶದಶ ಪೂಜೆಯ
ವ್ಯಾಪುತ ತಿಳಿ ಒಂದರಿಂದ ಸರ್ವಕ್ಕೆ
ಆಪಾರ್ಥ ಪಾರ್ಥಿವ ಲಿಂಗಂತಲಿಮೇಲೆ
ತಾಪುಷ್ಪ ಭಕುತಿಯಿಂದಲಿ ಬಿದ್ದು ವ್ಯಾಧ
ರೂಪನಾಗಿದ್ದವನ ಗೆಲುವೆನೆಂದು ಸಂ
ತಾಪದಿಂದಲಿ ಶಶಿ ಆತನ್ನ ಶಿರದಲ್ಲಿ

ಈ ಪುಷ್ಪ ಕಂಡೆನೆಂಬೊದೇನು ಪುಸಿಯೇನು
ಗೋಪತಿ ಕೇತಕಿ ಈ ಪರಿ ಇರಲಿಕ್ಕೆ
ಆ ಪರಮಾತ್ಮಗೆ ಇಪ್ಪದರಿಂದೆ (ಇಪ್ಪದು ಅರಿದೆ)
ನೀ ಪರಮ ಭಕುತಿಯಿಂದಲಿ ಅಂತರಂಗದ
ಸೋಪಾನ ಮಾಡುವುದು ವೈಕುಂಠಕ್ಕೆ
ಗೋಪಾಲ ವಿಜಯ ವಿಠ್ಠಲರೇಯನ ನಿತ್ಯ
ವ್ಯಾಪಾರವನೆ ನೆನೆಯಾ ಗುಣರೂಪ ಕ್ರಿಯಗಳೊಮ್ಮೆ ೪

## ರೂಪಕ ತಾಳ

ಮೇರು ಮಹಾಸಿಂಹಾನ ಧಾರುಣಿ ಮಂಟಪ
ತೋರಣ ಮಕರ ಮಹಾಲಕುಮಿಯನ್ನು ಕುದುರೆ
ಮೋರೆ ಎರಡು ತಥಾಸ್ತು ಎಂಬುವರಯ್ಯಾ
ಚಾರು ಮಂದಿರ ವಾಸ್ತು ದೇವತೆಗಳು ರಜತ ಭಂ
ಗಾರ ಚಂದ್ರ ಭಾಸ್ಕರರಾಗಿಪ್ಪರು
ಹೀರಾ ಮೊದಲಾದ ಮಣಿಗಳಿಗೆ ಹಿಮವಂತ
ವಾರಿಧಿಯಾಗಿಪ್ಪ ಸುತ್ತು ರಂಜಿಸುತಲಿ
ವಾರುಣಿಪತಿ ಹಾಸುಗೆ ನಿನ್ನಿಂದಲಿ
ಆರಾಧನೆಗೊಂಬ ವಿಗ್ರಹವನೆ ನಿಲ್ಲಿಸಿ
ದ್ವಾರಪಾಲಕರನ್ನು ಪೆಸರ್ಗೊಂಡು ಜಯಾದಿಗಳ
ಮೂರೊಂದು ಬಾಗಿಲಲ್ಲಿ ತಿಳಿದು ಕೊಂಡಾಡುವುದು
ಹಾರೈಸು ಧ್ಯಾನ ಮೊದಲಾದ ಬಗೆಯನ್ನು
ಮೂರು ಮೂರುತಿಗಳ ಕೂಡಿಸಿ ಅಭೇದ
ಕಾರಣವನು ನೋಡಿ ಪೂಜಾ ಸಾಧನವೆಲ್ಲ
ವಾರಿಜ ಮೊದಲಾದ ದ್ರವ್ಯಗಳ ಚಿಂತಿಸಿ
ಬೇರೆ ಬೇರೆಯೊಬ್ಬ ದೇವತಿಗಳು ಸಿದ್ಧ
ತಾರತಮ್ಯವೆ ಉಂಟು ಕೇಳು ಗ್ರಹಸ್ಥನಲಿ
ವಾರಿಜ ಭವನೇವೆ ಪ್ರಧಾನ ಅರ್ಚಕನು

ಈ ರೀತಿಯಲ್ಲದೆ ಇನ್ನೊಂದುಪಾಯವೇ
ಚಾರು ಚರಿತ ನಮ್ಮ ವಿಜಯ ವಿಠಲರೇಯನ
ಆರೆರಡು ಕರ್ತೃತ್ವ ತಿಳಿದು ನಿನ್ನೊಳು ಹಿಗ್ಗು ೫

## ಧ್ರುವತಾಳ

ತರಣಿ ಚಂದ್ರಾಗ್ನಿ ಮೂರು ದೀಪಗಳನೆ ಮಾಡು
ಗರುಡನ ಘಂಟೆಯನ್ನು ನಾದಶೇಷ
ಸರುವ ವುಪಕರಣೆ ಭೂದೇವಿಯನ್ನೆ ಮಾಡು
ವರ ಮಹಾಲಕುಮಿ ಅನಿರುದ್ಧನೆನ್ನು
ಸುರ ತರಂಗಿಣಿ ಗಂಗೆ ಉದಕ ಸ್ನಾನಕ್ಕೆ
ವರುಣನ್ನ ಕೂಡಿಕೊಂಡು ಸಕಲ ಜಲವು
ಪುರಹರ ಕಲಶ ಪಾತ್ರೆಯಾಗುವನೆನ್ನೂ ಖಗೇ
ಶ್ವರನು ಪೀತಾಂಬರ ರೂಪನಹ
ಪರಮೇಷ್ಟಿ ಕೌಸ್ತುಭಮಣಿಯನ್ನು ವನಮಾಲೆ
ಧರಣಿ ದೇವಿಯ ಸಿದ್ಧ ಯಾವಾಗಲೂ
ಉರಗೇಂದ್ರ ಕುಂಡಲದ್ವಯನಾಗಿ ಕಣದಲ್ಲಿ
ವರ ಮಕುಟ ಸಿರಿದೇವಿ ಪ್ರಕಾಶವೋ
ಸುರಪತಿ ಮೊದಲದ ತಾತ್ವಿಕಜನರು ಆ
ಭರಣವಾಗಿಪ್ಪರು ಪರಿ ಪರಿಯಿಂದ
ಅರಿ ಶಂಖ ಗದೆ ಪದುಮ ಮಿಕ್ಕಾದ ಆಯುಧಗಳು
ಸ್ಮರಾನಿರುದ್ಧ ವಾಯು ಲಕುಮಿದೇವಿ
ನಿರೀಕ್ಷಿಸು ಇದರಂತೆ ಅಲ್ಲಿಗಲ್ಲಿ ಚಿಂತಿಸು
ಪರಮ ಪುರುಷ ಹರಿಯ ಆರಾಧನೆ
ಶರೀರದೊಳಗೆ ಮಾಡು ಜ್ಞಾನಾಂಕುರದಿಂದ
ಮರಳಿ ಮರಳಿ ಗುಣಿಸು ಶುಭ ಮಾರ್ಗದಿ
ಕರಿ ಭಯಹರ ನಮ್ಮ ವಿಜಯ ವಿಠಲರೇಯನ
ಸ್ಮರಿಸಿ ಚನ್ನಾಗಿ ಆತನ ಧ್ಯಾನ ಮಾಡು

## ಝಂಪೆ ತಾಳ

ಮರುತ ಚೂಡಾರತುನಾ ಗೋಪಿಚಂದನ ಕಾಮ
ಚರಣದಲಿ ಇದ್ದ ಪಾದುಕ ಗರುಡನು
ಸಿರಿ ತುಲಸಿ ಗಂಧ ಪರಿಮಳ ಪುಷ್ಪಧೂಪಗಳು
ವರ ಲಕುಮಿ ಕಾಮ ಅಜ ರುದ್ರ ನೈರುತ್ಯ
ಭರದಿಂದ ಪಾವಕನೆ ಏಕಾರುತಿಯಾಹ
ಉರಗ ವರ್ತಿ ತೈಲವೆ ವರುಣದೇವನು
ಹರಿಣಾಂಕ ಅನ್ನನಾಗುವ ದೇವಗೆ
ಪರಮಾನ್ನವಾಗುವಳು ಭಾರತಿ ಭಕ್ಷರೂಪ
ತರಣಿ ಯಾದನು ಲಕ್ಷ್ಮೀಘೃತವಾದಳು
ಸರಸ್ವತಿ ದೇವಿಯೆಕ್ಷೀರ ಮಂಡಿಗೆ ಬ್ರಹ್ಮ
ಮರುತ ನವನೀತ ಮೊಸರು ಚಂದ್ರನು
ಗರುಡ ದೇವರೆ ಸೂಪದಾಕಾರವಾದನು
ಪರಿಶುದ್ಧ ಪತ್ರ ಶಾಖವೆನ್ನು ಮಿತ್ರ
ಮಿರಗುವ ಫಲ ಶಾಕ ಶೇಷದೇವರೆ ನಿಜವು
ಗಿರಿಜೆಯಾಮ್ಲ ರೂಪಳಾದಳದಕೋ
ಪುರಹರನೆ ಅನಾಮ್ಲ ಸಕ್ಕರಿ ಬೆಲ್ಲವೆ ಇಂದ್ರ
ಪರಮೇಷ್ಟಿಯುಪಸ್ಕಾರ ರೂಪ ನಾದಾ
ತರಣಿಸುತ ಕಟು ದ್ರವ್ಯವಾದ ರಾಮಠ ಏಲ
ಸ್ಮರನೇ ತಾನಾದ ತವಕದಿಂದಲಿ
ಪುರುಹೊತ ತನುಜ ಜಯಂತ ತೈಲಪಕ್ವ
ಶರೀರವನೆ ಧರಿಸಿದ ಹರಿಯಾಜ್ಞದಿ
ಸರಸಿಜಭವಸುತರು ಮನು ದಕ್ಷ ಪ್ರಜೇ
ಶ್ವರನು ಸಂಡಿಗೆ ಮಾಷ ಭಕ್ಷ್ಯವಾದರು ಹರಿ ಸೇವಿಗೆ
ನಿರಋತಿ ಲವಣ ಲವಣಶಾಖವೆ ಪ್ರಾಣ
ಇರುತಿಪ್ಪ ತಾಂಬೂಲ ಸರ ಗಂಗೆಯು

ಪರಿಮಳ ಸ್ವಾದೋದಕೆ ಬುಧ ದೇವನಾಗುವ ಬಿ
ತ್ತರದಿಂದ ನೈವೇದ್ಯ ಸಮರ್ಪಿಸು
ಕರುಣಾಕರ ನಮ್ಮ ವಿಜಯ ವಿಠಲರೇಯ
ಶರಣ ಜನರಿಂದ ಈ ಪರಿ ಕೈಕೊಂಬ ೭

## ಅಟ್ಟತಾಳ

ಇಂತು ನೈವೇದ್ಯ ತಾತ್ವಿಕಜನರೆಲ್ಲ ನಿ
ರಂತರ ತದಾಕಾರ ತನ್ನಾಮಕರಾಗಿ
ಅಂತರಂಗದಲ್ಲಿ ಜನ್ಯರಾಗುವರಯ್ಯಾ
ಎಂತು ಪೇಳು ಇವರ ಅಷ್ಟಾಂಗ ಯೋಗ
ಚಿಂತಿಸಿದಂತೆ ಕಾಯವ ಧರಿಸುವರು
ಸಂತರಿಗೆ ಫಲ ಪ್ರಾಪ್ತಿ ಐದಿಸುತ್ತ
[ಕಂ]ತು ಪಿತನ ಸೇವೆ ಮಾಳ್ಪರು ಸರ್ವದಾ
ನಿಂತಿಹರು ಹಸ್ತವ ಜೋಡಿಸಿಕೊಂಡು
ಭ್ರಾಂತಿಗೊಳಗಾಗದೆ ಸಂತಸದಿ ಮನಸಾ
ಚಿಂತೆಯ ಮಾಡೊ ನಿರ್ಮಾಣವಗ್ಯೆದು
ದಂತಿ ಮೊದಲಾದ ಚೇತನ ಜಡಾನೇಕ
ಅಂತರಂಗದಲಿ ತತ್ವಜನರು ಜನರು ಭಗ
ವಂತನು ಇಪ್ಪನೊ ವೇದ ಪ್ರಮಾಣವು
ತಂತ್ರವುಳ್ಳವನಾಗು ನಿನ್ನೊಳು ಅರ್ಚನೇ
ಕಾಂತದಿ ಧ್ಯಾನಿಸು ಒಂದೆಶೆಯಲಿ ಇದ
ರಂತೆ ಸಮಸ್ತವು ತಿಳಿದು ಮಾಡಲು ಅ
ನಂತ ಜೀವರ ಬಿಂಬಾನಂತವಾನಂತ ಮತ್ತಾನಂತನಂತ
ಅಂತುಗಾಣದೆ ಭಗವದ್ರೂಪಂಗಳು
ನಿಂತು ಕುಳಿತು ಮಲಗಿ ಪೋಗುತ್ತಿಪ್ಪವು
ಪಿಂತೆ ಪೇಳಿದ ಮಾತು ಅನುಭವಕೆ ಆ
ದ್ಯಂತ ತಂದು ಕೊಂಡು ಸುಖಿಸು ಅರ್ಪಿತವೆಂದು

ಮುಂತಿನ ಬಲು ಜನ್ಮಕ್ಕೆ ಸಾಧನವೆನ್ನು
ನಿಂತಲ್ಲಿ ಕುಳಿತಲ್ಲಿ ಅವಾವ ಪ್ರಯೋಜನ
ಸಂತನ ಮಾಡುವ ಸಮಯಾನು ಸಾರದಿ
ಸಂತೆಯೊಳಗೆ ಪೋಗಿ ಮಾನವ ತಿರುಗಾಡಿ
ದಂತೆ ಕಾಣೆಲೊ ಜೀವಿ ಈ ಬಗೆ ವಿಚಾರ
ಚಿಂತೆ ಮೆಲ್ಲ ಮೆಲ್ಲನೆ ಕ್ರಮಾನುಸಾರ
ಎಂಥವನಾದರೆ ಇದನೆ ಕೈಕೊಂಡರೆ
ಸಂತತಿ ಸಮೇತ ಮೋಕ್ಷಕ್ಕೆ ಸಾರುವ
ಚಿಂತಾಮಣಿಯೇ ನಮ್ಮ ವಿಜಯವಿಠಲರೇಯ
ಸಂತಾಪ ಹರಿಸುವ ತನ್ನ ಧ್ಯಾನವನಿತ್ತು ೮

## ಆದಿತಾಳ

ಸಕಲ ತಾತ್ವಿಕಜನ ಮನಸು ಸಹಿತದೇವ
ಅಕಳಂಕರಾಗಿ ಪುಟ್ಟಿದರೆಂದು ವೈಕಾ
ರಿಕದಿಂದಲಿ ಸಿದ್ಧ ಇದರಲ್ಲಿ ಸರ್ವ ತಾ
ತ್ವಿಕರುಂಟು ಇವರನ್ನೆ ಧ್ಯಾನವ ಮಾಡಿದರೆ
ವ್ಯಕುತವಾಗುವರಯ್ಯಾ ಆವಾವ ಪದಾರ್ಥ
ನಿಕರದಂತೆ ಸತ್ಯ ಯೋಗ ಮಾಯಾದಿಂದ
ಭಕುತಿಮಾತ್ರ ಬೇಕು ಇದು ಒಂದೆ ಸಾಧನ (ಉಪಾಯ)
ಮುಕುತಿವಂತರಿಗೆಲ್ಲ ಪೂಜಾ ಸಾಧನ ಭೇದ
ಯುಕುತಿಯಿಂದಲಿ ಇಂಥ ಅನುಸಂಧಾನ ರೂಪದಲಿ
ಯುಕುತಿಯ ನಡೆಪದು ಅಪರೋಕ್ಷ ಬೇಕಾದರೆ
ಭಕುತಿ ಮೊದಲಾದ ಆವಾವ ಕ್ರೀಯವೆಲ್ಲ
ಕಕುಲಾತಿಯಿಂದ ಮರೆದು ಜನನವಾಗುವದಲ್ಲ
[ಸ]ಕಲ ಮಾನವರಿಗೆ ಇದು ದೊರಕುವದೇನೋ
ಸುಖಸಾರ ವೀರ್ಯ ನಮ್ಮ ವಿಜಯವಿಠಲರೇಯ
ವಿಕಳ ಮತಿಯ ಬಿಡಿಸಿ ತನ್ನ ಲೋಕವ ಕೊಡುವಾ ೬

### ಜತೆ

ಜಡ ಜೀವಾನಂತಾ ದಿಷ್ಠಾನದಲ್ಲಿ ನಿತ್ಯ
ಬಿಡದಿರು ವಿಜಯ ವಿಠಲನ ಅರ್ಚನೆ ಬಹು ೧೦

### ೪೭

### ಧ್ರುವತಾಳ

ಧ್ಯಾನ(ವ)ಮಾಡು ಮಾನವೆ ಧ್ಯಾನಂಗತನಾಗಿ
ದಾನ ವಾರಿಯ ನಖವನು[ಪಿ]ಡಿದು ಸುಂದ
ರಾನನ ಪರಿಯಂತ ಜ್ಞಾನಲೋಚನದಿಂದ
ಮಾನಸದಲ್ಲಿ ಪೂಜಿಯನು ಗ್ರಹಿಸು ಬಿಡದೆ
ಭಾನು ಮಂಡಲದಂತೆ ತಾನಿಪ್ಪನು ಹೃದಯ
ಅನಂತದಲ್ಲಿ ನಿಧಾನ ಪರಮ ಪುರುಷ
ನೀನರಿಯೊ ಪ್ರಾದೇಶ ಮಾತುರ ಮೂರುತಿಯ
ಸಾನಂದ ವಿಜಯ ವಿಠಲ ಪರಬೊಮ್ಮ
ಮೀನಾಂಕನಯ್ಯ ಎನ್ನ ಮಾನದ ಧೊರಿಯೆ ಎನ್ನು ೧

### ಮಟ್ಟತಾಳ

ಅರಿ ದರ ಗದ ಪದುಮ ಧರಿಸಿದ್ದು ಚ
ತುರಕರ ಪ್ರಸನ್ನ ವರ ವದನ ತಾ
ವರೆ ನಯನ ಸುಂದರರದ ಪಿಶಾಂಗಂಬರ ಪೊಳೆವಹಾರ
ಮಿನಗುವ ಕನಕ ಬಾಪುರಿ ಬಲು ವಿಚಿತ್ರ
ಸುರಮಣಿ ಮಕುಟ ವಿಸ್ತರಿಸುವ ಕುಂಡಲ

ಧರಿಸಿದ ಕರುಣಾಕರ ವಿಜಯ ವಿಠಲಂ
ತರದೊಳು ನಲಿದೊಲಿವಾ ೨

## ತ್ರಿವಿಡಿ ತಾಳ

ಬಾಡದ ವನಮಾಲೆ ಉರದಲ್ಲಿ ಸಿರಿ ತೂ
ಗಾಡುವ ಕೌಸ್ತುಭ ರತ್ನ ಕಂಧರ ಭೂಷಾ
ನೋಡು ಮೇಖಲ ಮತ್ತೆ ಬೆರಳ ಉಂಗುರವೊ ಇ
ನ್ನಾಡಲೇ ನೂಪುರ ಕಂಕಣಾದಿಗಳು
ಪಾಡುವರಾರು ಅಮಲ ಸುಳಿಗುರುಳು
ತೀಡಿದ ಕಸ್ತೂರಿ ನಗೆ ಮೊಗದ ಸೊಗಸು
ಆಡುವ ಪ್ರತಿದಿನ ವಿಜಯ ವಿಠಲರೇಯನ
ಬೇಡು ಸೇವಿಯನು ಸಂತತದಲಿ ಮರಿಯದೆ ೩

## ಅಟ್ಟತಾಳ

ಅಪಾದಮಸ್ತಕ ಪರಿಯಂತ ಈಕ್ಷಿಸಿ
ಅಪಾರ ಮಹಿಮನ್ನ ಚಿಂತಿಸು ಹೃದಯಾಬ್ಜ
ವಾ ಪಸರಿಸಿ ಕರ್ನಿಕೆ ಮಂದಿರದೊಳು
ತಾಪಸಿಯಾಗಿ ಕಾಲಾ ಕಾಲಾ ಕಳಿಯದೇ
ನೀ ಪ್ರೀತಿಯಲಿ ಪಾದದಿ ಮೊದಲು ಮಾಡಿ
ರೂಪವ ನಿನ್ನೊಳು ನಿಲಿಸುತ್ತ ಜಿತವಾಗಿ
ಮಾಪತಿ ವಿಜಯ ವಿಠಲನಲ್ಲಿ ರತಿಯಿಟ್ಟು
ಪಾಪ ರಹಿತನಾಗು[ಪ್ರ]ಪಂಚ[ವ] ನೀಗೂ

### ಆದಿತಾಳ

ಒಂದೊಂದು ಸ್ಥಾನದಲ್ಲಿ ನಿಂದು ಕೇವಲವಾಗಿ
ಒಂದೊಂದು ಜಿತವಾಗಿ ಬಂದ ತರುವಾಯದಲ್ಲಿ
ಇಂದಿರಾರಮಣ ಗೋವಿಂದನ್ನ ಒಲಿಸಿಕೊಂಡು
ಹಿಂದಣ ದೋಷದ ಸಂಬಂಧಗಳೋಡಿಸಿನ್ನು
ಮುಂದಣ ಮಾರ್ಗಕೆ ಅನುಸಂಧಾನವನ್ನು ತಿಳಿದು
ತಂದೆ ತಾಯಿ ಎಂದಿಗೆ ವಿಜಯ ವಿಠಲನೆಂದು
ಒಂದೇ ಭಕುತಿಯಲ್ಲಿ ಇಹದಿಂದ ದೂರನಾಗೋದೊ ೫

### ಜತೆ

ಬಿಂಬ ಮೂರುತಿ ಧ್ಯಾನ ಇಂಬಾಗಿ ಮಾಡಲು
ಇಂಬು ತೋರುವನಲ್ಲಿ ವಿಜಯ ವಿಠಲಪೊಳೆದು ೬

## ೪೭೮

### ಧ್ರುವತಾಳ

ನವಪಂಚ ಪಂಚ ಮೇಲೆ ಆರಂಗುಲ ಪ್ರಮಾಣ ।
ಅವಯವಂಗಳ ಸಹಿತ ಇಪ್ಪಗಾತ್ರ ।
ನವಕೋಟಿ ರೋಮದಿಂದ ಯುಕ್ತವಾಗಿಪ್ಪುದು ।
ನವಕೋಟಿ ದೇವತೆಗಳು ಅಭಿಮಾನ್ಯರು ।
ಇವರು ಶತಸ್ಥರೊಳು ಪಂಚಪ್ರಾಣರ ತರುವಾಯ ।
ಭವದೂರರಾಗಿ ಸರ್ವದಲ್ಲಿಪ್ಪರು।
ನವದ್ವಿದ್ವಾರಗಳಿಂದ ಶೋಭಿಸುತಿದೆ ನೋಡೆ ।

ತ್ರಿವಿಧ ಗುಣಗಳುಂಟು ಒಂದು ಕ್ಷಣಕೆ ।
ನವದ್ವಿಯಿಂದ್ರಿಂಗಳು ಅಲ್ಲಿಗಲ್ಲಿಗೆ ಇಪ್ಪ ।
ವಿವರವನ್ನೆ ತಿಳಿವುದು ಇವು ತೈಜಸದಿ ।
ದಿವಿಜೋತ್ತರು (ಮಾರುತ) ತತ್ತ ದ್ವ್ಯಾಪಾರವನ್ನೆ ಬಿಡದೆ ।
ತವಕದಿಂದಲಿ ಮಾಳ್ಪರು ಹರಿ ಪ್ರೇರಣೆ ।
ಸುವಿರುದ್ದವಾದರು ಇವರಿಗೆ ದೋಷವಿಲ್ಲ ।
ಕವಿಗಳು ಕಾಣೋ ಸದಾ ಸಾಂಶರು ।
ಭುವನದ ಹೊರಗೆ ಇವರು ತಮ ತಮ್ಮ ತತ್ವದಲ್ಲಿ ।
ಅವಿಕಾರವಾಗಿಪ್ಪರು ಅಣುಮಹದಲ್ಲಿ ।
ಅವಕಾಶ ಪ್ರದರಾಗಿ ಒಬ್ಬೊಬ್ಬರೊಳಗೆ ।
ಕವಲಾ ಬುದ್ಧಿಯಿಲ್ಲದೆ ಪೊಂದಿಪ್ಪರು ।
ಇವು ಪೇಳಿದವು ಉಳಿದ ವಾಗ್ವಾದಿ ತತ್ವಸಂಖ್ಯ ।
ಪವನನಾಧಾರದಿಂದ ಬೆಳಗುತಿವಕೊ ।
ತ್ರಿವಿಷ್ಟಪ ರಂಗ ವೈಕಾರಿಕದಿಂದ ನಿರ್ಮಾಣ ।
ಹವಣಿಸಿ ಇಪ್ಪನು ಹರಿ ಸ್ವತಂತ್ರ ।
ಇವೆ ದೇಹದೊಳು ತಿಳಿ ಮಿಶ್ರಭಾವದಿ ಉಂಟು ।
ಶ್ರವಣಾದಿಗಳ ವ್ಯಾಪಾರ ಉತ್ತುಮವಾಗೆ ।
ಸವೆಯಾದ ಪದವಿಗೆ ಸಾಧನೆ ವೈಯ್ಯಾ ।
ಜವನಗೇರಿಗೆ ಸಲ್ಲ ಪುಣ್ಯವೆ ಮಾಡುತ್ತ ।
ದಿವಸ ದಿವಸ ಕೀರ್ತಿವಂತನಾಹ ।
ದಿವಿಜ ವೈರಿಗಳು ವಿಪರೀತ ಕರ್ಮ ಮಾಡಿಸೆ ।
ಅವಿರಕ್ತನಾಗುವ ಮತಿದೂರನು ।
ಅವಕ್ರೀಯನಾಗಿ ಕೆಟ್ಟು ಪೋಗುವ ಶ್ರೀ ।
ಧವನ ನಾಮಾಮೃತ ಮರೆದು ಬಿಡುವ ।
ಇವಕ್ಕೆಲ್ಲ ಶ್ರೀಹರಿ ಮುಖ್ಯಕರ್ತನು ತಾನೆ ।

ಅವರವರ ಸಂಸಾರದಂತೆ ನಡಿಸಿ ।
ಪವಮಾನ ಶಿವ ಪಾರ್ವತಿ ಇಂದ್ರಾರ್ಕ ಮಿಕ್ಕಾ ।
ದವರ ಭವದೆಡಿಗೆ ಜೀವನವ ಒಯ್ಯದಂತೆ ।
ನವ ಭಕುತಿಯಿಂದ ಸಾಧನವ ಮಾಡುವಂತೆ ಕೇ ।
ಶವನು ಸುರರಿಗೆ ನೇಮಿಸಿ ದೈತ್ಯರಿಗೆ ।
ಅವಕೃಪೆಯಿಂದ ಶಿಕ್ಷಿಸಿ ಸಜ್ಜನರ ಮಾ ।
ರ್ಗವನ್ನು ಪೋಗದಂತೆ ಮಾಡುವನು ।
ಪವನಂತರ್ಯಾಮಿ ನಮ್ಮ ವಿಜಯ ವಿಠ್ಠಲರೇಯ ।
ರವಿಯಂತೆ ಪೊಳೆವನು ಮಧ್ಯನಾಡಿಯಲ್ಲಿ ೧

## ಮಟ್ಟತಾಳ

ಅನ್ನಮಯ ಪ್ರಾಣಮಯ ಮನೋವಿ ।
ಜ್ಞಾನಮಯ ಆನಂದ ಮಯವೊ ।
ಇನಿತು ಪಂಚಕೋಶ ತನುವಿನೊಳಗೆ ಉಂಟು ।
ಘನವಾಗಿ ತಿಳಿದು ಗುಣಿಸು ನಿರಂತರದಿ ।
ಚಿನುಮಯ ಮೂರುತಿ ವಿಜಯವಿಠ್ಠಲರೇಯ ।
ಇನಿತು ಪೆಸರಿನಿಂದ ಕರಿಸಿ ಕೊಂಬುವನು ಬಿಡದೆ ೨

## ತ್ರಿವಿಡಿ ತಾಳ

ಭೂಮಿ ಉದಕದಿಂದ ಅನ್ನಮಯವಾಗಿಪ್ಪುದು ।
ಆ ಮಾರುತ ಭೂತ ಅನಲಾಕಾಶದಲ್ಲಿ ಪ್ರಾ ।
ಣಾಮಯ ಮನ ಮತ್ತೆ ಅಹಂಕಾರದಿಂದ ಮ ।
ನೋಮಯ ಮಹದಿಂದ ವಿಜ್ಞಾನಮಯವಯ್ಯ ।
ಕಾಮ ಜನನಿ ತತ್ವದಿಂದ ಆನಂದ ಮಯವೊ ।

ನಾಮವೆಯಿದು ಸಿದ್ಧ ವೊಂದೊಂದು ಬೆಚ್ಚಿಕೆ ।
ಶ್ರೀ ಮಾಯಾರಮಣನು ಯಿದೆ ಯಿದೆ ಪೆಸರಿನಲಿ ।
ಪ್ರೇಮದಿಂದಲಿ ಕರಿಸಿಕೊಳುತಲಿಪ್ಪ ।
ನಾಮಂಗಳುಂಟು ಮತ್ತೆ ಅನಿರುದ್ಧಾದಿ ಐದು ।
ಈ ಮಹ ಪಂಚ ಕೋಶದಲ್ಲಿ ವಾಸ ।
ಭೂಮಿ ಶನೇಶ್ವರ ವರುಣ ಅನ್ನಮಯದಲ್ಲಿ ।
ಆ ಮರೀಚಿ ವಾಯು ಅಗ್ನಿ ಗಣಪ ಪ್ರಾ ।
ಣಾ ಮಯದಲ್ಲಿ ಇಂದ್ರ ರುದ್ರ ಮನೊಮಯದಲ್ಲಿ ।
ತಾಮರಸ ಪೀಠ ವಿಜ್ಞಾನ ಮಯದಲ್ಲಿ ।
ಸೋಮ ಸೋದರಿ ಲಕುಮಿ ಆನಂದ ಮಯದಲ್ಲಿ ।
ಕೋಮಲ ನಡತಿಯಲ್ಲಿ ವಾಸವಕ್ಕು ।
ಈ ಮೂರೆರಡು ಜಡದ್ರವ್ಯದಲ್ಲಿ ಇವರು ।
ಸ್ವಾಮಿಯ ಪೂಜಿಪರು ಅನಿರುದ್ಧಾದಿಗಳ ।
ಈ ಮಾತು ಲಾಲಿಸಿ ತಿಳಕೊಂಡ ಜನರಿಗೆ ।
ಯಾಮ ಯಾಮಕೆ ಬುದ್ಧಿ ನಿರ್ಮಲಿನ ।
ತಾಮಸ ಜನ ವೈರಿ ವಿಜಯ ವಿಠ್ಠಲರೇಯ ।
ನೇಮಿಸಿ ಈ ಪರಿ ವಾಲಗ ಕೊಳುತಿಪ್ಪ ೩

## ಅಟ್ಟತಾಳ

ಧರೆಯೊಳು ಮಾನವ ಉದಕಾನ್ನ ಉ ।
ದರದಲ್ಲೆರದರೆ ಅದರಲ್ಲಿ ಚತುರವಿಂಶತಿ ತತ್ವ ।
ಇರುತಿಪ್ಪವು ಕೇಳಿ ಮಿಶ್ರ ಭಾವದಿಂದ ।
ಪರಮಾಣು ಅತ್ಯಣು ಒಂದನಂತವಾಗಿ ।
ಪರಿ ಪರಿ ಅಂಶಿ ಅಂಶಗಳಿಂದ ತತ್ವೇ ।

ಶರ ಸಹಿತವಾಗಿ ಉಪಚಯ ಕೊಡುತಲಿ ।
ಸ್ಮರಿಸಿ ಮಹಾತತ್ವ ವಿಜ್ಞಾನಮಯ ಈಶಮಾಯದಿಂದ ।
ಧರಣಿಯೊಳಗೆ ವ್ಯಾಪಿಸಿ ಕೊಂಡಿಪ್ಪವು ನೋಡಿ ।
ಅರಿದವ ಬಲು ಧನ್ಯ ತತ್ವ ಭಾಗಂಗಳು ।
ಅರಹುವೆ ಪೃಥ್ವಿ ಗಂಧ ಘ್ರಾಣ ಉಪಸ್ಥ ।
ತರುವಾಯ ಜಲ ರಸ ಜಿಂಹ್ವೆ ವಾಯು ನಾ ।
ಲ್ಕೆರಡು (೮) ತತ್ವಂಗಳು ಅನ್ನಮಯ ಕೋಶಕ್ಕೆ ।
ನಿರುತ ಉಪಚಯ ಯೇರೆ ಭೂತವಿದೆ ।
ಸರಿಯೆನ್ನು ತೇಜಸ್ಸು ರೂಪ ಚಕ್ಷುಸ ಪಾದ ।
ಚರಿಸುವಮಾರುತ ಸ್ಪರಿಶ ತ್ವಕು ಪಾಣಿ ।
ಮಿರಗುವ ಗಗನ ಶಬ್ದ ಶ್ರೋತ್ರ ವಾಕು ಹ ।
ನ್ನೆರಡು (೧೨) ತತ್ವಂಗಳು ಪ್ರಾಣ ಮಯದಲ್ಲಿ ।
ಇರುತಿಪ್ಪವು ಕೇಳಿ ಉಪಚಯವಾಗುತ್ತ ।
ಮರಳೆ ಮನಸು ಅಹಂಕಾರ (೨) ಮನೋಮಯ ।
ಬೆರೆಸಿಕೊಂಡಿಪ್ಪುದು ಉಪಚಯಕೊಡುತಲಿ ।
ಸ್ಮರಿಸಿ ಮಹಾತತ್ವ (೧) ವಿಜ್ಞಾನ ಮಯದಲ್ಲಿ ।
ಭರಿತ ವಾಗಿಪ್ಪದು ದಿನಪ್ರತಿ ಉಪಚಯ ।
ಪರಮ ಶೋಭಿತವಾದ ಅವ್ಯಕ್ತ ತತ್ವ (೧) ನಿಂ ।
ದಿರದೆ ಆನಂದಮಯದಲ್ಲಿ ಸೇರೋದು ।
ಸ್ಥಿರವಕ್ಕು ಈ ಪರಿ ತತ್ವಭಾಗದಲ್ಲಿ ವಿ ।
ವರಗಳ ತಿಳಿವುದು ಸ್ಥೂಲ ಸೂಕ್ಷ್ಮವೆಂದು ।
ಪುರುಷೋತ್ತಮ ನಮ್ಮ ವಿಜಯ ವಿಠ್ಠಲರೇಯ ।
ಕರುಣಾಕರನಾಗಿ ಸರ್ವರೊಳಗೆ ಇಪ್ಪ ೪

## ಆದಿತಾಳ

ತತು ತತು ತತ್ವ ಭಾಗ ತತು ತತು ಮಯದಲ್ಲಿ ।
ಸತತವಾಗಿ ಪೋಗಿ ವಿಲೀನವಾಗುವುವು ।
ಗತಿ ತಪ್ಪದಂತೆ ನಿತ್ಯ ಗಾತ್ರದೊಳಗೀಪರಿ ।
ಮಿತವುಂಟು ಕಾರಣ ಕಾರ್ಯ ತತ್ವಗಳೆಂದು ।
ಅತಿಶಯವಾದ ಸ್ಥೂಲವಿಟ ಮೂತ್ರ ಮಜ್ಜಾಸ್ಥಿಯು ।
ಭೌತಿಕದಲ್ಲಿ ಇದ್ದು ಕೋಶದಲ್ಲಿ ।
ಅತಿ ಸೂಕ್ಷ್ಮ ಕಾರ್ಯ ತತ್ವ ನಿಕರ ಅನಿರುದ್ಧದಲ್ಲಿ ।
ಹಿತವಾಗಿಪ್ಪದು ಅಲ್ಲಿಂದಾಚೇಲಿ ಲಿಂಗದಲ್ಲಿ ।
ಚತುರವಿಂಶತಿ ತತ್ವ ಕಾರಣ ರೂಪವಾಗಿ ।
ಪ್ರತಿ ಪ್ರತಿ ದಿವಸಕ್ಕೆ ಕೊಡುತಿಪ್ಪವು ಭ ।
ರಿತವಾದ ಕಾಲಕ್ಕು ಹೆಚ್ಚು ಕುಂದುಗಳಿಲ್ಲ ।
ತುತುವೇಶರು ಇಲ್ಲ ಮುಖ್ಯಾಭಿಮಾನಿ ಲಕುಮಿ ।
ಶತಾನಂದ ವಾಯು ಸರಸ್ವತಿ ಭಾರತಿಗಳುಂಟು ।
ತೃತೀಯ ಪರಿಚ್ಛೇದವಾಗಿದ್ದು ಲಿಂಗ ದೇಹ ।
ಸಿತದಲ್ಲಿ ಅವ್ಯಕ್ತ ಮಹ ಅಹಂಕಾರ ಮನಸು ರ ।
ಕುತ ವರ್ಣದಲ್ಲಿ ಹತ್ತು ಉಂದ್ರಿಯಂಗಳು ಇ ।
ನ್ನತ ಕಪ್ಪಿನಲಿ ಪಂಚತನ್ಮಾತ್ರಿಗಳು ಭೂತ ।
ತತಿಗಳುಂಟು ಇವು ಪ್ರಾಚುರ್ಯದಲಿ ನೋಡಿ ।
ಮತಿವಂತರು ಕೇಳಿ ಇವು ಅನಾದಿಯಿಂದ ।
ಜಿತವಾಗಿ ಹತ್ತಿಕೊಂಡಿಪ್ಪವು ಲಿಂಗದೊಡನೆ ।
ಇತರ ಕಾರ್ಯಭಾವಕ್ಕೆ ಇವೆ ಮುಖ್ಯ ಇವೆ ಮುಖ್ಯ ।
ಖತಿಗೊಳದಿರಿ ಜನರು ಸಿದ್ಧಾಂತವೆನ್ನಿ ಮುಂದೆ ।
ತತುವ ವಿಭಾಗವ ಮಾಡಿ ವ್ಯಾನನೆಂಬೊ ಮಾ ।
ರುತ ಸೇರಿಸುತಿಪ್ಪನಲ್ಲಿಗಲ್ಲಿಗೆ ಒಯಿದು ।
ಪತಿತ ಪಾವನ ನಮ್ಮ ವಿಜಯ ವಿಠ್ಠಲರೇಯ ಸ ।
ದ್ಗತಿಯನೆ ಕೊಡುವನು ಇಹನು ತಿಳಿದವಂಗೆ ೫

## ಜತೆ

ಪಂಚಕೋಶಗಳಲ್ಲಿ ಇಂಥ ಮಹಿಮೆಯುಂಟು ವಿ ।
ರಿಂಚಿ ಜನಕ ವಿಜಯ ವಿಠಲನೆ ನಿಯಾಮಕ ೬

## ೪೯

## ಧ್ರುವ ತಾಳ

ನಿನ್ನಾಧೀನ ಈ ಜೀವದೊಳಗಿದ್ದ ಪೂರ್ಣ ಶಕ್ತಿ
ನಿನ್ನಾಧೀನ ಲಿಂಗ ಗುಣತ್ರಯ ಷೋಡಶಾತ್ಮಕ ಕಳೆಗಳು
ನಿನ್ನಾಧೀನ ಅನಾದಿ ಅವಿದ್ಯಾ ಕಾಮ ಕರ್ಮ ಸಕಲವು
ನಿನ್ನಾಧೀನ ಜೀವಾಚ್ಛಾದಿಕ ಪರಮಾಚ್ಛಾದಿಕ ಬಂಧಕಾ
ನಿನ್ನಾಧೀನ ಕಾಲ ಪ್ರಕೃತಿ ವೇದ ವರ್ಣ ಅವ್ಯಾಕೃತಾ
ನಿನ್ನಾಧೀನ ರಮೆ ಪರಿ ಪರಿ ರೂಪದಲ್ಲಿ ಅಲ್ಲೆಲ್ಲಿ
ನಿನ್ನಾಧೀನ ಸೃಷ್ಟಿ ಸ್ಥಿತಿಲಯ ಸೂಕ್ಷ್ಮ ತರಸೂಕ್ಷ್ಮ ಮಹತ್ತು
ನಿನ್ನಾಧೀನ ಗುಣ ಸಾಮ್ಯ ವೈಷಮ್ಯ ತತ್ತತ್ಪ್ರಭೇಧಾ
ನಿನ್ನಾಧೀನ ಸರ್ವ ತಾತ್ವಿಕರ ವರ ಸಾಮರ್ಥಿಕೆ
ನಿನ್ನಾಧೀನ ಬೊಮ್ಮಾಂಡ ಪಿಂಡಾಂಡ ಅಂತರ ಬಾಹಿರ ವ್ಯಾಪಾರ
ನಿನ್ನಾಧೀನ ಒಂದೆ ಎರಡೆ ಪ್ರಕೃತಿ ಪ್ರಕೃತಿ ವಿಕೃತಿ ವೈಕೃತ
ಇನ್ನಿತು ಪೇಳಿದರೊಳಗೆ ಅನಂತ
ನಿನ್ನಿಂದ ದತ್ತವಾದ ಸ್ವಾತಂತ್ರ ಈ ಬಗೆಯಲಿ
ಕಣ್ಣೊಳಗಿದ್ದ ಮೂರುತಿಯ ಪ್ರಸನ್ನೀಕರಿಸಿ ಹೃದಯದಿ
ಉನ್ನಾಹದಿಂದಲಿ ವಿಜಯ ವಿಠ್ಠಲಗೆ
ಬಿನ್ನೈಸಿ ಭಕುತಿ ಸಂಪಾದಿಸಿ ೧

## ಮಟ್ಟತಾಳ

ಮುಕುತಿ ಬೇಕಾದವರು ಮುಕುಂದನ ಚರಣ
ನಿಖಿಳ ಕರ್ಮವ ತೊರೆದು ನಿಸ್ಸಂಗವೃತ್ತಿಯಲಿ
ಸಕಲ ಠಾವಿನಲಿ ಯೋಚಿಸು ಪರವಾಗಿ

ರುಕುಮಿಣಿ ಪತಿ ನಮ್ಮ ವಿಜಯವಿಠ್ಠಲರೇಯನ್ನ
ಅಕಳಂಕ ಸ್ವಭಾವ ವರ್ನಿಸಿ ಪೂಜಿಸು ೨

### ತ್ರಿವಿಡಿತಾಳ

ಇನ್ನೇನೀತನ ಕರುಣಕ್ಕೆ ಎಣೆಗಾಣೆ
ಘನ್ನ ಕಾರಣ್ಯಾ ಸಾಗರ
ನಿನ್ನಾಧೀನವೆಂದು ಒಮ್ಮೆ ನುಡಿಯಿರೋ
ಘನ್ನ ಕಾರುಣ್ಯಸಾಗರ
ಬನ್ನ ಬಡಿಸು ಭವದಿಂದೆತ್ತುವ
ಘನ್ನ ಕಾರುಣ್ಯಸಾಗರ
ಮುನ್ನೆ ಮಾಡಿದ ದೋಷ ಓಡಿಸುವಾ
ಘನ್ನ ಕಾರುಣ್ಯಸಾಗರ
ಘನ್ನ ಘಾತಕರ ಸದೆ ಬಡಿವ ನಿತ್ಯ
ಘನ್ನ ಕಾರುಣ್ಯಸಾಗರ
ಅನಂತಾನಂತ ಜನುಮವಾದರೂ
ಘನ್ನ ಕಾರುಣ್ಯಸಾಗರ
ತನ್ನ ಜ್ಞಾನವನಿತ್ತು ಸಲಹುವಾ
ಘನ್ನ ಕಾರುಣ್ಯಸಾಗರ
ಬೆನ್ನು ಬಿಡದಲೆ ಭಾಗ್ಯ ಉಣಿಸುವಾ
ಘನ್ನ ಕಾರುಣ್ಯಸಾಗರ
ಘನ್ನ ಮೂರುತಿ ವಿಜಯ ವಿಠ್ಠಲ
ಘನ್ನ ಕಾರುಣ್ಯಸಾಗರ ೩

### ಅಟ್ಟತಾಳ

ಯಮನಿಯಮ ಮೊದಲಾದ ಅಷ್ಟಾಂಗಯೊಗ
ಕ್ರಮದಿಂದ ಸಂಪಾದಿಸಿ ಭಗವಂತನ
ವಿಮಲ ಗುಣಗ[ಳ] ಕೊಂಡಾಡಿ ಚನ್ನಾಗಿ
ಸಮ ಬುದ್ಧಿಯಲಿ ಸರ್ವದ ಸತ್ಪ್ರಕೃತಿ

ಪ್ರಮೇಯ ಭಾಗಗಳು ತಿಳಿದು ತಾರತ[ಮ್ಯ]
ಗಮ ತತಿಯಿಂದ ಭಗವದೋಪಾಸ
ನೆ ಮಾಳ್ಪ ಮಾಳ್ಪದು ಮನದಲ್ಲಿ
ಮಮಕಾರ ಅಹಂಕಾರ ಬಿಟ್ಟು ಸುನಿಶ್ಚಿತ್ತ
ಸುವನಸರೊಡಿಯ ವಿಜಯ ವಿಠಲರೇಯ
ನಮೊ ನಮೊ ಎಂದವಗೆ ಕಣ್ಣ ಮುಂದಾಡುವ ೪

## ಆದಿತಾಳ

ಗುಣರೂಪ ಕ್ರೀಯಾ ಅಂಗಬದ್ಧ ದ್ವಿವಿಧವೆನ್ನಿ
ಅನ ರಾಮಾ ಸಹಾ ಪೂರ್ಣ ವೈಲಕ್ಷಣ್ಯ ನರಸಿಂಹ
ದಿನಿತು ಬಗೆಯಿಂದ ಉಪಾಸನ ಭೇದ ತಿಳಿದು
ಮನುಜಾದಿಗಳು ಮರೆ ಅವರವರ ತಕ್ಕಂತೆ
ಧನ ಕನಕ ವಸ್ತುವಾಹನ ಲೋಕ ಸತಿಸುತರ
ಅನುವಾಗಿ ಇತ್ತು ಅವರ ಪೊರೆದು ಪ್ರತಿದಿವಸ
ಗುಣವಂತರ ಮಾಡಿ ಪ್ರತ್ಯೇಕ ನದಿಯಲಿ
ಮುಣುಗಿ ಮುಕ್ತಿಯ ಕೊಡುವ ನಿನ್ನಾಧೀನವೆಂದರೆ
ತೃಣವಾದರು ಚಲಿಸಲಿ ಸಮರ್ಥರಾರೂ
ವನಜನಾಭನೆ ಸೃಜ್ಯಕಾಲಕ್ಕೆ ಜೀವರೊಳು
ಅನಿರುದ್ಧ ಅಂಶದಿಂದ ಪೊಕ್ಕು ಈ ಪರಿ ಚರಿಯ
ಪ್ರಣುತರಿಂದ ಮಾಡಿಸಿ ಮುಕುತರ ಮಾಡುವ
ಜನುಮಾದಿ ವಿರಹಿತ ವಿಜಯವಿಠ್ಠಲರೇಯ
ಗಣನೆ ಇಲ್ಲದೆ ಲಿಂಗ ಪ್ರಕೃತಿಯ ಮನೆಮಾಳ್ಪಾ ೫

## ಜತೆ

ನಂಬಿರೊ ನೆರೆನಂಬಿ ಜಗದಂಬಿಕೆ ನಾಥನ
ಇಂಬು ಕೊಡುವ ಈತನೆ ವಿಜಯವಿಠಲಾಧೀನಾ ೬

## ೫೦

### ಧ್ರುವತಾಳ

ಆಪ್ತ ಅಖಿಳ ಮುಕ್ತಿಯೋಗ್ಯ ಜನಕೆ ನಿತ್ಯ
ತೃಪ್ತ ತ್ರಿಗುಣಾತೀತ ಸರಸಿಜಾಕ್ಷ
ವ್ಯಾಪ್ತ ಪ್ರಕೃತಿ ವೇದಕಾಲ ಜೀವಾಕಾಶ
ಸಪ್ತಾ ಸಪ್ತ ಲೋಕದಲ್ಲಿ ಪೂರ್ಣ
ದೀಪ್ತಾ ಸ್ವ ಸ್ವಶರೀರ ವಿಜ್ಞಾನರೂಪ ಸರ್ವಾಂತರಾತ್ಮ ಸುಗುಣ
ಪ್ರಾಪ್ತನಾಗುವ ತನಗೆ ತಾನೆ ಒಲಿದು ಮೊದಲು
ಕ್ಲಿಪ್ತ ಮಾಡಿದಲ್ಲಿಗೆ ಕರುಣದಿಂದ
ತಪ್ತನಾಗಿ ಕಾಣಿಸುವ ದೈತ್ಯಾವಳಿಗೆ ದೋಷ
ಲಿಪ್ತ ರಹಿತ ಲಿಂಗಶೂನ್ಯ ಅನ್ಯ
ಸುಪ್ತಿ ಇಲ್ಲದಂತೆ ಏಕಮೇವ ನೆನಿಪ
ಶಪ್ತನೊ ಸಾಕಾರ ಮೂರ್ತಿ ಮೂಲ
ಸಪ್ತಾವರಣ ಸರಸಿಜಾಂಡದೊಳಗೆ ಸಂ
ದೀಪ್ತನಾಗಿ ಒಪ್ಪುವ ಸರ್ವೋತ್ತುಮಾ
ಗೆಪ್ತಿಗೆ ನಿಲಕುವಾ ವಿಜಯ ವಿಠ್ಠಲರೇಯ
ಆಪ್ತಾ ಅಖಿಳ ಮುಕ್ತಿಯೋಗ್ಯಜನಕ ೧

## ಮಟ್ಟತಾಳ

ಅಗಣಿತ ಗುಣಧಾಮಾ ಅತ್ಯದ್ಭುತಶಕ್ತಾ
ನಿಗಮಗೋಚರ ನಿರ್ವಿಕಾರ ನಿರ್ವಿಕಲ್ಪಾ
ಜಗತಿ ವಲ್ಲಭ ಜನನ ಮರಣಾದಿದೂರ
ಬಗೆ ಬಗೆ ಲಕ್ಷಣ ಭರಿತವಾದ ಕಾಯಾ
ಯುಗ ಯುಗದೊಳು ತತ್ಕಾರ್ಯ ಮಾಡಿಸುವಂಥ
ಭಗವಂತನೆ ನಿತ್ಯ ಭಕ್ತರ ಮನೋರಥನೆ
ಮಗುವಿನ ಪಾಲಿಸಿದ ವಿಜಯವಿಠ್ಠಲ ನಿನ್ನ
ಪೊಗಳಿದವನ ಭಾಗ್ಯ ಎಂದಿಗೇ ಸವೆಯದೊ ೨

## ತ್ರಿವಿಡಿ ತಾಳ

ಸದ್ಗುಣಗಣಸಾಂದ್ರಾ ಜ್ಞಾನಾನಂದ ಪೂರ್ಣ
ಚಿದ್ರೂಪಾ ಅಖಿಳ ಬೊಮ್ಮಾಂಡ ಕರ್ತಾ
ನಿರ್ದೋಷ ನಿಸ್ಸಂಗ ನಿರ್ವಿಕಾರ ನಿತ್ಯ
ವಿದ್ಯಾವಂತ ವಿಶ್ವಪರಿಪಾಲಕಾ
ಖದ್ಯೋತ ಲಾವಣ್ಯ ಬಲು ಪಾವನಧೈರ್ಯಾ
ಸಿದ್ಧ ಪರಮೈಶ್ವರ್ಯ ಯೋಗೀಶ್ವರಾ
ನಿದ್ರಾರಹಿತ ಸರ್ವಸ್ವಾತಂತ್ರ ಸಮ್ಮೋದ
ಮುದ್ದು ಮೋಹನ್ನ ಸಿರಿವಂತ ತೇಜಾ
ಬುದ್ಧಿ ವಿಸ್ತರನೆ ಜಗದಂತರ್ಯಾಮಿ
ಶುದ್ಧ ಲಕ್ಷಣವಂತ ಗರುಡಗಮನಾ
ಭದ್ರಮೂರುತಿ ಪ್ರಾಜ್ಞ ಸರ್ವೋತ್ತುಮ ಶೌರ್ಯ
ಕೃದ್ಧಾದಿ ವಿದೂರ ನಿತ್ಯ ತೃಪ್ತಾ

ನಿರ್ದ್ವಂದ ಜಡಜೀವಭಿನ್ನ ಭವರೋಗ
ವೈದ್ಯ ವೈಕುಂಠನಿವಾಸ ದೈತ್ಯ
ಮರ್ದನ ಮಹಚರ್ಯಾ ತ್ರಿಜಗಪೂಜಿತ ಕಾಯ
ಸ್ವಧರ್ಮ ರಕ್ಷಕ ಸರ್ವ ವ್ಯಾಪ್ತಾ
ಮದ್ರಮಣ ಮೊದಲಾಗಿ ಹರಿಯಭಜನೆಮಾಡಿ
ಸದ್ಭಾವದಲಿ ಇಂಥ ಗುಣೋಪಾಸನೆ
ಪದ್ಧತಿ ತಪ್ಪದೆ ಮಾಡಿದರಿದರಂತೆ
ಇದ್ದಲ್ಲಿ ಕೊಡುವನು ಇನಿತಿನಿತು
ಹೆದ್ದೈವ ವಿಜಯವಿಠ್ಠಲ ಸರ್ವದಾ ಸರ್ವ
ವಿದ್ಯಾತೀತನು ಕಾಣೋ ಎಂತೆಂತ ಇದ್ದರೂ ೩

## ಅಟ್ಟತಾಳ

ಪರಮೇಷ್ಟಿ ಪವಮಾನ ಗರುಡಾಹಿ ಶಿವ ಇಂದ್ರ
ಸ್ಮರ ಪ್ರಾಣ ಅನಿರುದ್ಧ ರವಿಚಂದ್ರ ಮೊದಲಾದ
ಸುರರು ತಾತ್ವಿಕರು ಚತುರ ವಿಂಶತಿ ತತ್ವ
ಧರಿಸಿ ಇದ್ದವರು ಮಿಕ್ಕಾದ ಜೀವರಾಶಿ
ಪರಿಯಂತ ನೆನೆದು ಒಂದೊಂದಧಿಷ್ಠಾನದಲ್ಲಿ
ಹರಿಯ ಧ್ಯಾನವ ಮಾಡೆ ತತ್ಕಾರ್ಯವ
ಅರುಹಿ ಕೊಡುವನಯ್ಯಾ ಕ್ರಮದಿಂದ ನೇಮಿಸಿ
ಮರ್ಯಾದೆ ತಪ್ಪದು ತಮ್ಮ ಯೋಗ್ಯತದಷ್ಟು
ಕಿರಿಯ ಜನಕೆ ಶಕ್ತಿ ಇತ್ತು
ಮರಿಗೆ ಸರ್ವಸಾಧ್ಯವಾಗಿಪ್ಪದು ಕೇಳಿ
ಸರಸಿಜಗರ್ಭಂಗೆ ಇತರ ಸಂಶಯವಿಲ್ಲಾ
ಹರಿ ಕರುಣ ಒಂದೇ ಪ್ರಧಾನ ಸಾಧನ
ಪರಮಪಾವನ ಸಿರಿ ವಿಜಯ ವಿಠ್ಠಲ ತನ್ನ
ಶರನಿಧಿಗೊಂದೊಂದು ಕ್ಲಿಪ್ತಮಾಡಿ ಇಪ್ಪಾ ೪

## ಆದಿತಾಳ

ಬಿಂಬ ಪ್ರತಿಬಿಂಬ ಬಿಂಬಭಾವದಲ್ಲಿ ಹರಿಯಾ
ಬಿಂಬವೆ ಕಾಂಬುವರು ಮುಕ್ತಿಯೋಗ್ಯರು ಎಲ್ಲಾ
ವೆಂಬೊದೆ ಸಿದ್ಧಾವೆನ್ನಿ ಸ್ವಷ್ಟತ್ವದಲಿ ಭೇದ
ಕುಂಭಿನಿವಿಡಿದು ಅಧಿಕಾರಿಗಳ ವ್ಯಾಪ್ತಿ
ತುಂಬಿಕೊಂಡಿಪ್ಪದು ನೋಡುವುದು ತಿಳಿವುದು
ಹಂಬಲಿಸುವುದು ಉನ್ನತ ಉನ್ನತ ಮನಸು
ಅಂಬುಜಾಕ್ಷಗೆ ಅಜನು ಅಜಗೆ ಶಿವ ಶಿವಗೆ ಇಂದ್ರ
ಬಿಂಬ ಪ್ರತಿಬಿಂಬ ಇದೆ ತಳಗಿಯೊಳಗೆ ಉದಕ
ತುಂಬಿರಲದರದರೊಳಗೆ ಸೂರ್ಯನ ಬಿಂಬವಿರಲಾ
ಬಿಂಬದ ಪ್ರಕಾಶ ಮತ್ತೊಂದರಲಿ ಪ್ರತಿ
ಬಿಂಬ ತೋರಿದಂತೆ ಈ ತೆರದಲಿ ಹರಿಯ
ಬಿಂಬವೆ ಕಾಣುವರು ಸ್ವಯೋಗ್ಯ ತಪ್ಪದಲೆ
ಬೆಂಬಲವಾಗಿಯಿಪ್ಪ ವಿಜಯ ವಿಠಲ ಸ್ವಾಮಿ
ನಂಬಿದ ಮಾನವರ ಬಳಿಯ ಕುಣಿದಾಡುವಾ ೫

## ಜತೆ

ಭಕ್ತಿಯಿಂದಲಿ ಭಜಿಸೆ ಭವದಿಂದ ಕಡೆಮಾಡಿ
ಮುಕ್ತಿಯಲ್ಲಿ ಇಡುವ ವಿಜಯ ವಿಠ್ಠಲ ಪೊಳೆದು ೬

## ೫೧

## ಧ್ರುವತಾಳ

ನೀನಾದಿ ಮೂರುತಿಯಾಗಿ ಅವ್ಯಾಕೃತಾಕಾಶದಲ್ಲಿ ।
ಸ್ವಾನಂದಾತಿಶಯವಾಗಿ ಪ್ರಕೃತಿ ಮೀರಿ ।

ನಾನಾ ವ್ಯಾಪಾರದಿಂದ ಪೂರ್ಣ ಪರಬೊಮ್ಮ ।
ಜ್ಞಾನ ಸ್ವರೂಪ ರೂಪ ವಿಶ್ವರೂಪ ।
ಮಾನವ ಮೊದಲಾದ ವೇಷವ ಧರಿಸಿ ಸು ।
ಮ್ಮಾನದಿಂದಲಿ ಕ್ರೀಡೆಯಾಡುತಿಪ್ಪೆ ।
ನೀನೆ ಸರ್ವಕರ್ತ ತ್ರಿಗುಣವ ಮನೆಮಾಡಿ ।
ಅನಾದಿಯಿಂದ ಬಿಡದೆ ಲೀಲಾ ಮಾತ್ರ ।
ಅನಂತಾನಂತ ಕಾರಣ ಕಾರ್ಯದಿಂದಲಿ ।
ಏನೆಂಬೆ ಚತುರಾಸ್ಯ ಮಿಕ್ಕ ತತ್ವ ।
ಮಾಣದೆ ನಿರ್ಮಾಣವ ಮಾಡಿದೆ ಚಮತ್ಕಾರ ।
ವೇಣು ಬಣ್ಣಿಪರಾರು ಗುಣಿಸಿ ಗುಣಿಸಿ ।
ಆನಾವುದು ನಿನ್ನ ಮಾಯವ ನೋಡಿ ಕಡೆ ।
ಗಾಣೆನೋ ಸರ್ವದ ಅಪರಿಚ್ಛಿನ್ನ ।
ನೀನೆ ಅಂತರ ಬಾಹಿರನೊಬ್ಬನೆಂಬೋದೆ ಉ ।
ತ್ತಾನುಪಾದಿ ನೋಡಬಲ್ಲ ತಪಸಿನಲ್ಲಿ ।
ಪ್ರಾಣ ವದನ ನೇತ್ರ ಕರ್ನ ರಸನನಾಸ ।
ಜಾನು ಜಂಘ ಚರಣ ಉದರ ನಾಭಿ ।
ಪಾಣಿ ಕಂಧರ ಬಾಹು ರೋಮ ಸರ್ವ ಶರೀರ ।
ಏಣಿಕೆಗೆ ಭಿನ್ನ ಅರ್ಚಿಪುದಕೆ ।
ಪ್ರಾಣಮಾಳ್ಪ ವ್ಯಾಪಾರ ರೋಮಾದಿಗಳಿಗುಂಟು ।
ಸ್ಥಾನಸ್ಥಾನಕೆ ನಿನಗೆ ಐಕ್ಯವಹುದು ।
ನೀನಂದು ಕೃಷ್ಣನಾಗಿ ಜನಿಸಿದ್ದು ರೋಮವೆಂದು ।
ಆ ನಿರ್ಜರಗಣ ಪೇಳುತಿದಕೊ ।
ಧಾನವಾಂತಕ ನಿನ್ನ ಕರ್ನ ಮಾಡೊ ವಿವರ ।
ಪಾಣಿ ನಖಾದಿಗಳು ಮಾಳ್ಪವಯ್ಯ ।

ಈ ನಾಡಿನೊಳಗೆ ನಿನಗೊಬ್ಬಗೆ ಸಲ್ಲುವುದು ।
ಯೋನಿಜರಿಗೆಯಿದೆ ಒಪ್ಪದೇನೊ ।
ಆ ನೀರೊಳು ವಟಪತ್ರಶಯನನಾದ ।
ಶ್ರೀ ನಾರಾಯಣ ಯೋಗನಿದ್ರ ।
ನೀನೇ ಬಾಲಕನಾಗಿ ಏಳು ಕೋಟಿಯೋ ।
ಜಾನ (ಜನ) ಪ್ರಮಾಣದಿನಿತು ನಲಿದಾಡುವೆ ।
ಅನಂತಾನಂತ ಕಾರ್ಯ ರೂಪಕ್ಕೆಯಿದೆ ಪ್ರ ।
ಧಾನ ಮೂರುತಿ ಕಾಣೊ ಇದಕೆ ಮಿಗಿಲು ।
ತಾನೆ ತಾನಾಗಿಯಿಪ್ಪ ಅಮಿಶ್ರ ವ್ಯಾಪ್ತನೆಂದು ।
ಶ್ರೀ ನಾರಿ ನೋಡುವಳು ಬೆರಗಾಗುತ ।
ವಾಣಿಯ ತಗ್ಗಿಸಿ ತನಗಗೋಚರನೆಂದು ।
ಅನಂತಾನಂತ ಮಡಿ ವೇದಾನುಕ್ತ ।
ಧೇನಿಸಿ ಮನೋವಾಚ ಕಾಯದಿಂದಲಿ ಬಲು ।
ಗಾನವನು ಮಾಡಿ ನೆಲೆಗಾಣಳು ।
ಹೇನು ಇರುವೆ ನೊಣ ಜಲಚರ ಪಕ್ಷಿಗಳು ।
ಆನೆ ಶಾರ್ದೂಲ ಸಿಂಹ ಶರಭಸರ್ಪ ।
ಮಾನವ ಯಕ್ಷ ರಕ್ಷ ಗಂಧರ್ವ ಸಿದ್ಧಸಾಧ್ಯ ।
ದಾನವಾಮರ ತಾತ್ವಿಕರ ಮೀರಿ ।
ಅ ನೀರಜಮಂದಿರ ನೋಡಲಾಗಿ ಮೇಲು ।
ನಿನೇ ಘನ್ನ ಘನ್ನ ಘನ ಘನ ಮಹ ಘನ್ನ ।
ಈ ನುಡಿಯಂತೆ ಅಣುತ್ವ ತಿಳಿದು ಆರಾ ।
[ಧ]ನೆ ಮಾಡಿದವನು ಸತತದಲ್ಲಿ ।
ಜ್ಞಾನಿಗಳೊಳು ಶ್ರೇಷ್ಠ ಹರಿಯೆರಡು ಕಡೆಯಲ್ಲಿ ।
ನೀನಲ್ಲದೆ ಅನ್ಯರಾರಿಲ್ಲ ನಿತ್ಯ ।
ಧೇನುವಿನಿಂದ ಬೇಡಿದಾರ್ಥವ ಕೊಡಿಸುವ ಸ ।

ತ್ರಾಣನೆ ನಿನಿಗಿದಾಶ್ಚರ್ಯವಲ್ಲ ।
ಅನಾಥ ಬಂಧುವೆ ಏಕಮೇವದ್ವಿತೀಯ ।
ಆನಂದ ಬೊಮ್ಮಮಯ ಆನಂತಾತ್ಮ ।
ಅನಾದಿಲಿಂಗ ಬದ್ಧಜೀವಿಗಳ ಮುಖ್ಯ ।
ಪ್ರಾಣನಿಂದಲಿ ಕೈಕೊಂಡವರ ।
ಶೋಣಿತ ಶುಕ್ಲ ಸಂಬಂಧಿಗಳನ್ನು ಮಾಳ್ಪ ।
ಜಾಣತನವನ್ನು ವ್ಯಕ್ತ ಮಾಡಿ ।
ಶ್ರೇಣಿಕ ಕರ್ಮಗಳನ್ನೆ ನೋಡಿದೆ ಜೀವರ ಅ ।
ಧೀನದಲಿ ಕಾಯ ತಂದು ಕೊಡುವ ।
ವಾಣಿಯರಸನ್ನೈಯ್ಯ ವಿಜಯವಿಠ್ಠಲರೇಯ ।
ನೀನಾಡುವ ಲೀಲೆ ತಿಳಿಯದವರಗೆ ಕಠಿಣ ೧

## ಮಟ್ಟತಾಳ

ಜಗವೆಲ್ಲ – ಶಿರಸ ಜಗವೆಲ್ಲ ಫಾಲ ಜಗವೆಲ್ಲ ನಯನ ।
ಜಗವೆಲ್ಲ ಕರ್ನ ಜಗವೆಲ್ಲ ವಾಸ ಜಗವೆಲ್ಲ ವದನ ।
ಜಗವೆಲ್ಲ ರಸನ ಜಗವೆಲ್ಲ ರದನ ಜಗವೆಲ್ಲ ಕಂಠ ।
ಜಗವೆಲ್ಲ ಬಾಹು ಜಗವೆಲ್ಲ ಹಸ್ತ ಜಗವೆಲ್ಲ ವಕ್ಷ ।
ಜಗವೆಲ್ಲ ಉದರ ಜಗವೆಲ್ಲ ನಾಭಿ ಜಗವೆಲ್ಲ ಕಟಿ ।
ಜಗವೆಲ್ಲ ಊರು ಜಗವೆಲ್ಲ ಜಾನು ಜಗವೆಲ್ಲ ಜಂಘೆ ।
ಜಗವೆಲ್ಲ ಪರುಡು ಜಗವೆಲ್ಲ ಪಾದ ।
ಜಗವೆಲ್ಲ ಬೆರಳು ಜಗವೆಲ್ಲ ನಖ
ಜಪವೆಲ್ಲ ಇನಿತು ಬಗೆ ತುಂಬಿದೆ ನೋಡಿ ।
ಜಗವ ಪುಟ್ಟಿಸಿದವನೆ ಜಗದಾಧಿಷ್ಠನೆ ಜಗದ್ಗಾಧಾರನೆ ।
ಜಗನ್ಮಾಯನ್ಮಯನೆ ಜಗತ್ತಿನ ಭೇದನೆ ।
ಜಗದಂತರ್ಯಾಮಿ ವಿಜಯ ವಿಠ್ಠಲನೆಂದು ।
ಪೊಗಳಿದವರನ ತೊಲಗದೆ ಸಾಕುವ ದೈವ ೨

## ತ್ರಿವಿಡಿ ತಾಳ

ಶ್ರೀವಾಸುದೇವ ಸಂಕರುಷಣ ಪ್ರದ್ಯುಮ್ನ ।
ದೇವ ಅನಿರುದ್ಧ ಚತುರ ಮೂರುತಿಯಾಗೆ ।
ಈ ವಿಧ ಹರಿ ನೀನೆ ರೂಪವ ಧರಿಸಲು ।
ದೇವಿಲಕುಮಿತಾನೆ ಮಾಯಾಜಯಾಕೃತಿ ।
ಜೀವರ ಪಡೆದ ಶಾಂತಿಯೆಂಬೊ ಪೆಸರಿಲಿ ।
ಪೂದಿನ ಮಗನನ್ನ ವಾಸುದೇವ ಪೆತ್ತ ।
ಭೂವನ ಜೀವನ ನೇಗಲಿ ಧರನ್ಯೈಯ್ಯಾ ।
ಆ ವಾಣಿ ಭಾರತಿ ಇಬ್ಬರನ್ನ ಪ್ರದ್ಯುಮ್ನ ।
ಮೂವರಿಂದಲಿ ಇನಿತು ಪಡೆದನಂದು ।
ವಿವಾಹ ಮಾಡಿದ ಅಜ ಸರಸ್ವತಿಗೆ ಮ ।
ತ್ತಾ ವಾಯು ಭಕ್ತ್ಯಾಭಿಮಾನಿನಿಗೆ ।
ಕೋವಿದರಾಯನು ತನಗೆ ತಾನೇ ಬೀಗ ।
ವಾವಿಲಿ ನಡಕೊಂಡು ಸುಖಿಸುವನೊ ।
ಸಾವಿಲ್ಲದ ದೈವ ವಿಜಯ ವಿಠ್ಠಲರೇಯ ।
ಆವುಗಳ ಕಾಯ್ದ ಅಣುವೆ ಕೊಂಡಾಡಿ ದಣುವೆ ೩

## ಅಟ್ಟತಾಳ

ಇವರಿಂದಲಿ ಇವರು ಪುಟ್ಟಿದರು ಮ ।
ತ್ತಿವರಿಂದ ಸರ್ವ ದೇವತೆಗಳು ಉದ್ಭವ ।
ಅವರ ಪೆಸರು ನೋಡು ಖಗರಾಜ ಉರಗೇಂದ್ರ ।
ಶಿವ ಮೊದಲಾಂಥ ದಿವಿಜಾದ್ಯರು ಪುಟ್ಟಿದ ।
ರವರಿಂದರವರಂದು ಉೂಚೋಚ್ಚಭಾವದಿ ।
ಭವದಲ್ಲಿ ಇವರನ್ನು ಇಟ್ಟು ಮರುಳು ಮಾ ।

ಡುವ ಮಹ ಮಹಾತ್ಮ ನಿನಗೆಣೆ ಆವಾವ ।
ಭುವನದೊಳಗೆ ಕಾಣೆ ಇಂದೆಂದಿಗೂ ।
ತ್ರಿವಿಧಾತ್ಮಕವಾದ ಗುಣದಿಂದ ಸರ್ವ ತ।
ತ್ವವನು ನಿರ್ಮೈಸಿದ ಪ್ರಭುವೆ ಪ್ರಳಯ ದೂರ ।
ನವ ನವ ಗುಣವುಳ್ಳ ವಿಜಯವಿಠ್ಠಲರೇಯ ।
ನವ ವಿಧ ಭಕುತಿಯ ಕರುಣಿಸೊ ಎನಗೆ ।

## ಆದಿತಾಳ

ಮೊದಲು ಗುಣತ್ರಯ ಆಮೇಲೆ ಮಹತತ್ವ ।
ಅದರ ತರುವಾಯ ಅಹಂಕಾರ ಆಕಾಶ ।
ಇದರಿಂದತ್ತವಾಯು ಅನಳೋದಕ ತತ್ವ ।
ತದನಂತರದಲ್ಲಿ ಪೃಥಿವಿ ಬೊಮ್ಮಾಂಡ ಖರ್ಪ ।
ರದಕೆ ಲೆಖ್ಖವೆನ್ನಿ ತುದಿಯಲ್ಲಿ ಇಪ್ಪದೆಂದು ।
ಅಧಿಕಾಧಿಕ ತಿಳಿಯದೆ ನೀಚ ಕ್ರಮಾನು ವಂ ।
ದದಕೆ ಈರೈದು ಮಡಿ ಕಡಿಮೆಯಾಗಿಪ್ಪದೆಂದು ।
ಪದುಮಜಾಂಡದೊಡಿಯ ವಿಜಯವಿಠ್ಠಲ ಮುಂದೆ ।
ಅದು ಭೂತ ಮಾಳ್ಪನೆಂದು ಸ್ತುತಿಸಬೇಕು ನಿನ್ನ ೫

## ಜತೆ

ಸಕಲಕ್ಕೂ ಕಾರಣ ಕಾರ್ಯರೂಪನು ನೀನೆ ।
ಲಕುಮಿ ವಲ್ಲಭ ನಮ್ಮ ವಿಜಯ ವಿಠ್ಠಲರೇಯ ೬

## ೫೨

### ಧ್ರುವ ತಾಳ

ನೀನಿತ್ತ ತನುವೋ ನೀನಿತ್ತ ಮನವೋ
ನೀನಿತ್ತ ಸದನವೋ ನೀನಿತ್ತ ವ[ನಿ]ತೆ ನಂದನರತಿಘನವೋ
ನೀನಿತ್ತ ಚೇತನವೊ ನೀನಿತ್ತ ಮನವೋ
ನೀನಿತ್ತ ಸಕಲೇಂದ್ರಿಯಗಳ ಅಭಿಮಾನವೋ
ನಾನಾವುದು ಬೇಡಿ ನಾನಿಂತು ಬೇಕೆಂದು
ನಾನಿಂತು ಬಿನ್ನೈಸಿ ನಾನಿಂತು ಕೇಳಿದೆನೆ
ನಾನಾನೇಕದಾ ನಾನಾವಸ್ಥಿಯಾ
ನಾನಾವಾಬಗೆ ನಾನಾವೆನಿಸಿ
ನೀನಿತ್ತ ಬಾರದೆ ನೀನಿತ್ತ ಪೋಗದು
ನೀನಿತ್ತವಯ್ಯಾ ಪಾ[ವ]ನಯ್ಯಾ
ನಾನೆತ್ತ ಪೊಂದಲಿ ನಾನಾರಸದಲ್ಲಿ
ನಾನಾ ಮಾಯದ ನಾರಾಯಣ
ದಾನವನಾಶಾ ರಂಗ ವಿಜಯ ವಿಠ್ಠಲ ಸ್ವಾಂಗಾ
ನೀನನಾದಿ ಎಂದು ನಾನಾದೆ ದಾಸಾ ೧

### ಮಟ್ಟತಾಳ

ಆರು ಇಲ್ಲದ ಒಬ್ಬ ಊರಾ ಪರದೇಶಿಯ ಒಯ್ದು
ನೀರೊಳಗೆ ಹಾಕಿ ತೀರದಲ್ಲಿ ಇರದೆ
ದೂರದಲ್ಲಿ ನಿಂದು ಮೋರೆ ನೋಡುವರೇನೊ
ಆರಾದರೆ ಏನು ವಾರವಾರಕೆ ತಮ್ಮ

ವಾರಣದ ವಾರ್ತೆ ಹಾರೈಸುವವರಯ್ಯಾ
ಸಾರಿ ಸಾರಿಗೆ ಸಂಸಾರದೊಳಗೆ ಬೀಳೆ
ತೈರಕೆಯಯವನಾಗಿ ದೂರ ನೋಡುತ ಲಿಪ್ತ
ಚಾರುತನವೇನೋ ವೀರ ವಿಜಯ ವಿಠ್ಠ
ಲಾರು ಮೆಚ್ಚುವರು ಈ ಗಾರುಡದಾಟಕ್ಕೆ
ಭಾರಕ ನೀನೆಲ್ಲಾ ಧಾರುಣಿಯೊಳಗೆಲ್ಲಾ ೨

## ರೂಪಕತಾಳ

ಹಂಗು ಹರಿದ ಮೇಲೆ ಲಿಂಗದ ಪರಿವೆ ಎ
ನ್ನಂಗವ ನಿನ್ನಯ ಅಂಘ್ರಿಗೊಪ್ಪಿಸಿದೆ ಈ
ಅಂಗದ ಪರವೇನು ಅಂಗಜಪಿತ ತಿರು
ವೆಂಗಲನಿಹ ಲಾವಾಂಗವ ಹರಿ ಬಿಡೆ
ಕೆಂಗಡದಲೆ ನಿನ್ನಂಗುಟ ಬಾಯಲ್ಲಿ
ಹಿಂಗದೆ ಕಚ್ಚಿ ಹೀನಂಗಳ ನೂಕುವೆ
ಹಿಂಗಳದಡೆ ನಿನ್ನ ನಿನ್ನಂಗನಿರಲು ದಿವ
ಸಂಗಳು ಪೊತ್ತು ಪೆತ್ತದು ಬರಿ ದೇವ
ನಂಗ ವಿಜಯ ವಿಠ್ಠಲಂಗುಸುರುವೆನು ಈ
ಅಂಗಿಯ ಬಿಡಿಸೆನ್ನ ಅಂಗೀಕರಿಸಿಕೊಳ್ಳೊ ೩

## ಝಂಪೆ ತಾಳ

ಬಿಂದು ಮೊದಲು ಅವ್ಯಾಕೃತಾಕಾಶ ಪರಿಯಂತ
ಒಂದು ಸ್ಥಳವೆನ್ನದಲೆ ವ್ಯಾಪ್ತನಾಗಿ
ಎಂದೆಂದಿಗೆ ಇಲ್ಲವೆಂದು ಎನ್ನಯ ಮುಂದೆ
ಬಂದು ನಿಂದಿರಲಾಪ್ಪಾ ಇಂದಿರಾರಮಣಾ
ಮಂದ ಮತಿಯು ಇಂದ ನಿಂದಿಸಿ ಕೊಳದೆ

ಪೊಂದಿ ಬಾಂಧವನಾಗಿ ದೋಷಂಗಳ ಪಾಶಾ
ಬಂಧನವೆ ಪರಹರಿಸು ಒಂದೆ ದೈವವೆ ಶರ
ಣೆಂದೆನೊ ವಿಜಯ ವಿಠಲಾ ನಂದಕಿ ನಾಮಾ ೪

## ತ್ರಿವಿಡಿ ತಾಳ

ನೀ ಕಲ್ಪಿಸದವು ನೀ ಕಡೆ ನೋಟಾ
ನೀ ಕರುಣದಿಂದ ನೀ ಕಾಯದಿರಲು
ನಾ ಕಾಣೆನವನಿಯೊಳು ನಾಕಾದಿ[ಲೋಕ]ದೊಳು
ನಾ ಕಂಡೇನಂದು ಪಿನಾಕಿಯ ಕಾಯ್ದದ್ದು
ಈ ಕಾಮೇಂದ್ರಿಗಳು ಎನ್ನ ಕಾಯದೊಳಗಿದ್ದ
ರಾ ಕೂಡಿ ಇರಲಿ ವಿವೇಕದಲಿ ನಿತ್ಯ
ನಾ ಕೈಯಾ ಮುಗಿದು ಈ ವಾಕು ಬೇಡುವೆ ವಿ
ವೇಕ ನಾಮಾ ನಮ್ಮ ವಿಜಯ ವಿಠ್ಠಲರೇಯಾ
ನೀ ಕಡೆ ಮಾಡದೆ ಸಾಕು ದಯದಿಂದ ೫

## ಅಟ್ಟತಾಳ

ಹೃಷಯಂಗಳಿಗೆ ನೀನರಸನಾದ ಕಾರಣ
ಹೃಷಿಕೇಶನೆಂದು ದಿವ್ಯಪೆಸರು ಪೆಸರಿತಯ್ಯ
ಘಸಣೆ ಮಾಡುವ ಮುನ್ನ ಸಮಹೃಹಿಕಾದಿಗಳು
ಅಸುವಿಂಗೆ ಸುತ್ತಿ ಉಬ್ಬಸವ ಬಡುಸುತಿರೆ
ಅಸುರಾರಿ ವೇಗ ಹಾರಿಸದಿದ್ದರೆ ನಿನಗೆ
ಹೃಷಿಕೇಶನೆಂಬೊ ಮಹಾ ಪೆಸರು ಪುಶಿಯಾಗದೆ
ಉಸಿರಿದವೆಲ್ಲಿ ಮೇಹಾ ಬಸುರೊಳಗಿದ್ದರೇನು
ಕೇಶಘ್ನಿ ವಿಜಯ ವಿಠಲೊಶವಾಗಿ ನಿನ್ನವನೆನಿಸು ೬

## ಆದಿತಾಳ

ಬದುಕಲಾರೆನೆಂದು ಇಂದರೊಳಗೊಂದಾದರು
ಬದಿಗೆ ಬಂದು ಎನಗೆ ಒದಗಲಿ ಎಂದೆನೇ
ಉದುಭವಿಸುವಾಗ ಚದುರಮತಿಯಲಿದ್ದೆ
ಬೆದರಿಸುವಂದರ ಅದುಭೂತವರಿಯನು
ತುದಿಗಾದರು ಒಳಿತು ಹೀನದಲಿ ಒಮ್ಮೆ ನಿನ್ನ
ಉದರದೊಳಗೆ ನಿದ್ರೆ ಪದರದೆ ಗೈವೆನೋ
ಇದಕೆ ಸಂಶಯ ಸಲ್ಲಾ ವಿಜಯವಿಠ್ಠಲ ವಿರಜಾ
ಎದೆಗುದೆ ಎನಗಿಲ್ಲಾ ಯಾದವ ಶಿರಿನಲ್ಲಾ ೭

## ಜತೆ

ಸ್ವಾರ ವಿತ್ತಮ ಸಂವರ ನಿನ್ನ ಸದನವು ?
ಸರಿ ಬಂದಲ್ಲಿಡು ಧಾತಾ ವಿಜಯ ವಿಠ್ಠಲರೇಯಾ ೮

## ೫೩

## ಧ್ರುವತಾಳ

ನೀ ಪ್ರಕಾಶಿತನಾಗೆ ನಾ ಪ್ರಕಾಶನಾಗುವೆ
ನೀ ಪ್ರಕಟವಾಗೆ ನಾ ಪ್ರಕಟವಾಗುವೆ
ನೀ ಪ್ರಾಚುರ್ಯನಾಗೆ ನಾ ಪ್ರಾಚುರ್ಯನಾಗುವೆ
ನೀ ಪ್ರಜಾವಂತನಾಗೆ ನಾ ಪ್ರಜಾವಂತನಾಗುವೆ
ನೀ ಪ್ರಣುತನಾಗೆ ನಾ ಪ್ರಣುತನಾಗುವೆ
ನೀ ಪ್ರಾಣನಾಗೆ ನಾ ಪ್ರಾಣನಾಗುವೆ

ನೀ ಪ್ರತಿ ಕೂಲವಾಗೆ ನಾ ಪ್ರತಿಕೂಲನಾಗುವೆ
ನೀ ಪ್ರಧಾನನಾಗೆ ನಾ ಪ್ರಧಾನ ನಾಗುವೆ
ನೀ ಪ್ರತಿಷ್ಠನಾಗೆ ನಾ ಪ್ರತಿಷ್ಠನಾಗುವೆ
ನೀ ಪ್ರೀತನಾಗೆ ನಾ ಪ್ರೀತನಾಗುವೆ
ನೀ ಪ್ರದಾತನಾಗೆ ನಾ ಪ್ರಪೂಜ್ಯನಾಗುವೆ
ನೀ ಪ್ರಬಲನಾಗೆ ನಾ ಪ್ರಬಲನಾಗುವೆ
ನೀ ಪ್ರಭೂನಾಗೆ ನಾ ಪ್ರಮುಖ್ಯನಾಗುವೆ
ನೀ ಪ್ರಥಮನಾಗೆ ನಾ ಪ್ರಥಮನಾಗುವೆ
ನೀ ಪ್ರವರ್ತಕನಾಗೆ ನಾ ಪ್ರವರ್ತಕನಾಗುವೆ
ನೀ ಪ್ರವಾಸನಾಗೆ ನಾ ಪ್ರವಾಸನಾಗುವೆ
ನೀ ಪ್ರವೇಶನಾಗೆ ನಾ ಪ್ರವೇಶನಾಗುವೆ
ನೀ ಪ್ರಮೋದನಾಗೆ ನಾ ಪ್ರಮೋದನಾಗುವೆ
ನೀ ಪ್ರಶಾಂತನಾಗೆ ನಾ ಪ್ರಶಾಂತನಾಗುವೆ
ನೀ ಪ್ರಸಾದನಾಗೆ ನಾ ಪ್ರಸಾದನಾಗುವೆ
ನೀ ಪ್ರೌಢನಾಗೆ ನಾ ಪ್ರೌಢನಾಗುವೆ
ನೀ ಪ್ರೇರಿಸಿದಂತೆ ನಾ ಪ್ರೇರಣೆಯಿಂದ
ಈ ಪೃಥಿಯೊಳಗೆ ನಾ ಪ್ರಪಂಚದಲ್ಲಿ ಇಪ್ಪೆ
ಶ್ರೀ ಪ್ರಕೃತಿರಮಣ ವಿಜಯ ವಿಠ್ಠಲರೇಯ
ನೀ ಪ್ರತಿಭಟಿಸಲು ನಾ ಪ್ರತಾಪವುಳ್ಳವನೇ ೧

## ಮಟ್ಟತಾಳ

ಸ್ವಾತಂತ್ರ ನಾನಾಗಿ ಜನಿಸಿ ಉಳ್ಳರೆ ನಿನಗೆ
ಯಾತಕೆ ಮೊರೆ ಇಡುವೆ ಕರುಣಿ ಪಾಲಿಪುದೆಂದು
ಸ್ವಾತಂತ್ರ ಎನಗಿಲ್ಲ ಸರ್ವದಾ ನೋಡಿದರು
ಯಾತನೆ ಬಡುವುದಕೆ ನಾನೇ ಎಂದು ಕೊಂಬೆ

ಮಾತು ಪೇಳುವಾಗ ನಾಲಿಗೆ ಕಡಕೊಂಡು
ಬಾತು ಬಸಿದು ಬಲಲಿ ಹಾಹಾ ಎಂಬೆನೇನೊ
ಗಾತುರ ರೋಗ ಬಂದು ಪ್ರಾಪುತವಾಗೆ
ಧಾತುಗೆಡುವೆನೊ ಹರಿಯೆ ಕಾಯೊ ಎಂದು
ಆತುಮದೊಳು ನೀನು ವ್ಯಾಪುತನಾಗಿದ್ದು
ಸೂತ್ರನಡಿಸಿದಂತೆ ನಾನು ಸಂಚರಿಸುವೆ
ನೇತುರ ಶ್ರವಣ ನಾಲಿಗಿ ನಾಸವದನ
ಪ್ರೀತಿಯಾದ ಹಸ್ತಚರಣ ಪಾಯೋಪಸ್ಥ
ಈತ್ವಕು ಮನಮಿಕ್ಕ ಇಂದ್ರಿಯ ಒಳವಳಗೆ
ನೀ ತಿರುಗದಲೇ ಅನ್ಯಥ ವ್ಯಾಪಾರವೆ
ವಾತ ಪೊರಡುವದು ತಿರುಗಿ ಬರುವದು
ಜಾತನಾಗುವದು ಬಾಲ ಯೌವನ ವೃದ್ಧ
ಖ್ಯಾತಿಯಲ್ಲಿ ಇದ್ದು ಸತಿಸುತರೊಡನೆ
ಜಾತಿ ಉತ್ತಮನೆಂದು ಪರರುಪೇಳುವದು
ಖ್ಯಾತಿಯಾಗುವುದು ಸರ್ವಚೇಷ್ಟೆಗಳು
ಭೂತಳಾಧಿಪ ನಮ್ಮ ವಿಜಯ ವಿಠ್ಠಲ ನೀನೆ
ಆತುಮದೊಳಗಿದ್ದು ಪ್ರೇರಿಸದಲೆ ಇಲ್ಲಾ ೨

## ತ್ರಿವಿಡಿ ತಾಳ

ಮಾಡಿದಾ ಕರ್ಮದಿಂದಲಿ ಪಾಪ ಪುಣ್ಯವ
ಕೋಡಾಗಿ ಉಣದಲೆ ಬಿಡದೆಂಬಿಯಾ
ಆಡಲೇನು ಕರ್ಮ ಜಡವಲ್ಲದೆ ಲಾಭ
ಕೇಡು ಕೊಡುವುದಕ್ಕೆ ಸ್ವಾತಂತ್ರವೇ
ನಾಡೊಳು ಪರಿಗೋಲು ಸರಿತೆಯೊಳಗೆ ನಿತ್ಯ
ಆಡದೆಂಬೋರು ಅದಕೆ ಒಂದು

ನಾಡಿಯಾದರು ಚೇತನ ವ್ಯಾಪಾರ ಉಂಟೇ
ನೋಡುವುದೊಬ್ಬರ ಅಧೀನವೋ
ಮೂಢ ಸದನದೊಳಗಲ್ಲಿಂದ ಅಲ್ಲಿಗೆ
ಓಡಾಡಿ ತಿರುಗಿದರೆ ಫಲವಹುದೇ
ಈಡಾರ ನಿನಗೆ ಕರ್ಮಾಧಿಷ್ಠಾನದಲಿ
ಕೂಡಿಕೊಂಡು ಪುಣ್ಯ ಪಾಪಂಗಳ
ನೀಡಿ ಈ ಪರಿಯಿಂದ ಅನಿತ್ಯವಾಗಿದ್ದ
ಬೀಡಿನೊಳಗೆ ಇಟ್ಟು ತಿರುಗಿಸುವೆ
ಆಡಲೇನು ಅಂದು ಮರುತ ಪಾವಕರು
ಕೂಡಿ ಪ್ರತಾಪದಲ್ಲಿ ತೃಣ ಬಂದನು ಅ
ಲ್ಲಾಡಿಸಲಾರದೆ ಸುಮ್ಮನಾದರು ದೇವ
ಬೇಡೆಂದು ನಿಲಿಪಾರೇ ನಿನ್ನ ಮಹಿಮೆ
ಆಡಿನ ಕೊರಳೊಳು ಸ್ತನವುಳ್ಳ ತೆರದಂತೆ
ನಾಡದೈವಂಗಳ ಮಹಾ ಬಿಂಕವು
ಜಾಡಮಯ್ಯಾನಂತೆ ಉಪಾಯದಲಿ ನೀ
ನಾಡುವ ಸೋಜಿಗ ಪೊಗಳಲಳಲವೇ
ಬೇಡಿಕೊಂಡು ಪೊಟ್ಟೆಪೊರೆವ ಮಂದ ಮನುಜ
ಮಾಡಬಲ್ಲನೆ ನಿತ್ಯ ಸ್ವಾತಂತ್ರವ
ರಾಡಿಕಲೆತ ನೀರಿನಂತೆ ನಾನಿಪ್ಪೆನೋ
ಗೂಡಿನೊಳಗೆ ಬಂದು ನೆಲೆಗಾಣದೆ
ಕೋಡಗದ ಮರಿ ನಾನು ನಿನಗೆ ನೀನು
ಬಿಡಾಲನಂದದಿ ಎನಗೆ ಕಾಣೋ
ಕಾಡದೆ ಬಿಡೆನಯ್ಯಾ ನಾಮಸ್ಮರಣೆಗಳು
ಪೀಡಿ ಪಿಡಿದವನಂತೆ ಕೂಗಾಡುವೆ
ಹಾಡು ಪಾಡುವಂಗೆ ಪಾಪಪುಣ್ಯಗಳೆರಡು

ಮಾಡಿಸಿದರೊಳಿತೆ ಏನಾದರೆ ಏನು
ಚಾಡಿ ಬೇಡುವರೊಡಿಯಾ ವಿಜಯ ವಿಠ್ಠಲರೇಯಾ
ಹೋಡಿನವ ನಾನಲ್ಲ ಪಡಿದೊತ್ತಿನ ತೊತ್ತಿನದಾಸ ೩

## ಅಟ್ಟತಾಳ

ಮೊದಲಿಗೆ ಉತ್ಪತ್ತಿ ಸ್ಥಿತಿ ಲಯ ನೇಮವಾ
ಅದರ ತರುವಾಯ ಜ್ಞಾನ ಅಜ್ಞಾನ ವಿ
ಮದ ಬಂಧ ಮೋಕ್ಷ ಈ ಪರಿಯಲ್ಲಿ ಕಲ್ಪಿಸಿ
ತುದಿ ಪರಿಯಂತ ತೊಲಗಿ ಪೋಗದಂತೆ ನೀ
ನಿದನು ಮಾಡಿಯಿರಲಾಗಿ ನಾನು ಚಿಂತಿಪುದೇನು
ತ್ರಿದಶ ಮಿಕ್ಕಾದ ಜನರೊಳಗೊಬ್ಬರು
ಎದಿರು ನಿನಗೆ ಮತ್ತಾರಾದರು ಇಲ್ಲ
ಇದೆ ಧೈರ್ಯದಲಿ ಎನ್ನನು ಬಳಲಿಸುತಿಪ್ಪೆ
ಪದುಮ ನಾಭನೆ ಧರ್ಮವಲ್ಲವು ಕೇಳು
ಹೃದಯದೊಳಗೆ ನೀನೆ ಪ್ರೇರಣೆ ಯಾಗದೆ
ವಿಧಿ ನಿಷೇಧವ ಮಾಡ ಬಲ್ಲೆನೋ ಸ್ವಾಮಿ
ಅದೃಷ್ಟ ಯೋಗ್ಯತ ಪ್ರಯತ್ನ ನಾನಾ
ವಿಧ ಕರ್ಮಗಳು ಭಕುತಿ ವಿರಕುತಿಯು
ಸದಾಕಾಲದಲ್ಲಿ ನಿನ್ನ ಅಧೀನವಾಗಿದೆ
ಮದಡ ಮಾನವ ಎನಗಾವುದು ಸ್ವಾತಂತ್ರ
ಪದ ಬಂದಿಡಲು ಕಾಯ ಆರದಾರದು ತಿಳಿಯೋ
ಸುದರಶನ ಪಾಣಿ ವಿಜಯ ವಿಠ್ಠಲರೇಯಾ
ನಿಧಿಯೆ ಎನ್ನ ಕುಲಕೋಟಿಗೆ ನಿದಾನಾ ೪

## ಆದಿತಾಳ

ಅಪವಾದದವನ ಮಾಡಿ ಅಪರಾಧ ಹೊರಿಸಿದರು
ನೃಪತಿ ಚರಿಸಿದಂತೆ ಪ್ರಜೆಗಳ ವ್ಯಾಪಾರ
ಚಪಲಾ ನೀನಹುದೋ ಎಲ್ಲರೊಳಗಿದ್ದರು
ಅಪಯನವಾದ ಪಾಪದ ಭಯವಿಲ್ಲಾ
ಸಪುತಾರ್ಚಿ ಸ್ಥಂಭಬಲ್ಲ ಬಲವಂತ ಮನುಜಗೆ
ಅಪರಿಮಿತವಾದ ಕೊಳ್ಳಿಯ ಭೀತಿಯುಂಟೆ
ಕಪಟ ನಾಟಕ ದೇವಾ ವಿಜಯ ವಿಠ್ಠಲರೇಯಾ
ಅಪವರ್ಗ ಸ್ವರ್ಗ ನರಕಾದಲ್ಲಿ ನೀನೆ ವ್ಯಾಪುತಾ ೫

## ಜತೆ

ಪಾಪ ಪುಣ್ಯಗಳೆರಡು ನಿನ್ನಧೀನವಯ್ಯಾ
ಶ್ರೀಪತಿ ವಿಜಯ ವಿಠ್ಠಲ ವಿಶ್ವದಾಧಾರಾ ೬

## ೫೪

## ಧ್ರುವತಾಳ

ಪರನ ಪರಿಯಂಕ [ನಿಂದ] ಅಂಭೃಣಿ ಸ್ತುತಿಗೆ ಮೆಚ್ಚಿ ।
ಪುರುಷನಾಮಕ ದೇವ ಜನಿಸಿದನು ।
ತರುವಾಯ ಇವನಿಂದ ವಾಸುದೇವ ಮೂರ್ತಿ ಸಂ ।
ಕರುಷಣ ಪ್ರದ್ಯುಮ್ನ ಅನಿರುದ್ಧನು ।
ವರವಾಸುದೇವನಿಂದ ಮಾಯಾದೇವಿಯಲ್ಲಿ ।
ಪುರುಷನಾಮಕ ವಿರಂಚಿ ಜನಿಸಿದನು ।
ಮರುಳೆ ಈತನೆ ನಾನಾ ಅಂಶಂಗಳು ಚನ್ನಾಗಿ ।

ಧರಿಸಿದನು ದಿವ್ಯರೂಪಂಗಳ ।
ವರಣಾತ್ಮಕವೇದ ಕಾಲಮೂಲಕೃತಿ ।
ಇರದೆ ಆಕಾಶಲಿಂಗ ಕಳೆಗಳಿಗೆ ।
ಮಿರುಗುತಿಪ್ಪ ವಿರಂಚಿ ಅಭಿಮಾನಿಯಾದನು ।
ಸ್ಮರಿಸಿ ಅತಿ ಸೂಕ್ಷ್ಮ ತರತಮ ಕಾಯನೊ ।
ಪುರುಷನಾಮಕನಾಗಿ ಪುಟ್ಟಿದ ಬ್ರಹ್ಮನು ।
ಸರುವ ಜೀವರಿಗೆ ಅಭಿಮಾನಿಯಾದ ।
ಭರದಿ ಪ್ರಳಯದಲ್ಲಿ ವ್ಯುತ್ಕ್ರಮದಿಂದ ಲಯವು ।
ಪುರುಷ ಕಾಲದಲ್ಲಿ ವಿಲಯನಾಗುವನೀತ ।
ವರಮಾಯಾ ದ್ವಾರದಿಂದ ವಾಸುದೇವನಲ್ಲಿ ।
ಇರುತಿಪ್ಪ ಕಾಲನಾಮಕ ಬ್ರಹ್ಮರಾಯಾ ।
ಪರಿಮಿತ ಉಂಟು ಮೊದಲು ಸರ್ಗಕ್ರಮದಲ್ಲಿ ।
ಪುರುಷ ಪುಟ್ಟುವ ಪ್ರಳಯದಲ್ಲಿ ವಾಸಾ ।
ಸರುವ ಅಂಶಗಳೆಲ್ಲ ಮಿಳಿತವಾಗಿದ್ದ ಅವಾಂ ।
ತರ ಪುರುಷ ವಿರಂಚಿಯ ನುಂಗುವನು ।
ಪರಮ ಜ್ಞಾನಿಗಳು ಈ ಕಾಲನಾಮಕ ಅಜನ ।
ಅರಿತು ಕೊಂಡಾಡಬೇಕು ಪ್ರಳಯ ಸರ್ಗ ।
ಗುರುತು ಪೇಳುವೆನಿದಕೆ ಮೂಲಮರುತನ್ನ ಅಂಶಾ ।
ಹರಿಕಂಡಾ ಹನುಮ ಭೀಮ ಮಧ್ವರಾಯಾ ।
ಎರಡೊಂದು ಸಿದ್ಧವೆನ್ನಿ ಯುಗಗಳಲ್ಲಿ ಅವ ।
ತರಿಸಿದನು ಹನುಮಾನ್ ಮೊದಲು ದ್ವಿತೀಯ ಭೀಮ ।
ಮರುಳೇ ಪ್ರಳಯದಲ್ಲಿ ಭೀಮನೊಳಗೆ ಹನುಮ ।
ಇರುತಿಪ್ಪದೇನು ಪೇಳಿ ಅಂಶ ಇನಿತು ।
ಸರಿ ಬಂದಂತೆ ಯಲ್ಲಾದೆ ಹರಿ ಇಚ್ಛೆ ಅಂಥಾದೆ ।
ನರರು ಎಣಿಸಿದರೆ ಸಿಗಬಲ್ಲದೇ ।

ವರಮೂರ್ತಿ ಮೋದ ನಮ್ಮ ವಿಜಯವಿಠ್ಠಲರೇಯ ।
ಕರುಣದಿಂದಲಿ ಪ್ರಜಸರ್ವವ ಮಾಡಿದನು ೧

## ಮಟ್ಟತಾಳ

ಜಯ ಸಂಕರುಷಣಗೆ ಸೂತ್ರನಾಮಕ ತ ।
ನಯನಾದನು ಕಾಣೊ ಮುಂದಣಾಗಮ ಕೇಳಿ ।
ಭಯ ರಹಿತ ಪ್ರದ್ರುಮ್ನ ದೇವನಿಂದ ।
ತ್ರಯ ಗುಣದಭಿಮಾನಿ ಪ್ರಧಾನ ಪ್ರಕೃತಿ ನಿ ।
ರಯದೂರ ಶ್ರದ್ಧ ಎಂದೆಂಬೊ ನಾಮ ।
ದಯವಂತರೀರ್ವ ಜನ ಪುಟ್ಟಿದರು ಯೇಕ ।
ಭಯ ನಿವಾರಣ ನಮ್ಮ ವಿಜಯ ವಿಠ್ಠಲರೇಯ ।
ಪ್ರಿಯನಾಗಿ ತನ್ನ ಭಕ್ತರನ ಪೊರೆವ ೨

## ತ್ರಿವಿಡಿ ತಾಳ

ಪುರುಷನಾಮಕ ಬ್ರಹ್ಮ ಪ್ರಕೃತಿನಾಮಕಳಾದ ।
ಸರಸ್ವತಿಯಲಿ ಜೀವನಾಮಕ ಸರ್ಪ ।
ಮರುತ ಸೂತ್ರ ಶ್ರದ್ಧಳೆಂಬೊ ಭಾರತಿಯಲ್ಲಿ ।
ಗರುಡನು ಜನಿಸಿದ ಜೀವ ಕಾಲನಾಮಕನೆಂದು ।
ಮರಳೆ ಪ್ರಮೇಯ ತಿಳಿ ಪುರುಷನಾಮಕ ವಿರಂಚಿ ।
ಸರಸ್ವತಿದೇವಿಗೆ ಪುಟ್ಟಿದ ಬಲಾಖ್ಯದಲಿ ।
ಮರುತಂ ದೇವನು ತನ್ನ ಅರ್ಧಾಂಗಿನಿ ಸಹಿತ ।
ಚರಿಯಾಧಲ್ಲಿ ಮೆರದ ಬಲನೆಂಬೊ ಮಾರುತಗೆ ।
ತಿರುಗಿ ಪುಟ್ಟಿದ ಜೀವ ಅಜನಿಂದ ಪುಟ್ಟಿದವ ।
ಅರಿತು ಪೂಜಿಯ ಮಾಡಿ ಈತನೆ ಫಣಿರಾಜ ।
ವರ ವಾಸುದೇವನಲಿ ಪುಟ್ಟಿದ ಬ್ರಹ್ಮ ।

ಹರಿರೂಪ ಪ್ರದ್ಯುಮ್ನ ಕೃತಿಗೆ ಕುವರನಾದ ।
ಪರಮ ರಹಸ್ಯವೊ ಇದೆ ಬ್ರಹ್ಮನಿಜತಳೋ ।
ದರಿಯಾದ ಸಾವಿತ್ರಿಯು ಸರಸ್ವತಿಯೆಂದೆಂಬೊ ।
ಎರಡೊಂದು ರೂಪವ ಧರಿಸಿರೆ ಅಮೋಘ ವೀರ್ಯವಿಟ್ಟು ।
ಎರಡೊಂದು ರೂಪವು ಒಂದೆಯಾಗಿ ನಿಂದು ।
ಹೆರದಾಳೆ ಬೊಮ್ಮ ವಾಯುಗಳೀರ್ವರ ।
ಚರಿಯ ತೋರಿದ ತನ್ನ ಹೆಂಡತಿಯಲಿ ತಾನೆ ।
ತರಳನಾಗಿ ಪುಟ್ಟಿ ಮೆರದ ಮಹಿಮ ।
ಕುರುಹು ತಿಳಿಯಬೇಕು ತನಗೆ ತಾನೆ ಜನಿಸಿದ ।
ಸುರಜೇಷ್ಠ ತನ್ನ ಹೆಂಡತಿ ಗಾಯತ್ರಿ ।
ನೆರದು ಪ್ರಾಣನಿಂದ ಪುಟ್ಟಿದ ಜೀವ ನಾಮಕ ।
ಉರಗೇಂದ್ರ ಮತ್ತೆ ವೈಕಾರಿಕರುದ್ರ ।
ಸರಿಯಾಗಿ ಜನಿಸಿದರು ತಮ್ಮ ಹೆಂಡರ ಸಹಿತ ।
ಸ್ಥಿರವೆನ್ನು ಬ್ರಹ್ಮನಿಗೆ ಪುಟ್ಟಿದ ಬಲನಿಂದ ।
ಗರುಡನೆಂಬೊ ಕಾಲ ತೈಜಸರುದ್ರನು ।
ತರುಣೇರ ಒಡಗೂಡಿ ಉದ್ಭವರಾದರು ।
ಸರಿಸಿಜೋದ್ಭವನಿಂದ ಪುಟ್ಟಿದ ಜೀವನಾಮಕ ।
ಉರಗನಿಂದಲಿ ತಾಮಸ ರುದ್ರ ಪಾರ್ವತಿ ।
ಭರದಿಂದ ಜನಿಸಿದರು ಅಂಶಿ ಅಂಶಗಳಿಂದ ।
ಇರುತಿಪ್ಪವು ಅವರವರ ರೂಪಂಗಳ ।
ಪರಮೇಷ್ಠಿಗೆ ಮೂರು ಮರುತಗೆ ಇದರಂತೆ ।
ಗರುಡಶೇಷಗೆ ಈ ವಿಧ ತಿಳಿವೊದು ।
ಹರಗೆ ಕಮಲಾಸನ ಪ್ರಾಣ ಪನ್ನಗನಿಂದ ।
ಎರಡೊಂದು ರೂಪಗಳಾದವದಕೋ ।
ಕರಸಿಕೊಂಡವು ವೈಕಾರಿಕ ತೈಜಸ ತಾಮಸವೆಂದು ।

ನಿರುತ ಕೃತು ಭೋಕ್ತ ವಿಜಯ ವಿಠ್ಠಲರೇಯ ತಾನೆ ಉತ್ಪ ।
ತ್ತಿ ರಹಿತನಾಗಿ ಸರ್ಗವನು ಮಾಡಿದ ಕೇಳಿ ೩

## ಅಟ್ಟ ತಾಳ

ಶಿವನು ತ್ರಿರೂಪ ಧರಿಸಿದ ವಿಷ್ಣು ಕಂಜೋ ।
ದ್ಭವನ ಬ್ರಹ್ಮೇಶಾನೆಂದು ಗುಣ ಪ್ರಾಚುರ್ಯದ ರುದ್ರ ।
ಕುವರರ ಪಡೆದನು ಬುದ್ಧಿಗಭಿಮಾನಿ ।
ಯುವತಿಯ ಸಂಗಡ ರಮಿಸಿ ಪ್ರೇಮದಿಂದ ।
ದಿವಿಜೇಶ ಮನುಮಥ ಅಹಂಕಾರಿಕ ಪ್ರಾಣ ।
ದಿವಿಜ ಕುಲಾಚಾರ್ಯ ಶಚಿ ಶಕ್ರ ಅನಿರುದ್ಧ ।
ಪವಮಾನ ಸಖನಿಋರತಿ ಗಣಪತಿ ವೈ ।
ಶ್ರವ ರುದ್ರರು ಸ್ವಹ ಸ್ವಧಾ ಬುಧ ಅವಿರುದ್ಧ ಕರ್ಮಪ ।
ಅವನಿ ಪಿತೃರು ಗಂಧರ್ವ ಸಮಸ್ತ ।
ಪ್ರವರ ಜೀವರ ಮುಕ್ತಿ ಯೋಗ್ಯರ ಪಡೆದ ವಿಷ್ಣುನೆಂ ।
ಬವ ರುದ್ರ ಪ್ರತ್ಯೇಕವಾಗಿ ಜನಿಸಿದರು ।
ಪವನ ಸೂತ್ರನಾಮ ಭಾರತಿಯಲಿ ಸಂ ।
ಭವಿಸಿದರು ಮತ್ತೆ ಗರುಡ ಇಂದ್ರಾದ್ಯರು ।
ಪವಿತ್ರವಾದಂಥ ಯಾಗಾಭಿಮಾನಿನಿಲೋಕ ।
ಧವಳಾಸ್ಯ ಸೌಪರಣಿ ದೇವಿಗೆ ಹರಿಯ ದ್ವಾರ ।
ದವರು ಜಯಾದ್ಯರು ವಿಷ್ವಕ್ಸೇನ ಮಿಕ್ಕಾ ।
ದವರು ಮಕ್ಕಳಾಗಿ ಸಮಸ್ತರು ಒಪ್ಪೆ ।
ಸದೆದು ಪೋದವು ಹತ್ತು ಅಜನ ಶಬ್ಧಯಿಲ್ಲಿಗೆ ।
ವಿವರವ ತಿಳಿವದು ಚತುರಾನನ ಉ ।
ದ್ಭವಿಸಿದ ಎರಡು ಸಂವತ್ಸರ ಪೋಗಲು ।
ಪವಮಾನ ಪುಟ್ಟಿದನೀತ ಪುಟ್ಟಿದ ಮ್ಯಾ ।

ಲಿವರು ಸರಸ್ವತಿ ಭಾರತಿದೇವೇರು ।
ದ್ಭವವಾದರು ಕೇಳಿ ಎರಡೊಂದು ವರುಷಕ್ಕೆ ।
ಇವರ ತರುವಾಯ ಜೀವ ಕಾಲಾಖ್ಯರು ।
ಲವಲವಿಕೆಯಿಂದ ಎರಡುವತ್ಸರಕೆ ದೇ ।
ಹವ ಧರಿಸಿದರೆಂದು ತದನಂತರದಲ್ಲಿ ತ್ರಿ ।
ಭುವನ ಶ್ರೇಷ್ಠನು ಪ್ರದ್ಯುಮ್ನ ಕೃತಿಗೆ ಮತ್ತೆ ।
ಕುವರನಾದನು ಒಂದುವತ್ಸರಕೆ ವೇಗ ।
ಅವಸರವಾಗಿದೆ ಇಲ್ಲಿಂದಿತ್ತಲು ಕೇಳು ।
ತ್ರಿವಿಧ ಅಹಂಕಾರ ಉತ್ಪತ್ತಿ ಜೀವಾದ್ಯರು ।
ಶಿವನು ವೈಕಾರಿಕ (ವಿಷ್ಣು) ರೂಪ ಧರಿಸಿ ಕ್ರೀಡೆಯಿಂದ ।
ದಿವಿಜೇಶವಿಡಿದು ಗಂಧರ್ವ ಪರಿಯಂತ ।
ಪವಮಾನನಿಂದ ಪುಟ್ಟಿದ ಇಂದ್ರಾದ್ಯರು ।
ಕವಿಯಿಂದ ನೋಡಲು ಜೀವಕಾಲಾಖ್ಯರು ।
ದ್ಭವಿಸಿದ ಎರಡುವತ್ಸರಕೆ ಇವರು ಕಾಣೊ ।
ವಿವರಿಸೆ ಹತ್ತು ವರುಷ ಲೆಖ್ಖದಿಂದಲಿ ।
ನವ ನವ ಮೋಹನ್ನ ವಿಜಯ ವಿಠ್ಠಲನ್ನ ।
ಸ್ತವನ ಮಾಡುವರು ತಮ್ಮ ಸಾಧನದಿಂದ ೪

## ಆದಿತಾಳ

ಸ್ವಾಮಿ ಪ್ರದ್ಯುಮ್ನ ಮೂರ್ತಿ ಅರ್ಧನಾರಿ ವೇಷ ।
ಪ್ರೇಮದಿಂದಲಿ ಧರಿಸಿದ ವರ್ಣ ಭೇದದಿಂದ ।
ತಾಮರಸ ಪೀಠ ವರುಣ ಅನಲ ಮರಿಚ್ಯಾದಿ ।
ಆ ಮಾರುತ ಶಂಭು ಇಂದ್ರ ಚಂದ್ರಾದಿಗಳು ।
ನೇಮದಿಂದಲಿ ರುದ್ರ ವಸುಗಳು ಮಿಗಿಲಾದವರು ।
ಭೂ ಮೃತ್ಯು ನಿಋರತಿ ಕಾಲಾದ್ಯರನ್ನ ದಕ್ಷಣ ।

ವಾಮ ಭಾಗದಿಂದ ಪೆತ್ತನು ಇಲ್ಲಿಗೆ ।
ಭೂಮಿಸುರ ಭೂಭುಜಾ ವೈಶ್ಯ ಶೂದ್ರರಾದರು ।
ಕಾಮಿಸು ಹತ್ತು ವರುಷಾ ಸಂದಿ ಪೋಯಿತು ನೋಡು ।
ಸಮಸ್ತ ಜೀವಿಗಳು ಉತ್ಪತ್ತಿ ಕ್ರಮ ಗ್ರಹಿಸು ।
ಕೋಮಲಾಂಗರು ಅತಿ ಸೂಕ್ಷ್ಮಗಾತುರದಿಂದ ।
ಈ ಮರಿಯಾದಿಯಲ್ಲಿ ಜನಿತವಾದರು ಮುಂದೆ ।
ನೀ ಮನಸು ಮಾಡು ಬೊಮ್ಮಗೆ ಪತ್ತು ವರುಷ ।
ತಾ ಮೀರಿ ಪೋದವು ಪೂರ್ವಾರಭ್ಯವೆವಿಡಿದು ।
ಈ ಮೂಲ ಪ್ರಕೃತಿ ಗುಣಸಾಮ್ಯ ವೈಷಮ್ಯ ।
ಆ ಮಹ ಅಹಂಕಾರ ಮನಸು ಸರ್ವೇಂದ್ರಿಯಗಳು ।
ವ್ಯೋಮಾದಿ ಮೊದಲಾದ ಸರ್ವವರ್ಣಗಳು ।
ಈ ಮಧ್ಯದಲ್ಲಿ ರುದ್ರನ್ನ ಸೃಷ್ಟಿ ಹದಿನಾಲ್ಕು ವರುಷ ।
ತಾಮಸ ತೈಜಸ ವೈಕಾರಿಕದಿಂದ ।
ಸೌಮನಸರ ಪಡೆದ ಮೂರು ವಿಕಾರದಲ್ಲಿ ।
ಸಾಮರ್ಥನಾಹದು ಕಾಣೊ ಒಂದು ವರುಷ ತಪವಂಗೈದ ।
ಈ ಮ್ಯಾಲೆ ಬೊಮ್ಮಾಂಡ ಆವರಣ ಹತ್ತು ವರುಷ ।
ಹೇಮಕಾಂತಿಯಂತೆ ನಿರ್ಮಾಣವಾಯಿತು ।
ಶ್ರೀ ಮನೋಹರ ನಮ್ಮ ವಿಜಯ ವಿಠ್ಠಲ ಸುರರಿಗೆ ।
ಧಾಮವೆ ಮಾಡಿಕೊಟ್ಟು ಬೊಮ್ಮಾಂಡದಲ್ಲಿ ಪೊಗಿಸಿ ೫

## ಜತೆ

ಬಾಹ್ಯಾಂಡ ಸರ್ಗ ಸೂಕ್ಷ್ಮಸ್ಥೂಲವೆ ತಿಳಿದು ।
ದೇಹದೊಳಗಿದ್ದ ವಿಜಯ ವಿಠಲನ ನೋಡು । ೬

೫೫

## ಧ್ರುವತಾಳ

ಪರಮ ಪಾಪಿಗ ನಾನು ಪತಿತ ಪಾಮರ ನಾನು
ದುರುಳರೊಳಗೆ ಬಲು ದುರುಳ ಮಾನವ ನಾನು
ಪರಮ ಪುಣ್ಯಾತ್ಮಾ ನೀನು ಪತಿತ ಪಾವನ ನೀನು
ಗುರುವಾದೇವನು ನೀನು ಗಾಂಭೀರ್ಯ ನೀನು
ನಿರುತ ಕಠಿಣ ನಾನು ನಿರಿಯದನುಭವ ನಾನು
ಪರಿಪರಿ ಸುಜನರ ನಿಂದಕ ನಾನು
ಹರಿಯೆ ಸುಲಭ ನೀನು ನಿರಯವಿದೂರ ನೀನು
ಚರಿತ ಸುಚರಿತ ನೀನು ವಿಮಲ ನೀನು
ಮರವುವುಳ್ಳವನು ನಾನು ಬಲು ಕ್ಷುಧಾತುರ ನಾನು
ಪರಮ ದಾರಿದ್ರ ನಾನು, ದೀನವಂತನು ನಾನು
ಮರಹುರಹಿತ ನೀನು, ನಿತ್ಯತೃಪ್ತನು ನೀನು
ಸಿರಿವಂತನು ನೀನು, ಔದಾರ್ಯನು ನೀನು
ಜರಾಮರಣ ಭಯ ನಾನು, ಜಡ ಮಂದಮತಿ ನಾನು
ನರಕಾ ನರಕದಲ್ಲಿ ಚರಿಪೆ ನಾನು
ಜರಾಮರಣ ಶೂನ್ಯ ನೀನು ನಿರಭಯವಂತ ನೀನು
ಹಿರಿದಾದ ಮತಿ ನೀನು, ನರಕಾನರಕಗಳ ಸಂಹಾರಕ ನೀನು
ಶರಣಪಾಲಕ ನಮ್ಮ ವಿಜಯ ವಿಠ್ಠಲರೇಯಾ
ಪರಿಪೂರ್ಣ ಗುಣನಿಧಿ ನೀನು, ನಿರ್ಗುಣ ನಾನು ೧

## ಮಟ್ಟತಾಳ

ಲೇಸುವುಳ್ಳವ ನೀನು, ಲೇಸುಬಯಸುವೆ ನಾನು
ದೇಶವ್ಯಾಪುತ ನೀನು, ದೇಶಿಗನು ನಾನು
ಆಶೆ ಬಿಟ್ಟವ ನೀನು, ಆಶೆ ಬಡಕ ನಾನು
ಕ್ಲೇಶನಾಶಾ ನೀನು, ಕ್ಲೇಶಬಡುವೆ ನಾನು
ದೋಷವರ್ಜಿತ ನೀನು, ದೋಷಕಾರಿ ನಾನು
ದ್ವೇಷಿಗಳಗಂಡ ವಿಜಯ ವಿಠ್ಠಲರೇಯಾ
ನೀ ಸರ್ವೋತ್ತಮಾ ನಾ ಸರ್ವರ ದಾಸಾ ೨

## ತ್ರಿವಿಡಿ ತಾಳ

ಮನೆಮನೆಗಳಿಗಾನು ಉಣಲಿ ಬಂದವನಲ್ಲಾ
ಜನುಮ ಸಾರ್ಥಕ ಸಾಧನಮಾಡ ಬೇಕೆಂದು ಅನು
ದಿನದಲಿ ಬಯಸಿ ಭಣಗು ಕರ್ಮಗಳು ನಾ
ಶನ ಗೈಸುವವೆ ಎಂದು ಗುಣದಲ್ಲಿ ಬಂದಿರಲು
ಮನ ಸ್ಥಿರ ಮಾಡದೆ ಕಂಡಕಂಡಾ ವಂಚನೆಯಿಂದ ಎನ್ನನ್ನು
ಇನಿತು ನಡಿಸಿ ಪ್ರಣವಾದಿಗಳಿಗೆ ಪ್ರೇರಣೆಯಾಗಿದೆ ನಿತ್ಯ
ಮನೆ ಮನೆ ಸವಿದುಂಬೋದನೆ ನೇಮಿಸಿ
ಎನಗೊಂದು ಸತ್ಕರ್ಮ ದಕ್ಕದಂತೆ ಯೋ
ಚನೆ ಮಾಡಿದಿ ಏನೊ ಮನದೊಡಿಯಾ
ತನುಜ ಗರ್ಭನು ಎನ್ನ ಫಣೆಯಲ್ಲಿ ಈ ಲಿಪಿ
ಯನು ಬರದನೇನೊ ಕರುಣವಿಲ್ಲದೆ
ಋಣವ ತೀರಿಸುವೆನೋ ಮುಂದೆ ಜನಿಸಿ ಬಂದು
ಋಣವ ತಿದ್ದಿಪುದುಂಟೇ ದನುಜಾಂತಕಾ
ಶುನಕನು ನಾನು ಹಿಂದಿನ ದೇಹದಲ್ಲಿ ಪಾ

ವನ ಮತಪೊಂದಿದ್ದ ಜನರುಂಡ ಎಂಜಲಾ
ಗಣನೆಯಿಲ್ಲದ ಎಡೆ ಬಿದ್ದಿರಲು ನೆಕ್ಕಿದ ಕಾ
ರಣದಿಂದ ಈ ಜನ್ಮ ಪ್ರಾಪ್ತವಾಗಿ
ದಿನದಿನದಲಿ ಸುಓದನ ಷಡುರಸಗಳು
ಎಣಿಕೆಯಿಲ್ಲದೆ ನೀನು ಉಣಲಿತ್ತದೋ
ಎನಗಾವದು ಇದರ ಕೊನೆಮೊದಲು ದೊರೆಯದು
ಹೊಣೆಗಾರ ನೀನೆ ಎಲ್ಲವನು ಬಲ್ಲವ
ಕ್ಷಣದೊಳು ಗತಿಈವ ವಿಜಯವಿಠ್ಠಲರೇಯಾ
ಮಣಿದು ಬೇಡಿಕೊಂಬೆ ಎನಗಾವದೋ ಪುಣ್ಯ ೧

## ಅಟ್ಟತಾಳ

ನಿನ್ನಾಧೀನದವ ಮನ್ನುಜನು ನಾನು
ಮನ್ನಿಸಿ ಮಾತುಕಪಾವನ್ನು ಮಾಡಿದರೊಳಿತೆ
ಎನ್ನಿಂದಲಾಗುವ ಅನ್ಯಥಾ ಬಂದಲ್ಲಾ
ಕಣ್ಣು ತೆರಿಯದ ಕುನ್ನಿ ಹುಲಿಯ ಕೂಡಾ
ಹಣ್ಣಿಕೊಂಡು ಯುದ್ಧವನ್ನು ಮಾಡಿದರುಂಟೆ
ಪುಣ್ಯಶ್ಲೋಕ ರಾಯಾ ವಿಜಯ ವಿಠ್ಠಲರೇಯಾ
ಎನ್ನಿಂದ ಅಘಾದ ನಿನ್ನ ಮಹಿಮೆ ಪೇಳಿಸೊ ೪

## ಆದಿತಾಳ

ಜನರಿಗೆ ನೀನೆ ಪ್ರೇರಣೆಯಾಗದಿದ್ದರೆ
ಎನಗವರಿಗೆ ಮಾತಿನ ಸಂಬಂಧವೇನೋ
ದಿನ ದಿನದಲಿ ಪರರ ಮನಿಗಳಿಗೆ ಪೋದವನು
ನಾನಲ್ಲವೊ ಎನಗ್ಯಾತರ ದೋಷಾ
ಜನರಿಗೆ ಎನಗೆ ಪ್ರೇರಣೆಯಾಗದಿದ್ದರೆ ಸುಮ್ಮ

ನೆ ನಮಗೆ ನಾವೆ ಉಣಬಲ್ಲೆವೇನೋ
ಕನಸಿನೊಳಗಾದರು ಎನಗೆ ಸ್ವತಂತ್ರವೆಂಬೊ
ದನು ಕಾಣೆ ಅನಂತ ಜನ್ಮದಲ್ಲಿ ನೋಡಲು
ನಿನಗೆ ನೀನೆ ಬಲ್ಲಿ ವಿಜಯ ವಿಠ್ಠಲರೇಯಾ
ಎನಗೆ ಗುಣಾವದು ಗುಣವಿಲ್ಲದಾವದು ೫

## ಜತೆ

ಎಷ್ಟು ಪಾತಕದವ ನಾನಾದರು ವಿಜಯ
ವಿಠ್ಠಲ ನಿನ್ನ ನಾಮ ಪಾವನ್ನ ಮಾಡುವುದು ೬

## ೫೬

## ಧ್ರುವತಾಳ

ಪರಮಾಣ್ವಾದ್ವಿಪರಮಾಣು ಮಹಕಾಲಾಂತ ಕಾಲಸ್ತೆ ।
ನಿರುತ ತತ್ಕಾಲ ಕ್ರೀಯ ಪ್ರವರ್ತಕ ।
ಹರಿಯೆ ತತ್ ಶಬ್ದವಾಚ್ಯ ಮಂಗಳ ಪುರುಷ ।
ಇರುತಿಪ್ಪಾ ಉದಯಕಾಲಾಸ್ತಮಾನ ।
ಪರಿಯಂತ ಒಂದೊಂದು ನಾಮಾಂತರದಿಂದ ।
ಮೆರೆವ ವೈಭವಮೂರ್ತಿ ಪಾಪದೂರ ।
ಇರುಳು ಹಗಲು ಇಂತು ನಮ್ಮ ರಕ್ಷಿಸುವ ।
ಸರಿಗಾಣೆ ಈತನ ಕರುಣಾತನಕೆ ।
ನಿರೀಕ್ಷಿಸು ಉದಯಕಾಲದಲ್ಲಿ ಕೌಮೋದಕಿ ।
ಧರಕೇಶವ ಸ್ವಾಮಿ ಸಂಗಮ (ವ) ಕಾಲ ।
ಸ್ಮರಿಸು ವೇಣುಧರ ಗೋವಿಂದಾತ್ಮನಲ್ಲಿ ।
ಸಿರಿನಾರಾಯಣನಿಪ್ಪ ಪ್ರಾಣ ಕಾಲ ।

ಅರಿಪಾಣಿ ವಿಷ್ಣು ದೇವ ಮಧ್ಯದಿನ ಕಾಲಕ್ಕೆ ।
ತರುವಾಯ ಅಪರಾಹ್ನ ಕಾಲಕ್ಕೆ ಚಾಪ ।
ಧರ ಮಧು ಸೂದನವಾಗಿ ಇಪ್ಪ ದಿನಾಂ।
ತರಕೆ ಮಾಧವ ಮೂರ್ತಿ ಮಹ ವಿನೋದ ।
ಪರಮ ಭಕುತಿಯಿಂದ ಕಾಲವ ಕಳೆಯುತ್ತ ।
ಹರಿಯ ಮೂರ್ತಿಗಳನ್ನೆ ನೆನೆಸಲಾಗಿ ।
ಸುರರಾಶಿ ಒಲಿದು ಶುಭಮಾರ್ಗ ಪ್ರೇರಿಸಿ ।
ಪೊರೆವುತಿಪ್ಪರು ಗತಿಗೆ ಅಭಿಯೋಗಮಾಡಿ ।
ಪರಮ ಪುರುಷ ನಮ್ಮ ವಿಜಯ ವಿಠ್ಠಲ ತನ್ನ ।
ಶರಣಗಾಗಿ ತಾನೆ ಕಾಲದೊಡ ಇಪ್ಪ ೧

## ಮಟ್ಟತಾಳ

ದೋಷಕಾಲದಲ್ಲಿ ಹೃಷಿಕೇಶಮೂರ್ತಿ ।
ನೀಶೀಥ ಅರ್ಧರಾತ್ರಿ ಕಾಲದ್ವಯಕೆ ಕಮ ।
ಲಾಸನನ ಪುಟ್ಟಿಸಿದ ಪದ್ಮನಾಭ ಕಾಣೊ ।
ಬೆಸಸೂವೆ ಅಪರಾತ್ರಕಾಲಕ್ಕೆ ಶ್ರೀವತ್ಸ ।
ಹಸನಾಗಿ ಗ್ರಹಿಸು ಕಾಲ ವಿಚಾರವನು ।
ಪಶುಪತಿಪ್ರಿಯದೇವ ವಿಜಯ ವಿಠ್ಠಲರೇಯ ।
ಕುಶಲನು ಕಾಣೋ ನಾನಾ ಬಗೆಯಿಂದ ೨

## ತ್ರಿವಿಡಿ ತಾಳ

ಪ್ರಾತುಷಕಾಲದಲ್ಲಿ ದೇವ ಜನಾರ್ಧನ ।
ತುತಿಪೆ ಅನುಸಂಧ್ಯಾ ಕಾಲದಲಿ ದಾಮೋದರ ।
ಗತಪದನ ಕಾಲಕೆ ನಾರಾಯಣನೆನ್ನು ।
ಹಿತವಹದು ಪ್ರಭಾತದಲ್ಲಿ ವಿಶ್ವಾತ್ಮಕ ।

ಆತಪಪತಿ ಉದಯ ಕಾಲಕೆ ಮತ್ಸ್ಯಮೂರ್ತಿ ।
ಕ್ಷಿತಿ ವಾರಿ ಗಗನ ಕಾನನ ಜೀಮೂತ ದುರ್ಗ ।
ಅತುಳಮತ್ಸ್ಯಾ ವಾಮನ ತ್ರಿವಿಕ್ರಮ ಅ।
ದ್ಭುತ ನಾರಸಿಂಹ ರಕ್ಷಿಸುತಿಪ್ಪನು ।
ಕ್ಷಿತಿಧರಣ ವಿಜಯ ವಿಠ್ಠಲರೇಯ ಪರಮಾತ್ಮ ।
ಪ್ರತಿಕೂಲವಾಗದೆ ನಡೆಸಿಕೊಳುತಿಪ್ಪ ೩

## ಅಟ್ಟತಾಳ

ಉದಯಾತ್ಪೂರ್ವದಲ್ಲಿ ಪಶ್ವಾಧಾರಕ ।
ಪ್ರದ್ಯುಮ್ನನಿಪ್ಪನು ವಾಸುದೇವಮೂರ್ತಿ ।
ಉದಯ ಕಾಲದಲ್ಲಿ ಪಠಿಸು ತೃಣಾಶ್ರಯ ।
ತದು ಪರಿಸಂಗವ ಕಾಲಪೇಕ್ಷಾಶ್ರಯ (?) ।
ಮುದದಿಂದವರಹನು ಮಧ್ಯಾಹ್ನ ಕಾಲಕ್ಕೆ ।
ತ್ರಿದಶರಾಶ್ರಯಮೂರ್ತಿ ನಾರಾಯಣನೆನ್ನು ।
ತದ ನಂತರದ ಕಾಲದಲ್ಲಿ ಗರ್ಭಾಶ್ರಯ ।
ಅಧಟ ಅನಿರುದ್ಧ ಗರ್ಭಾತ್ ಪ್ರಜಾಪಾತ ।
ಇದನೆ ಚಿಂತಿಸು ದೋಷಕಾಲದಲ್ಲಿ ಸ ।
ರ್ವದ ಅರಣ್ಯಾಶ್ರಯ ನರಸಿಂಹ ದೇವನು ।
ಪದುಮ ಬಾಂಧವ ಅಸ್ತನಾಗಲು ಕೊಂಡಾಡು ।
ವುದು ಪಿತ್ರಾಶ್ರಯ ಸಂಕರುಷಣನೆನ್ನು ।
ಪದುಮಿ ವಲ್ಲಭ ನಮ್ಮ ವಿಜಯವಿಠ್ಠಲರೇಯ ।
ಹೃದಯದಲ್ಲಿ ಬಂದು ತಿಳುಪುವ ಭಕ್ತರಿಗೆ ೪

### ಆದಿತಾಳ

ಪುರುಷ ಪುರುಷ ಪ್ರಕೃತಿ ಪ್ರಕೃತಿ ಪ್ರಕೃತಿ ಸರ್ವ ।
ಪರಂಪರ್ಯದಲ್ಲಿ ವ್ಯಾಪ್ತಿ ಅವ್ಯಾಪ್ತಿಯೆನ್ನು ।
ಅರಿದು ಉದಯಸ್ತಮಾನ ಕಾಲ ಪ್ರವಾಹ ನೋಡಿ ।
ಪರಿಶಬ್ದ ಪರಿಯಂತ ವಿಚಾರಿಸಿ ಅಲ್ಲಿದ್ದ ।
ಹರಿಮೂರ್ತಿಗಳ ನೆನದು ಧನ್ಯನಾಗಲಿ ಬೇಕು ।
ನಿರುತ ಸತ್ಕರ್ಮವನ್ನು ಆವಾವ ಕಾಲದಲ್ಲಿ ।
ಚರಿಸುವಾಗಲೆ ಇದೆ ಅನುಭವ ಇರಬೇಕು ।
ಪರಮಾಣು ಕಾಲ ದೇಶ ಗುಣ ಕರ್ಮ ಶುಭವಕ್ಕು ।
ದುರಿತರಾಶಿಗಳೆಲ್ಲ ಪರಿಹಾರವೊ ಪುಶಿಯಲ್ಲ ।
ತರಣಿ ಮಂಡಲದಲ್ಲಿ ಪ್ರದ್ಯುಮ್ನ ವಾಸುದೇವ ।
ವರಹ ನಾರಾಯಣ ಅನಿರುದ್ಧ ಮೂರುತಿ ।
ನರಸಿಂಹ ಸಂಕರುಷಣ ಸಪ್ತಮೂರುತಿಗಳು ।
ಸ್ಥಿರವಾಗಿ ಇಪ್ಪವು ಈ ಪ್ರಕಾರ ಚಿಂತಿಸು ।
ತರಣಿಗೆ ನಾಲ್ಕುವರ್ನ ಈ ಬಗೆಯ ಸೂರ್ಯನ್ನ
ಪರಮ ಭಕುತಿಯಿಂದ ವರ್ನ ಭೇದದಲ್ಲಿ ಭೂ ।
ಸುರ ಕ್ಷತ್ರ ವೈಶ್ಯ ಶೂದ್ರ ಜನರು ಆರಾಧಿಸುವರು ।
ನಿರಯವಿದೂರ ನಮ್ಮ ವಿಜಯ ವಿಠ್ಠಲರೇಯ ।
ಕರುಣಾಂಬುಧಿ ಕಾಣೊ ಕರವಿಡಿದು ಸಾಕುವ ೫

### ಜತೆ

ಕಾಲಾದಿಷ್ಠಾನದಲ್ಲಿ ಕಾಲನಾಮಕನಾದ ।
ಶ್ರೀ ಲೋಲ ವಿಜಯ ವಿಠ್ಠಲನ ಧ್ಯಾನವ ಮಾಡು ೬

# ೫೭

## ಧ್ರುವ ತಾಳ

ಪೆತ್ತಾ ಸಾವಿತ್ರಿ ತನ್ನ ತನುಜಂಗೆ ಪ್ರೀತಿಯಿಂದ
ಎತ್ತಲು ಪೋಗಗೊಡದೆ ಹಸಿದಾನೆಂದು
ಉತ್ತಮಾನ್ನವ ಮಾಡಿ ಕುಳ್ಳಿರಿಸಿಕೊಂಡು ಬಿಡದೆ
ತುತ್ತುಗಳನ್ನು ಮಾಡಿ ಉಣಿಸುತ ತಾನು
ಹತ್ತಾದುಯೆಂದು ತಲೆದೂಗಿ ಎದ್ದು ಪೋಗಲು
ಮತ್ತೆ ಕರತಂದು ನ್ಯಾವರಿಸೀ
ಅತೀಶಯವಾಗಿ ರಂಬಿಸಿ ನಾಲ್ಕು ಕಡೆ
ಸುತ್ತಲು ತೋರಿ ತೋರಿ ಒಂದೊಂದು ತುತ್ತಾ
ತುತ್ತನೆ ಮಾಡಿ ಒಲ್ಲೆನೆಂದರೆ ಅವನ
ನೆತ್ತಿಯ ಪಿಡಿದು ಚಂಡಿಕೆ ನೆವದಿಂದ
ಇತ್ತ ಪೇಳಾದೆ ಕವಳಾ ಬಾಯಿಗೆ ನ
ಗುತ್ತ ಮೋಹದಲ್ಲಿ ಬೇಸರದೆ
ಚಿತ್ತಜನಯ್ಯಾ ನೀನೆ ಆವಾವಕಲ್ಪಕ್ಕೆ
ಹೆತ್ತತಾಯಿಯಂತೆ ಇಪ್ಪ ಮಹಿಮಾ
ಎತ್ತಣ ಪ್ರಯೋಜನವಿಲ್ಲಾ ಅದೃಷ್ಟವೆ
ರತ್ತುನವೇ ವ್ಯಾಪ್ತಿ ವಿಷ್ಣುರಹಸ್ಯದಿ
ಬಿತ್ತರಿಸಿ ನಿನ್ನ ಬಗೆ ಬಗೆಯಿಂದ ನಾನು
ತುತ್ತಿಸಿ ಕೊಂಡಾಡಿದೆ ಎನಗೆ ಇನಿತು
ವೃತ್ತಿಯ ಕಲ್ಪಿಸಿದ್ದು ಆಗದೆಂದು ಬಿನ್ನೈಸೆ
ಚಿತ್ತಕ್ಕೆ ತಾರದಿಪ್ಪ ಬಗೆ ಆವುದೋ
ಹತ್ತಿಲಿಯಿದ್ದ ತಾಯಿ ಮಗನಿಗೆ ಉಣಿಸಿದಂತೆ

ನಿತ್ಯ ತೊಲಗಲೀಯದೆ ಉ[ಣಿಪ] ದೇವಾ
ತತ್ತಳಗೊಂಬಾದೇನು ಸರ್ವಕಾಲದಲ್ಲಿ ನೀ
ನಿತ್ತದ್ದು ಉಂಡು ತೀರಿಸಲೇಬೇಕು
ಬತ್ತಿಯ ಚಾಚಿದಂತೆ ದಿನದಿನಕೆ ಎನ್ನ ಭಾರ
ಪೊತ್ತು ಅತ್ಯಂತ ಶಕ್ತ ಸರ್ವೋತ್ತುಮಾ
ಭೃತ್ಯವತ್ಸಲ ನೀನಲ್ಲದೆ ಒಬ್ಬರಿಲ್ಲಾ
ಸತ್ಯವೆ ನುಡಿದೆ ನುಡಿದೆ ಇದು ಸಿದ್ಧಾಂತವೋ
ವಿತ್ತ ಗೋ ಧಾನ್ಯ ನಾನ ವಸ್ತುಗಳೆಲ್ಲ ಅಲ್ಲಾ
ವಿತ್ತರೆ ಬಾರವಯ್ಯಾ ಇದು ಸೋಜಿಗಾ
ಸುತ್ತುವ ಸುಳಿಗೆ ಕೊನೆ ಮೊದಲಾವುದು ಕಾಣೆ
ಉತ್ತಮ ಶ್ಲೋಕ ನೀನು ಕೊಡುವದೆಂತೊ
ಚಿತ್ರವಾಗಿದೆ ಎನಗೆ ಎಂದೆಂದಿಗೆ ನೋಡೆ
ಚಿತ್ರಾ ಚಿತ್ರಾವೆಂದೆಂಬೆ ಬಲು ವಿಚಿತ್ರಾ
ಕೀರ್ತಿ ಪುರುಷ ನಮ್ಮ ವಿಜಯ ವಿಠ್ಠಲ ನಿನ್ನ
ಕೀರ್ತನೆ ಮಾಡುವದು ಒಂದೇ ಮರವಾಗದಿರಲಿ ೧

## ಮಟ್ಟತಾಳ

ಜನಕನ ಉದರದಲ್ಲಿ ತಂದಿಟ್ಟವನಾರು
ಜನನಿಯ ಗರ್ಭದಲ್ಲಿ ಪೊಗಿಸಿದವನಾರು
ದಿನ ದಿನಕೆ ಅಲ್ಲಿ ಅವಯವಗಳ ತಿದ್ದಿ
ತನುವ ಬೆಳೆಸಿ ಕಡಿಗೆ ಹಾಕಿದವನಾರು
ಕ್ಷಣ ಕ್ಷಣಕೆ ಸ್ನೇಹ ಪೆಚ್ಚಿಸಿ ಎನ್ನ ರ
ಕ್ಷಣೆಯನು ಮಾಡಿ ಸಲಹಿದವನಾರು
ಮನೆ ಮನದಲಿ ಇದ್ದು ನಾನಾ ಬಗೆಯಿಂದ
ಇನಿತು ಪಾಲಿಸುವ ಮಹಾ ಮಹಿಮ ಭಕ್ತರ ಪ್ರಿಯ

ಕನಸು ಸುಷುಪ್ತಿಯಲಿ ಅನುಭವಗಳು ಸಾಕ್ಷಿ
ನಿನಗೆ ನೀನೆ ನಲಿವ ವಿಜಯ ವಿಠ್ಠಲರೇಯಾ
ಮನದಲಿ ನಿಂದು ಬಲು ಚರಿತೆ ಮಾಳ್ಪೆ ೨

## ತ್ರಿವಿಡಿ ತಾಳ

ಏನು ಹೇಳಲಿ ಹರಿ ಈ ಪರಿ ಸೌಖ್ಯಗಳ
ನಾನೇ ಅನುಭವಿಸುವೆನೆ ತಿಳಿಯೊ ನೋಡು
ಕಾಣ ಬಂದ ಮಾತು ತೋರಿ ನುಡಿದೆ ಉದಾ
ಸೀನ ಮಾಡಿದಂತೆ ಸುಮ್ಮನಿದ್ದು
ನಾನಾಪರಿಯಲ್ಲಿ ಆಣೆಗಳಿಟ್ಟು ಸ
ನ್ಮಾನವಲ್ಲನೆಂದು ಚಾಲುವರಿಯೇ
ನೀನೆ ಈ ಪರಿಯಿಂದ ಎಲ್ಲೆಲ್ಲಿ ಇದ್ದು ಸೋ
ಪಾನವೇರಿದಂತೆ ವಿಷಯಂಗಳಾ
ಭಾನು ಉದಯ ಅಸ್ತಮನ ತೊಲ ಗಲೀಯದೆ
ನೀನುಣಿಪದು ನಿನಗೆ ಬಲುಧರ್ಮವೇ
ಅನಂತ ಕಾಲಕ್ಕೆ ಇದನೇ ನೇಮಿಸಿದರೆ
ಜ್ಞಾನವಿರುವುದೆಂತೊ ಜ್ಞಾನಾಂಬುಧಿ
ಮಾಣಿಸು ನಮಿಸುವೆ ಇನ್ನೊಂದು ವರವನ್ನು
ಮಾನಸದಲಿ ಬೇಡಿ ಕೊಂಡಾಡುವೆ
ಕಾಣಿ ಮೊದಲಾದ ಆಶಿಯ ಬಿಡಿಸಿ ನಿ
ದಾನದಲಿ ನಿನ್ನ ಚರಣಯುಗಳ
ಧ್ಯಾನಮಾಡಿ ಏಕಾಂತದಲಿ ಇದ್ದು
ಮಾನವರಿಗೆ ಗೋಚರಿಸುವಂತೆ
ಆನಂದ ಕಾನನದೊಳಗಿದ್ದು ಪರಿಯನ್ನು

ಶ್ರೀ ನಿವಾಸನೆ ಮಾಡು ಅನಾಥ ಬಂಧು
ಶ್ವಾನನಂತೆ ನಾನು ಗಣಿ ಗಣಿಕಾ ಶೂದ್ರ
ಹೀನಾಳು ತವಕರಜ ವೈರಿಗಳು
ಯೋನಿ ವಿಕ್ರಮ ಶೂದ್ರ ಬ್ರಹ್ಮ ವಿಘಾತಕ
ನಾನಾ ದೋಷಿಗಳ ಮನೆ ಅನ್ನೋದಕ
ಕೇಣಿಗೊಳದೆ ತಿಂದೆ ದಶಮಿ ದ್ವಾದಶಿ ಅ
ಯನ ಪರ್ವಣಿ ಪುಣ್ಯ ಕಾಲದಲ್ಲಿ
ಈ ನುಡಿ ಕೇಳಯ್ಯಾ ಮುಣುಗಿದೇ
ಮುಣಗಿದೆ ಮೇಣು ಮುಣುಗಿದೆ ಮತ್ತು ಮುಣುಗಿದೆನೊ
ನೀನುದ್ಧರಿಸದಿರೆ ಎನಗಾವನು ದಿಕ್ಕು
ಈ ನಾಡಿನೊಳಗೆ ಎಲ್ಲೆಲ್ಲಿ ನೋಡೇ
ನಾನೋತ ಫಲವಿಂತೊ ನಿನಗೆ ಕರುಣವಿಲ್ಲೊ
ಏನಯ್ಯಾ ಮೊರೆಯಿಡಲು ಸುಮ್ಮನಿಪ್ಪೆ
ಜ್ಞಾನಿಗಳರಸ ಶ್ರೀಶ ವಿಜಯ ವಿಠ್ಠಲ ನಿನ್ನ
ಧ್ಯಾನಗಾನ ಮಾಳ್ಪದಕೆ ಸತತ ಸಂತತಿಯಾಗೋ ೩

## ಅಟ್ಟತಾಳ

ಉಣಿಸು ಉಣಿಸು ನಿನ್ನ ಸರಿಬಂದ ತೆರದಂತೆ
ಮನೋ ಇಂದ್ರಿಯಂಗಳು ಪ್ರಾಣ ನಿನ್ನಾ ಧೀನ
ಎನಗಾವ ಸ್ವಾತಂತ್ರ ಲೇಶ ಮಾತ್ರವು ಇಲ್ಲ
ಒಣಗಿದ ವೃಕ್ಷ ಪಲ್ಲೈಸಿದ ಬಗೆಯಾಗಿ
ದಿನ ಪ್ರತಿದಿನದಲ್ಲಿ ಕಾಣಿಸುತಿಪ್ಪದು
ಜನುಮ ಜನುಮದಲ್ಲಿ ಬಾಹಿರಂತರ ದರು
ಶನ ಕೊಡುತಲಿ ಎನ್ನಸಾಕುವ ದಾತಾರ
ಘನ್ನ ಮೂರುತಿ ನಮ್ಮ ವಿಜಯ ವಿಠ್ಠಲರೇಯಾ
ಎಣೆಗಾಣೆ ನಿನ್ನ ಲೀಲೆಗೆ ನಮೋ ಅನಂತ ನಮೋ ೪

### ಆದಿತಾಳ

ಆರ ಓದನ ಉಂಬೆ ಆರ ವಸ್ತ್ರವ ಉಡುವೆ ತೊಡುವೆ
ಆರಿಂದ ಸುಖ ಬಡುವೆ ಆರಿಂದ ದೇಹ ತೆತ್ತು ಉದ್ಧಾರನಾಗುವೆ
ಆರಿಂದ ಬಾಳಿ ಬದುಕಿ ಕಾಲಕ್ರಮಣ ಮಾಡುವೆ
ಆರಾದರೂ ಉಂಟೇ ಈ ಜಗತ್ತಿನೊಳಗೇ
ಶ್ರೀ ರಮಣ ನೀನೆ ಅಲ್ಲವೆ ಅನ್ಯರೊಬ್ಬರ ಕಾಣೇ
ಸಾರಿಸಾರಿಗೆ ನಾನೇ ಅನುಭವಿಸುವ ಸೌಖ್ಯ
ಆರದಲ್ಲಾ ಆರದಲ್ಲಾ ನಿನ್ನದೇ ಸತ್ಯ ಸತ್ಯ
ಕ್ರೂರ ಜನರ ವೈರಿ ವಿಜಯವಿಠ್ಠಲ ನಿನ್ನ
ಕಾರುಣ್ಯವಿರಲಾಗಿ ಸರ್ವಾನುಕೂಲ ನಿತ್ಯಾ ೫

### ಜತೆ

ಅಡಿಗಡಿಗೆ ಚಿಂತಿಸಿ ಬಡವಾಗುವುದ್ಯಾಕೆ
ಒಡಿಯಾ ನೀನೆ ಗತಿಯೋ ವಿಜಯ ವಿಠ್ಠಲಸ್ವಾಮಿ ೬

## ೫೮

### ಧ್ರುವತಾಳ

ಪ್ರಣವ ಮಂತ್ರವ ಗ್ರಹಿಸು ಪ್ರಣುತನಾಗಿ ಸ
ಜ್ಜನರುಪದೇಶದಿಂದ ಅನುಗ್ರಹ ನೋಡುವುದು ।
ಅನಾದಿಯಿಂದ ಬಂದ ಅನುಭವ ಸಿದ್ಧ ಜನಕೆ ಅಮೃತಾಶನ ।
ಪ್ರಣವತಾರಕ ತಾರ ಪ್ರಥಮ ವ್ಯಾಹೃತಿ ಶೀರ್ಷ ।
ಘನ ಓಂಕಾರ ಆದ್ಯೋಚ್ಚರಣೆ ಬೀಜ ।
ಇನಿತಾಭಿಧಾನದಿಂದ ಒಪ್ಪುತದಲೆ ನಿತ್ಯ ।

ಅನಂತ ವರ್ಣಾತ್ಮಕ ಜಡ ಪ್ರಭೇದ ।
ಮನುಜಾದಿವಿಡಿದು ಬ್ರಹ್ಮಸಿರಿತನ ಕಾಲೋ ।
ಚನೆ ಮಾಡುವರು ತಮ್ಮ ಯೋಗ್ಯತದನಿತು ।
ಪ್ರಣವೆ ಮಂತ್ರವೆ ಗ್ರಹಿಸು ಎಲೊ ಮನವೆ ।
ಗುಣಕಾಲ ಕರ್ಮ ವರ್ಣಾಶ್ರಮ ಧರ್ಮ ರೂಪ ಕ್ರೀಯ ।
ಮನೊ ವಾಚ ಕಾಯದಲ್ಲಿ ನಿರ್ಮಳನಾಗಿ ।
ಎಣಿಸಬೇಕು ಅನುಕ್ರಮದಿಂದಲಿ ।
ಪ್ರಣವ ಧ್ಯಾನವಮಾಳ್ಪ ಇದರ ವಿಸ್ತಾರವ ।
ವನಜ ಸಂಭವನಿದಕೆ ಆಧಿಕಾರನೊ ।
ಗುಣತ್ರಯ ಮೊದಲು ಮಾಡಿ ಧರತತ್ವ ಪರಿಯಂತ ।
ಕ್ಷಣ ಬಿಡದೆ ಎಣಿಪ ಬಹು ಅಂಶಿ ಅಂಶ ।
ತೃಣ ಜೀವನಾದಿ ವಿಡಿದು ಅಂತರಬಾಹಿರ ।
ಚಿನುಮಯ ಮೂರುತಿ ವಿಜಯ ವಿಠ್ಠಲರೇಯ ।
ಪ್ರಣವ ಪ್ರತಿಪಾದ್ಯನೊ ಅಶೇಷಗುಣಧಾರಕ ೧

## ಮಟ್ಟತಾಳ

ಆ ಉ ಮ ನಾದ ಬಿಂದು ಘೋಷ ಶಾಂತಾತಿಶಾಂತ ।
ಈ ವರುಣಗಳುಂಟು ಪ್ರಮಾಣಾತ್ಮಕವೆನ್ನಿ ।
ಈ ವಿಧವನೆ ತಿಳಿದು ಅಕಾರ ಅಪ್ಷರಲಿ ।
ಆ ವರ್ಗವೆಯೆಂಟು ಉದುಭವಿಸಿದವೆನ್ನು ।
ಕೋವಿದನಾಗಬೇಕೊ ತಿಳಕೊಂಡು ಮಾತ್ರ ।
ಸಾವಿರ ಶಿರನಮ್ಮ ವಿಜಯ ವಿಠ್ಠಲರೇಯನ ।
ಭಾವದಲಿ ನಿಲಿಸಿ ಒಲಿಸಿ ವಿಶ್ವಾದಿಗಳ ೨

## ತ್ರಿವಿಡಿ ತಾಳ

ಆ ವರ್ಗ ಹದಿನಾರು ಕ ಪ ವರ್ಗವೆ ಐದು ।
ಈ ವಿಧ ಅಯಿದ್ಯೆದು ಇಪ್ಪತ್ತೆದು ।
ಯ ವರ್ಗನಾಲ್ಕು ಕವರ್ಗ ಪಂಚಕೂಡೆ ।
ಈ ವರ್ಣ ಎಣಿಸಲು ದಶಪಂಚಪೊ ।
ಪಾವಿತ್ರವಾಗಿದೆ ಕ ಷ ಕೂಡಿಸಲಾಗಿ ।
ಕ್ಷ ವರಣವಾಯಿತು ಒಂದ್ಯೆವತ್ತು ।
ಆ ವಿಶ್ವಗೆ ಹದಿನಾರು ತೈಜಸಂತರಾತ್ಮ ।
ದೇವಗಳಿಗೆ ಇಪ್ಪತ್ತೈದು ಸಿದ್ಧ ।
ಪಾವನ ಪರಮಾತ್ಮ ಜ್ಞಾನಾತ್ಮಗೆ ಒಂಭತ್ತು ।
ಸೇವಿಸುವದು ಇವು ದ್ವಿತಿಯವರಣಾ ।
ಯಾವತ್ತು ಸ್ವರವರಣ ಒಂದೊಂದು ಬಗೆಯಿಂದ ।
ಆವಾವ ಸ್ವರದಲಿ ಕೂಡಿಸಲು ।
ಕವರ್ಗಾದಿಗೆ ದೀರ್ಘ ಹ್ರಸ್ವ ಕನ್ನೆ ಮಾತ್ರ ।
ವೊವತ್ತು ಬಿಂದು ವಿಸರ್ಗದಿಂದ ।
ಮೂವತ್ತೈದಕೆ ಕೇಳು ವೊಂದಕೆ ದ್ವಿಷಟ್ ಪರಿಯು ।
ಈ ವಿಧ ತಿಳಿ ವಿಂಶತಿ ಚತುರಶತ ।
ದೇವ ದೇವೇಶ ನಮ್ಮ ವಿಜಯ ವಿಠ್ಠಲರೇಯ ।
ಜೀವೋತ್ತಮನಿಂದ ಪೂಜೆಗೊಂಬನಿಲ್ಲಿ ೩

## ಅಟ್ಟತಾಳ

ಆ ಓಂಕಾರಬೀಜ ಎಂಟರಿಂದಲಿ ಸತ್ಯ ।
ಈ ವರ್ತಮಾನಕ್ಕೆ ಅಭಿವ್ಯಕ್ತಿಯಾಯಿತು ।
ಆ ವರ್ಗಮಿಗಿಲಾಗಿ ಎಂಟು ವರ್ಗಗಳೈದು ।

ಕ್ಷಮೊಂದ ಕೂಡಿ ಸೆ ಏಕ ಪಂಚಾಶತಿ ।
ಸೂವರ್ನವಾಗಿ ಒಪ್ಪುತಿವೆಯಿವು ವ್ಯಾಪ್ತಿ ।
ತಾವುತಾವಿಲಿವುಂಟು ಸ್ವರ ಸಂಯೋಗವಾಗೆ ।
ಮೂವತ್ತು ಹತ್ತು ಮೇಲೆ ನೂರು ಇಪ್ಪತ್ತು ।
ಈ ವರ್ಣಗಳೆಲ್ಲ ಗುಣಿತ ಮಾಡಲಾಗಿ ।
ಭಾವಿಸುವುದು ವರ್ಣೋವರ್ಣ ಸಂಯೋಗ ।
ಕವೊಂದಕ್ಕೆ ನೋಡು ಮೂವತ್ತೈದರಂತೆ ।
ಈ ವಿಚಾರ ಮಾತ್ರಕೆ ಎಣಿಸಾಲು ಹದಿನಾಲ್ಕು ।
ಸಾವಿರದೇಳು ನೂರು ಲೆಖ್ಖವನ್ನು ।
ಶ್ರೀವಲ್ಲಭ ನಮ್ಮ ವಿಜಯ ವಿಠ್ಠಲರೇಯ ।
ಕಾವುತಲಿಪ್ಪನು ಈ ಪರಿ ತಿಳಿದವನ ೪

## ಆದಿತಾಳ

ಇದರೊಳು ಇನ್ನುವುಂಟು ಪಾದರ್ಧದಿ ಉಚ್ಚಾರಣೆ ।
ಯಿದೆ ಅನಂತಾನಂತ ವರ್ಣಗಳಾಗೋವು ।
ಇದರಲ್ಲಿ ಉಪನಿಷತು ಸರ್ವ ವೇದ ಪುರಾಣ ।
ಮುದದಿಂದ ಪಂಚರಾತ್ರ ಬಹ್ಮ ತರ್ಕ ರಾಮಾಯಣ ।
ಸುಧಿಯಾದಿ ಭಾಗವತ ಯೋಗಶಾಸ್ತ್ರ ಭಾರತ ।
ಪದೊಪದಿಗೆ ಕರ್ಮಭೇದ ಮಿಾಮಾಂಸ ಸಕಲ ನಿರ್ಣಯ ।
ಒದಗಿ ತುಂಬಿಹವು ವೈದಿಕ ಲೌಕಿಕ ಶಬ್ದ ।
ಇದರಿಂದ ಕಮಲಾಸನ ಹರಿಯಲ್ಲಿ ಸಮನ್ವಯ
ಉದಯಾಸ್ತಮಾನ ಬಿಡದೆ ದುಃಖಶಬ್ದಾ ತುಚ್ಛಾ ।
ಮೊದಲಾದ ವಾಕ್ಯದಿಂದ ಮಾಡುವ ಮಹಾಜ್ಞಾನಿ ।
ಆದಕಾರಣ ಹರಿ ಅಖಿಳವರಣಾತ್ಮಕ ।
ನಿಧಿಯಾದ ಓಂಕಾರ ಪ್ರತಿಪಾದ್ಯನೆನಿಸುವ ।

ಪದುಮೆ ವಿರಂಚಿ ವಾಯು ಖಗ ಶೇಷ ರುದ್ರೇಂದ್ರ ।
ಮದನ ಸೂರ್ಯೇಣವಂದು ಮಿಕ್ಕ ।
ತ್ರಿದಶಮಹಾಮುನಿ ಸರ್ವ ಚೇತನಕೆ ಕೂಡೋದಯ್ಯ ।
ಉದಧಿ ದರ್ಶನದಂತೆ ಎಲ್ಲರಿಗೆ ಸಾಧ್ಯವೆನ್ನು ।
ಸದಮಲ ಮೂರುತಿ ವಿಜಯವಿಠ್ಠಲರೇಯ ।
ಯದು ಕುಲೋತ್ತಮ ಕಾಣೊ ಭಕ್ತರ ಸಲಹುವ ೫

## ಜತೆ

ತಾರವಿಚಾರ ವಿಚಾರತನದಲಿ ಗ್ರಹಿಸು ।
ಧಾರಕ ಶಕುತಿಯಿಂದ ವಿಜಯವಿಠ್ಠಲ ಬಲ್ಲ ೬

## ೫೯

## ಧ್ರುವ ತಾಳ

ಪ್ರಳಯೋದಕದಲ್ಲಿ ಏಕೋ ನಾರಾಯಣ ।
ಮಲಗಿದಾ ತನ್ನಯಾ ಲಲನೆ ಸಹಿತ ।
ಜಲಜ ಮಿತ್ರನ್ನ ಬಳಿಯಾಕಳ ನಿಧಿಯಿದ್ದಂತೆ ।
ನಳಿನನಾಭನ್ನ ಬಿಗಿದಪ್ಪಿ ಆತನ್ನ ತೋಳ ।
ಕೆಳಗೆ ಇಪ್ಪಳು ಲಕುಮಿ ಪೊಳಿಯಾದಲೆ ।
ಸುಲಭಾ ಪರಮ ಮಂಗಳನಾದಾ ಅಗಣಿತಾಂ ।
ಬಳುತಾ ದೋಷಗಂಧ ದೂರ ಸುಗುಣ
ಜಲಧಿ ಶ್ರೀ ಬ್ರಹ್ಮಾದಿ ಚೇತನ ರಾಶಿಗೆ ನಿ ।
ಜ್ಜಳ ನಿರವಧಿಕಾ ಸರ್ವೋತ್ತಮ ।
ಬಲುಜೀಗಾತನು (?)ಸ್ವಉದರಲ್ಲಿ ನಾಭಿ ವಾಮಾ ।
ಬಲಭಾಗ ವಿಡಿದು ಮುಕ್ತಾಮುಕ್ತರ ।

ನಿಲಿಸಿ ಕೊಂಡು ನಲಿವಾ ತಿವಿಧ ಜೀವಿಗಳನ್ನು ।
ಥಳ ಥಳಿಸುತ ಸಣ್ಣಬಾಲಕನಂತೆ ।
ಹಲವು ಮಾತೇನು ಕೇಳಿ ಪರಶಬ್ದ ವಾಚ್ಯವರುಷ ।
ಗಳ ಪರಿಯಂತ ಕೇವಲ ಪ್ರಳಯಾ ।
ತಿಳಿವಾ (ದದ) ದಾರೊಳಗೆ ಅಷ್ಟಮ ಭಾಗಾ ಮುಂದೆ ।
ಬೆಳಗುವುದಕ್ಕೆ ಇರೆ ಶ್ರೀಸ್ತುತಿಸೆ ।
ಮಲಗಿದವನು ಎಚ್ಚತ್ತೋಪಾದಿಯಲಿ ಸ ।
ಕಲ ಭಾಗ್ಯವಂತಾ ಸೃಷ್ಟಿಕಾಲಾ ನೋಡಿ ।
ಕೆಲಕಲಾ ಅವ್ಯಾಕೃತಾ ಗಗನ ಏಕ ಪಂಚಾ ।
ತಲೆಪೋಗಲಾಗಿ ಅದಕೆ ವ್ಯತ್ತಮಾ ।
ಉಳಿದನಾಮಾವರ್ಣಾ ಮೂಲ ಜಡ ಪ್ರಕೃತಿ ।
ಅಳಿಯಾದಿಪ್ಪಾವು ಕಾಲಾ ವೇದ ಸಹಿತ ।
ಅಲವಾ ಮೂರುತಿ ಸಿರಿ ವಿಜಯ ವಿಠ್ಠಲ ಇ ।
ರಳು ಕ್ರೀಡೆಯಾಡಿದ ಸಲೆಮುಕ್ತರ ಸಂಗದಲ್ಲಿ ೧

## ಮಟ್ಟತಾಳ

ಚತುರ ಚತುರ ವಿಂಶತಿ ದಶರೂಪ ।
ಶತ ಸಾಸಿರ ರೂಪಾ ಹಿತದಿಂದಲಿ ಶ್ರೀ ।
ಪತಿಯಾಗಿ ಈ ಲಕುಮಿ ಅತಿಶಯದಲಿ ಅ।
ಪ್ರತಿರೂಪಗಳನಿತ್ತು ಚತುರೆಧರಿಸಿ ಅ।
ಚ್ಚುತನು ಹಯನಾಗಿ ರತುನಾಕರನಸುತೆ ಇದೆ ಧೇನಿಸಿದಳು ।
ಮಿತಿಯಿಲ್ಲದೆ ದೇವತಿ ಗಂಧರ್ವರು ಅತುಳ ರಾಕ್ಷಸ ಯಕ್ಷ ।
ಮತಿಗುಂಪ್ಯಕ ಸಂತತಸಿದ್ಧರು ಮುನಿ ।
ಖತಿಗೊಳದಾಪ್ಸರ ಸತಿಯರು ಮೊದಲಾಗಿ ।
ಚಿತು ಶರೀರಗಳು ಶತಾನಂದ ತಮ್ಮ ತಮ್ಮ ।

ಸತಿಸಮ್ಮೇಳವಾಗಿ ಮಿತಿಯಿಲ್ಲದ ರೂಪಾ ।
ಧೃತರಾಗಲು ಇತ್ತ ಕೃತಲೀಲಾ ನಮ್ಮ ವಿಜಯ ವಿಠ್ಠಲ ಅ ।
ದ್ಭುತ ಶಕ್ತಿ ತುತಿಪರಿಗೆ ಪೊಸದೋ ೨

**ರೂಪಕ ತಾಳ**

ಹರಿಯಿಚ್ಛಾನುಸಾರ ಸುರರಾದಿಗಳು ರೂಪ ।
ಧರಿಸಿದ ತರುವಾಯಾ ಹರಿಶುದ್ಧ ಸತ್ವದಲಿ ।
ಸರಿತ ಪರ್ವತ ವೃಕ್ಷ ರತುನಾ ಹೇಮಾ ರಜತ ।
ಧರುಣಿ ನಾನಾ ಸ್ವರ್ಗ ಶರಧಿ ಮೊದಲಾಗಿ ।
ವಿರಚಿಸಿಯದರೊಳು ಹರಿತಾನೆ ಸಿರಿ ಸಹಿತ ಜಲ ।
ಚರ ರೂಪಗಳು ಶಿರುನಗೆಯಿಂದಲಿ ।
ಕರುಣಾಕರ ದೇವ ಧರಿಸಲು ಬೊಮ್ಮಾದಿ ಮು ।
ಕ್ತರು ಧರಿಸಿದರು ತರುವಾಯ ಶಿಲ್ಪ ಶಾಸ್ತ್ರವನು ತನ್ನ ।
ವರಿಗೆ ಅರುಹಿದಾ ಕ್ಷಣದಲ್ಲಿ ಗ್ರಾಮಾರಣ್ಯ ಪಶು ।
ಅರಸು ಸಾಮಂತ ರೂಪಗಳೆಲ್ಲ ಧರಿಸೀದ ।
ಹರಿತಾನೆ ಬೊಮ್ಮನ ಪ್ರಧಾನಿಯ ಮಾಡಿ ।
ಪರಮಉತ್ತುಮರ ಪ್ರಜೆಗಳಂತೆ ಕಲ್ಪಿಸಿ ।
ನಿರುತತ ಮಸಿನಲ್ಲಿ ಬಿದ್ದ ದುಷ್ಟ ದೈ ।
ತ್ಯರ ಕಳ್ಳನ ಮಾಡಿ ಅವರವರಿಗೆ ನಿ ।
ಷ್ಠುರವನ್ನು ಹಚ್ಚಿಸಿ ಖಳರ ಸದೆ ಬಡಿದು ।
ಮೆರೆದಾ ವಾಣಿ[ಜ್ಯ] ಮಿಕ್ಕಾದ ಕರ್ಮಗಳಲ್ಲಿ ।
ಕರುಣಾ ಸಾಗರ ಹರಿ ಅನೇಕ [ಸ್ತ್ರೀ] ರೂಪ ।
ಧರಿಸಿದಾ ಸುರರೆಲ್ಲ ಅದರಂತೆಯಾದರು ।
ಪರಿ ಪರಿ ರೂಪಗಳು ಪುನರಪಿ ಅಡಗಿಸಿ ।
ಪುರುಷ ರೂಪನಾದ ಭಕ್ತರವೊಡಗೂಡಿ ।

ವರಯಾಗಧ್ಯಯನ ಇತಿಹಾಸಾ [ಪು]ರಾಣಾ ।
ಸರಿ ಸರಿ ಬಂದಂತೆ ಹರಿಯೇ ಸೇವಿಸಿ ಎಲ್ಲ ।
ಪರಮ ಭಾಗವತರ ಪ್ರೀಯಾ ವಿಜಯ ವಿಠ್ಠಲ ।
ಮರಿಯಾದೆಯಲ್ಲದ ಚಿತ್ರ ವೈಚಿತ್ರ

## ಝಂಪಿ ತಾಳ

ರಾತ್ರಿ ಕಡೇ ಭಾಗದಲ್ಲಿ ವೇದಾಭಿಮಾನಿ ದುರ್ಗ ।
ಸ್ತೋತ್ರ ಮಾಡಿದಳು ಪುನರಪಿಯಲ್ಲಿ ।
ಪಾತ್ರ ಅಪಾತ್ರ ಜೀವರ ನೋಡಿ ಅವರಿಗೆ ।
ಗಾತ್ರವನು ತಂದಿತ್ತು ಮಾಡಿಪದೆಂದೊ ।
ಘಾತ್ರಲಘು ಕರ್ಮ ಇದ್ದರೆ ವಿಸ್ತಾರ ।
ಧಾತ್ರಿಯೊಳು ಹರಹಿ ಸೃಜಿಸೆನಲು ।
ಸತ್ರಾಣ ತಾನಹುದೊ ಸತ್ಯ ಸಂಕಲ್ಪ ಪ ।
ವಿತ್ರ ಭಕ್ತರ ಮ್ಯಾಲೆ ದಯವ ನೆನದೂ ।
ಈ ತ್ರಿವಿಧ ಜೀವರ ಸ್ವರೂಪ ಪ್ರಕಟಿಸಿ ।
ಮಾತ್ರಾಕಾಲಾ ಪ್ರಭೇದದಿಂದ ನಡಿಸಿ ।
ಮೈತ್ರಿತನಲಿ ಪೊರೆದು ಅವರವರ ಕರ್ಮಕಂ ।
ನ್ಯತ್ರವಾಗೊಡೆನೆಂದು ವೈಹಿಸಿ (ವಹಿಸಿ) ।
ಸೂತ್ರ ನಾಮಕ ಮರುತ ನಿರ್ಣೈಸಿದಂತೆ ಸ ।
ರ್ವತ್ರರನು ಕರುಣಿಸುವ ಕಪಟಲೀಲಾ ।
ಸೂತ್ರಧಾರಿ ನಮ್ಮ ವಿಜಯ ವಿಠ್ಠಲ ಲೋ ।
ಕತ್ರಯದಲ್ಲಿ ಪ್ರಾಣನಾವಶವಾಗಿಯಿಪ್ಪ ೪

ಮರಳೆ ಇವರಿಗೆ ಗರುಡಶೇಷ ಪುಟ್ಟಿ ।
ದರು ಇವರೀರ್ವಾರು ಒಂದು ದೆಶೆಯಲ್ಲಿ ।
ಪರಮ ಪುರುಷನಾದ ವಿಜಯವಿಠ್ಠಲ ಹರಿಯ ।
ಪರಿ ಪರಿ ಸೋಜಿಗವ ಎಣಿಸಲಾರಳವೆ ೬

## ಆದಿತಾಳ

ಖಗ ಶೇಷರುತ್ಪತ್ಯವಾದ ಒಂದು ವರುಷಕೆ ।
ಜಗದೀಶ ಹರಿ ಇಚ್ಛೆಯಿಂದ ಆದ್ಯಬೊಮ್ಮ ।
ಮಗನಾದನು ಪ್ರದ್ಯುಮ್ನಗೆ ಪುನರಪಿ ।
ತ್ರಿಗುಣಾಭಿಮಾನಿಯು ವಾಣಿಯಲ್ಲಿ ತಾನೆ ।
ಮಗನಾದ ಸೂತ್ರನಾಮಕ ವಾಯು ಸಮ್ಮತ ।
ತ್ರಿಗುಣದಲ್ಲಿ ಒಂದೊಂದು ಬ್ಯಾರೆ ಬ್ಯಾರೆ ಮೂರು ।
ಬಗೆ ರೂಪಾದನು ರುದ್ರವೈಕಾರಿಕ ।
ಮಿಗೆ ತೈಜಸ ಅಹಂಕಾರನು ಎಂದೆಂಬೊ ।
ಪೊಗಳಾಲಳವೆ ತನ್ನ ಸ್ತ್ರೀ ಸಹ ಪುಟ್ಟಿದ ಪ ।
ನ್ನಗ ಜೀವ ಮುಖ್ಯ ಪ್ರಾಣಾ ಪುರುಷನಾಮಕ ಬೊಮ್ಮ ನಾಲ್ಕು ।
ಮೊಗನಿಂದ ಕ್ರಮವಿಡಿದು ಒಂದೊಂದು ಗುಣಧರಿಸಿ ।
ಅಗಣಿತ ಲೀಲೆಯನ್ನು ತೋರಿದ ಮಧ್ಯದಲ್ಲಿ ।
ವಿಗಡ ವಿಷವನುಂಡ ಮೂಲ ವಾಯು ಮತ್ತೆ ।
ಖಗನೆಂಬೊ ಕಾಲನಿಂದ ವಿಷ್ವಕ್ಸೇನ ಜಯಾ ।
ದಿಗಳು ಪಾರ್ಷದರು ಪುಟ್ಟಿದರಯ್ಯಾ ಜೀ ।
ವಿಗಳು ಸ್ಥೂಲದೇಹ ಇಚ್ಛೈಸುವರಾಗಿ ।
ನಿಗಮವಿನುತ ಶ್ರೀಹರಿಯ ಅನುಜ್ಞದಿಂದ ।
ಅಗಣಿತ ಜೀವರು ತಮ್ಮ ತಮ್ಮ ಅಂಶದಿಂದ ।
ಸೊಗಸಾಗಿ ಪ್ರದ್ಯುನ್ನು ದೇವರ ಉದರವ ।

ನಗುತಾ ಪ್ರವೇಶವಾದರದು ಪೇಳುವರಾರು ।
ಭೃಗು ಮುನಿಬಲ್ಲಾ ನಮ್ಮ ವಿಜಯ ವಿಠ್ಠಲರೇಯ ।
ಯುಗ ಯುಗದಲ್ಲಿ ನಿಜ ಭಕ್ತರ ಪರಿಪಾಲಿಪ ೭

ಜತೆ

ಸೂಕ್ಷ್ಮಸೃಷ್ಟಿಯೆನ್ನೀ ಅಜಗೆ ಹತ್ತನೆ ವರುಷ ।
ಈಕ್ಷ್ಮಾಧರದೇವಾ ವಿಜಯ ವಿಠ್ಠಲರೇಯಾ ೮

೬೦

ಧ್ರುವತಾಳ

ಬಾ ಎನ್ನ ಭಾಗ್ಯನಿಧಿ ಭಕುತರ ಬೆಂಬಲವೆ
ಬಾ ಎನ್ನ ದೈವ ಭವವನದಾವಾ
ಬಾ ಎನ್ನ ಕುಲಸ್ವಾಮಿ ಸಕಲಂತರಿಯಾಮಿ
ಬಾ ಎನ್ನ ನಿಜ ತಪವೆ ಅಮೃತ ವಪುವೆ
ಬಾ ಎನ್ನ ಕರ್ನಾಮೃತವೆ ಅನುದಿನದಲ್ಲಿ ಹಿತವೆ
ಬಾ ಎನ್ನ ಸುರಧೇನು ಸಂತತ ಜ್ಞಾನಸೋನೆ
ಬಾ ಎನ್ನ ಸುರತರುವೆ ಬಣ್ಣಿಸಿ ನಿನ್ನ (ನಿಂದು) ಕರೆವೆ
ಬಾ ಎನ್ನ ಚಿಂತಾ ರತುನ ನಾನಾಯತುನ
ಬಾ ಎನ್ನ ಹೃತ್ಕುಮುದ ಚಂದ್ರ ಚನ್ನಿಗ ಮುದಾ
ಬಾ ಎನ್ನ ಶಬದಾಸುತಾ ನಿತ್ಯ ಅಜಾತಾ
ಬಾ ಎನ್ನ ಕರತಳದಲ್ಲಿ ಕನ್ನಡಿಯಾದ
ಬಾ ಎನ್ನ ಬೆಳವಗಿಯ ಬೆಳಸುವ ಮಹಾಪ್ರೀಯಾ
ಬಾ ಎನ್ನ ಭಾರಕರ್ತಾ ಮತ್ತರಿಗೆ ಸಮರ್ಥಾ
ಬಾ ಎನ್ನ ಅಂತರಂಗ ಕರುಣಕೃಪಾಂಗ
ಬಾ ಯದುಕುಲ ತಿಲಕ ವಿಜಯ ವಿಠಲರೇಯ
ಬಾ ಎನ್ನ ಧ್ಯಾನದಲ್ಲಿ ನಿಲುವ ಬಿಂಬ ಮೂರುತಿ ೧

## ಮಟ್ಟತಾಳ

ಹೃದಯಾಕಾಶದಲ್ಲಿ ಅಧೋ ಮುಖವಾಗಿದ್ದ
ಪದುಮಾಷ್ಟದಳ ಅದರೊಳಗೆ ಇಪ್ಪ
ಪದತಳ ಮೇಲಾಗಿ ಸದಮಲಶರೀರಾ
ಮದನ ಜನಕ ಹರಿ ವಿಜಯ ವಿಠಲ ಎನ್ನ
ಪದೋ ಪದಿಗೆ ನೀನು ಬಿಡದೆ ಸಾಕುವ ಧೊರಿಯೆ ೨

## ತ್ರಿವಿಡಿತಾಳ

ಚಿಂತಿಪುದೆಂತೊ ಸಮಾಧಿಯಲಿ ಕುಳಿತು
ಅಂತರಾತ್ಮಾತ್ಮಾ ಪ್ರಜ್ಞಾನಘನ ಅನಿರುದ್ಧ
ಮಂತ್ರ ತಂತ್ರಗಳಿಂದ ಮೆಚ್ಚಿಸಿ ನಿನ್ನ ನಾನು
ಸಂತೋಷ ಬಡಿಸುವೆನೆ ಸರ್ವದಾ ಸರ್ವ
ತಂತ್ರ ಸ್ವಾತಂತ್ರಾ ನೀನೆ ನೀನಲ್ಲದೊಂದಿಲ್ಲ
ಚಿಂತಾಯಕ ಚಿನ್ಮಯರೂಪ ಪ್ರತಾಪಾ
ಅಂತಾವುದೊ ನಿನ್ನ ಅರ್ಚಿಸುವ ಭಕುತಿ
ಸಂತರಿಗೆ ಬಹು ಬಗೆ ಮಾರ್ಗವೋ
ಪ್ರಾಂತಕ್ಕೆ ನೀನೆ ಗತಿ ಅನಂತ ಜನುಮಕ್ಕೆ
ಇಂತೀ ನುಡಿಗಳು ಪುಸಿ ಒಪ್ಪವೆ
ಸಂತತ ರಮಣ ಶ್ರೀ ವಿಜಯ ವಿಠಲ ಏಕಾ
ನಿಂತಿಪ್ಪ ಮೂರುತಿ ಜೀವಾಕಾರಾ ೩

## ಅಟ್ಟತಾಳ

ಪ್ರಣವ ಜಪ ತಪ ಪ್ರಣಾಮ ಪ್ರದಕ್ಷಿಣೆ
ಧನದಾನ ದೀಪ ವಂದನೆ ತೀರ್ಥ ಯಾತ್ರ ಓ
ದನ ಯಾಗ ಭೂರಿ ಭೋಜನ ಪಂಚಾನಲ ಅನು

ದಿನ ಚಾಂದ್ರಾಯಣ ಅನಿಮಿಷನದಿ ಸ್ನಾನ ವನವನ ಸಂಚಾರ
ಮುನಿ ವೇಷಾ ಔಪಾಸನ ನಾನಾಧರ್ಮವ
ಘನ ವ್ರತಗಳು ಒಂದೊಂದನು ಒಬ್ಬರಿಗೆ ಸಾ
ಧನ ಮಾಡಿ ಇಂತು ಆಕ್ಷಣ ಜ್ಞಾನ ಭಕುತಿ
ಯನು ಮಿಳಿತವಾದದನು ನೀನೆ ಪಾಲಿಸು
ತನು ಕ್ಲೇಶವ ಬಿಟ್ಟು ವೇಗನೆ ಗತಿಗಳುವಾ ಘನಕೃಪೆ ಮಾಡುವ
ಘನ ವರ್ಣಕಾಯಾ ಶ್ರೀ ವಿಜಯ ವಿಠಲರೇಯ
ಎನಗೊಂದೆ ಈ ಸಾಧನದಿಂದ ಗತಿವುಂಟು ೪

## ಆದಿತಾಳ

ನೀರು ತುಲಸಿಯಿಂದ ಆರಾಧನೆ ಮಾಡುವೆ
ಸಾರಭೋಕ್ತನೆ ಕರುಣಾವಾರುಧಿ ಲಾಲಿಸಯ್ಯಾ
ತೋರುವುದಿದೆ ಪೂಜೆ ಬೇರೆ ನಾನೊಂದು ಕಾಣೆ
ಧಾರಣಿಯೊಳಗೆ ಅಪಾರ ಸಾಧನವುಂಟು
ತೂರಿ ಯೋಗಿ (ಗ್ಯ)ತ ರಾಶಿ ಸೂರೆ ಬಿಡಲು ಎನಗೆ
ನೀರು ತುಲಸಿಯಿಂದ ಏರಿಸಿ ನಿನ್ನ ಚರಣ
ಸೇರುವಂಥ ಯೋಗ್ಯತಾ ಕೈ ಸೇರಿತಯ್ಯಾ ಎನಗಿಂದು
ಹಾರವಾಗಿದೆ ಇದಕೆ ವಾರ ವಾರಕೆ ಪೊಳೆದು
ಸಾರಿ ಸಾರಿಗೆ ನಿನ್ನ ರೂಪ ತೋರುವುದು ಎನ್ನೊಳಗೆಲ
ವಾರಿಧಿಶಯನ ನಮ್ಮ ವಿಜಯ ವಿಠಲರೇಯಾ
ಚಾರು ಮನೋಹರ ಉದ್ಧಾರಮಾಡು ಮುದದಿಂದ ೫

## ಜತೆ

ಎನ್ನಿಂದ ಈ ಪೂಜೆ ಕೈ ಕೊಂಡನ್ಯ [ನೆ] ರವದು
ಇನ್ನೊಂದು ನಾನರಿಯೆ ವಿಜಯ ವಿಠಲ ವಾಮನೆ ೬

## ೬೧

### ಧ್ರುವತಾಳ

ಬಿಂಬ ಮಾರುತಿ ನಿನ್ನ ಕಾಂಬೆನೆಂದು ನಾನು
ಹಂಬಲಿಸಿ ಬಲು ಹಲುಬಿ ಡಿಂಬದೊಳಗೆ
ಬಂದು ಸುಳಿದು ಪೊಳೆದು ನಿಲುವ
ಇಂಬ ನಿರೀಕ್ಷಿಸಿ ಬಲು ಬಡವಾಗಿದೆ
ತುಂಬೂಡಿದ ಬಿದ್ದಹಣ್ಣು ಆರುವಲ್ಲದಾ
ಎಂಬೊಗಾದೆ ಪೋಲುವ ತೆರನಾಗಿದೆ
ಅಂಬುಜೇಶ ಈಶ ವಿಜಯ ವಿಠಲ ಹೃದ
ಯಾಂಬರದೊಳು ನೀಲಾಂಬುದಾ ಬಾರೋ ೧

### ಮಟ್ಟತಾಳ

ಅಂಬುಜ ಸಂಭವನು ಬಿಂಬದರುಶನ ಕಾಂಬನು ಮನದಿಚ್ಛೆ
ಅಂಬರನದಿಧರನು ಬಿಂಬದರ್ಪಣದಿ
ಕಾಂಬನು ಪ್ರತಿಬಿಂಬ ಅಂಬರ ಸಂಚರರು
ಅಂಬುಜ ಸಖನಂತೆ ಬಿಂಬ ಕಾಂಬುವರು
ಎಂಬ ಮಾನುಷ್ಯರು ಅಂಬುದ ಮಿಂಚಿನೆಂಬಂತೆ
ಬಿಂಬಾ ಕಾಂಬರು ಸಿದ್ಧ ನಂಬಿದೆನೆ ಪೀ
ತಾಂಬರ ಅವರಿಗೆಂಬೋದು ಎನಗುಂಟೆ
ಡಂಭಕ ಭಕ್ತಿಗೆ ಸಂಭವನಾಮ ವಿಜಯ ವಿಠಲ
ಡೊಂಬನ ಅರಿತು ನಂಬಿಗೆನೀಯೊ ೨

## ರೂಪಕ ತಾಳ

ಹೃದಯ ಸ್ಥಳದಲ್ಲಿ ನೇಗಲಿಧರನು
ವಧೆ ಮಾಡುತಿರಲು ದೋಷಕಾರಿಯ
ಅದೆ ಸಮಯದಲ್ಲಿ ನಿನ್ನ ಕರದೊಯಿದು
ಅಧಿಕ ನಾಡಿಯಲ್ಲಿ ಊರ್ಧ್ವದಲ್ಲಿ ಯಿಟ್ಟೆ
ಮದಗರ್ವ ಪುರುಷನಾ ಭಾಸಮಾನ ತ್ಯಾಗ ಮಾಳ್ಪ
ಹದನ ತಿಳುಪದೆ ವದನ ತೋರದೆ
ತದನಂತರದಲ್ಲಿ ಮೊದಲು ಮಂದಿರಕೆ ಬಾ
ರದಿಪ್ಪದೇನೋ ಪಾವನ ಸುರಧೇನು
ಪದುಮ ಗರ್ಭನಾಮ ವಿಜಯ ವಿಠಲ ಎನ್ನ
ಹದುಳಿಲೆ ನಿನ್ನ ಮಾಡಿದೆ ಸುರತರುವೆ ೩

## ಝಂಪೆ ತಾಳ

ಅಧೋಮುಖವಾಗಿದ್ದ ಪದುಮಅರುಳವ ಬಗೆ
ವಿದಿತವಿದು ಕಾಣೊ ಇಂದಿರೇಶ
ಮೊದಲು ಶ್ವಾಸದಲ್ಲಿ ಊರ್ಧ್ವ ಮುಖವ ಮಾಡಿ
ಮುದದಿಂದ ನಿಲವಿಡಿದು ಜ್ಞಾನಕಾರ್ದಾ
ಉದಯಾದ್ವಾಸ ಸಮ ಭಾಸವೆಂಬೊ ಮಂ
ತ್ರದಲಿ ಕರಿವೆನು ಜೀಯಾ ಕೇಳೊ ಮುಂದೆ
ಅದುಭೂತ ನಾಮ ಸಿರಿ ವಿಜಯ ವಿಠಲ ನಿನ್ನ
ಸದಾ ಮೂರ್ತಿಗಳ ನಿಬಿಡಿ ನಿನ್ನೊಳಗಿರಲಿ ೪

## ತ್ರಿವಿಡಿ ತಾಳ

ಸಿರಿದೇವಿರಮಣ ಭಕ್ತರಪರಣ
ಶರನಿಧಿಶಯನ ಶ್ರುತಿಶಿರೋರನ್ನ
ಮೊರೆ ಪೊಕ್ಕೆನೋ ಜೀಯಾ ಮರುತನ ಅಯ್ಯಾ
ಅರಿದವರಿಗೆ ಹೊಣೆಯೆ ಸದಾ ಚಿಂತಾಮಣಿಯೆ
ಸ್ಮರಿಸಿದೆ ಬಹು ಮೂರ್ತಿ ವೊಂದು ಮೆಟ್ಟಿಕೆ ನಿಲಿಸಿ
ಪರಮ ಗುರುವಿನ ಮೂರ್ತಿಳ ಒಗೆ ತಂದು
ಇರಿಸುವೆನಲ್ಲಿಂದ ಸ್ವಗುರು ಮೂರುತಿಯೊಳಗಿಟ್ಟು
ಭರದಿಂದ ಪ್ರಾಜ್ಞನೆ ನಿನ್ನಲ್ಲಿ ಚಿಂತಿಸುವೆ
ಸರಿ ಪೇಳು ಇಲ್ಲಿಗೆ ಮುಂದಿನಾಲೋಚನೆ
ಅರವಿಂದಾಕ್ಷ ನಾಮ ವಿಜಯ ವಿಠಲ ನೀನೆ ೫

## ಅಟ್ಟತಾಳ

ವರ ಮೂರ್ತಿಯೊಳಗೆ ನಿನ್ನ ಚಿಂತನೆ ಪತಿ
ಕರಿಸುವೆನೆಂದಲ್ಲಿ ಪುಷ್ಪ ಸಂಕಾಶಾಂಬರ
ಧರನೆ ಮೇಣು ಅಂತರಂಗದೊಳು ತರುವಾಯ ವರುಣ
ಸರಸಿಜದಳವಷ್ಟಾಕರನಿಕೆ ಪೀಠದ ಮೇಲೆ ಶೋಭಿತವಾಗಿ
ಹರಿ ಪಾಲಕರು ಪರಿವಾರ ಸುತ್ತಲು
ಕರಗಳು ಮುಗಿದು ಪರಾಕು ಪೇಳುತಿರೆ
ಧೊರೆಯಾಗಿ ಸ್ವಮೂರ್ತಿಗಣ ಮಧ್ಯದಲ್ಲಿ
ಮಿರಗುವ ಪ್ರಕಾಶ ವಿಜಯ ವಿಠಲ ದೇ
ವರದೇವ ಸಂಜೀವ ಅಘವನದಾವಾ ೬

## ಆದಿತಾಳ

ಲೋಕದೊಳಗಿದ್ದವೆಲ್ಲಾನೇಕವಾಗಿ ನೋಡೆ ಪರ
ಲೋಕಕ್ಕೆ ಸಾಧನವಲ್ಲಾ ವಾಕು ಇದು ಪುಸಿ ಅಲ್ಲಾ
ಏಕೋಭಾವದಲ್ಲಿ ನಾಶಿಕದಲ್ಲಿ ದೃಷ್ಟಿಯಿಟ್ಟು
ಕಾಕು ದೈವಂಗಳ ಬಿಟ್ಟು ಆ ಕಮಲ ಪೀಠದಲ್ಲಿ
ಅಖಂಡ ಧ್ಯಾನನಾಗಿ ಏಕೋಮೇವನ ಪೂಜಿಯಾ
ನೇಕ ದಿನದಲ್ಲಿ ಮಾಳ್ಪೆನೇಕ ಮಾಯಾ ವಿಜಯ ವಿಠಲ
ಸಾಕುವನು ಬೇಕಾದನಿತ್ತು ೭

## ಜತೆ

ನಿ[ನ್ನ]ದರುಶನವಾಗೆ ಜನನದ ಭಯವಿಲ್ಲ
ಉದುಭವ ನಾಮ ಸಿರಿ ವಿಜಯ ವಿಠಲ ಪೊಳಿಯೊ ೮

## ೬೨

## ಝಂಪಿತಾಳ

ಬಿಡು ಬಿಡು ದೇಹವ ದಂಡಿಸಿ ಮಾಡಿದ ಕರ್ಮ
ಕೊಡತಕ್ಕವಲ್ಲವು ದೃಢವಾದ ಪದವಿಗಳು
ಕಡು ಸಾಹಸವ ಬಿಟ್ಟು ಎಸಗಿದರೆ ಸ್ವರ್ಗಾದಿ
ಒಡನೆ ತಿರುಗಿಸಿ ಫಲಪುಡಿಯಾಗಿ ಪೋಗುವುದು
ಮಿಡುಕುವುದೆ ಸಿದ್ಧ ಶತಕಲ್ಪ ಮಾಡಿದರೆನ್ನ
ನುಡಿಗೆ ಸಂಶಯ ಸಲ್ಲಕೇಳಿ ಮರುಳಾಗದಿರಿ
ಪಡಿ ಇಲ್ಲದಾ ದಾರಿ ತೋರುವರು ಹಿರಿಯರು
ದೃಢನಾಮ ವಿಜಯ ವಿಠ್ಠಲನ ಶ್ರವಣ ಮನನ
ಅಡಿಗಡಿಗೆ ಲಾಲಿಸಿ ಪಡೆಯೊಂದು ಧ್ಯಾನಾ ೧

## ಮಟ್ಟತಾಳ

ಧ್ಯಾನಾದೊಳಗೆ ಸ್ನಾನವಡಕಾ
ಧ್ಯಾನಾದೊಳಗೆ ಮೌನ ಅಡಕಾ
ಧ್ಯಾನಾದೊಳಗೆ ದಾನವಡಕಾ
ಧ್ಯಾನಾದೊಳಗೆ ಜಗವಡಕಾ
ಧ್ಯಾನಾದೊಳಗೆ ದೇವರಡಕಾ
ಧ್ಯಾನಾದೊಳಗೆ ಸರ್ವ ಅಡಕ
ಧ್ಯಾನಾವನ್ನು ಘಳಿಸಿ ಕೊಂಡು
ಧನ್ಯ ವಿಜಯ ವಿಠಲನ್ನ
ಧ್ಯಾನವನ್ನು ಮಾಡು ನೀ
ದಾನದಿಂದ ಭಕುತಿಯಲ್ಲಿ ಧ್ಯಾನವನ್ನು ಬಿಟ್ಟ ನರಗೆ
ಏನು ಇರಲಿ ಎಲ್ಲ ಒಡಕ ೭

## ರೂಪಕ ತಾಳ

ಧ್ಯಾನರಹಿತನಾದ ಮನುಜ
ರೇನು ಕರ್ಮವ ಮಾಡಲೇನು
ಆನೆ ಕಪಿತ್ಥ ನುಂಗಿದಂತೆ
ಹೇನು ಬಿಡದೆ ವಾಸನಿಯ
ತಾನು ನಿರುತಾ ಶ್ರೈಸಿದಂತೆ
ಜಾಣನೊಬ್ಬ ಕಿನ್ನರಿ ಧರಿಸಿ
ಕೋಣನಲ್ಲಿ ಮೀಟಿದಂತೆ
ಗಾಣದೊಳಗೆ ಮಳಲು ತುಂಬಿ
ಭಾನು ಮುಣಿಗಿ ಸುತ್ತಿದಂತೆ ಕಾಣಿರೊ
ಧ್ಯಾನ ಜ್ಞಾನ ಸಂಗತಿಯಿಂದ

ವಾನರನ್ನ ಮುಷ್ಟಿಯಂತೆ
ದೀನನಾಗಿ ಒಂದು ನಿಮಿಷಾ
ಧ್ಯಾನವನ್ನು ಮಾಡಲು
ಶ್ರೀನಿವಾಸ ವಿಜಯ ವಿಠ್ಠಲ
ಆನಂದವಾಗಿ ಒಲಿವನು
ಧ್ಯಾನದಿಂದ ಗತಿಗೆ ಸೋ
ಪಾನವಾಗಲಿ ವಿರಚಿಸೂ ೩

## ಧ್ರುವತಾಳ

ಅನಂತ ಕಲ್ಯಾಣ ಗುಣಪರಿಪೂರ್ಣ ನಿತ್ಯನಿರ್ದೋಷಾ
ಜ್ಞಾನಾನಂದಾತ್ಮಕ ವಿಷ್ಣುರ್ಮೇಸ್ವಾಮಿ ತ್ರಿಲೋಕಕರ್ತಾ
ನೀನೆ ಸ್ವಾತಂತ್ರ ಬೊಮ್ಮಾದಿಗಳು ನಿನ್ನ ದಾಸಾನುದಾಸರು
ಅನಂತ ಅನಂತ ಕಾಲದಲ್ಲಿ ನಿಜವೆಂದು ಪೇಳುತ್ತ
ಮಾನುಷೋತ್ತಮ ಹೀಗೆ ಬಲುಕಾಲವರ್ಚಿಸಲು
ಮನದೊಳಗೆ ವಿಜಯ ವಿಠ್ಠಲನು
ಕೃಪೆಯಿಂದ ಧ್ಯಾನಕೆ ಪೊಳೆವ ೪

## ತ್ರಿವಿಡಿ ತಾಳ

ಚತುರ ಗುಣದಲ್ಲಿ ಚತುರ ಸಾಸಿರ
ಚತುರ ನೂರು ವರುಷ ಧ್ಯಾನಂಗಳ
ಚತುರದಿಂದಲಿ ಮಾಳ್ಪ ಮತಿಗೆ ದೇವೋತ್ತಮ
ಚತುರವೇದ ವಿಜಯ ವಿಠಲನು
ಚತುರನಾಗಿ ಬಿಂಬ ಮೂರುತಿ ಸುಳಿದು
ಚತುರತನದಲ್ಲಿ ಬಂದು ಚರಿಸುವನು ೫

## ಅಟ್ಟತಾಳ

ಹೊನ್ನ ಹುಳುವಿನಂತೆ ಕಣ್ಣಿಗೆ ಸುಳಿವನು
ತನ್ಮಯ ಗುಣನಿಧಿ ತನ್ನಾಮಕ ದೇವ
ತನ್ನಿಚ್ಛೆ ಸ್ವಭಾವ ಮುನ್ನೆ ಧ್ಯಾನದಲ್ಲಿ
ಜನ್ನಿತ ಜ್ಞಾನಕ್ಕೆ ಮನ್ನಿಸುವನು ಇವನ
ಮುನ್ನಿನ ಮಾರ್ಗಕ್ಕೆ ಮಾನ್ಯ ವಿಜಯ ವಿಠ್ಠಲನ್ನದಯದಿಂದಾ
ಪನ್ನನೀವನೆಂದು ಚನ್ನಾಗಿಒಲಿದು ೬

## ಆದಿತಾಳ

ಆಗಮ ಸಂಚಿತ ಹರಿಸಿ
ಆಗುವ ಪ್ರಾರಬ್ಧಗಳ
ವೇಗಾನುಸಾರ ತೀರಿಸಿ
ತಾಗಿದ ದುಃಖ [ಸ್ವ]ರುಶಾ
ಪೋಗಲಾಡಿಸಿ ಅವರವರ
ಯೋಗ್ಯತಾವರಿದು ಸುಖವ ಪಾಲಿಸಿ
ಭಾಗವತರನ ಮಾಡಿ
ಶ್ರೀ ಗುರು ವಿಜಯ ವಿಠಲ
ಮುಗುತಿಯನೀವ ೭

## ಜತೆ

ಧ್ಯಾನ ದಿಂದಲಿ ಮನಸು ನಿಲಿಸಿ ಜ್ಞಾನವ ಪಡೆದು
ಅನಂತ ವಿಜಯ ವಿಠಲನ ಲೋಕವ ಸೇರೋ ೮

## ೬೩

## ಧ್ರುವತಾಳ

ಭಗವಧ್ಯಾನ ಮಾಡು ಭಕುತಿ ಪೂರ್ವಕದಿಂದ
ಅಗಣಿತ ಗುಣನಿಧಿ ಅಪ್ರಮೇಯಾ
ಬಗೆ ಬಗೆ ವ್ಯಾಪಾರಮಾಡುವ ಮಹಾಮಹಿಮ
ಜಗದತ್ಯಂತ ಭಿನ್ನ ಜಗದ್ವ್ಯಾಪ್ತಾ
ನಿಗಮ ಮಂಗಳಗೇಯ ನಿಖಿಲ ಜಗತ್ಸೇವ್ಯ
ತ್ರಿಗುಣರಹಿತ ಸುಗುಣಿ ನಿರ್ಭೇದ ಕಲ್ಯಾಣ
ಅಘದೂರ ಅನಂತಾನಂತ ರೂಪ ಪರಮಾ
ಯುಗ ಮಹಾಯುಗ ಮನುಕಲ್ಪದಿನ ಪ್ರಳಯ
ಮಗುಳೆ ಮಹಾ ಪ್ರಳಯಾಕಾಲ ತಿಳಿದು
ಭಗವಧ್ಯಾನಮಾಡು
ಋುಗುಯಜು : ಸಾಮ ಅಥರ್ವಣಾಗಮದಂತೆ
ಗಗನಮಣಿರಶ್ಮಿ ಚತುರ ವಿಭಾಗ
ಮಿಗೆ ವಾಸುದೇವ ಸಂಕರುಷಣ ಪ್ರದ್ಯುಮ್ನ
ಜಗನ್ಮಯ ಅನಿರುದ್ಧ ನಾರಾಯಣ
ಮೃಗರೂಪ ಕೋಲ ಮೂರುತಿ ವಾಮನ ನರ
ಮೃಗ ಯಜ್ಞ ಪುರುಷೋತ್ತಮ ವಾಸುದೇವ
ಪಗೆದಲ್ಲಣ ನಾರಾಯಣ ವಟು ಅನ್ನಮಯಾ
ದಿಗಳು ಹರಿ ವಿಷ್ಣು ಶೇಷಶಯನ ಶ್ರೀಶ
ಮಗನ ಪೆತ್ತಬ್ಜನಾಭ ವೈಕುಂಠನಾಮಾ ಮನುಜ
ಮೃಗ ಅನಿರುದ್ಧಾದಿ ಪಂಚಮೂರ್ತಿ
ಮೃಗಲಾಂಛನ ವದನ ವಿಜಯ ವಿಠಲನ ಮೂ
ರ್ತಿಗಳ ಕೊಂಡಾಡೋದು ಪಾದಾಂತ ಪ್ರಣವದಲ್ಲಿ ೧

## ಮಟ್ಟತಾಳ

ನರ ನಾರಾಯಣ ಹಯಗ್ರೀವ ಕಪಿಲ
ವರ ದತ್ತ ವ್ಯಾಸ ಅನಿರುದ್ಧ ಪ್ರದ್ಯುಮ್ನ ಸಂ
ಕರುಷಣ ವಾಸುದೇವ ಹರುಷ ಉತ್ಕೃಷ್ಟ ಜ್ಞಾನರೂಪತ್ವ
ಹರಿಯೆ ಗುಣಪೂರ್ಣ ಪೂರ್ಣ ವಿಭೂತಿ
ಪರಿಮಿತ ರಹಿತ ಸುಖಸಂಗೀತ ಜನಪಾಲ
ಸುರನುತ ನಾರಾಯಣ ವಾಸುದೇವ ವೈಕುಂಠ
ವರ ಅನಿರುದ್ಧ ಸಂಕರುಷಣ ಪ್ರದ್ಯುಮ್ನ
ತರುಣಿ ರಮಾಂತರ್ಗತ ವಾಸುದೇವ ದೇವ
ಪರಶುರಾಮ ಮುಸಲಧರ ಪ್ರದ್ಯುಮ್ನ
ನಾರಾಯಣ ಅನಿರುದ್ಧ ಕರಿಸಿಕೊಂಬವಿವೇ ವಾಸುದೇವ ಸಹಿತ
ಮಿರುಗುವ ಪಂಚರಾತ್ರಾ ಅವಕಾಶಪ್ರದಕೆ
ಸ್ಮರಿಸು ಈ ಮೂರ್ತಿಗಳ ನಾಮ ಕೀರ್ತನೆ ಮಾಡು
ಸರುವ ವ್ಯಾಪ್ತಸ್ವಾಮಿ ವಿಜಯವಿಠಲರೇಯ
ಪರಿ ಪರಿ ಬಗೆಯಿಂದ ಪ್ರತಿಪಾದ್ಯನಾಗಿಪ್ಪಾ ೨

## ರೂಪಕ ತಾಳ

[ಅ]ನಂತ ಅನಂತರೂಪ ಸಚ್ಚಿದಾನಂದ ದೇಹ
ಅನಂತ ಶೀರ್ಷ ಪಾದದಿ ಸರ್ವಾಂಗ
ಅನಂತ ಗುಣಗಣ ಮಹಾತ್ಮ ಪುರುಷ
ಏನೆಂಬೆ ವರಹ ನರಸಿಂಹ ವಾಮನ
ಮಾನಸೋತ್ತರ ಶೈಲ ಸ್ಥಿತ ವಾಸುದೇವಾದಿ
ಆನನ ಚತುಷ್ಟಯ ನೀಲ ವರುಣಾಗ್ನಿ ಸೋಮ

ಭಾನು ಉರಗದೇವ ಇವರಂತರ್ಗತ
ಶ್ರೀನಿವಾಸರೂಪ ವಾಸುದೇವ ವಿಷ್ಣು
ಭಾನು ಭಾರ್ಗವ ವಟುನಾರಾಯಣ ಜಯಾನಾಥ
ಈ ನೀತಿ ಹಯವದನ ನರಸಿಂಹ ಪ್ರದ್ಯುಮ್ನ
ಜ್ಞಾನ ಮತ್ಸ್ಯನು ಕೋಲ ಕೂರ್ಮ ಮೂರುತಿ ಮತ್ತೆ
ಜಾನಕಿರಮಣ ಬದರಿನಾರಯಣ
ರೇಣಕಾನಂದನ ಜಯಂತ ನರಸಿಂಹ
ಈ ನವ ವರುಷ ಸರ್ವ ದ್ವೀಪದಲ್ಲಿ ನೋಡು
ಜ್ಞಾನಗಾತುರ ಹರಿ ವಿಜಯ ವಿಠ್ಠಲರೇಯ
ನಾನಾ ರೂಪಗಳಿಂದ ಅರ್ಚನೆ ಕೈಕೊಂಬಾ ೩

## ಝುಂಪೆತಾಳ

ಸಿರಿ ಮಾಧವ ವೀರನಾರಾಯಣ ಕೃಷ್ಣ
ತರಣಿ ಮೊಮ್ಮಗ ರಾಮಚಂದ್ರ ಮಹಾವಿಷ್ಣು ವರಹ ಕ್ಷೀರ
ಶರಧಿಶಯನ ನರಹರಿ ತ್ರಿವಿಕ್ರಮ ದೇವ
ಹರಿಗ್ರೀವ ಶ್ರೀಧರಾನಂತ ಜನಾರ್ದನ
ಪರಮೇಷ್ಟಿ ಈಶದೇವ ಕೇಶವಾದಿ
ವರದತ್ತಾತ್ರಯ ವೇಂಕಟೇಶ ಕೋಲ ಗದಾ
ಧರ ಲಕ್ಷೀ ನಾರಾಯಣಚ್ಯುತ ಚಕ್ರಿ
ಸ್ಥಿರ ವಾಸುದೇವ ವಿಷ್ಣು ನಾರಾಯಣದೇವ
ಪರ ವಿಷ್ಣು ಬ್ರಹ್ಮೇಶ ಪರಮಪುರುಷ
ಮೆರೆವ ವಾಸುದೇವ ಸಂಕರುಷಣ ಕೃತಿಪ
ವರ ಅನಿರುದ್ಧ ರೂಪಗಳ ನೆನೆಸು
ತಿರುಗಿ ಇದೆ ರೂಪಗಳು ನಾರಾಯಣ ಸಹಿತ
ಎರಡೊಂದು ಗುಣ ವಾಸುದೇವ ರಾಮ

ವರಹ ಪ್ರವರ್ತಕ ವಿಶ್ವ ತೈಜಸ ಪ್ರಾಜ್ಞ
ಭರಿತ ವಿಮಲಾದಿಶಕ್ತಿನವ ರಾಜರಾಜೇ
ಶ್ವರಿ ವಿಭೂತಿರೂಪ ಪ್ರತ್ಯಕ್ಷ ಪರಂಪರೆ
ಇರತಕ್ಕವು ಇತ್ತ ತತ್ತತ್ಕಾಲ ಅಭಿದಾನ
ಪರಮಾಣು ಮಹಾಕಾಲ ಒಪ್ಪುತ ಗದಾ
ಧರ ಕೇಶವಾತ್ಮಕ ಗೋವಿಂದ ನಾರಾಯಣ
ಅರಿಧರ ವಿಷ್ಣು ಮಧುಹಾ ಮಾಧವ
ಕರಣೇಶಾಂಬುಜನಾಭ ಶ್ರೀವತ್ಸದೇವ ಸುಂ
ದರ ಜನಾರ್ದನ ದಾಮ ಜಠರ ವಿಶ್ವ
ಶರ ಸಂಚಾರ ವಟು ತ್ರಿವಿಕ್ರಮ ನೃಸಿಂಗ ಭೂ
ವರಹ ಭಾರ್ಗವ ಲಕ್ಷ್ಮಣಾಗ್ರಜ ರಾಮ
ನರ ನಾರಾಯಣ ನರ ದತ್ತ ಕಪಿಲ ಮುನೇ
ಶ್ವರ ಸನತ್ಕುಮಾರ ಹಯವದನ
ಹರಿ ಮಿತ್ರಾ ಮಹಿದಾಸ ಅಮರ ಮೂರುತಿ ದನ್ವಂ
ತರಿ ವೃಷಭಯಜ್ಞ ಬಲಭದ್ರ ವ್ಯಾಸ
ನಿರುಪಮ ಬುದ್ಧ ಕಲ್ಕಿ ಗಂಗೆಯ ಪೆತ್ತನ
ಸ್ಮರಿಸು ಪಾಷಾಂಡಗಣಾತ್ರಮಾದಕ್ಕೆ
ಪರಮ ಪಾವನ ರಂಗ ವಿಜಯವಿಠ್ಠಲರೇಯ
ಸರುವ ಕಾಲದಲ್ಲಿ ಭಕ್ತರಿಗೊಲಿದಿಪ್ಪಾ ೪

## ತ್ರಿವಿಡಿ ತಾಳ

ಸದಮಲ ಅಜ ಅಣಿಮಾ ಯಜ್ಞ ಅಚ್ಯುತ ಹಯ
ವದನ ಕೇಶವ ಈಶಸ್ವಾತ್ಮ ವಿಷ್ಣೂರುರುಕ್ರಮ
ಮುದದಿಂದ ಕೇಶ್ವರ ಚಕ್ರಿ ಗದಿ ಧನುರಾಸ್ಯ

ಮಧುಸೂದನ ಇಂದ್ರವರ ಜಾತ ರಕ್ಷಾತ್ಮ
ಚದುರ ಹಲಧರ ಹೃಷೀಕನಾಥ ನಾರಾಯಣ
ಉದಧಿನಿವಾಸ ಯೋಗೇಶ್ವರ ಪ್ರಶ್ನಿಜ
ಒದಗಿ ಪರಮಪುರುಷ ಗೋವಿಂದ ಮಾಧವ
ನಿಧಿ ವೈಕುಂಠಾತ್ಮಕ ಶ್ರೀ ಪತಿಯು ಯಜ್ಞ
ಇದರ ತರುವಾಯ ವಿಶ್ವೇಂದ್ರ ನಾಮಕ
ಪದವೀವ ಪ್ರಾದೇಶ ನಾಮಕಂಗಟ ಮಾತ್ರ ಜೀವಸ್ಥ
ತದುಪರಿ ಏಕಪಂಚಾಶನ್ಮೂರ್ತಿಗಳೆನ್ನು
ಮಧು ವಿದ್ಯಾವಾಸಿಗಳ ಚಿಂತಿಸು ಬಿಡದೆ
ಹದಿನಾಲ್ಕು ಮನ್ಮಂತರದಲ್ಲಿ ಅವತಾರಗಳು
ಪದೋಪದಿಗೆ ಪೊಳೆವುತಿದೆ ಪೆಸರಿನಿಂದ
ಮೊದಲು ಯಜ್ಞ ವಿಭು ಸತ್ಯಶೇನ ತಾಪಸ
ಇದೆ ಸಿದ್ಧ ವೈಕುಂಠ ಅಜಿತಾಖ್ಯ ವಾಮನ
ಅಧಟ ಸಾರ್ವಭೌಮ ವೃಷಭ ಶಾಂತಾಖ್ಯಾ
ನಿಧಿ ಧರ್ಮಸೇತು (ಶ್ವೆತು) ಸ್ವಧಾಮ ಯೋಗೇಶ್ವರ
ತುದಿಗೆ ಬ್ರಹದ್ಭಾನು ಗುಣಿ ಎ[ನಿ]ಸಿ ಮುಂದೆ
ಉದಯಾರ್ಕ ಸನ್ನಿಭ ವಿಜಯ ವಿಠ್ಠಲರೇಯ
ಹೃದಯದೊಳಗೆ ಪೊವ ಕಾರುಣ್ಯವನು ಮಾಡಿ ೮

## ಅಟ್ಟತಾಳ

ಅವನಿಯೊಳಗೆ ಕೇಳು ಮನು ಮುನಿನ್ನಪರಲ್ಲಿ
ಅವತರಿಸಿದ ರೂಪ ಮನ್ವಾದಿಯಲಿ
ಸ್ತವನ ಮಾಡಿದ ರೂಪ ಹದಿನಾಲ್ಕರಲಿ ನಾ
ವಿವರಿಪೆ ಮಹಿದಾಸ ದತ್ತ ವೇದವ್ಯಾಸ

ರವಿಜಾತ್ಮ ಕೃಷ್ಣ ನರನಾರಯಣ ಹರಿ
ರವಿಕುಲಾಗ್ರಣಿ ರಾಮ ಪ್ರಶ್ನಿಗರ್ಭ ಯಾ
ದವ ವಿಷ್ವಕ್ಸೇನ ಭಾರ್ಗವ ಬುದ್ಧ ಕಲಿಕೆ ಮೆ
ರೆವ ಶಿಂಶುಮಾರ ಧನ್ವಂತರಿ ಋಷಭ ಮಹಾ
ಕವಿ ಕಪಿಲ ಮಿಕ್ಕಿ ಹರಿಯವತಾರ ಮಾ
ನವರಲ್ಲಿ ಉದ್ಭವವಾದ ಮಹಿಮೆ ಮ
ತ್ತಿವಕೊ ಮತ್ಸ್ಯ ಕೂರ್ಮ ವರಹ ನರಸಿಂಹ
ಧವಳ ವರ್ನ ಹಂಸ ಹಯಗ್ರೀವ ನಾನಾ ಪ್ರಾದು
ರ್ಭಾವ ಯುವತಿ ನಾರಾಯಣಿ ರೂಪ ಬಲರ ರೂಪ
ಭುವಿ ತತ್ವ ನಾನಾ ವರ್ಣ ಮಂತ್ರ ದೇವತಾ
ಅವಕಾಶ ಪರ್ಯಂತ ಭಗವದ್ರೂಪಗಳೆನ್ನು
ನವ ನವ ಮೋಹನ್ನ ವಿಜಯ ವಿಠ್ಠಲರೇಯ
ಭವದಿಂದ [ಎ]ತ್ತುವ ಇನಿತು ಭಜನೆಮಾಡೆ ೬

## ಆದಿತಾಳ

ಸಕಲ ಪ್ರತಿಪಾದ್ಯ ಸರ್ವದ ಸ್ಥಿತಿ ನಿಯಾ
ಮಕ ಅವತಾರ ಪ್ರಾದುರ್ಭಾವ ಆವೇಶ ಪ್ರವ
ರ್ತಕ ಉಪಾಸ್ಯ ಆಶ್ರಯ ಏಕೈಕಾಭೀಷ್ಟ ಪ್ರದ
ಮುಕುತ ವಾಲಗ ಕರ್ಮ ಮೋಚಕ ಭೋಕ್ತ ಭೋಗ
ಅಖಿಲ ಆಧಾರ ಶಕ್ತಿ ಸರ್ವಲೋಕಾಶ್ರಯ
ಅಕಳಂಕ ನಾನಾರೂಪ ಸರ್ವದ ನಿರ್ಭಿನ್ನ
ಲಕುಮಿರಮಣನಲ್ಲದೆ ಅನ್ಯರಿಗೆ ಈ ಮಹಿಮೆ
ಪ್ರಕಟ ಗುಪುತನಾಗಿ ಅಂತಿಕ ದೂರದಲಿ
ಭಕುತರನ ಸಲಹುವ ಕಾರಣ ಕಾರ್ಯದಲ್ಲಿ
ತಕ್ಕ ತಕ್ಕ ಸೂಕ್ಷ್ಮ ಸ್ಥೂಲ ಕಾಲದಿ ಜಡದಲಿ

ಸುಖಪೂರ್ಣ ಜ್ಞಾನನಾಗಿ ವ್ಯಾಪಾರಮಾಡಿಸುವ
ಸಖನಾಗಿಯಿಪ್ಪ ಸರ್ವಜೀವರ ಸಾಧನಕ್ಕೆ
ದುಃಖ ಬಡದಂತೆ ಕಾವ ಇರಳು ಹಗಲು ಒಲಿದು
ಮಕ್ಕಳಾಟಿಕೆಯಂತೆ ಲೀಲೆ ಮಾಡುವ ಸ
ನ್ಮುಖನಾಗಿ ಸತ್ವಾದಿಗುಣ ಉಪಾದಾನದಿಂದ
ನಖಶಿಖ ಪರಿಯಂತ ಸಾರ ಸುಂದರೋಪೇತ
ಸಕಲಾಭರಣ ಭೂಷಿತ ಜ್ಞಾನಾದಿ ಬಲಕಾಯ
ವಿಕಸಿತ ಚಿತ್ತದಲ್ಲಿದೆ ಧ್ಯಾನವಮಾಡು ಆರಂ
ಭಕೆ ಚಿಂತಿಸಿ ನೀನು ಸರ್ವರೂಪಾತ್ಮಕನಾ
ನಿಖಿಲ ಬಗೆಯಿಂದ ಹೃದಯಾಕಾಶಕ
ರ್ನಿಕೆಯಲ್ಲಿ ಪೂಜಿಸು ಒಂದಾನಂತನೆಂದು
ಋಕ್ ಯಜುಸ್ಸಾಮಾಥರ್ವಣ ವೇದದಲ್ಲಿ ನಿತ್ಯ
ಅಕದಳಂಕವಾಗಿದೆ ಇದೆ ಸಿದ್ಧಾಂತ ಮಹಾಪ್ರಮೇಯ
ರುಕುಮಿಣಿಪತಿ ನಮ್ಮ ವಿಜಯ ವಿಠ್ಠಲ ಪ್ರೇ
ರಕನೆಂದು ನಿತ್ಯ ನಂಬು ನಂಬು ನಾನಾ ವಿದ್ಯಾ ಬಪ್ಪುದು ೭

### ಜತೆ

ದಿನ ದಿನಕಿನಿತಿನಿತು ಧ್ಯಾನವಮಾಡಲು
ನಿನಗೆ ಪ್ರಣವ ಮೂರುತಿ ವಿಜಯವಿಠ್ಠಲ ಪೊಳೆದು ನಿಲುವ ೮

## ೬೪

### ಧ್ರುವತಾಳ

ಭಯವ್ಯಾಕೆ ನಿನಗೆ ನಿರ್ಭಯನಾಗು ಎಲೋಪ್ರಾಣಿ ಭವ
ಭಯದೂರ ಶ್ರೀ ಹರಿಯಾ ಕರುಣಾಕಟಾಕ್ಷ
ಸಯವಾಗಿ ಇರಲು ಸಹಾಯಕೆ ಮತ್ತೊಬ್ಬರನ್ನು

ಬಯಸುವುದಲ್ಲ ಅಪಜಯಗಳು ಎಂದಿಗಿಲ್ಲ
ಹಯಗಮನನಾಗಿ ಕತ್ತೆಯನ್ನು ಹಾರೈಸುವಂತೆ
ಬಯಲಾಶೆ ಬಿಡುಬಿಡು ಹುಯಲಿಡಾದಿರು ದುರಮ
ತಿಯಲಿಪ್ಪ ಮತಾಶ್ರಯಮಾಡಿ ಪರರಿಗೆ ನೋಯಿಸದಿರು
ತ್ರಯಲೋಕನುತ ವಿಜಯವಿಠ್ಠಲನೆಂಬೊ ಕ
ರೆಯಮಣಿ ಕಟ್ಟಿರೆ ಭಯವೆತ್ತಣದೋ ಪೇಳು ೧

## ಮಟ್ಟತಾಳ

ಆವಪಿತನು ಸಾಕಿದನು ಪ್ರಹ್ಲಾದನ್ನಾ
ಆವಜನನಿ ಸಾಕಿದಳು ಧ್ರುವನ್ನ
ಆವ ಅಣ್ಣ ಸಾಕಿದನು ವಿಭೀಷಣನ್ನ
ಆವ ಪುರುಷ ಸಾಕಿದನು ಪಾಂಚಾಲಿಯ
ಆವ ಬಂಧು ಸಾಕಿದ ಪರೀಕ್ಷಿತನ್ನ
ಆವ ದೈವ ಸಾಕಿತು ಗಜೇಂದ್ರನ್ನ
ಆವ ಧೀರ ಸಾಕಿದ ಫಲ್ಗುಣನ್ನ
ಆವ ಭಟ ಸಾಕಿದ ಉಗ್ರೇಶನನ್ನು
ಆವ ರಾಯ ನಾರಿಯರ ಬಿಡಿಸಿದವನು
ಆವ ಜಾತಿ ಸಾಕಿತು ಅಜಮಿಳನ
ಆವಾವನಾವವನೊ ನೋವು ಕಳೆದು ಭಕು
ತಾವಳಿಗೆ ವೇಗ ಕೈವಲ್ಯ ಪಾಲಿಪ
ದೇವನೆಂಬವನು ಮತ್ತಾವವನಾವವನೊ
ಈ ವಿಚಾರವನ್ನು ಭಾವದಲ್ಲಿ ತಿಳಿದು
ಭಾವಜನ ಪೆತ್ತ ವಿಜಯ ವಿಠ್ಠಲ ನಂಘ್ರಿ
ದಾವರೆ ಯುಗಳದಲಿ ಪಾವನನಾಗುವದು ೨

## ತ್ರಿವಿಡಿ ತಾಳ

ಒಡಲೊಳು ಅಬುಜಭವಾಂಡ ಕೋಟಿಯ ಕೋಟಿ
ಅಡಗಿಸಿಕೊಂಡಿಪ್ಪ ಮಹಾಮಹಿಮನ
ಒಡನೆ ತೊಟ್ಟಿಲೊಳು ಪವಳಿಸಿದನೆಂಬ
ನುಡಿ ಎತ್ತಣದೋ ಬಲು ಸೋಜಿಗವೊ
ನುಡಿಗಗೋಚರನಾದ ದೇವಂಗೆ ಜೋಗುಳ
ಬಿಡದೆ ಪಾಡಿದುದೇನೊ ಮೋಹಕವೋ
ಪೊಡವಿ ಸಾಗರ ದ್ವೀಪದಾಧಾರ ಕರ್ತನು
ನಡೆನುಡಿ ಕಲಿತನೆಂಬುವುದು ಏನೋ
ಎಡಿಯವಲ್ಲದ ನಿತ್ಯತೃಪ್ತನು ಮೊಲೆ ಪಾಲು
ಗುಡಿದನೆಂಬುವದಿದು ನಿಜವೆನ್ನಿರೋ
ಪಡೆಧರ ಗರುಡರಿಗೆ
ಬೆಡಗು ತೋರುವ ಹರಿಯ
ಮಡದೆರೆತ್ತಿದರೆಂಬೊ ಘನವಾವುದೋ
ಅಡಿಗಳೊಳಗೆ ಕ್ಷೋಣಿ ಅಡಗಿಸಿದ ಧಿಟ್ಟ
ಸಡಗರದ ದೈವ ಒಲಿದಿರಲು
[ಪ]ಡದಿರು ದೈನ್ಯವ ಒಬ್ಬರ ಬಳಿಯಲ್ಲಿ
ಕೊಡರು ಮನಸಿನಂತೆ ನೆನೆಸಿದ ಫಲ
ಬಡವರಾಧಾರ ಶ್ರೀ ವಿಜಯ ವಿಠ್ಠಲ ಕರುಣಿ
ಬಿಡನು ನಿನ್ನವನೆಂದು ನುಡಿದರೊಮ್ಮ್ಯಾದರು ೩

## ಅಟ್ಟತಾಳ

ಜನನದ ಭಯ ಮರಣದ ಭಯ ಬರುತಿಪ್ಪ
ಮನೋ ಇಂದ್ರಿಯಂಗಳು ಎರಗುವ ಭಯ ದು
ರ್ದಿನಭಯ ಬಲುರೋಗ ಕೊಡಕುವ ಭಯಕಾ

ಲನ ಭಯ ತನಗಿಕ್ಕುವ ವಿಷದ ಭಯ ತೀವ್ರವಾದ ತಮ
ಸಿನ ಭಯ ನಾನಾ ಭಯಗಳು ಬಂದರು
ಗಣನೆ ಮಾಡಲು ಕಾಣೊ ಹರಿಯ ನಂಬಿದ ಜನ
ರನು ಮಾನ ಸಲ್ಲದು ಸತತ ತಿಳಿದದು
ಜನುಮಾದಿ ಕರ್ತ ವಿಜಯ ವಿಠಲನ್ನ ಅ
ರ್ಚನೆ ಮಾಡು ಅನುದಿನ ಭಯಗಳ ನೀಗು ೪

## ಆದಿತಾಳ

ದುರಿತಗಿರಿಗೆ ವಜ್ರ ಹರಿನಾಮ ಭಕ್ತರಿಗೆ
ನಿರುತ ವಜ್ರದ ಜೋಡು ಭಯವಿಟ್ಟು ನಡಗುವಂಗೆ
ಸುರಿವುದು ಮಧುರಪಾನ ಬಿಡದೆ ನೆನೆವಂಗೆ
ನೆರೆ ನಂಬಿದವರಿಗೆ ಸುತ್ತ ತಿರಗುವ ಪ
ಹರೆ ಕರೆಯಲು ವೈಕುಂಠ ಕರತಳದಿ ಇಪ್ಪದು
ಹರಿಯೆಂದು ನೆನೆದವರ ಸಂಗತಿಯಲ್ಲಿ ಕ್ಷಣ
ವಿರಲು ಮುಕ್ತಿಗೆ ಮಾರ್ಗ ಬಯಲಾಗಿ ತೋರುವುದು
ಹರಿ ಪಾದದಲಿ ಆಸಕ್ತನಾಗಿದ್ದವನಿಗೆ
ಇರಳು ಹಗಲು ಮೃತ್ಯು ಕಾಯ್ದೇನು ಮಾಡುವುದು
ಅರಿಭಯಂಕರ ನಮ್ಮ ವಿಜಯ ವಿಠಲೇಶ ೫

## ಜತೆ

ಉಂಟುಂಟು ವಿಜಯ ವಿಠ್ಠಲನೆಂದವಗೆ ಭಯದ
ಗಂಟಲನೊದೆದು ವೈಕುಂಠ ಪುರದ ಗತಿ ೬

೬೫

## ಧ್ರುವತಾಳ

ಭಾರತಾಖ್ಯದ ಕಥೆ ಭೂರಿಜನರು ಕೇಳಿ
ಸಾರಲು ನಿತ್ಯ ಸಂಸಾರದಿಂದಲಿ ಬಲು
ದೂರನಾಗಿ ದುಃಖ ನಿವಾರಣದಲ್ಲಿ ಗತಿಗೆ
ದಾರಿಯಾಗುವುದು ವಿಸ್ತಾರವಾದ ಸುಂ
ದಾರ ಜ್ಞಾನ ಭಕುತಿ ವೈರಾಗ್ಯ ಫಲಿಸಿ ಉ
ತ್ತರಿಸುವುದು ಮತಿಯಾ ದಾರಾಪುತ್ರಾದ್ಯರಿಂದ
ನಾರಾಯಣನು ಭೂಭಾರ ಇಳುಹುವೆನೆಂದು
ಕಾರುಣ್ಯದಲ್ಲಿ ಸುರವರ ಮಿಕ್ಕಾದವರಿಗೆ
ನಿರೂಪಿಸಿದ ಕರ್ಮ ಧಾರುಣಿಯೊಳಗವ
ತಾರವ ಮಾಡಿರೆಂದು ಸಾರಿ ಬೀಳ್ಕೊಟ್ಟು ತಾನೆ
ಸುರರಾಯನ ಕುಮಾರಗೊಲಿದು ಅವ
ತಾರ ಮಾಡಿ ಯಶೋದಾಗರದಲ್ಲಿ ಬೆಳೆದು
ಜಾರ ಚೋರನೆನಿಸಿ ನಾರಿಯರ ಸಂಗಡ
ಪಾರ್‍ಯಾಡಿ ಗೋಕುಲ ಉದ್ಧಾರಗೈಸಿದ ದೇವ
ಕ್ರೂರ ದೈತ್ಯರ ಸಂಹಾರವ ಮಾಡಿ ವೇಗ
ನೀರ ನಿಧಿಯೊಳಗೆ ದ್ವಾರಕಾಪುರ ಬಿಗಿದು
ಸಾರಿ ಸಾರಿಗೆ ಹದಿನಾರು ಸಾವಿರ ಸತಿಯರ ಕೂಡಲಿ ಸಾ
ಕಾರದಿಂದಲಿ ನೆರದ ವಾರಿಜಗಲ್ಲದ ಚಾರುವಂಶಕ್ಕೆ ಅಂದು
ಕೌರವ ಪಾಂಡವರು ಬ್ಯಾರೆ ಬೆಳೆದರಯ್ಯಾ
ವೈರಾವೆ ಪೆಚ್ಚಿ ಮತ್ಸರದಲಿ ಮಸಗಿ
ವಾರ ವಾರಕೆ ಬಿಡದೆ ವಾರಣಾವತಿಯಲ್ಲಿ

ಕ್ರೂರರು ಸಜ್ಜನರು ಈ ರೀತಿಯಲ್ಲಿ ಇದ್ದಾ
ಪಾರವಾಗಿ ಸಂಚಾರ ಮಾಡಿದರವರು
ಶ್ರೀ ರುಕ್ಮಿಣಿಯರಸ ವಿಜಯ ವಿಠ್ಠಲರೇಯಾ
ಪರಾಶರನ ಕುಮಾರ ಮನ್ನಿಸಲಾಗಿ ೧

## ಮಟ್ಟತಾಳ

ಕುರುವಂಶದವರು ಹರುಷದಿಂದಲಿ ಬೆಳೆದು
ಗುರುದ್ರೋಣನಲ್ಲಿ ಶರಧನುಸಿನ ವಿದ್ಯಾ
ಅರಿತರು ಐವರು ಎರಡೈವತ್ತು ಜನರು ಸಹವಾಗಿ
ಪರಿ ಪರಿ ಬಗೆಯಿಂದ ಕುರುಪಿತಾಮಹನ
ಕರುಣದಿಂದಲಿ ಎಲ್ಲಾ ಸರಿ ಸರಿ ಬಂದಂತೆ
ಇರುತಿರೆ ಸರ್ವದಾ ಭರತಕುಲದವರು
ಅರಿತನ ಬಳಸುತ ಬೆಳಸುತ್ತಾ
ಮರಳೆ ಕುಂತಿಸುತರೆ ಸುರಪನ ಪ್ರಸ್ತದಲಿ
ಅರಗಿನ ಮನೆಯೊಳಗೆ ಇರಿಸಿ ಕಿಚ್ಚನೆ ಹಚ್ಚೆ
ಪರಿಘ ಪರಿಹರಿಸಿ ವೃಕೋದರನು ವನದೊಳು
ಸುರವೈರಿಯ ಕೊಂದು ವರಕುವರನ ಪೆತ್ತಾ
ಬರುತ ಏಕ ಚಕ್ರನಗರದಲ್ಲಿ
ತಿರಿದುಂಡು ಮಹಾದುರಳ ಬಕಾಸುರನ
ವರಿಸಿ ಭೂಸುರನಿಗೆ ಹರುಷವ ತೋರಿ ಆ
ಪುರವ ಪಾಲಿಸಿ ಐವರು ಅಲ್ಲಿಂದಲಿ
ತೆರಳಿ ಬರುತಲಿದ್ದು ಸರಿತೇಲೆ ಅಂಗಾರಾ
ವರಮನ ಭಂಗಿಸಿ ಧರಣಿ ಸುರರವೇಷ
ಧರಿಸಿ ಪಾಂಚಾಲನಪುರಕೆ ನಡೆ ತಂದು

ಅರಸರುಗಳು ಬಂದಿರಲು ಸ್ವಯಂವರಕೆ
ಶಿರವ ತೂಗಿ ನೋಡಿ ಪರಿಹಾಸ್ಯ
ಮಾಡಿದರು ಮನದೊಳಗೆ
ಹರಿಪಾದಂಗಳ ಸ್ಮರಿಸುತ್ತ ಗುಪ್ತದಲ್ಲಿ
ಅರರೆ ಇತ್ತಲು ಮಹಾ ಶರಾಸನವನು ಎತ್ತಿ
ಸರಿಯಾ[ಗಿ] ಹೊಡೆದು ತೀವರ ಗೆಲುವೆಂದು
ಪರಿಕ್ರಮದಲಿ ಶಲ್ಯ ತರಣಿ ತನಯಕರ್ನ
ಬಿರಿದಿನ ನಾನಾ ಅರಸುಗಳು ಎತ್ತಿ ತರಹರಿಸಿಕೊಳ
ಲರಿಯದೆ [ಧಾ]ರುಣಿಗೆ ಹೊರಳಿ ಲಜ್ಜಿತರಾಗಿ
ತಿರುಗಿ ಪೋಗಲು ಇತ್ತ ನರನು ಭೀಮನ [ಆ] ಜ್ಞೆ
ಧರಿಸಿ ಬಿಂಕವ ತಾಳಿ ಭರದಿಂದಲಿ ಎದ್ದು
ನಿರೀಕ್ಷಿಸಿ ಚಾಪವ ಕರದಲ್ಲಿ ಪಿಡಿದು ಸರಸದಿಂದಲಿ ನಗುತ
ಪರಮಸಖನಾದ ವಿಜಯ ವಿಠ್ಠಲನ್ನ
ಸ್ಮರಿಸಿದ ಮರಿಯಾದೆ ಕರಣ ಶುದ್ಧನಾಗಿ

## ರೂಪಕ ತಾಳ

ಬಿಲ್ಲು ಏರಿಸಿ ಹೊಡೆದು ನಿಲ್ಲಲೀಯದೆ ಸ್ವಾಹಾ
ವಲ್ಲಭಾ ಉ[ಧ್ಭ]ವಳಾ ಸೊಲ್ಲಿಲಿ ಮೆಚ್ಚಿಸಿ
ಎಲ್ಲೆ ಕೌತುಕವೆಂದು ಶಲ್ಯಾದಿಗಳು ಬರಲು
ಜೊಳ್ಳು ತೂರಿದಂತೆ ಎಲ್ಲರ ಓಡಿಸಿ
ಅಲ್ಲಿಂದ ಜನನಿಯ ಸೊಲ್ಲಾನೆ ಲಾಲಿಸಿ
ಬಲ್ಲಿದರು ತಾವು ಬಲ್ಲದೇ ಕೈಕೊಂಡು
ಉಲ್ಲಾಸದಲಿ ಬದರಿಯಲ್ಲಿಯಿಪ್ಪನ ದಯ
ದಲ್ಲಿ ಕೃಷ್ಣೇಕರ ಪಲ್ಲವ ಪಿಡಿದರು

ಎಲ್ಲ ಲೋಕಂಗಳು ತಲ್ಲಣಿಸುವಂತೆ
ಸಲ್ಲಲಿತ ವಾದ್ಯದಲ್ಲಿ ಧ್ವನಿ ತುಂಬೆ
ಬಳ್ಳಿತಾದ ಒಂದು ಹಲ್ಲಿನ ಗಜವಿಂಡು
ಹಲ್ಲಣಿಸಿದ ವಾಜಿ ಬೆಳ್ಳಿ ಹೇಮ ರತುನಾ
ಪಲ್ಲಕ್ಕಿ ಪೊಂಬಟ್ಟಿಮಲ್ಲರು ಕಾಲಾಳು
ಸೊಲ್ಲು ಪೇಳುವ ಭಟರು ಚಲ್ಲಕಂಗಳ ಚಲುವ
ಮಲ್ಲಿಗೆ ಮುಡಿಯುವರು ಖುಲ್ಲರ ಬಡಿದ ಪ್ರತಿ
ಯಿಲ್ಲದಾಯುಧ ನಾನಾ ಉಳ್ಳ ದ್ರವ್ಯ ಬಳಗೆ
ದಲ್ಲಿ ದ್ರುಪದರಾಯಾ ನಿಲ್ಲಾದೆ ಐವರಿಗೆ
ಸಲ್ಲಿಸಿ ಬೀಳ್ಕೊಡಲು ನಲ್ಲಳ ಕೊಡಿಕೊಂ
ಡಲ್ಲಿಂದ ಗಜಪುರದಲ್ಲಿ ಬಂದು ತಾ
ವೆಲ್ಲರು ಸುಖ ಬಡೆ ಮಲ್ಲರ ಬಲರೆದೆ
ದಲ್ಲಣ ವಿಜಯ ವಿಠ್ಠಲ ದಯದಿಂದ ಎಳ್ಳನಿತಳುಕದೆ ೩

## ಝುಂಪೆತಾಳ

ದುರುಳರು ಪಾಂಡವರ ಪರಮ ಸೌಖ್ಯ[ವ]ನೋಡಿ
ಧರಿಸಲಾರದೆ ಕುಹಕ ಚರಿತೆಯನು ನೆನೆದು ಸೋ
ದರ ಮಾವ ಶಕುನಿಯಿಂದ ಬೆರಸಿ ಯಮತನುಜನ್ನ
ಕರಿಸಿ ಪಣವನು ಮಾಡಿ ಸರಸರನೆ ಪಗಡಿಯನು
ಹಿರಿದಾಗಿ ವಂಚಿಸಿ ದುರ್ಯೋಧನನು ಹಿಂದೆ
ಅರಸುಯಾಗದಾ ಭಂಗ ಸ್ಮರಿಸಿಕೊಳ್ಳುತ ಲೆತ್ತ
ವಿರಚಿಸಿ ಹಾಕಿ ನಿಂದಿರದೆ ಸೋಲಿಸಿ ಯುಧಿ
ಷ್ಠರನ ಹರಿಗೊಂಡವರಾ ತುರಗಾದಿ ಸಂಪತ್ತು
ಭರದಿಂದ ಶೆಳೆದೆಗದು ಪರಾಭವೈದಿಸಿ

ತರಿಸಿ ದ್ರೌಪದಿಯ ಎಳೆತರಿಸಿ ಸಭೆಯೊಳಗೆ ಅಂ
ಬರವನ್ನು ಸುಲಿಯಲೀ ಹರಿಯೇ ದ್ವಾರಕಾಪುರದ
ಅರಸೇ ಪಾಲಿಪುದೆಂದು ಮೊರೆಯಿಡಲು ಅಕ್ಷಯ
ಕರುಣದಿಂದಲಿ ಈಯೇ ಪರಿಪರಿ ವಸನಗಳು
ಧರೆಮೇಲೆ ಸುಮೇರುಗಿರಿಯಂತೆ ಕಾಣಿಸಲು
ಅರಿದಾಗಿ ಸಕಲ ಸುಜನರ ಪೊಗಳಿ ಮೈಮುರಿಯೆ
ಕುರುಹು ಇಡುವನಾರು ಸಿರಿಪತಿಯ ಲೀಲೆಗೆ
ವರವೃಕೋದರರು ಅಬ್ಬರಿಸೀ ಬೊಬ್ಬಿರಿದರೀ
ಕುರುಪತಿ ಮಿಕ್ಕಾದಾ ಅರಸುಗಳನಾ ರಣದಲಿ
ಒರಸದಲೆ ಬಿಡೆವೆಂದು ಗರಗರನೆ ಪಲ್ಲಡಿಯೆ
ತರಹರಿಸಲಾರದೆ ಕರೆದು ಪಾಂಚಾಲಿಯ
ತೆರೆದು ತೊಡೆಗಳಲ್ಲಿ ಕುಳ್ಳಿರು ಬಾ ಎಂದು ಮೂರ್ಖ
ಬಿರದು ನುಡಿಯಿಂದ ಉತ್ತರವಾಡಲಾಕ್ಷಣ
ಉರಗಾದಿಗಳಿಗೆಲ್ಲ ಪಿರಿಯಳೆನಿಸಿದ ದೇವಿ
ಕೆರಳಿದಳು ಎಲೋ, ನಿನ್ನ ಮರಣ ತೊಡೆತಗಳಿಂದ
ಬರಲೆಂದು ಶಾಪಿಸಿ ಮೊಗದಿರುಹಿ ಘುಡಿಘುಡಿಸಿದಳು
ತರುವಾಯ ಪಾಂಡವರು ತೆರಳಿದರು ಕಾನನಕೆ
ಪರಿಜನರಾಗ ಸಹಿತ ನಿಂದರು ಒಂದು ಸ್ಥಳದಲ್ಲಿ
ಪರಮ ಋಷಿಗಳು ತಮ್ಮ ಪುರೋಹಿತರೊಡನೆ ನಿತ್ಯ
ವರ ಅಕ್ಷಯ ಪಾತ್ರಿ ಹರಿಯಿತ್ತದಾರಿಂದ
ತರಿಸಿ ನಿರ್ಮಳ ಭೂಮಿಸುರರಿಗೆ ಉಣಿಸುತ್ತ
ಸುರಲೋಕಕ್ಕಿಂತಧಿಕ ಧರಿಗೆ ತೋರಿಸಿದರು
ಪರಿಣಾಮವೇನೀವಾ ವಿಜಯ ವಿಠ್ಠಲರೇಯನ
ನೆರೆನಂಬಿ ಹನ್ನೆರಡು ವರುಷ ವ್ರತವ ಧರಿಸಿದರು ೪

## ತ್ರಿವಿಡಿ ತಾಳ

ಗ್ರಾಸಗೋಸಗ ಅತ್ರಿ ಋಷಿಯ ನಂದನ ದೂ
ರ್ವಾಸ ಶಿಷ್ಯರ ಸಹಿತ ಬಂದು ಬೇಡೆ
ಆ ಸಮಯದಲಿ ಚಿಂತಿಸಿ ಪಾಂಡವರ ಸತಿ
ವಾಸುದೇವನೆ ಗತಿ ಎಂದು ಕರಿಯೇ
ಲೇಶವಾದರು ತಡಿಯದೇ ಬಂದು ಆ ಕ್ಷಣ
ಭಾಸಾದಿಂದೊಪ್ಪುವ ಪಾತ್ರಿಯೊಳಗೇ
ಮೀಸಲ ಬಂದು ಶಾಕದಳ ಕಲ್ಪಿಸಿ
ತಾ ಸವಿದು ಮುನಿಗೆ ತೃಪ್ತಿಯ ಬಡಿಸೀ
ಲೇಸು ಮಾಡಿ ರಂಗಾ ಭಕ್ತರಿಗೆ ವರವಿತ್ತು
ವಾಸಕ್ಕೆ ಪೋಗಲು ಇತ್ತಲಾದ ಚರಿತೆ
ಈಶನೊಡನೆ ಕಾದಿ ಪಾರ್ಥ ಭಕ್ತಿಲಿ ಒಲಿಸಿ
ಪಾಶುಪತಾಸ್ತ್ರವ ಪಡೆದು ಸ್ವರ್ಗಕ್ಕೆ ಪೋಗಿ
ಕ್ಲೇಶ ಬಡಿಸುವ ನಿವಾತಕವಚರ ಸದದು
ದೋಷವ ತೋರಿ ಊರ್ವಶಿಯ ಗೆದ್ದು
ದೇಶ ದೇಶಗಳ ತೀರ್ಥಯಾತ್ರಿಯ ಚರಿಸಿ
ವಾಸವಾಗಿ ಹಿಂದೆ ದ್ವಾರಿಕೆಯಲ್ಲಿ ಯತಿ
ವೇಷದಿಂದ ಪಾರ್ಥಾ ನಾಲ್ಕು ಮಾಸಾ
ಮೋಸ ಮಾಡಿ ಸುಭದ್ರೆಯಿಂದ ತಂದಾತಾ
ಸಾಸಿರಾಕ್ಷನ ಸುತಾ ಅಗ್ರಜರ ಬಲಗೊಂಡಾ
ದೋಷಿ ಸೈಂಧವನನ್ನು ಪಿಡಿದು ರಥಕೆ ಕಟ್ಟಿ
ಪಾಶವ ದ್ರೌಪದಿ ಪದದಿಂದ ಬಿಡಿಸಿ ನಗುತ
ಘಾಸಿಯಾಗಿ ಚಿತ್ರರಥನ ಕೈ ಸೇರಿದಾ
ಆ ಸುಯೋಧನ ಕರ್ನಾದಿಗಳ ಕಾಯ್ದು

ವಾಸಿಯಿಂದಲಿ ಧರ್ಮನಂದನ ತಿರುಗಿದ
ಕಾಶಿ ರಾಮೇಶ್ವರ ಮಿಕ್ಕ ಯಾತ್ರೀ
ಏಸೇಸು ಬಗೆಯಿಂದ ಮಾಡಿ ಮುನಿಗಳ ಕೂಡ
ರಾಸಿ ಪುಣ್ಯವನು ಗಳಿಸಿಕೊಂಡೂ
ದೋಷತಟ್ಟಿದ ನಹುಷನೃಪನ ಶಾಪವ ಕಳೆದು
ದ್ವೇಷ ತಾಳಿದ ವಿಹಂಗಮನ ಒಡಂಬಡಿಸಿ
ರೋಷದಿಂದಲಿ ಭೀಮ ಮಣಿಮಂತನ ಕೊಂದು
ಸುಸೌಗಂಧಿ ಪುಷ್ಪ ಸತಿಗೆ ಇತ್ತಾ
ಈಸುಬಗೆ ಧರ್ಮಾವೃತ ವೃತಂಗಳು ವೇದ
ವ್ಯಾಸನಿಂದಲಿ ತಿಳಿದು ರಹಸ್ಯದಲ್ಲಿ
ಶ್ರೀಶನ ಕೃಪೆಯಿಂದ ಸೈರಂಧ್ರಿ ಸಹಿತ ಮ
ತ್ಸ್ಯೇಶನ ಪುರದಲ್ಲಿ ಕಾಲಕಳೆದೂ
ಭೀಷಣನಾಗಿದ್ದ ಕೀಚಕನ್ನ ನೆಲಕೆ
ಬೀಸಿ ಬಿಸುಟು ಭೀಮಾ ಮೆರದ ಕೀರ್ತಿಯನು
ದ್ವೇಷವ ತಾಳಿ ದುರ್ಯೋಧನ ಕರ್ಣ
ದುಃಶಾಸನ ಒಂದಾಗಿ ಬಲವೇರಿಸೀ
ಭಾಷೆಗಳಾಡಿ ಗೋವಿಂಡು ತಿರುಹಲಾಗಿ
ಸುಶರ್ಮನ ಪಿಡಿದು ಮತ್ಸ್ಯನ್ನ ಬಿಡಿಸಿದರು
ವಾಸವಸುತ ಪೋಗಿ ಒಂದೇ ರಥದಲ್ಲಿ
ಭೀಷ್ಮದ್ರೋಣ ಕರ್ಣಾದ್ಯರ ವಂಚಿಸಿ
ಭೂಷಣವೆಬ್ಬಿಸಿ ಗೋಗ್ರಹಣದಲ್ಲಿ ವೀರ
ವೇಷವ ತೊಟ್ಟು ತಟ ಮಾಡದೇ
ಘೋಶಬ್ದ ಆಕಾಶದಲ್ಲಿ ಪುಟ್ಟಿ ಆಕಳ ಶರೆ
ಹಾಸಮೊಗದಲ್ಲಿ ಪಾರ್ಥಾ ಬಿಡಿಸಿ ತಂದೂ
ದೇಶದೊಳಗೆ ಪ್ರ[ಕ]ಟರಾಗಿ ರಾಯ ಸಿಂ

## ಝಂಪೆ ತಾಳ

ತ್ರಿದಶ, ಗಂಗೆಯ ಸೂನು, ಕಳಸಸಂಭವ, ಶಕುನಿ
ಅಧಟಕರ್ನನ ಸುಬಲಾ ಕರ್ನತನಯಾ
ಮದಗರ್ವ ದುಃಶಾಸನಾ ಗೌತಮ ಅಶ್ವತ್ಥಾಮಾ
ಕದನಕರ್ಕಶ ಶಲ್ಯಾ ಕೃತವರ್ಮ ಜಯದ್ರಥ
ಚದುರ ಭೂರಿ ಶ್ರವನು ಭೂಮಿಜ ತನುಜಾ
ಯದುಕುಲರ ಶಿಶು ಪಾಲ ರುಕುಮ ನಂದನರು
ಹದುಳ ಬಯಸುವ ಲಕ್ಷಣಾದಿ ನೃಪಕುವರರು
ಒದಗಿ ಕಾಂಭೋಜ ವಿಕರ್ನ ಶ್ರುತಾಯುಧಾ
ಮುದದಿಂದ ಸಮಸಪ್ತಕರು ಸುಕರ್ಮನು ಕಾಲಾ
ಕೆದರುವಂಥ ಕ್ಷೇಮ ಧೂರ್ತ ದೇವದತ್ತಾ
ವಿಧುದತ್ತ ಬಾಲ್ಹೀಕ ಬರ್ಬರ ಪ್ರಚಂಡ
ಅಧಮದುರ್ಯೋಧನನ ಅವನ ಪೊಡಹುಟ್ಟಿದ
ಮದಡ ಜನರು ನಾನಾ ದೇಶ ದೇಶ ದಲಿಂದ
ಅಧಿಪತಿಗಳು ನೆರೆದಾಗಲೇ ಬಂದೂ
ಯದರವಡಿ ನಿಂದದು ಪ್ರತಿಭಟರು ಒಂದಾಗಿ
ಯುಧಿಷ್ಠರ ಭೀಮ ಫಲ್ಗುಣ ನಕುಲ ಸಹದೇವ
ಯುಧಾಮನ್ಯು ಯುಯುತ್ಸು ದ್ರುಪದರಾಯ ಮತ್ಸ್ಯ
ಎದೆ ಶೂಲ ರಿಪುಗಳಿಗೆ ಅಭಿಮಾನ್ಯ ದ್ರುಪದಸುತ
ತ್ರಿದಶರಿಪು ಘಟೋತ್ಕಚ ಶ್ರುತಂಜಯನು ಸಾತ್ಯಕಿ
ಮೊದಲಾದ ಅರಸುಗಳು ಕೂಡಿದರು ಎರಡು ಬಲ
ಹದಿನೆಂಟು ಅಕ್ಷೋಣಿ ಕುರುಕ್ಷೇತ್ರದಲಿ ಮೆರಿಯೇ
ಅದರೊಳಗೆ ಕೃಷ್ಣ ಸಾರಥಿಯಾದ ಫಲ್ಗುಣಗೆ
ವಿದುರ ಸಂಜಯರು ಹಸ್ತಿನಾಪುರದಲ್ಲಿ ನಿಲ್ಲೆ
ಮದನಾರಿಪಿತ ನಮ್ಮ ವಿಜಯ ವಿಠ್ಠಲ ಹಲಾ
ಯುಧನ ಯಾತ್ರಿಗೆ ಕಳುಹಿದಾ ಕಪಟ ದಾರಿ ೭

## ಮಟ್ಟತಾಳ

ಶೃಂಗಾರವಾದ ಕುರುಜಾಂಗುಲಿ ಶೋಧಿಸೆ
ಗಂಗಜಗೆ ಸಮರಂಗದ ಅಭಿಷೇ
ಕಂಗಳು ಮಾಡೆ ಅರಸುಗಳು ತಂದು ರತು
ನಂಗಳು ಇಟ್ಟು ಹಸ್ತಂಗಳು ಮುಗಿದು ಪಾ
ದಂಗಳೆಗರಗಿ ಸ್ತೋತ್ರಂಗಳು ಗೈಯಲೂ
ಅಂಗಜಾಸ್ತ್ರವ ಬಲು ಭಂಗ ಮಾಡಿದ ಶೂರ
ಸಂಗರದೊಳು ಶ್ರೀ ರಂಗನ್ನ ಕೈಯ್ಯರ
ಥಾಂಗ ಪಿಡಿಪೆನೆಂಬ ಅಂಗ ದುತ್ಸಹದಲ್ಲಿ
ಹಿಂಗದೆ ಪಾಂಡವರ ಕೆಂಗಿಡಿದೆ ಮಾ
ತಂಗ ತುರಂಗ ತೇರುಗಳ ಮಹರಥಿ
ಕಂಗಳ ಭಟರ ದಿಕ್ಕಂಗಳ ಪೋಗಿಸಿ ಪ್ಲ
ವಂಗ ಧ್ವಜನ ಶೌರ್ಯ ಭಂಗಬಡಿಸಿ ಗಗ
ನಂಗಣಾಲಿಪ್ಪವರ ಕಂಗಳಿಗೆ ಬೆಡಗಂಗಳಾ
ಕೆಂಗೋಲಿನಲಿ ಮಂಗಳಾಂಗನ್ನ ಫಣಿಗೆ ಬಾ
ಣಂಗಳ ಜೋಡಿಸಿ ಸಂಗಡಲೇ ಎಚಿಯೇ
ಸಿಂಗ ನರಿಯ ಪೆಟ್ಟಿಂಗೆ ಸುಮ್ಮನಿದ್ದಂತೆ
ರಂಗಾ ಭಕ್ತನ ಛಲಂಗಳ ಗೆಲಬಿಟ್ಟೊ
ಇಂಗಿತಜ್ಞನು ರಥಾಂಗ ತುಡಕಿದಾ ಜ
ನಂಗಳಿಗೆ ಪ್ರತಿಜ್ಞೆ ಭಂಗವಾಯಿತೆಂಬಂತೆ
ಜಂಗಮ ಸ್ಥಾಣು ಸ್ಥಾವರಗಳೊಡಿಯನು
ಗಂಗಾ ಭವನ ಬಲಭಂಗ ಮಾಡುವೆನೆಂದು
ಸಂಗರದಲಿ ಎದುರಿಂಗೆ ಶಿಖಂಡಿ ಬಂದು
ಮುಂಗಡಿಯಲಿ ನೆರವಿಂಗೆ ತಂದು ನಿಲಿಸಿ
ಬಂಗಾರಂಬರ ನಮ್ಮ ವಿಜಯ ವಿಠ್ಠಲರೇಯಾ
ತಿಂಗಳ ಕುಲೋದ್ಭವರ ಅಂಗನೆನಿಸಿ ಕಾವಾ । ೮

## ತ್ರಿವಿಡಿ ತಾಳ

ಹತ್ತು ದಿವಸ ಕಾದಿ ಸರಳತಲ್ಪದ ಮೇಲೆ
ಮುತ್ತ್ಯಾಮಲಗಿ ಕೊಳಲು ಕುರುಪತಿ ಚಿಂತಿಸಿ
ಇತ್ತ ಕುಂಭಸಂಭವಗೆ ದಳನಾಯಕತನ
ಇತ್ತು ಸಂಗ್ರಾಮಕ್ಕೆ ಒಡಂಬಬಡಿಸೆ
ಚಿತ್ತದಲ್ಲಿ ತಿಳಿದು ಪರರಾಯನ ನಿನಗೆ
ಇತ್ತಿಪೆನೆಂದು ದ್ರೋಣನು ಭಾಷ್ಯವ ತೊಟ್ಟು
ಮತ್ತೆ ಚಕ್ರ ವ್ಯೂಹರಚಿಸಿ ಪಾರ್ಥನಸುತ
ಅತ್ತಲಟ್ಟಿದರು ಜನಕನ ಬಿಡಿಸೀ
ಮತ್ತೆ ಗಜವ ಏರಿ ಭಗದತ್ತ ಉರಳೀದಾ
ಕತ್ತಲೆಯೊಳು ಶೇನನ ಗೆದ್ದ(?) ಹೈಡಿಂಬಿಯಾ
ಪುತ್ರನ ನೆವದಿಂದ ದ್ರೋಣ ಕಾಯವ ಬಿಡೆ
ಕತ್ತರಿಸಿದ ದ್ರುಪದ ನಂದನ ರಣದಲ್ಲಿ
ಸತ್ತ ತಂದೆಯ ನೋಡಿ ಘುಡಿಘುಡಿಸಿ ಅಶ್ವತ್ಥಾಮ[ನ]
ತುತ್ತು ಮಾಡುವೆನೆಂದು ನಾರಯಣಾಸ್ತ್ರವ
ಕಿತ್ತಿಹೊಡೆಯಲುಗಿ ಭೀಮನಂಜದಿರಲು
ಚಿತ್ತಜಪಿತಬಾಣ ತಗ್ಗಿಸಿ ಕಾಯ್ದಾ
ನೆತ್ತಿ ಬಾಗಿಸಿಕೊಂಡು ಗುರು ಸುತ ತಿರುಗಲು
ಹತ್ತರ್ಧ ದಿವಸ ಕಾಳಗವಾಯಿತು
ಮಿತ್ರನಂದನಿಗೆ ಕುರುರಾಯ ಪಟ್ಟವಕಟ್ಟಿ
ಹತ್ತಿತು ಬವರಾ ಪಾಂಡವರ ಸೈನಿಕದಲ್ಲಿ
ಸುತ್ತಲವರ ಹೊಡೆದು ಧರ್ಮಜನ ದೇಹಕ್ಕೆ
ಮೆತ್ತಿಸಿದನು ಕರ್ನ ಬಾಣಾ ಬೆಂಬಿಡದಲೆ
ತೆತ್ತಿಗರ ಕೂಡಾ ರಾಯಾ ತಿರುಗಿ ಪೋಗಿ
ಮತ್ತೆ ಫಲ್ಗುಣ ಬಂದು ಉಪಚರಿಸೆ *

೬೬

## ಧ್ರುವ ತಾಳ

ಭೂತ ಸೋಕಿತು ಕಾಣೋ ಯಾತರ ವರ್ನಾವೊ
ಮಾತು ಲಾಲಿಸೆ ವಿಪರೀತವೆನಿಸುತಿದೆ
ಜಾತಿ ಮತ್ತಾವದೊ ಜಾತವೆಂಬೊದೆ ಇಲ್ಲಾ
ಗಾತುರ ನೋಡಿದರೆ ಭೀತಿ ನಿರ್ಭೀತಿ ಬಪ್ಪದು
ಶಾತಕುಂಭದವನ ಜಾತ ಭವಾಂಡದ ಸ
ಪೂತಾವರಣ ಅವ್ಯಾಕೃತ ಗಗನ ಸಮೇತ ತೊಲಗದೆ
ವ್ಯಾಪುತವಾಗಿವೆ ಇದರ ಭೀತಿಗೆ ಬ್ರಹ್ಮಾದ್ಯರು
ಧಾತುಕೊಡುತಲಿರೆ ಭೂತಳದೊಳಗುಳ್ಳ
ರಾತಿ ಆರಾತಿಗಳಿಗೆ ದ್ವೈತ ಅದ್ವೈತವೆಂದು
ತಾ ತಿಳುಪೀರ್ವಾರೊಳು ಪಾತಕಕೊಬ್ಬನ ಮು
ಕುತಿಗೆ ಒಬ್ಬನ ಈ ರೀತಿಯಲ್ಲಿ ಕಳುಹಿ
ಪ್ರೀತನೆನಿಸುವದು ಚೇತನ ಅಚೇತನ
ವಾತದೊಳಗೆ ಮಹದ್ಭೂತವಾಗಿಪ್ಪ ವಿಖ್ಯಾತ ಭೂತ ಕಾಣೋ
ಜ್ಯೋತಿ ಸ್ವರೂಪ ನಮ್ಮ ವಿಜಯ ವಿಠ್ಠಲ ಸರ್ವ
ಭೂತರ ಮಧ್ಯದಲಿ ಭೂತಿ ಉಳ್ಳದು ಎನ್ನು ೧

## ಮಟ್ಟತಾಳ

ಶಿರನಯನ ಕರ್ನ ವರ ನಾಶಿಕ ವದನ
ಕರತೋಳು ಭುಜ ಕಂಠ, ಉರ ಉದರ ನಾಭಿ
ಶಿರಸ ಕಟಿ ಊರು ಮೆರೆವ ಜಾನುಜಂಘ
ಚರಣ ಬೆರಳುಗಳು ಮಿರಗುವಾಭರಣ ಸ

ಧ್ಭರಿತ ಜ್ಞಾನಾನಂದ ಸುಂದರ ಶಾಮವರ್ನಾ
ಪರಿಪೂರ್ಣ ಮಹಿಮ ಪರಕೆ ಪರಾತ್ಪರ
ಸರಿ ಸರಿ ಬಂದಂತೆ ನಿರೀಕ್ಷಿಸಲು ಇದರ
ಕುರುಹು ಕಂಡವರಾರು ಪರೋಕ್ಷದಲ್ಲಿ ಕೇಳಿ
ಚರ ಮನಕೆ ದೂರ ಅ
ಪರೋಕ್ಷದಲ್ಲಿ ಸ್ತುತಿಸಿದರೆ ಧ್ಯಾನಕ್ಕೆ ದೂರ
ಪರಿ ಪರಿ ನೋಡಿದರೆ ಪರಿಮಿತವಾದ ಸು
ಚ್ಚರಿತ ನಿರ್ಮಳ ಕಾಯ ಪರಿ ಪರಿಯಲ್ಲಿವೆ
ಸುರರ ಮಸ್ತಕ ಮಣಿ ವಿಜಯ ವಿಠ್ಠಲನೆಂಬೊ
ಗರುವ ಭೂತಕೆ ಎಲ್ಲಿ ಸರಿಗಾಣೆ ಜಗದೊಳು ೨

## ತ್ರಿವಿಡಿ ತಾಳ

ಏಕೋವಿಷ್ಣು ಮಹದ್ಭೂತನೆಂಬೊ ಭೂತ
ಸೋಕಿದ ಮನಜನ ಭಾಗ್ಯಕ್ಕೆ ಕಡಿಯಿಲ್ಲಾ
ಲೋಕದೊಳಗುಳ್ಳ ಭೂತ ಪ್ರೇತದ ಗಂಡಾ
ತಾಕ ಬಾರದಿದು ತಾಕಿದರೇ ಬಿಡದು
ಆಕಾರ ನೋಡಿದರೆ ಆರಿಗೆ ವಶವಲ್ಲಾ
ಆಕಾಶಕೆ ನೂರ್ಮಡಿ ಒಂದೇ ಎನಿಸುತಿದೆ
ನಾಕಾದಿ ಜನರಿಗೆ ಮೀರಿದ ಭೂತಾ ಅ
ನೇಕ ಕೈ ಕಾಲು ಕಿವಿ ವದನದಲ್ಲಿಪ್ಪದು
ಲೌಕಿಕದಲಿ ನೋಡೆ ಲಕ್ಷಣೊಂದು ಪರಿ
ನಾ ಕಾಣೆ ನಾ ಕಾಣೆ ಭೂತದುಚ್ಚಾರಣೆ
ಕಾಕುಲಾತಿ ಇದಕೆ ಎಳ್ಳಿನಿತು ಇಲ್ಲಾ
ತಾ ಕೊಡುವದು ಹೊಡಿಸಿಕೊಂಡವರಿಗೆ ಪುರುಷಾರ್ಥ
ಪ್ರಾಕೃತದೊಳಗಿದ್ದದಲಿ ಈ ಭೂತ ಬೇರೆ
ಶೋಕ ಕಳೆವದು ಸಾರಿದವರಿಗೆ ಪುಣ್ಯಾ

ಶ್ಲೋಕ ಭೂತ ವಿಜಯ ವಿಠ್ಠಲ ಇಂದೆ
ಏಕಾರಣವಾದರೂ ಸಾಕದು ಬಿಡದು ೩

ಅಟ್ಟತಾಳ

ಮಂತ್ರಕೆ ಹಣಿಯದು ಯಂತ್ರಕೆ ಹಣಿಯದು
ಎಂಥೆಂಥ ದಿಗ್ಬಂಧ ಅಂತಂತೆ ಮಾಳ್ಪುದು
ಪಂಥವಾಡಿದವರ ತಂತುಗೆಡಿಸುವುದು
ಸಂತತ ಸಂತರ ಅಂತರಂಗದೊಳಿದ್ದು
ಚಿಂತೆಗೆ ಇಕ್ಕಿ ಏಕಾಂತಕ್ಕೆ ಎಳೆವುದು
ಭ್ರಾಂತಿಯಗೊಳಿಸಿ ನಿಶ್ಚಿಂತನ ಮಾಡೋದು
ದಾಂತ ಭೂತವಿದು ಶಾಂತ ಭೂತದು
ಅಂತಕನಾಳಿಗೆ ಅಂತಕನಾಗಿದೆ
ಪಿಂತೆ ಮುಂತೆ ಸರ್ವತಂತು ಬಲ್ಲದು ಕಾಣೊ
ಹೊಂತಕಾರಿ ಇದರಂತದ ಸಂದಿಲಿ
ನಿಂತೀಗ ಮುಕುತಿವಂತರು ಬೊಮ್ಮಾಂಡ
ಅಂತ ಗಾಣರು ತಾವೆಂತು ಎಣಿಸಲು
ಎಂಥ ಭೂತವಿದು ಜಂತುಗಳಿಗೆ ಒಂದು
ತಂತಿಯನ್ನೆ ಹೂಡಿ ಗ್ರಂಥಿಯ ಬಿಗಿದು ಆ
ದ್ಯಂತ ಕಾಲದಲ್ಲಿ ಸಂತಿಗೆ ಬಂದವರಂತೆ ಕೂಡಲಿಟ್ಟು
ತಂತಿಯ ಬಗಿದಾಡುವಂತೆ ಮಹಾಭೂತ
ನಿಂತಲ್ಲಿ ನಿಲ್ಲದು ಚಿಂತಿಗೆ ಸಿಗದು
ಪಂಥಗಾರರರಸ ವಿಜಯ ವಿಠ್ಠಲ ಭೂತ
ಚಿಂತಾಮಣಿಯೋ ನೆನೆವರ ಅಂತರಂಗದಲ್ಲಿ ೪

## ಆದಿತಾಳ

ಹೊಡೆಯೆ ಈ ಭೂತ ಬಿಡದು ಎಂದೆಂದಿಗೆ
ಕೆಡಹಲಾಹದು ಭವದ ಮಡುವಿನೊಳು ನಮ್ಮನ್ನು
ಒಡನೆ ತಿರುಗುವದು ಒಡಲಿಗೆ ಬೇಡದು
ತಡಿಯದೆ ನಾಮಾಮೃತ ಕುಡಿಸುವುದೊಲಿದು
ಅಡಿ ಬಂದು ತೊಲಗದೆ ಹಿಡಕೊಂಡು ಇಪ್ಪದು
ಎಡೆಗಿಡಿಪ ಭೂತಕ್ಕೆ ಘುಡಿಸಿ ಹುಂಕರಿಪದು
ತೊಡೆ ಕಾಲು ಮತ್ತೊಂದರ ತೊಡಕಗೊಡದೆ ಬೆನ್ನು
ಬಿಡದೆ ತನ್ನ ಮನಿಯ ವಡಿವೆಂದು ಕಾಯುವುದು
ನಡೆ ನುಡಿ ತಪ್ಪಿದರು ಬಡಿಬೀಸಿ ಬೀಸಾಟದೆ
ಕೊಡುವುದು ಅಭಯದವರೊಡೆ ಪೋಗಲೀಸಾದು
ಕಡು ದಯಾನಿಧಿ ಭೂತ ಪೊಡವಿಯೊಳಿದು ಕಾಣೊ
ಉಡಲುಂಟು ಉಣಲುಂಟು ಇಡಲುಂಟು ತೊಡಲುಂಟು
ಬಿಡದಿರಿ ಬಿಡದಿರಿ ಕೆಡದಿರಿ ಕೆಡದಿರಿ
ಸಡಿಲಿದ ಮ್ಯಾಲದರ ಪಿಡಿಯಲೊಶವಲ್ಲ
ದೃಢಮನವ ಮಾಡಿ ಸಂಗಡಲೆ ಕೈವಲ್ಯವ
ಕೊಡುವುದು ತಡೆಯದಲೆ ಮೃಡಾದಿಗಳಿಗೆ
ಬಡವ ಬಲ್ಲಿದ ನೆನದೆ ಕಡೆ ಮಾಡುವುದು ಒಮ್ಮೆ
ನುಡಿದರೆ ವೇಗದಿಂದ ಒಡಲೊಳಗೆ ಪೊಂದಿ
ಕಡಲ ಶಯನ ನಮ್ಮ ವಿಜಯ ವಿಠ್ಠಲಭೂತ
ಬಿಡಿಯದಿದ್ದರೆ ದುಃಖ ಪಡಬೇಕು ನಿತ್ಯದಲ್ಲಿ ೫

## ಜತೆ

ಭೂತ ಸೋಕಿದವಗೆ ದೂಷಣ ಭೂಷಣವೇನು
ವಾತವಂದಿತ ವಿಜಯ ವಿಠ್ಠಲ ಬಲ್ಲದೇ ಸರಿ ೬

## ೬೭

## ಧ್ರುವತಾಳ

ಭೌತಿಕಾತ್ಮಕ ದೇಹ ಬಹು ಜನ್ಮ ಕರ್ಮದಿಂದ ।
ಭೂತಳದೊಳು ಬಂದ ಸ್ಥಿತಿಯ ನೋಡು ।
ಚಾತುರ್ಭಾಗ ಪ್ರಥಿವಿ ತ್ರಿಭಾಗವಾರಿ ಬಂದು ।
ಜ್ಯೋತಿರ್ಭಾಗದಿಂದ ಸುತ್ತುತಿದಕೊ ।
ಧಾತು ಸಪ್ತಗಳುಂಟು ಪಂಚಕೋಶಾತ್ಮಕ ಈ ।
ಗಾತುರ ಸಪ್ತೆರಡು ಸಾವಿರ ನಾಡಿ ।
ಮಾತ್ರಾ ಸ್ಪರ್ಶ ಕರ್ಮ ಜ್ಞಾನೇಂದ್ರಿಯ ಕಾಲ ಯೋಗ ।
ವಾತ ಗಗನ ವ್ಯಾಪ್ತಿಯಿಂದ ಸಿದ್ಧ ।
ಶ್ವೇತ ರಕುತ ನೀಲ ವರ್ಣಗುಣತ್ರಯ ।
ಶೀತೋಷ್ಣ ಸೂಕ್ಷ್ಮ ಸ್ಥೂಲ ಜ್ಞಾನಾ ಜ್ಞಾನಾ ।
ತಾತ್ವಿಕ ಮೊದಲಾದ ದೇವತೆಗಳಿಪ್ಪರು ।
ಸಾತ್ವಿಕ ರಾಜಸ ತಾಮಸ ದೇಹದಿ ।
ಪೂತುರೆ ಒಂದೊಂದು ರೂಪಾಂತರ ಆ ।
ಧ್ಯಾತುಮ ಅಧಿದೈವ ಅಧಿ ಭೌತಿಕ ।
ಖ್ಯಾತರಾಗಿ ಒಂದಂಗವ ಧರಿಸಿ ಪ್ರ ।
ಜ್ಯೋತಿಯಂತ ಪೊಳೆವುತ ತ್ರಿಸ್ಥಾನದಿ ।
ಆತುಮ ಕರಣ ಭೂತ ಪ್ರವೇಶಿಸಿ ಕೊಂಡು ।
ವ್ರಾತ ಕರ್ಮಗಳೆಲ್ಲ ಮಾಡಿಸುವರೊ ।
ಧಾತ ವಾತರೊಂದಾಗಿ ರುದ್ರಗೆ ರುದ್ರ ಪುರು ।
ಹೂತ ಈ ಕ್ರಮದಿಂದ ಗ್ರಹಿಸು ಗುಣಿಸು ।
ಭೂತಾದಿ ಹತ್ತೊಂಭತ್ತು ತತ್ವಂಗಳು ವಿ ।

ಜಾತಿ ಪೆಸರಿನಲ್ಲಿ ಕರೆಸುತಿವಕೋ ।
ಪ್ರಾತಃ ಕಾಲಾದಿವಿಡಿದು ದಿನಾಂತ ಕಾಲಕ್ಕೆ ।
ಈ ತೆರದಲಿ ತಿಳಿ ನಾಡಿಯೊಳಗೆ ।
ಶ್ರೌತ ನಿರ್ಣಯದಿಂದ ನಿಶ್ಚಯ ಮಾಡಿ ನಿ ।
ರ್ಭೀತನಾಗೆಲೊ ಮನುಜಾ ಬದ್ಧದಿಂದ ।
ತಾತ ತುಂಗ ಮಹಿಮ ವಿಜಯ ವಿಠ್ಠಲರೇಯ ।
ಪ್ರೀತನಾಗುವ ಸತತ ಇನಿತು ಕೊಂಡಾಡಲು ೧

## ಮಟ್ಟತಾಳ

ಏಕೋತ್ತರ ಶತನಾಡಿಗಳು ಮುಖ್ಯ ।
ಲೋಕಾಂತರದ್ವಯಕೆ ಪೋಪ ಪೋಗಿ ಬರುವ ।
ಸಾಕಾರ (ಸೌಕರ್ಯ) ಮಾರ್ಗ ಸಿದ್ಧವಾಗಿದೆ ನೋಡು ।
ಈ ಕಾಯದೊಳಗೆ ಪಂಚ ಪ್ರಭೇದ ವಿ ।
ವೇಕ ಮತಿಗಳಿಗೆ ತ್ರಿವಿಧ ತೋರುತಲಿದೆ ।
ಏಕ ದ್ವಿತೀಯ ತೃತೀಯ ನಾಲ್ಕು ತತ್ವಾತ್ಮಕ ನಾಡಿಗಳೆನ್ನಿ ।
ವಾಕು ಮೊದಲು ಮಾಡಿ ಇಂದ್ರಿಯಂಗಳಿಗೆ ।
ಆಕಾರವಾಗಿ ಪೊಳೆವುತಲಿವೆ ಭೌ ।
ತೀಕ ಸಂಬಂಧದ ತತ್ವ ಭಾಗ ಪ್ರಚುರ ।
ಪ್ರಾಕೃತ ಬಾಹ್ಯದಲಿ ಸುತ್ತಿಕೊಂಡಿದೆ ನಿತ್ಯ ।
ಶಾಖಾನಾಡಿಗಳನೇಕವಾಗಿವೆ ಬಲ ಎಡಭಾಗವೆ ವಿಡಿದು ।
ಶ್ರೀಕಾಂತ ನಮ್ಮ ವಿಜಯ ವಿಠ್ಠಲರೇಯ ।
ನಾಕ ಜನರೊಡನೆ ವಾಸವಾಗಿಯಿಪ್ಪ ೨

## ತ್ರಿವಿಡಿ ತಾಳ

ಪ್ರಧಾನ ನಾಡಿಗಳು ಐದು ಅದರ ಮುಸುಕಿ ।
ಭೇದನಾಡಿಗಳು ಸಪ್ತೆರಡು ಸಹಸ್ರ ।
ಆಧಾರವಾಗಿವೆ ಶರೀರದಲಿ ಮಹ ।

ಬೋಧಮಾನವರೆಲ್ಲ ಗ್ರಹಿಸಬೇಕು ।
ಈ ದೇಹದಲಿದ್ದ ನವಕೋಟಿ ಛಿದ್ರಗಳು ।
ಸಾದಿವಿಡಿದುವುಂಟು (?) ನಾಡಿಗಳಲ್ಲಿ ।
ಶೋಧಿಸಿ ನೋಡಿದರು ಒಂದೊಂದರಲಿ ರಂಧ್ರ ।
ಪಾದಾದಿ ವಿಡಿದು ಮಸ್ತಕ ತನಕ ।
ಐದೈವತ್ತು ಮ್ಯಾಲೆ ಭಾವಿಸು ಅಹರ್ನಿಶಿ ।
ಮೋದ ಧ್ಯಾನದಿಂದ ಗುಣಿಸು ಎಣಿಸು ।
ಹಾದಿಯಾಗುವುದು ಇಹದಲ್ಲಿ ಸಾಧನಕೆ ಪಾ ।
ಪೋದಧಿ ಬತ್ತುವುದು ತಡವಿಲ್ಲದೆ ।
ಸಾಧಾರಣವಲ್ಲ ಕಂಡವರಿಗೆ ಪ್ರಾಪ್ತಿ ।
ವೈದೀಕ ಬಲ್ಲವಗೆ ಬಲು ಸುಲಭವೊ ।
ಮೇಧ ನಾನಾದಾನ ವ್ರತ ಧರ್ಮ ಸರ್ವದ ।
ಮೇದಿನಿಯೊಳು ಬಲುನೆಸಗಲೇನು ।
ಸಾಧನವಾಗೊ (ಗ) ದು ಅಪರೋಕ್ಷಕೆ ಜ ।
ನ್ಮಾದಿಗೆ ಇದುಕಾರಣ ವಹದು ।
ಆದಿ ಮೂರುತಿ ನಮ್ಮ ವಿಜಯ ವಿಠ್ಠಲನ್ನ ಪ್ರ ।
ಸಾದವಾಗದೆ ಇದು ದೊರಕಬಲ್ಲದೆ ಮರುಳೆ ೩

## ಅಟ್ಟತಾಳ

ಮನಸು ತ್ರಿವಿಧವೆನ್ನು ಇದೆ ಅನಂತವಾಗಿ ।
ಅಣು ಮಾತ್ರವಾದರು ವ್ಯಾಪಿಸಿಕೊಂಡಿದೆ ಅಂಶ ಅಂಶಿಗಳಿಂದ ।
ಕ್ಷಣ ಪ್ರತಿಕ್ಷಣಕೆ ಪಾಪ ಪುಣ್ಯ ಮಾಳ್ಪದು ।
ದನುಜಾರಮರಲ್ಲಿ ಅಭಿಮಾನಿಗಳೆನ್ನು ।
ಅನಿತರೊಳಾಗೆ ಕೇಳಿ ತಿಳಿವ ಬಗೆಯುಂಟು ।
ಅನುಮಾನ ಇದಕಿಲ್ಲ ಅಂದಾಂತರ ಬಾಹ್ಯ ।

ಮನಸು ಸೂಕ್ಷ್ಮ ಸ್ಥೂಲ ಪೂರ್ವೋತ್ತರ ಕ್ರಮ ।
ಅನಿಮಿಷ ಗಣ ತಾರತಮ್ಯ ಸಾಂಶರು ।
ಕ್ಷಣ ಲವ ತೃಟಿ ಕಾಲ ಕಾಷ್ಠಾ ನಿಮಿಷ ಮೂಹೂರ್ತ ।
ದಿನ ವಸ್ತ ಮಾನವ ಪಕ್ಷಮಾಸ ಋತು ಅ ।
ಯನ ಸಂವತ್ಸರ ವತ್ಸರ ಇಳ ಪರಿ ।
ಅನುವತ್ಸರ ಅರುವತ್ತು ಪುರಾವರ್ತಿ ಜನನ ।
ಯೋನಿಗಳ ಭೇದ ತತ್ತದ್ದೇಹ ಗತಿ ।
ಇನಿತು ಯುಗ ಮಹಯುಗ ಮತ್ತೆ ಚತುರ್ದಶ ।
ಮನುದಿನ ಬ್ರಹ್ಮಾಯು ಪರಿಮಿತದ ಕಾಲ ।
ಘನವಾಗಿ ತಿಳಿವುದು ಕಲ್ಪಭೇದಗಳಿಂತು ।
ಎಣಿಸು ಈ ಪರಿಕರ್ಮ ಸಾಧನ ಮಾಡೋದು ।
ಜನುಮ ಜನುಮಾಂತರ ಸಂಸ್ಕಾರ ಸಂಸ್ಕಾರ ।
ಮನವೆ ಕಾರಣವೆನ್ನು ಇದರಲ್ಲಿಪ್ಪ ದು ।
ರ್ಜನ ಸಜ್ಜನರನುಗಾಲಾ ।
ಹೂಣಿಕೆ (ಹೊಣಿಕೆ) ಯಿಂದಲಿ ಮಾಡಿಸುವರು ಏನೆಂಬೆ ।
ತನುವಿನ ವಿಚಾರ ಬಹುಜನಕಾಶ್ರಯ ।
[ಅನಿ] ಮಿತ್ತ ಬಂಧು ಶ್ರೀ ವಿಜಯ ವಿಠ್ಠಲರೇಯ ।
ಕುಣಿಸಿ ನೋಡುವ ಸರ್ವ ಜೀವರೊಳಗೆ ಯಿದ್ದು ೪

## ಆದಿತಾಳ

ನಿತ್ಯ ಮೂರುತಿ ನಿತ್ಯ ಕೀರುತಿ ।
ನಿತ್ಯ ಹತ್ತವತಾರನೊ ನಿತ್ಯಾನಂತವತಾರನೊ ।
ನಿತ್ಯ ಶ್ರುತಿ ಗಿರಿ ಕ್ಷಿತಿ ದೈತ್ಯಪುತ್ರ ಉದ್ಧಾರನೊ ।
ನಿತ್ಯ ಬಲಿಯಾಗ ಭಿಕ್ಷಕನೊ ನಿತ್ಯನೃಪಕುಲ ರಾವಣ ಕಂಸ ।
ಪುತ್ರ ತ್ರಯ ದುಷ್ಟ ಸಂಹಾರನೊ ।

ನಿತ್ಯ ಭಕ್ತರ ಕಾವನೊ ನಿತ್ಯ ಸತ್ಯವತಿ ನಂದನ ।
ನಿತ್ಯ ಸಷ್ಟ್ಯಾದ್ಯಷ್ಟ ಕರ್ತ ।
ನಿತ್ಯ ಜ್ಞಾನಮಯ ಶರೀರ ನಿತ್ಯ ನವ ನೀತ ಚೋರ ।
ನಿತ್ಯ ಗೋಪಿ ಜನ ಜಾರ ।
ನಿತ್ಯ ಮಾತೃ ನಿತ್ಯ ಪಿತೃ ನಿತ್ಯ ಭ್ರಾತಾ ನಿತ್ಯ ಬಂಧು ।
ನಿತ್ಯ ಗುರುವೆ ನಿತ್ಯ ಸ್ವಾಮಿ ನಿತ್ಯನಿತ್ಯ ನಿತ್ಯನೆ ।
ನಿತ್ಯ ಮನೋಪಾದಾನದಿಂದ ।
ನಿತ್ಯ ವ್ಯಾಪಾರ ಮಾಡುವ ।
ನಿತ್ಯ ಪುಟ್ಟಿಸಿ ಬಡಿದಾಡಿಸುವ ।
ನಿತ್ಯ ಲೀಲಾವಿನೋದ ನಿತ್ಯ ನಿರ್ದೋಷ ಸ್ವತಂತ್ರ ।
ನಿತ್ಯ ಅಚಿಂತ್ಯಾದ್ಭುತ ।
ಸತ್ಯ ಸಂಕಲ್ಪ ವಿಜಯ ವಿಠಲ ।
ನಿತ್ಯ ಸರ್ವೇಶ ಸಾಕಾರ ೫

### ಜತೆ

ಚಿಂತಿಸು ಈ ಪರಿ ಮನದಲ್ಲಿ ಸೃಷ್ಟಿಯ ।
ಸಂತತ ವಿಜಯ ವಿಠಲ ಮಾಡುವನೆಂದು ೬

## ೬೮

### ಧ್ರುವತಾಳ

ಮಂದಮತಿ ಮನಸು ಮಂಗನಂತೆಯಾಗಿ
ಸಂದೇಹ ಬಿಡದಲೆ ಸಂಶಯದಲ್ಲೀ
ಮುಂದೆ ಉಳ್ಳಾವಸ್ತಾ ಎಡಹಿ ಮುಂಗಾಣದಂತೆ
ಅಂಧಕ ನಾನಾದೆ ಅಕಟಕಟಾ

ಹಿಂದಣ ಸಂಚಿತವೊ ಮುಂದೆ ಯಾಗುವಾಗಮವೊ
ಇಂದನುಭವಿಸುವ ಪ್ರಾರಬ್ದವೊ
ಒಂದೆ ಒಂದೆ ದೈವದಿಂದಾ ಬಿಂಬ ಮೂರುತಿ
ಇಂದು ಹೃದಯಾರವಿಂದದೊಳು
ಅಂದವಾಗಿರೆ ಮನ ಪೊಂದದಲೆ ಬರಿದೆ
ಸಂದರುಶನವಿಲ್ಲಾ ಇಲ್ಲಾವೆಂದೂ
ಕುಂದಿ ಬೆಂಡಾಗುವದು ಏನೆಂಬೆ ಎಲೊ ಜೀಯ
ಬಂದ ವ್ಯಾಕುಲ ಇನ್ನು ತೊಲಗದಲ್ಲಾ
ಪೊಂದಿದೆನು ಶಶಿ ಬಿಂದು ವಿಜಯ ವಿಠ್ಠಲ
ವಂದಿಸುವೆನು ನಿನ್ನ ದ್ವಂದ್ವಾಬ್ಜಪದಕೆ ೧

## ಮಟ್ಟತಾಳ

ಅಂತರಂಗದಲ್ಲಿ ಅಂತರಾತ್ಮಕ ನೀನು
ಸಂತತ ಪೊಳೆವುತ್ತ ನಿಂತು ಸೊಬಗಿನಿಂದ
ಸಂತೋಷದ ಮೂರ್ತಿವಂತನಾಗಿ ಇರಲು
ಕಾಂತ ವಿಜಯ ವಿಠ್ಠಲ ಚಿಂತೆ ಪೋಗದಲ್ಲೊ ೨

## ರೂಪಕ ತಾಳ

ಒಳಗೊಂದು ಮೂರುತಿ ನೆಲೆಯಾಗಿ ಇರಲಾಗಿ
ನೆಲೆಯನ್ನು ತಿಳಿಯದೆ ಕಲಿಮತ ಬಿಡದಲೆ
ಕೆಲಸಾರಿ ಬಲು ಹಾರಾ ಬಳಿಯಲ್ಲಿ ಇಪ್ಪವಾ
ಚಲ ಮೂರ್ತಿಗಳಿಗಾಗಿ ಬಳಲಿ ಬಳಲಿ ನಾನು
ಅಲಸೀದೆ ಅನುಗಾಲ ಬೆಳಗುವಿಡಿಯ ಪೋಗಿ
ಕಳಕೆಳಗಾದಂತೆ ಅಳಲೀದೆನೊ ಅನು
ಕುಲ ವಿಜಯ ವಿಠ್ಠಲನೆ ಗಳದ ಸತ್ವ ಮೀರಿ

ಸಿಲಚೆಯ (?) ಪೊತ್ತಂತೆ ಇಳಿಯೊಳಗತಿ ಮೂರ್ಖ
ಕುಲಶಿರೋಮಣಿಯಾದೆ ೩

ಸಮೀಪದಲ್ಲಿದ್ದ ಸಡಗರದ ಚಲುವ
ಅಮೃತಾನ್ನದ ಎಡೆ ಆದರಣಿ ಇಲ್ಲದಲ್ಲಿ
ಸಮ್ಮತವಾಗಿರಲು ಕಾಲ ಕಾಲಕೆ ಸವಿದು
ಅಮೃತವ ಬೇಡದಲೆ ಬಲು ಅನಾದರದಲ್ಲಿ
ಹಮ್ಮು ತೊರಿಯದಲೇವೆ ದೂರಿದ್ದ ಎಂಜಲ
ವೊಮ್ಮುಸುರೆ ಎಡೆ ಬಯಿಸಿ ಬಯಿಸಿದಂತೆ
ಇಮ್ಮನ ನಾನಾಗಿ ಅಜ್ಞಾನದಲ್ಲಿನ್ನು
ಅಮೃತ ವಿಜಯ ವಿಠ್ಠಲ ವಿಶ್ವಮಾಯಕನೆ
ಹೆಮ್ಮೆಯಿಂದಲಿ ಬಾಳಿ ಗತಿರಹಿತನಾದೆ ೪

## ತ್ರಿವಿಡಿ ತಾಳ

ಆಕಾಲವಾಗಿ ಅರ್ಚನೆಗೊಂಬ ದೈವವು
ಸಕಾರವಾಗಿ ಸಂಪತ್ತು ಪಾಲಿಸುತ ರವಿ
ಯಾಕಾರದಂತೆ ರಂಜಿಸುತಾ ಮನಿಯೊಳಗಿರೆ
ಪ್ರಾಕಾರಾಶಿಲಿಗಳಿಗೆ ಕೈಯಾ ಮುಗಿದು ವರ
ವಾ ಕರುಣಿಸು ಎಂದು ಮಡೆ ಹೊರಳಿ ಪೂಜಿಸುವ
ವಿಕಾರ ಮನುಜಗೆ ಸಂಪ್ರೀತಿಯಾಗುವುದೇ
ಪ್ರಾಕಾರ ಕಲ್ಲುಗಳು ವರಕೊಡಬಲ್ಲವೆ
ಏಕಪಾದ ನಾಮ ವಿಜಯ ವಿಠ್ಠಲ ನಿನ್ನ
ವಾಕರಿಸೀ ಅನ್ಯರನ ಹಂಬಲಿಸುವೆನೋ ೫

### ಅಟ್ಟತಾಳ

ಬಿಂಬ ಮೂರುತಿಯ ಪರೋಕ್ಷವಾಗದೆ ಗತಿ
ಯೆಂಬದು ಸಲ್ಲಾದು ಎಲ್ಲರಿಗೆ
ಬಿಂಬನೆಂಬ ಪ್ರಾಜ್ಞನನುಭವ ತಿಳಿದು
ನಂಬುವಂತೆ ಮಾಡು ವಿಜಯ ವಿಠ್ಠಲರೇಯಾ ೬

### ಆದಿತಾಳ

ನಿತ್ಯನೈಮಿತ್ಯಗಳು ಆವಾವ ಕರ್ಮಗಳು
ಕೃತಾರ್ಥನಾಗಿ ಸಂಚರಿಸಿದರು
ನಿತ್ಯ ತನ್ನೊಳಗಿದ್ದ ಬಿಂಬಗೆ ಆವಾಹನಿಸಿ
ಭೃತ್ಯನು ನಾನು ಎಂದು ಪೂಜಿಸಿದಲೆ
ನಿತ್ಯಪದವಿ ಇಲ್ಲಾ ಶ್ರುತ್ಯರ್ಥದಲ್ಲಿ ಪೇಳೆ
ಅತ್ಯಂತದಲ್ಲಿ ಕೇಳಿ ಮೊರೆ ಬಿದ್ದನೊ
ಸತ್ಯಧರ್ಮ ಪರಾಕ್ರಮ ವಿಜಯ ವಿಠ್ಠಲರೇಯಾ
ಮಿಥ್ಯ ಸಂಗವನೀಯದೆ ಕೃತ ಕೃತ್ಯ ಎನ್ನ ಮಾಡೊ ೭

### ಜತೆ

ಅಂಗುಟ ಪರಿಮಿತಿಯಾಗಿ ಎನ್ನೊಳು ನಿಂದೂ
ಶ್ರಿಂಗಿಣಿ ವಿಜಯ ವಿಠ್ಠಲ ಎನ್ನ ಕರುಣಿಸೊ ೮

### ೬೯

### ಧ್ರುವತಾಳ

ಮನು ಮೂರ್ತಿ ಇಪ್ಪ ಮೂಲ ಸ್ಥಾನದಲ್ಲಿ ಬಂದು
ಮಿನುಗುವ ಕಂದವುಂಟು ಅದರಿಂದಲಿ

ಜನಿಸಿದ್ದ ನಾಳಾ ಗಗನಾದಲ್ಲಿಗೆ ಮುಟ್ಟು ವಾಗ್ಯೆ
ಎಣಿಸಿ ಹೃಷಿಕೇಶಾಂಗುಲಿಯ ಇಟ್ಟು
ಎಣಿಕೆ ಮಾಡಲಲ್ಲಿಗೆ ಅಷ್ಟದಳ ಪದುಮ
ಕನಕವರ್ಣದ ಕದಳಿಕುಸುಮದಂತೆ ಒಪ್ಪುತ್ತ
ಮೊನೆ ಅಧೋಮುಖವಾಗಿ ಚಂದ್ರ ಪ್ರಕಾಶದಂತೆ
ಘನ ಕೋಮಲ ಪೂರ್ಣ ವಿಶಾಲ ದಿಶ ದಶ
ವನ್ನು ಶೋಭಿಸುತಿಪ್ಪದು ನೋಳ್ಪರಕಂಗಳಿಗೆ
ಗುಣಿಸು ಕೇಸರಿಗಳ ಅನುಮಾನ ಮುನಿಯ ಲಕ್ಷಣ
ವೆನ್ನು ಸುತ್ತ ಕೆಂಜಲ್ಕ ಮಧ್ಯ ಕರ್ನಿಕೆ
ಅನಿಮಿಷರಲ್ಲಿ ವಾಲಗ ಅಷ್ಟಹಸ್ತ ನಾರಾ
ಯಣ ಶ್ರೀ ಭೂ ಸಹಿತ ಪ್ರಹರಿಯ ಮಾಡುವ
ಮನುಜಾದಿಗಳವಿಡಿದು ಶರ್ವ ಪರಿಯಂತ
ಕ್ಷಣ ಕ್ಷಣಕೆ ಒಂದೊಂದು ಬುದ್ಧಿಕೊಡುತ
ವನಜ ಕರ್ನಿಕೆ ಮೇಲೆ ಇನಶಶಿ ಪಾವಕ
ತ್ರಿಣಿ ಮಂಡಲವಕ್ಕು ತದುಪರಿಯು
ಅನುವಾಗಿ ಪ್ರವಳ ಸ್ಪಟಿಕಕದಕಂಭ ನೂರು
ಕನಕರಕ್ತ ಸಂಯುಕ್ತವಾದ
ಇನಕರನೇಕ ಸಂಕಾಶ ವಿಮಾನಸುತ್ತಾ
ಹಣಿದ ಚಿನ್ನದದಾಮಾ ವಿರಾಜಿಸೆ
ಗಣ ಗಣ ಘಂಟಿ ಗೆಜ್ಜೆ ನಾದ ಕಟ್ಟಿದ ಮು
ತ್ತಿನ ಗೊಂಚಲಗಳು ಮಕರ ತೋರಣಗಳು
ವಿನಯಾ ವಿಚಿತ್ರ ಧ್ವಜ ಪತಾಕೆ ಮೇಲು ಕಟ್ಟು
ಮಣಿಗಣದಿಂದ ಬಿಗಿದ ವಲಕುಗಳು
ಚಿಣಿ ಚಿಣಿಯಾಂಬರ ಜೋಡಿಸಿದ ಕೀಲು
ಕನಕ ಸಮ್ಮಯವಾದ ಕಳಸ ಪೊಳೆವುತಿರೆ

ಪ್ರಣವಾಕಾರ ವಿಮಾನ ಮಧ್ಯದಲ್ಲಿ
ಅನುದಿನ ವಿಚಿತ್ರ ವೈಚಿತ್ರಕವಾದ
ಗುಣರೂಪವುಳ್ಳ ಹರಿ ತ್ರಿಗುಣಾತೀತ
ಚಿನುಮಯ ಸರ್ವ ವಸ್ತುಗಳಿಂದ ಭಿನ್ನ ಮಹಾ
ಅಣು ಜ್ಯೋತಿರ್ಮಯವಾದ ಕಾಂತಿಯಿಂದ
ದಿನ ದಿನದಲಿ ಮೆರೆವ ವಿಜಯ ವಿಠಲರೇಯ
ಘನ ಮಹಿಮ ವಾಸವಾಗಿಪ್ಪ ಜಗದಪ್ಪಾ ೧

### ಮಟ್ಟತಾಳ

ತೇರಿನ ಮಧ್ಯದಲಿ ಚಾರುವಾದ ಜಗಲಿ
ಈರೆರಡು ಮೂಲೆ ತೋರುತಿದೆ ಕಲ್ಪತರುವೆ ಅದರ ಮೇಲೆ
ಸಾರ ರತುನ ಸಂಕೀರಣವಾದ ಶತನೂರು ಫಣವುಳ್ಳ
ವಾರಣದಾ ಪ್ರಭಾಪಾರ ಕಾಂತಿಗೆ ಬಲು
ಮೀರಿದ ಸಿಂಹಾಸನ ಹೀರಮಯವಾದ ಶೃಂಗಾರದ ಮಂಟಪ
ಶ್ರೀರಮಣ ನಮ್ಮ ವಿಜಯ ವಿಠಲರೇಯ
ಆರಾಧನೆಗೊಂಬ ಸಾರ ಹೃದಯದಿಂದ

### ರೂಪಕ ತಾಳ

ಮಲ್ಲಿಗೆ ಕುಂದ ಮಂದಾರ ಕೇತಕಿ ಮರುಗ
ಎಲ್ಲ ಪೂವಿನ ಅಲಂಕಾರವಿರೆ
ಅಲ್ಲಿ ಶ್ರೀ ಹರಿ ತನ್ನ ಮಡದೇರ ಒಡಗೂಡಿ
ಸಲ್ಲುವಾ ವಾರಿಜ ನೆಲಿಸಿದಲ್ಲಿ
ಸಲ್ಲಲಿತ ಮಕುಟ ಶ್ರೀ ವತ್ಸ ಕೌಸ್ತುಭ
ಜಲ್ಲಜಪುಷ್ಪ ಶ್ರೀ ಗಂಧ ತುಳಸಿಹಾರ

ಉಲ್ಲಾಸ ಕನಕಾಂಬರ ಕಟಿಸೂತ್ರ ಕುಂ
ಡಲ ಬ್ರಹ ಸೂತ್ರ ವೈಜಯಂತೆ ಮಾಲೆ
ಘುಲ್ಲು ಘುಲ್ಲುವೆಂಬ ಕಂಕಣ ಕಡಗ ನೂಪುರ
ಬೆಲ್ಲೆಗಾಣದ ಫಣೆಯಲ್ಲಿ ಮೃಗನಾಭಿ
ತಿಲ್ಲುಕ ಕೇಯೂರ ಭುಜಕೀರ್ತಿ ರಸಸುಲಿ
ಪಲ್ಲು ಕರ್ಪೂರ ಪರಿಮಳದಿಂದ ಎಸೆವ
ಮೆಲ್ಲುವ ತಾಂಬೂಲ ಸುಲಕ್ಷಣ ಪುರುಷ
ನಿಲ್ಲದೆ ಕೈವಲ್ಯ ಭಜಕರಿಗೆ ಪಾಲಿಸುವ
ಮ[ಲ್ಲ]ಮರ್ದನ ನಮ್ಮ ವಿಜಯ ವಿಠಲರೇಯ
ಸೋಲ್ಲಿನಿಂದಲಿ ತೃಪ್ತಿಬಡುವ ಕರಪಿಡಿವ ೩

## ಝಂಪೆತಾಳ

ವರದ ಅಭಯಹಸ್ತ ಶಂಖ ರಥಾಂಗ ಚ
ತುರ ಪ್ರಸನ್ನ ವದನ ಮಂಗಳ ಮನೋ
ಹರ ದಯಾ ಮೂರ್ತಿ ಮಂದಹಾಸ ಮುಖಾಂಬುಜ
ಧರ ಕಂಧರ ವಕ್ಷ ವಿಶಾಲೋನ್ನತ ಬಾಹು
ಸರಿಗಿ ನ್ಯಾವಳ ಕಂಠಿ ಮೇಲೆ ಬೆರಳುಂಗರ
ಪರಿ ಪರಿ ಅಲಂಕೃತವ ಧರಿಸಿ ನಿಂದು
ಹರಿ ಅಣಿಮಾದಿ ಅಷ್ಟೈಶ್ವರ್ಯ ಮೂರುತಿ
ಎರಡೆರಡು ನಾಲ್ಕು ಕರ್ತೃತ್ವವುಳ್ಳ
ಹರಿ ಪರಮ ಪುರುಷ ಪುರುಷೋತ್ತಮ
ಶರಣರಿಗೆ ಆ ಹರಿಯ ಚರಣ ಶರಣ
ಸರಸಿಜಭವ ಶಿವ ಇಂದ್ರಾದ್ಯರಣಿಯಾಗಿ
ನೆರದು ಅಂಜಲಿಯಿಂದ ಸ್ತುತಿಪರು
ಸುರಮುನಿ ನಾರದಾದಿಗಳು ಹಸ್ತವ ಮುಗಿದು

ಸ್ವರವೆತ್ತಿ ಗಾನವನು ನಲಿದು ಪಾಡೆ
ಭರದಿಂದ ಕುಣಿವ ಊರ್ವಶಿ ಮೇನಕಿ ರಂಭೆ
ಕರ ತಿರುಹಿ ಕುಣಿ ಕುಣಿದು ಕೊಂಡಾಡಲು
ಪರಮ ಹಂಸರು ಸನಕ ಯೋಗಿಗಳು ಎ
ದಿರಿಲಿ ನಿಂದು ಸೂತಮಾಗದ ಬಂಧಿಯೂ
ಇರದೆ ತಮ ತಮ್ಮ ಬಲ್ಲದನು ಗುಣದಿಂದ
ನಿರುಪಮನ ನಿರ್ಲಜ್ಜೆಯಿಂದಲಿ ಪೊಗಳೆ
ಸರುವಾಭರಣದಿಂದ ಉಭಯ ಪಾರ್ಶ್ವದಲಿ ಇ
ಬ್ಬರು ನಾರಿಯರು ಚಾಮರ ಡಾಳಿಸೆ
ಪರಮಾತ್ಮ ಭಕ್ತವತ್ಸಲ ವಿಜಯ ವಿಠಲನ
ನಿರುತ ಈ ಪರಿ ಧ್ಯಾನವ ಮಾಡಿರೋ ೬

## ತ್ರಿವಿಡಿ ತಾಳ

ಮೂಲನಾಭಿಯಿಂದ ಹೃದಯ ಪರಿಯಂತ
ನಾಳದವರ ಮೇಲೆ ಕಮಲ ಎಂಟು
ದಳಯುಕ್ತವಾಗಿ ಮಧ್ಯದಿ ಕರ್ನಿಕ
ಮೇಲು ತ್ರಿಮಂಡಲದಲ್ಲಿ ತೇರು
ಕೇಳಿ ತೇರಿನ ಮಧ್ಯ ಚಿತ್ರಮಂಟಪ ಪೂ
ಮೂಲೆಗಳಿಂದ ಶೋಭಿಸುತಿದಕೊ
ನಾಲ್ಕು ಮೂಲೆ ಜಗುಲಿ ಕಲ್ಪವೃಕ್ಷ ವಿ
ಶಾಲವಾ[ದ]ದರ ಕೆಳಗೆ ಸಿಂಹಾಸನ
ಕೀಲು ಮಣಿಗಳಿಂದ ಜಡಿತವಾಗಿದೆ ಅಲ್ಲಿ
ಶ್ರೀ ಲಕುಮಿ ಭೂರಿಂದ ಹರಿ ಕುಳಿತು
ವಾಲಗ ಕೊಳುತಿಪ್ಪ ಮುಕ್ತಾಮುಕ್ತರ ಕೈಯ್ಯ
ಲಾಲಿಸಿ ಸಹಸ್ರ ಫಣ ಸಂಯುಕ್ತಾ

ನೀಲ ಮೇಘ ಶ್ಯಾಮ ಅಂಗುಷ್ಟ ಮಾತ್ರ ಮೂರ್ತಿ
ವಾಲಯ ಸಮಾಧಿಯಲ್ಲಿ ಉಪ್ಪುವ
ಪೋಲುವರಿಲ್ಲ ಈತಗೆ ತ್ರಿಭುವನದೊಳು
ಬಾಲಾರ್ಕನಂತೆ ಪ್ರಕಾಶಿಸುವ
ಜಾಲಗಾರನಂತೆ ತನ್ನ ಮಾಯದೊಳು
ತ್ರಿಲೋಕವನು ಇಟ್ಟು ಸ್ತುತಿಸುವ
ಶೀಲ ಜನರಿಗೆ ಕೈಹಿಡಿಕಿಯಾಗಿಪ್ಪ
ಕಾಲನಂದದಲಿಪ್ಪ ದುಷ್ಟ ಜನರಿಗೆ ನಿ
ರ್ಮಲನು ಕಾಣೋ ತ್ರಿ ಬಗೆಯಿಂದಲಿ
ಆಳುವ ನಮ್ಮ ವಿಜಯ ವಿಠ್ಠಲ ಅನು
ಗಾಲ ಅನುಕೂಲ ಆಪನ್ನ ವೆಂದನ

## ರೂಪಕ ತಾಳ

ಹೃದಯಾಂಬರದಲ್ಲಿ ಅಧೋಮುಖವಾಗಿದ್ದ
ಪದುಮ ಎತ್ತುವುದೊಂದು ವಿಧವನ್ನು ಗ್ರಹಿಸಿ
ಮುದದಿಂದ ಪ್ರಾಣವನ್ನು ಉದರದಲ್ಲಿ ತುಂಬಿ
ಉದಯಾರ್ಕವೆಂಬೊ ಜ್ಞಾನದಲ್ಲಿ ಬೆಳಕು ಮಾಡಿ
ಅದರ ತರುವಾಯ ಒದಗಿ ಫಾಳಿಯ ಬೀಸಿ
ಪದುಮ ನಿಮ್ಮವಾಗಿದ್ದದನೆ ಸರಳಮಾಡಿ
ಸದಮಲ ಬಿಂಬನೆ ಅದೆ ಅವಸ್ಥಾ ಪ್ರೇರಕ
'ಹೃದಯಸ್ಥ ಹರೇರ್ಮೂರ್ತೇಃ ಜಿವೋಯತ್ಪ್ರತಿಬಿಂಬಕಾ
ಯದ್ವಸೆ ವರ್ತತೇ ಜೀವಃ ಸಾತು ಜೀವ ಕಳಾಸ್ಮೃತಃ'
ಇದೆ ಮಂತ್ರವನು ಧೇನಿಸಿ ಪದುಮನಾಭನ ದಿವ್ಯ
ಪದಗಳರ್ಚನಿಗೆ ನಂದದಲಿ ಮನಸುಮಾಡಿ

ಪದವಿ ಪ್ರದಾತ ಶ್ರೀ ವಿಜಯ ವಿಠಲರೇಯ
ನಿದರುಶನವಾಗುವ ಮದಗರ್ವ ನೀಗುವಾ ೬

## ಝಂಪೆ ತಾಳ

ನೋವಿಲ್ಲದೆ ಕಮಲವನ ವಿಕಸಿತವನು ಮಾಡಿ
ಆವ್ಹಾನಾಸನ ಅರ್ಘ್ಯ ಪಾದ್ಯ ಆಚಮನವ
ದೇವಗಂಗೆಯಲಿ ಮಜ್ಜನ ಸುವಸನ
ಪಾವಿತ್ರ ಉಭಯಾಚಮಾನ ಒಮ್ಮೊಮ್ಮೆ
ಶ್ರೀ ವಿಭುವಿಗೆ ಗಂಧ ಪುಷ್ಪದೀಪಧೂಪ
ನೈವೇದ್ಯ ಮತ್ತೆ ಉಪಸ್ಪರ್ಶ ತಾಂಬೂಲ ನಾ
ನಾ ವಿಧದ ಉಪಚಾರ ಪ್ರದಕ್ಷಿಣೆ ನಮಸ್ಕಾರ
ತವಕದಿಂದ ಸ್ತೋತ್ರ ತೈಲಾಜ್ಯವರ್ತಿಗಳ
ಹವಣಿಸಿ ಜ್ಯೋತಿ ಹಲವು ಮಂಗಳಾರ್ತಿ
ದೇವ ಮಾರುತಪಿತಗೆ ಎತ್ತಿ ನಿತ್ಯ ಸ್ಮರಿಸಿ
ಪಾವನನಾಗಿ ಜ್ಞಾನದಲಿ ನೋಡಿ
ಲಾವಣ್ಯ ವಿಗ್ರಹ ವಿಜಯ ವಿಠಲನ ಪಾದ
ತಾವರೆ ಹಿಡಿದು ಮೌಳಿತನಕ ನಿಲಿಸೋ ೭

ಶುದ್ಧ ಸೂಕ್ಷ್ಮ ನಿರ್ವಿಕಾರ ನಿರಂಜನ
ಅದ್ವೈತ ಮಹಿಮ ಶ್ರೀನಿವಾಸ ಅಪ್ರಮೇಯ
ಸಿದ್ಧಾ ಪ್ರಮೇಯ ಸಂಪೂರ್ಣ ಸಚ್ಚಿದಾನಂದಾತ್ಮಕ
ಉದ್ಧರಿಸು ಅನಿರುದ್ಧ ಕ್ಷೀರ ಸಮುದ್ರ ಶಯನ
ಆದಿ ಮದ್ಯಾಂತ ರಹಿತ ಅ
ಚ್ಛೇದ್ಯ ಅಭೇದ್ಯ ಜೀವ ಭಿನ್ನ ಭವರೋಗ
ವೈದ್ಯ ಚೈದ್ಯ ವಿನಾಶ ವಿಶ್ವಾಸ ಫಲದಾಯ

ಪದ್ಮ ಪದ್ಮಜ ರುದ್ರ ತ್ರಿದಶ್ಯಾದರು ಪ್ರ
ಬುದ್ಧರ ಮಾಡಿ ಭವ ಬಂಧ ಒದ್ದು ಬಿಡಿಸುವೆ
ಶುದ್ಧ ಭವಾಬ್ಧಿಯೊಳು ಪೊಂದಿಪ ಎನ್ನ ಅನಾದ್ಯವಾ
ಗಿದ್ದ ಅವಿದ್ಯ ಕರ್ಮಗಳ ಒದ್ದು ಕಡಿಗೆ ಮಾಡಿ
ಉದ್ಧರಿಸು ಎಂದು ಎದ್ದು ಅಂಜಲಿ ಪುಟಬದ್ಧ ದಲಿನಿಂದು
ಹೃದ್ಗತನಾಗಿದ್ದ ಉದ್ದಂಟ ದೇವನಂಘ್ರಿ
ಪದ್ಮದ್ವಯಕೆ ಬಿದ್ದು ಭಕುತಿಯಿಂದಾ
ಭದ್ರಗತಿಯನ್ನು ನಿರ್ಧಾರವಾಗಿ ಬೇಡಿ
ಮುದ್ರಧಾರರೊಡನೆ ಪದ್ಧತಿವುಳ್ಳ ಮನೋ ಬುದ್ದಿರ ಕೊಡು ಎಂದು
ಶುದ್ಧವಾದಾನಂತ ಅಬ್ಧಿಯೊಳಗೆ ಇದ್ದು
ಕೃದ್ಧಾ ಪೊದ್ದು ವೋಡಿಸಿ
ಮಧ್ವರಮಣ ನಮ್ಮ ವಿಜಯ ವಿಠಲರೇಯಗೆ
ತದ್ಧಾಸಾನೆಂದರೆ ಇದ್ದಲ್ಲಿ ಶುಭಯೋಗಾ ೮

## ತ್ರಿವಿಡಿ ತಾಳ

ಈ ಪರಿಯಿಂದಲಿ ಹೃದಯ ದೊಳಗೆ ಬಿಂಬ
ರೂಪವನ್ನ ಪೂಜಿಸಿ ಯೋಗ್ಯತದಿನಿತು
ಅಪಾರ ಜನುಮ ಜನುಮದಲಿಂದ ಮಾಡಿದ
ಅಪರಾಧಂಗಳ ಉಚ್ಚರಿಸಿ
ಖ್ಯಾಪಿ ಖ್ಯಾಪಿಗೆ (?)ಹರಿಯ ಸ್ಮರಿಸಿ ಅಹಹಾ ಎಂದು
ರೂಪಾತಿಶಯ ಕಣ್ಣು ತೆರೆದು ಮುಚ್ಚಿ
ಲೋಪ ಮನಮಾಡದೆ ಸಾಧಾರಣ ವಾಗಿ
ವ್ಯಾಪುತನಾಗಿದ್ದ ಹರಿಯ ನೆನಿಯೋ
ತಾಪತ್ರಯವ ಕಳೆವ ವಿಜಯ ವಿಠಲರೇಯ
ಆಪತ್ತು ಕಾಲ ಬಾಂಧವ ಕಾಣಿರೋ ೯

### ಅಟ್ಟತಾಳ

ಅಪರೋಕ್ಷವಾಗದೆ ಸಂಚಿತಾಗಾಮಿಯ
ನಿಪತನವಾಗದು ಪ್ರಾರಬ್ಧಕರ್ಮವು
ಉಪಶಮದಿಂದ ಭೋಕ್ತವಾಗದು ಕಾಣೊ
ಕಪಟನಾಯಕ ಹರಿಯ ರೂಪವ ಬಾಹಿರ
ಅಪರೋಕ್ಷವಾಗಲು ಅದು ನಿಮಿತ್ಯವಲ್ಲಾ
ಚಪಲ ಸದೃಶವಾದ ಮೂರ್ತಿಯ ಆವಾಗ
ಅಪರೋಕ್ಷೀಕರಿಸಿ ಮನದಲ್ಲಿ ಕಾಂಬೋದು
ಅಪವರ್ಗಕಕ್ಕೆ ಕೇವಲ ಸಾಧನವೆನ್ನು
ತಪನೀಯ ಗರ್ಭಾದಿ ದೇವತಿಗಳಿಗೆ
ಅಪರಿಮಿತ ಜನ್ಮ ಸಾಧನವಾಗದೆ
ಅಪರೋಕ್ಷವಾಗದು ಹರಿಯ ಕೂಡಾಡುವ
ಗುಪಿತ ಮಹಿಮ ನಮ್ಮ ವಿಜಯ ವಿಠಲರೇಯ
ಜಪ ತಪರೆ ಒಲಿವನು ಭಕುತಿಯಿಲ್ಲದಲೆ ೧೦

### ಆದಿತಾಳ

ಅನಂತ ಜನುಮಕ್ಕೆ ಒಮ್ಮೆ ನಿನ್ನವನೆಂದು
ಧ್ಯಾನಾದಲ್ಲಿ ತಿಳಿದು ಮನಮುಟ್ಟಿ ನುಡಿದರೆ
ನಾನಾ ಸತ್ಕರ್ಮಂಗಳ ಮಾಡಿದಧಿಕ
ಏನೆಂಬೆನವಗೆ ಎಲ್ಲಾ ಸುಲಭ ಸಾಧ್ಯ
ಹೀನ ಯೋನಿಜನಾಗಿ ಜನಿಸಿದರಾದರೂ
ಜ್ಞಾನವೆ ಕೆಡದಿಪ್ಪದು ಎಂದಿಗೆಂದಿಗಾದರೂ
ಮಾನವಾ ಮುಕ್ತಿ ಯೊಗ್ಯನೆಂದು ತಿಳಿವುದು
ಆನಂದ ಆನಂದ ಗೋಪನ್ನ ಕಂದ ಒಲಿಯೆ

ನಾನಾ ಶಾಸ್ತ್ರವನೋದಿ ಮಿಥ್ಯಾಜ್ಞಾನ ಸಂಪಾದಿಸಿ
ನಾನು ನೀನೆ ಎಂದು ನುಡಿದ ಜೀವ
ಅನಂತ ಕಲ್ಪಕ್ಕೆ ನರಕವಾಸಿಯಾಗುವ
ಹಾನಿ ವೃದ್ಧಿ ಇಲ್ಲದ ವಿಜಯ ವಿಠಲರೇಯಾ
ಕಾಣಿಸುವ ನವರ ಸಾಧನವುಳ್ಳನಿತು ೧೧

**ಜತೆ**

ಹೃದಯ ವಾಸವಾಗಿ ಆರಾಧನೆ ಗೊಂಬ
ವಿಧಿ ಭವಾದಿಗಳೊಡೆಯ ವಿಜಯ ವಿಠಲರೇಯಾ ೧೨

## ೭೦

**ಧ್ರುವತಾಳ**

ಮಾನಸ ಪೂಜೆ ಮಾಡು ಧ್ಯಾನ ಪೂರ್ವಕದಿಂದ
ಜ್ಞಾನ ಲೋಚನದಲ್ಲಿ ನೀ ನಡೆದು ನಡೆದು
ಶ್ವಾನ ಸೂಕರ ನಾನಾ ಯೋನಿಗಳಲ್ಲಿ ಬಂದ
ಹೀನಾಯ ಕಳೆದು ಮುಂದಿನ ಜನನವಳಿದು
ಮಾಣು ಪ್ರಾರಬ್ಧವ ಕಾಣಿಸು ಮತಿ ಮಾರ್ಗ
ಮೇಣು ಸಾಧನವಕ್ಕುದಾಸೀನವ ಮಾಡದಲೆ
ಮಾನವಾಧೀಶ ನಮ್ಮ ವಿಜಯ ವಿಠಲನ್ನ
ಏನಾದರು ಬಿಡದೆ ನೀ ನೋಡುವುದು ಮನುಜಾ ೧

**ಮಟ್ಟತಾಳ**

ತತ್ವ ತಾರತಮ್ಯ ತಾತ್ಪರ್ಯವು ತಿಳಿದು
ಸತ್ವಗುಣದಲ್ಲಿ ಸತ್ಯದಲ್ಲಿ ನಡೆದು

ನಿತ್ಯವಧಿಕ ಜ್ಞಾನ ಭಕ್ತಿ ವೈರಾಗ್ಯದ
ಉತ್ತಮೋತ್ತಮನಾಗಿ ಉತ್ತರೋತ್ತರದಲ್ಲಿ
ಚಿತ್ತದ ಮಧ್ಯದಲ್ಲಿ ಚಿತ್ತಜಪಿತನನ್ನು
ಸ್ತೊತ್ರವ ನೆಸಗುತ್ತ ಆತ್ಮನಿರ್ಮಳನಾಗು
ಸಾತ್ವಿಕ ದೈವವೆ ವಿಜಯ ವಿಠಲ ಸ
ರ್ವೋತ್ತಮನೆಂದು ಸಾರುತ್ತ ಸಂತತದಲ್ಲಿ ೨

## ರೂಪಕ ತಾಳ

ಅವಲೋಕ ವಾಗದೆ ನಾಸವನು ನೋಡಿ ಕೊಳುತಾ
ಗ್ರೀವನು ನಿಲ್ಲಿಸಿ ದೇಹವನ್ನು ಚಂಚಲಿಸದೆ
ಪವನಾದಿಗೆ ನಮಿಸಿ ಹವಣಿಸಿ ಪದುಮಾಸ
ನವನಿಟ್ಟ ಲೌಕಿಕ ತವಕದಿಂದಲಿ ತೊರೆದು
ಭವ ಮನದಲ್ಲಿ ಶ್ರೀಧವ ವಿಜಯ ವಿಠಲನ
ನವ ಕುಸುಮ ಚರಣವ ನೋಡು
ಹರಿಯ ಮಹಿಮೆಯೆಂತು ಕರದೊಯ್ಯೆ ಪು
ಷ್ಕರನ ಯಮನದೂತರಂದು ನರಕವೇ ಬತ್ತಿಪೋಯಿತು ३

## ಝಂಪೆತಾಳ

ದೇಹ ಜೀವಾಂಗುಟಾ ತತು ಪರಿಮಿತಾ
ಈ ಹ್ಯದು ಹೃದಯ ಸ್ಥಾನದಲ್ಲಿ ಬಿಂಬಾ
ಈ ಹದನವನು ತಿಳಿದು ಅಧೋಮುಖಾವಾದಂಬು
ರೂಹಷ್ಟ ಷಟದಳಾರುಣ ಶುಕ್ಲವರಿದೂ
ಮಹ ನಾಡಿಯ ಮೂಲಾ ಧಾರಾಳವನು ನೋಡಿ
ಸಹ ವಾಯು ಬೀಜದಿಂದ ಕಮಲವನೆತ್ತಿ
ಮಿಹಿರಾ ಯೆಂಬೊ ಜ್ಞಾನದಿಂದಲಿ ಅರಳಿಸಿ

ಶ್ರೀ ಹರಿಯ ಕರ್ಣಿಕೆ ಮಧ್ಯದಲ್ಲಿ ಕಂಡು
ತ್ರಾಹಿ ತ್ರಾಹಿಯೆಂದು ವಿಜಯ ವಿಠಲಗೆರಗಿ
ದೇಹಿ ಎನುತಲಿ ತತ್ವರನು ಕೊಂಡಾಡೊ ೪

## ತ್ರಿವಿಡಿ ತಾಳ

ಏಕಾಂತಧ್ಯಾನವ ಕೈಕೊಂಡು ದ್ವಾರಗಳಾ
ನೇಕ ಬಗೆಯಿಂದ (ನಿ) ವಿರೋಧಿಸಿ
ಸಾಕಾರ ಸಕ್ರೀಯಾ ಲೌಕೀಕ ವಸ್ತದ
ಆಕಾರವನು ದ್ವಯ ಸ್ಥಳದಲರಿದೂ
ಜೋಕೆಯಿಂದಲಿ ಜೀವಾಂತರ ಕಳೆಯನು ತಂದು
ಲೋಕ ಮೋಹನವಾದ ಮೂರ್ತಿಯಲ್ಲಿ
ನೀ ಕೂಡಿಸಿ ನಿನ್ನ ಉಪಾಸ್ತಿ ದೈವವ
ಸಾಕು ಬೇಕೆಂದು ದೈನ್ಯದಿ ಪಾಡುತ್ತ
ಏಕ ಮೇವಾ ನಮ್ಮ ವಿಜಯ ವಿಠಲನ ಅ
ನೇಕ ರೂಪಗಳು ಪೂರ್ವಾಪಾರ ಸ್ಮರಿಸುತ್ತಾ ೫

## ಅಟ್ಟತಾಳ

ಪರಮ ಗುರುವಿನ ಮೂರುತಿಯನ್ನು ಸ್ಮರಿಸಿ
ಇರದೆ ಮೊದಲಾ ವಿಗ್ರಹಗಳಾವ್ಹಾನ್ನಿಸಿ
ಶರಧಿ ತೆರೆಯಂತೆ ಐಕ್ಯವ ಚಿಂತಿಸಿ
ಕರೆದು ತನ್ನಯ ಗುರುವಿನ ಮೂರುತಿ ಯೊಳು
ಪರಮ ಗುರುವಿನ ಮೂರುತಿಯನ್ನು ಪೊಗಿಸಿ
ಪರಮ ಹರುಷದಿಂದ ಹಾರಿ ಹಿಗ್ಗುತಲಿನ್ನು
ಮರಿಯಾದೆ ನಿನ್ನಯ ವರ ಮೂರುತಿಯೊಳು
ಪರಿ ಚಿಂತಿಸು ಆ ಮೊರುತಿಯ ರೂಪ

ಪರಮ ಪುರುಷ ಹರಿ ವಿಜಯ ವಿಠಲನ ತ್ರಿ
ಕರಣ ಒಂದಾಗಿ ಬಿಂಬಾ ಮೂರುತಿಯ ಮಾಡೊ ೬

## ಆದಿತಾಳ

ಧ್ಯಾನ ಶ್ಲೋಕವನ್ನು ಪೇಳು ಆನಂದದಾನಿಯನ್ನು
ಶ್ರೀ ನಖಪಿಡಿದು ಸುಂದರಾನನ ಪರಿಯಂತ
ಮಾನಸದಲಿ ನೋಡಿ ಧ್ಯಾನವನ್ನು ಮಾಡು ಒಂದೊಂದ
ನು ನಿರೀಕ್ಷಿಸಿ ದೃಢವನು ತಿಳಿದು ಖಚಿತದಲ್ಲಿ
ನೀನರಿದು ಧನ್ಯನಾಗು ಶ್ರೀನಿವಾಸನ ಗುಣವ
ಧ್ಯಾನ ಜ್ಞಾನ ಗಾನ ಸನ್ಮಾನ ಬಾಹ್ಯ ರಂಗದಲ್ಲಿ
ಏನೇನು ಇದ್ದ ಪೂಜೆಯನು ಮಾಡು ಒಳಗೆ ನಲಿದು
ಮಾನಸದಲ್ಲಿ ಸೃಜಿಸಿ ದೀನದಲ್ಲ್ಯುದ್ಧಾರನಾಗು
ಭಾನುಕೋಟಿ ತೇಜ ಕಾಯಾ ವಿಜಯ ವಿಠಲನಂಘ್ರಿ
ಧ್ಯಾನವನ್ನು ಬಿಡದಲೆ ಜಾಣನಾಗು ನಿರುತದಲ್ಲಿ ೭

## ಜತೆ

ನಿಷ್ಕಾಮದಲಿ ಭಜಿಸಿ ನೀರೆರೆದು ಸುಖಬಡು
ನಿಷ್ಕಳಂಕ ರೂಪ ವಿಜಯ ವಿಠಲರೇಯಾ ೮

# ೭೧

## ಧ್ರುವತಾಳ

ಮಾನಸ ಪೂಜೆಮಾಡು ಮನೋಹರ ಗುಣದಿಂದ
ಜ್ಞಾನ (ವೈರಾಗ್ಯ) ವಿಜ್ಞಾನ ತೈಲಧಾರಿ ಭಕುತಿ
ಧ್ಯಾನವಗೈಯೊ ಶ್ರುತಿಗೆ ಅಪ್ರಮಾಣ ಬರಲೀಯದೆ

ಕಾಣು ಶ್ರೀ ಹರಿಪಾದ ತಾತ್ವಿಕರೊಡನೆ
ಭಾನು ಮೊದಲದ ಚೇತನಾ ಚೇತನದಲ್ಲಿ
ಮಾಣದೆ ನೋಡಿ ತಿಳಿಯೊ ಪೂಜಾ ವಿಧವೊ
ದಾನವಾರಿಯ ರೂಪ "ಚಲಂಚಾಲಮೇವ ಚ"
ಆನಂದತೀರ್ಥರ ವಾಕ್ಯ ಸಿದ್ಧಾ
ಮಾನವ ಮಾನಿಗಳಿಗೆ ಅರ್ಚನೆಗೆ ಯೋಗ್ಯವಾದ
ಮೇಣು ಶಾಸ್ತ್ರೋಕ್ತಿಯಲ್ಲಿ ಪೇಳಿದ ಪ್ರತೀಕ
ನೀನೊಲಿದು ಕೇಳುವುದು ಚಲದಲ್ಲಿ ವಿವರಣ
ಆ ನಳಿನ ಸಂಭವ ತೃಣಜೀವಾಂತಾ
ಏಣಿಸಿ ನೋಡಲು ಇದರೊಳಗನೇಕ ಉಂಟು
ಗೌಣ ಅಧಿಕ ಅಧಿಷ್ಠಾನ ಗ್ರಹಿಸೊ
ಯೋನಿಭೇದದಿಂದ ಭಗವಂತನ ಪೂಜಾ ಫಲವೋ
ಜ್ಞಾನಿ ಚಿಂತಿಸು ಜಂಗಮ ಸ್ಥಾವರ ನಿತ್ಯ
ಕಾಣಿಸದಿಪ್ಪರು ಕೆಲವು ಬ್ರಹ್ಮಾದಿಗಳು
ಎಣಿಸಬೇಕು ಇವರ ಚರ್ಯತನವೂ
ಏನು ಉಳದದ್ದು ಆಗಮ ಉಕ್ತಿಲಿ ನಿ
ದಾನಿಸಿ ತಿಳಿಯಬೇಕು ಅಜ್ಞಾನದೃಷ್ಟಿ
ಅನಪರೊಕ್ಷಕಾಲ ಇನಿತು ಸಾ
ಧನಗೈಯೋ ಜ್ಞಾನ ಪ್ರಾಪುತವಾಗೆ ಪ್ರತ್ಯಕ್ಷವೋ
ಈ ನುಡಿ ಹಿಂಗಳೆದು ಉಳಿದ ವಿಚಾರ ಕೇಳು
ಪ್ರಾಣಿಗಳಲ್ಲಿ ಸಂಚರಿಸುತಿಹರೊ
ಅನಂತಾನಂತ ದ್ವಿವಿಧಕರ್ಮ ಮಾಡುತಿಪ್ಪರು
ಕಾಣಿಸುತಿಪ್ಪರು ನೋಡಿದರಾನೆ
ನೀನು ತಿಳಿಯೊ ಒಬ್ಬನಂತೆ ಕರ್ಮಗಳನು
(ಮಾ)ಮನದಿಂದಲಿ ಇದೆ ಪ್ರಮಾಣವೊ

ಧ್ಯಾನವ ಮಾಡು ಮನ ಚಲ ಮೂರುತಿಯ
ಏನೆಂಬೆ ಇದರೊಳು ತರತಮ್ಯವಕ್ಕು ಭರದಿ
ತಾನು ತನ್ನಯ ಗುರು ಸರ್ವಭೂತ
ಶೇಣಿಯಲ್ಲಿ ಅರ್ಚಿಸು ನಿಚೋಚ್ಚಭಾವನೆಮಾಡಿ
ಆನಂದವಾಗು ಸ್ಥಾವರದಲ್ಲಿ ಇನಿತು
ಧ್ಯಾನವ ಮಾಡು ಮನವೆ ಚಲ ಪ್ರತೀಕವ
ಮಾನಸಹಂಸ ನಮ್ಮ ವಿಜಯ ವಿಠ್ಠಲರೇಯನ
ಕಾಣುವ ಯೋಗ್ಯತೆ ಸಂಪಾದಿಸು ಸಜ್ಜನರ ಕೂಡ ೧

## ಮಟ್ಟತಾಳ

ಚಲಪ್ರತೀಕದೊಳೂ ತರತಮ್ಯವೆ ಉಂಟು
ತಿಳಿದು ಜ್ಞಾನಿಗಳು ನಾನಾ ಪ್ರಕಾರ
ಕೆಲವು ಕಣ್ಣಿನಿಂದ ಹಸ್ತ ಶ್ರವಣದಿಂದ
ಕೆಲವು ಕೆಲವು ವಾಕ್ಯದಿಂದ ಗಾತ್ರದಿಂದ
ಕೆಲವು ಮನಸಿನಿಂದ ಹರಿಯ ತೃಪ್ತಿಯಬಡಿಸಿ
ಕೆಲಕಾಲ ಗುಣಿಸು ವಂದನಾದಿ ಕರ್ಮ
ಜಲ ತೃಣ ಮೃಷ್ಟಾನ್ನ ಇಷ್ಟವಾದವೆಲ್ಲ
ಜಲಜನಾಭನೆ ಕೈಕೊಂಬ ಕರುಣದಿಂದ
ಸ್ಥಳ ವಿಶೇಷದಿಂದ ನಾಮಭೇದಗಳಕ್ಕು
ಸುಲಭ ಮೂರುತಿ ನಮ್ಮ ವಿಜಯ ವಿಠ್ಠಲರೇಯನ
ಒಲಿಸಿ ಸಂತತ ಸರ್ವಸ್ಥಾನದಲ್ಲಿ ಪೂರ್ಣಾ ೨

## ತ್ರಿವಿಡಿ ತಾಳ

ಪೂಜಿಸು ಈ ಪರಿ ಚಲಪ್ರತಿಮ ಮಧ್ಯ
ಮೂಜಗತ್ಪತಿ ಹರಿಯ ರೂಪವೆಂದೂ
ರಾಜೀವ ಪೀಠ ಮಿಕ್ಕಾ ದೇವತೆಗಳು (ಚೇತನಗಳು)

ಭೋಜನ ಮಾಡುವ ಚೇಷ್ಟಾದಿಯೂ
ರಾಜಿಸುತಿಪ್ಪವು ತದ್ಭಿನ್ನವಾಗಿವೆ
ಸೋಜಿಗವೇನಂಬೆ ಹರಿ ಅಧೀನ
ರಾಜ್ಯದೊಳಗೆ ಕೇಳು ಮುಖ್ಯ ಪುರುಷ ಕಾರಣ (ಕರುಣ)
ಸ್ತ್ರೀ ಜನ ಪ್ರಸೂತವಾದರೆಂಬೊದೇನಯ್ಯಾ
ಈ ಜೀವಿಗಳು ಮಾಡುವ ನಾನಾ ವ್ಯಾಪಾರ
ರಾಜೀವ ನೇತ್ರ ಮಾಳ್ಪನಾಗೆ
ಮಾಜದೆ ಖ್ಯಾತಿ ಜೀವರಿಗೆ ಬಂದದು ಕಾಣೊ
ಬೀಜಮಾತಿಲಿ ನೋಡೆ ಬಿಂಬ ಕ್ರೀಯಾ
ವಾಜಿ ಕಟ್ಟಿದ ತೇರು ಬಂದರಾದಡೆ ಪೆಸರು
ವಾಜಿಗೆ ಪೇಳರು ಬಂತೆಂಬವರು ತೇರು
ಭೂ ಜಡವಾದರೂ ಬೆಳಿಯಿತೆಂಬರು ಇದಕ್ಕೆ
ನೈಜವಾಗಿದ್ದ ಪರ್ಜನ್ಯಗೆ ಪೆಸರ್ಯಾಕೆ
ಈ ಜಗದೊಳಗೆ ಪ್ರಧಾನವಿದ್ದರು ಕೀರ್ತಿ
ರಾಜಿಸುತಿವೆ ಅಪ್ರಧಾನ ಮಾತು
ಸುಜನರು ಬಲ್ಲರು ಇದರ ವೃತ್ತಾಂತ ವಿ
ರಾಜದೇಹದತನಕ ಗುಣಿಸಿದರೂ
ಭೋಜಕುಲೋತ್ತಮ ಕೃಷ್ಣನಲ್ಲದೆ ಅನ್ಯ
ರಾಜನ್ಯ ಮಿಕ್ಕಾದ ಜೀವಿಗಳೆಲ್ಲರು
[ಆ]ಜನ್ಮವಾರಭ್ಯ ಇಂತು ತಿಳಿದು ಹೃತ್ಸ
ರೋಜದಲಿ ಇದ್ದ ಬಿಂಬನ್ನ ಪಾಡುವರು
ಕುಜನರು ಇದರಂತೆ ಕೊಂಡಾಡದಲೆ ಬಲು
ವ್ಯಾಜದಿಂದಲಿ ನರ ಕಸೇರುವರು
ರಾಜರಾಜೇಶ್ವರ ವಿಜಯ ವಿಠ್ಠಲ ಯೋಗ
ರಾಜೀವ ಮಿತ್ರನ್ನ ಚಿಂತಿಸು ಚೇತನದಲ್ಲಿ ೩

## ಅಟ್ಟತಾಳ

ಇದರೊಳು ಅಜ್ಞಾನ ಜ್ಞಾನವಾಗಿದ್ದ ದ್ವಿ
ವಿಧವುಂಟು ಚಲಮೂರ್ತಿ ಒಂದಾನಂತವಾಗಿ
ಮುದದಿಂದ ಧೇನಿಸು ಚನ್ನಾಗಿ ತರುವಾಯ
ಸದಮಲ (ವಾಗಿ) ದಲಿಪ್ಪ ಅಚಲ ಪ್ರತಿಮೆಯನ್ನು
ಸುಧಿಯಿಂದ ತಿಳಿವುದು ಭಕುತಿಯಿಂದಲಿ ಬಲು
ವಿಧ ಪೂಜೆಗೊಳುತಿಪ್ಪ ವ್ಯಕ್ತಾ ವ್ಯಕ್ತಕಾಯ
ಉದಧಿ ಮೇಖಲದೊಳು ಅಪರೋಕ್ಷಿ ಬ್ರಾಹ್ಮಣ
ಮೊದಲಾದ ಚಾಂಡಾಲ ಜಾತಿಯವರು ಮು
ಟ್ಟಿದರೆ ದೋಷವಿಲ್ಲ ಸರ್ವದ ಪವಿತ್ರ
ಬುಧರಿಗೆ ಸಮ್ಮತ ಅವ್ಯಕ್ತ ಭಗವಂತ
ಅಧಿಷ್ಠಾನವುಳ್ಳ ಸಾಲಿಗ್ರಾಮ ಮುಖ್ಯ
ಸನ್ನಿಧಿಯಾಪ್ಪನು ಲೋಕಪಾವನ ಕಾಣೊ
ಸುದರಶನದಿಂದ ಅಭಿಧಾನ ಪ್ರಭೇದ
ಅಧಮಾಧಿಕಾರನು ಇದರಲ್ಲಿ ಅಪರೋಕ್ಷ
ಒದಗಿ ಕಾಂಬರು ಮತ್ತೆ ಅನ್ಯತ್ರದಲಿ ಉಂಟು
ಬದರಿ ದ್ವಾರಕಿ ಮಾಯಾ ಕಾಶಿ ಪ್ರಯಾಗ ಪ್ರ
ಪದವೀವಾ ಗಯಾಕ್ಷೇತ್ರ ಅಯೋಧ್ಯ ಜಗನ್ನಾಥ
ಯದುಗಿರಿ ತೋತಾದ್ರಿ ಶ್ರೀ ಮುಷ್ಣ ಮನ್ನಾರ
ಪದುಮನಾಭಾನಂತ ವೆಂಕ[ಟಾ]ಚಲ ಪುಣ್ಯ
ನಿಧಿಯಲಿ ನಿಲಿಸಿದ್ದ ಪ್ರತಿಮೆ ಕ್ರಮದಿಂದ
ವಿಧಿ ಶಂಭು ಮಿಗಿಲಾದವರು ಪೂಜೆಸಿದರೆನ್ನು
ಪದೋಪದಿಗೆ ಯಾತ್ರಿಮಾಡುತ ನೋಳ್ಪದು
ಇದರಂತೆ ನಿರೀಕ್ಷಿಸು ಮನುಷ್ಯಕೃತ ದಶ
ವಿಧಪ್ರತಿ ಮೆಗಳ ಸ್ವರ್ನಾದಿ ರೂಪವು
ಪದನಖ ಮಸ್ತಕ ಲಕ್ಷಣವಾಗಿದೆ

ಚದುರತೆಯಿಂದ ಪೂಜಿಸು ದ್ರವ್ಯಗಳಲ್ಲಿ
ಉದಯಾರ್ಕ ವಿಧು ತಾರಾಮಂಡಲ ಪಾವಕ
ನದಿ ನದಿ ಸಾಗರ ಪರ್ವತ ಸರೋವರ
ಹೃದಯ ಗಗನ ಸಮಸ್ತ ಸೂಕ್ಷ್ಮ ಸ್ಥೂಲ
ದಧಿ ಶಬ್ದ ಮುಂತಾದ ನಾನಾ ಅಚಲಗಳು
ಮೃದು ಮಾರ್ಗದಿಂದಾಗಲಿ ಮನೋಹರನಾಗು ಮು
ನ್ನಿದಕೆ ನಿಸ್ಸಂದೇಹ ಯೋಚಿಸು ನಿರುತಾ
ಸದಮಲ ಮೂರುತಿ ನಮ್ಮ ವಿಜಯ ವಿಠ್ಠಲರೇಯನ
ಪದಗಳ ಬಿಗಿದಪ್ಪ ಮನಸಿನಲಿ ನೆನೆದೂ ೪

## ಆದಿತಾಳ

ಬೊಮ್ಮಾಂಡದೊಳಗಿನಿತು ವ್ಯಕ್ತಾವ್ಯಕ್ತ ಮೂರ್ತಿ
ಒಮ್ಮನದಲಿ ತಿಳಿ ತದಾಕಾರ ತದ್ವರ್ನ
ಚಿನ್ಮಯರೂಪನ್ನ ಅಚಲಕೋಟಿ ಮಧ್ಯ
ಒಮ್ಮೆ ಒಮ್ಮೆ ನೆನೆದು ನಾನಾ ಪೂಜೆಯ ಮಾಡು
ರಮ್ಮೆ ತತ್ವದತನಕ ಇನಿತು ರಚಿಸಿ ವೇಗ
ದುಮ್ಮಾನಗಳು ಎಲ್ಲ ಕಡಿಗೆ ನೂಕಲಿಬೇಕು
ಅಮ್ಮಮ್ಮ ಈ ಬಗೆ ಪೂಜಾ ಸಾಧನ ಧ್ಯಾನ
ನಿಮ್ಮ ನಿಮ್ಮ ಮನಸಿನಲಿ ಮಾಡಿರೊ ಎಂದು ಸಾರಿ
ಸನ್ಮತಿಯಿಂದಲಿ ಜನಕೆ ಪೇಳಲಿಬೇಕು
ತಮ್ಮ ತಮ್ಮ ಯೋಗ್ಯತ ಪೂರ್ವಿಕರುಮಾಡಿ
ಅಮ್ಮಿರಿತ ಲೋಕ ವಾಸವಾದರು ಮನವೆ
ಅಮ್ಮಿಶ್ರ ನೀನಾಗು ನೀಚವೃತ್ತಿಯ ಬಿಟ್ಟು
ಅಮ್ಮಹ ಭಕ್ತಿಲಿ ನಲಿನಲಿದಾಡು ಓಲಾಡು
ಬೊಮ್ಮನಯ್ಯಾ ನಮ್ಮ ವಿಜಯ ವಿಠ್ಠಲರೇಯ
ಸಮ್ಮೊಗವಾಗುವ ಸಂಚಿತಾಗಮ ಕಳೆದೂ ೫

### ಜತೆ

ಚಲ ಅಚಲಾಂತರದಲಿ ನಿತ್ಯ ಸೇವಿಸು ಮಹಾ
ಬಲವಂತ ವಿಜಯ ವಿಠ್ಠಲ ನಾನಾ ರೂಪ ೬

## ೭೨

### ಧ್ರುವತಾಳ

ಮೀಸಿಯಾ ತಿದ್ದಿ ಬಹು ಬೆಳಸಿದರಂಜುವೆನೆ
ಪಾಷಾಣ ಪೊತ್ತು ನಿಂದಾರೆ ಅಂಜುವೆನೆ
ವಿಷಾಣ ಕೋಟಿಯನ್ನು ಮನೆ ಮಾಡಿದರಂಜೆನೊ
ಘೋಷವೆಬ್ಬಿಸಿ ಚೀರಿದರಂಜೆನೊ
ವೇಷಾ ಚೊಕ್ಕಟ ತೋರಿದರಂಜೆನೊ
ಭೂಸುರ ಧರ್ಮ ತೋರಿದಂಜೆನೊ
ಕೇಶ ಜಡೆಗಟ್ಟಿ ಬಿಲ್ಲುಧರಿಸಾಲಂಜೆ
ಭೇಷಜವನ್ನೆ ತೋರಿ ಉರಿಯ ನುಂಗಿದರಂಜೆ
ಕೂಸಾಗಿ ವಂಚನೆ ಮಾಡಿದರಂಜೆನೊ
ದೋಷಕ್ಕೆ ಹೇಸಾದೆ ಖಡ್ಗ ಝಳಪಿಸಾಲಂಜೆ
ಏಸೊಂದು ರೂಪಗಳು ಧರಿಸಾಲಂಜೆ
ವಾಸುದೇವ ನಿನ್ನ ಭೀತಿಗಾನಂಜೆನೊ
ಈ ಶರೀರವೆ ನಿನ್ನಾಧೀನವೆಂಬೊದೊಂದೆ
ಏಸೇಸು ಬಗೆ ಕರ್ಮ ಆನೆ ಉಣಲಿಬೇಕು
ದಾಸಾನಾದ ಕಾಲಕ್ಕೂ ತೊಲಗದಯ್ಯಾ
ಲೇಸಾಗಿ ನೀನೆ ಒಲಿದು ಕರುಣಾ ಮಾಡಿದರಾಗೆ
ಈ ಸಮಸ್ತ ಗರ್ಭದಲಿ ಜನಿಸಿ ಬಂದು

ಲೇಶಾಲೇಶವಾದರು ಕರ್ಮ ಉಣಲಿಯಿತ್ತು
ನಾಶಗೈಸುವೆನೆಂಬ ಪ್ರತಾಪ ಘನವಕ್ಕು
ಶೇಷಶಾಯಿ ನಮ್ಮ ವಿಜಯ ವಿಠ್ಠಲ ನಿನ್ನ
ಈಶ ತನಕೆ ಅಂಜಿ ತಲೆಬಾಗಿತುತಿಸಬೇಕು ೧

## ಮಟ್ಟತಾಳ

ನಿನಗಂಜುವನಾರು ನಿನಗಳಕುವನಾರು
ನಿನಗೆ ಹಸ್ತವನೆತ್ತಿ ಮಣಿದು ಪಾಡುವನಾರೂ
ನಿನಗೋಸುಗ ನಿತ್ಯ ವನ ಭವನ ಭುವನಾ
ದಿನ ದಿನ ತಿರುಗಿ ಸುಮ್ಮನೆ ಅರಸುವನಾರೂ
ವನಜ ಜಾಂಡದೊಳಗೆ ನಿನಗೆ ಪೂರ್ಣವಾಗಿ
ಗುಣಗಣಗಳ ಪೇಳಿ ದಣಕೊಂಬುವನಾರೂ
ಮುನಿ ಮೊದಲಾದವರು ಚಿನುಮಯ ಮೂರುತಿ
ಅಣು ಮಹತ್ತು ನಿನ್ನನೆ ಬಾಹಿರದಲ್ಲಿ
ಕುಣಿಸಿ ಕುಣಿಸಿ ನೋಡಿ ಮಿನುಗುವ ಅಪರೋಕ್ಷಕೆ ಕಾ
ರಣವಲ್ಲವೆಂದೂ ಅನುಭವಿಸಿದ್ದರೂ ಯೋ
ಚನೆ ಮಾಡಿ ಸಾರುತಿರೆ ಮನದಲಿ ತಿಳಿದು ಆ
[ನಿ]ನಿತು ಉತ್ತರನಿತ್ತೆ ಜನುಮಾ ಜನುಮಾ
ಜನಕ ವಿಜಯ ವಿಠ್ಠಲ ಎನ್ನು
ಜನನ ನೀಗೂವ ಮೂರುತಿ ನೀನಲ್ಲವು ಕಾಣೋ

## ತ್ರಿವಿಡಿ ತಾಳ

ಅಧಿ ದೈವದವನಲ್ಲಾ ಅಧಿ ಭೂತದವನಲ್ಲಾ
ಪದೋಪದಿಗೆ ಹೊರಗೆ ತೋರುವನಲ್ಲಾ
ಒದಗಿ ನಾನಾ ಸೌಖ್ಯ ಉಣಿಸುವನೆ ನೀನಲ್ಲಾ

ಮುದದಿಂದ ಸ್ವ[ಪ್ನ]ದಲಿ ಪೊಳೆದವ ನೀನಲ್ಲ
ಇದರ ತರುವಾಯ ಮತ್ತೊಂದುಂಟು ಸ್ಥೂಲ
ಹೃದಯದಲ್ಲಿ ಸುಳಿದು ನಿಂದಾಡಿದವನಲ್ಲ
ಸದಮಲ ಮೂರುತಿ ಎನಗೊಂದು ನಿಜವಲ್ಲಾ
ಇದರಿಂದ ಏನಾಗುವ ಕಾರ್ಯವಾದರೂ
ನಿದರುಶನವಾಗಲಿಲ್ಲಾ ಹರಿಯೇ
ಅದು ಭೂತ ದೈವವೆ ತಿರಿಗಿ ತಿರಿಗಿ ನೀನೆ
ಎದಿರಿಲಿ ನಿಂದು ಈ ಬಗೆ ರೂಪವ
ಉದಯಾಸ್ತಾಮಾನದಲ್ಲಿ ಪೂಜಿಸು ಎನುತಂಜಿ
ಸಿದರೆ ನಾನಂಜುವನಲ್ಲಾ ಕಾಣೊ
ಯದುಕುಲೋತ್ತಮ ನಿನ್ನ ರೂಪಗಳಿಗೆ
ಮೊದಲಾರಭ್ಯ ಕಡಿಗೆ ಭೇದವಿಲ್ಲಾ
ವಿಧಿ ಇಂತು ಇರಲಿಕ್ಕೆ ಏನು ಕಾರಣವೆನೆ
ಮದಮತ್ಸರ ರಹಿತಾ ಜ್ಞಾನಿಗಳೂ
ಹೃದಯದಲಿ ತಿಳಿದು ಪೇಳೀ ಪರಿ ಕಥೆ
ವಿದಿತವಾಗಿದೆ ನೋಡು ಆಗಮದಲ್ಲಿ
ಚದುರಾ ಮೂರುತಿ ನಮ್ಮ ವಿಜಯ ವಿಠ್ಠಲ ನಿನ್ನ
ಪದಕೆ ಬೀಳುವೆನಯ್ಯಾ ಪದವಿಗೆ ಪಥ ಬೇಕೂ ೩

## ಅಟ್ಟತಾಳ

ಅನಂತಕಾಲಕ್ಕು ಲಿಂಗಾದಿ ವಿಡಿದು
ಅನಂತರೂಪಗಳು ಒಂದೊಂದು ಬಿಡದಲೆ
ಆನಂದದಿಂದಲಿ ನೋಡಿ ಕುಣಿದಾಡಿ
ಏನೇನು ಬಗೆಯಿಂದ ಪೂಜಿಸಿ ಪರಿ ಪರಿ

ಧ್ಯಾನ ಮಾಡಿದರಾಗೆ ಮಾನವಗೆ ಇದು ಬಿಂಬವಲ್ಲವೆಂದೂ
ಜ್ಞಾನವಂತರು ಪೇಳಿ ಸಾಧನ ಮಾಳ್ಪರು
ಆನೊಬ್ಬನೆ ಪೊಸಬಗೆ ಮಾಡಿದೆನೆ
ಶ್ರೀನಾಥ ಕೇಳೆಲೊ ಜಗದೊಳು ಪ್ರಸಿದ್ಧ
ಭಾನು ಇಪ್ಪದು ಸತ್ಯಾ ಈತನ ಪ್ರಕಾಶ
ನಾನಾ ಲೋಕದಲಿ ತುಂಬಿದೆ ಸಮಸ್ತ
ಪ್ರಾಣಿಗಳಿಗೆ ಬಲು ಹಿತವಾಗಿ ನಿತ್ಯಾನು
ಷ್ಠಾನಕ್ಕೆ ಸಾಕ್ಷಿಭೂ[ತ]ವಾಗಿ ಇರುತಿದೆ
ಈ ನುಡಿ ನಿಜವೆಂಬೆ ಸಕಲರು ಬಲ್ಲದ್ದು
ಆ ನಳಿನ ಮಿತ್ರನಿದ್ದರೂ ನೇತ್ರಾಭಿ
ಮಾನಿಯಾದ ಚಕ್ಷುರ್ನಾಮಕ ಸೂರ್ಯನು
ತಾನಿಲ್ಲದಿರೆ ಸರ್ವ ಲೋಕದ ಪದಾರ್ಥ
ಕಾಣಿಸಿ ಕೊಡುವನೆ ಪಸಿದ್ಧ ಭಾಸ್ಕರ
ಸ್ಥಾನ ಭೇದದಿಂದ ವ್ಯಾಪಾರಂಗಳು ಭೇದ
ನೀನೆ ಮಾಡಿ ಇಪ್ಪೆ ತತ್ತತ್ಕಾಲಕ್ಕೆ ದೇವಾ
ನಾನಿದೆ ಕಲ್ಪಿಸಿ ಪೇಳಿದವನಲ್ಲಾ
ಮೌನವಾಗಿರಸಲ್ಲಾ ಮಾತಾಡು ಸಿರಿನಲ್ಲಾ
ಈ ನಿರಂತರ ನಿನ್ನ ಬಾಹಿರ ರೂಪಂಗ
ಳಾನು ಕೊಂಡಾಡಿ ನೋಡಿದದಕೆ ಮ
ತ್ತೇನು ಫಲವಿಲ್ಲಾ ಇದರ ರಹಿತವಾಗಿ
ಕ್ಷೋಣಿಯೊಳಗೆ ಎಂಭತ್ತು ನಾಲ್ಕು ಲಕ್ಷ
ಯೋನಿಯಲ್ಲಿ ಬಂದು ಸಾಧನಂಗಳ ಗೈದು
ಅನಂತಾನಂತ ನಿನ್ನ ಮೂರುತಿ ನೋಡಿ
ಏಣಿಸಿ ಗುಣಿಸಿ ನಿಧಾನಕ್ಕೆ ಒಂದಕ್ಕು

ಶ್ರೀ ನಾರಿಯರಸನೆ ಚಿತ್ತುವಿನೊಳಗಿದ್ದ
ಪೂರ್ಣ ಗುಣಾ:ರ್ಣ ನಿನ್ನ ಚಿದ್ರೂಪವ
ಕಾಣದಲೆ ಆವ ಜೀವಿಗಾದರೂ
ಆನಂದಾ ವಿರ್ಭಾವ ಇಲ್ಲವೊ ನೀನು
ಈ ಪರಿ ಸಂಕಲ್ಪವೇ ಮಾಡಿದ್ದು
ವೇಣು ಹುಡುಗನಂತೆ ಅಂಜಿಪುದೇನಯ್ಯಾ
ಆನಂದಾ ಸರ್ವಾಂಗಾ ವಿಜಯ ವಿಠ್ಠಲರೇಯಾ
ನೀನು ಮಾಡಿದ ಕ್ಲಿಪ್ತಿ ನಿನಗೆ ತಿಳಿಯದೇನೂ ೪

## ಆದಿತಾಳ

ಸಜ್ಜನಾಂಬುಧಿ ಚಂದ್ರಾ ಸಕಲ ಸದ್ಗುಣಸಾಂದ್ರಾ
ನಿರ್ಜನ ಪರಿ ಪಾಲಕ ಯಾದವಕುಲತಿಲಕಾ
ದುರ್ಜನಕುಲ ಕಾಲ ದುರ್ಗ ಭೂ ಲಕ್ಷ್ಮೀಲೋಲ
ವರ್ಜಿತ ಲಯ ಮಾಯಾ ನವ ವಾರಿಧರಕಾಯಾ
ಅರ್ಜುನ ಸಾರಥಿ ಸತತ ಸತ್ಕೀರುತಿ
ಗು[ಜ್ಜಿ]ಗೊಲಿದರಂಗಾ ದುರಿತ ಮಾತಂಗ ಸಿಂಗಾ
ಮೂರ್ಜಗದೊಳಗೆನ್ನ ಸಾರುವ ಸುಪ್ರಸನ್ನ
ವಜ್ರ ಪಂಜರ ಚರಣಾ ಜನಕೆ ನೀನೆ ಕರುಣಾ
ಮಜ್ಜನಾದಿಯ ಕರ್ಮ ಏನೇನು ಸ್ವಧರ್ಮ
ಎಜ್ಜವಾಗಿದ್ದರು ಎಣಿಸದಿರು ಎಣಿಸದಿರು
ಗೆಜ್ಜೆ ಕಟ್ಟಿಸಿ ನಿಲಿಸಿ ಕುಣಿಸಿದರಂದು ಒಲಿಸಿ
ಸಜ್ಜೀವಿಗಳು ನಿಂದು ಬಿಂಬ ಕಾಣಬೇಕು
ಹೆಜ್ಜೆ ಹೆಜ್ಜೆಗೆ ಪೊಳೆದು ಇನಿತೆಂಬ ಮಾತು ಕಳೆದು
ಬೆಜ್ಜರಿಸುವದೇನು ಭಕುತರ ಕಾಮಧೇನು
ರುಜುವೆಂಬೊ ಜ್ಞಾನ ಪುಟ್ಟಿದ ಮೇಲೆ ಅವನ

ತಜ್ಞಾತಿಗೆ ಸೌಖ್ಯ ಸಿದ್ಧವಾಗಿದೆ ಮುಖ್ಯ
ಆರ್ಜನೆ ಮಾಡವೆನು ವಿಸ್ತರಿಸಿ ಕೇಳು ಇನ್ನು
ಆರ್ಜವಗತಿ ತೋರೊ ಗುಣ ಕಡೆಮಾಡು ಮೂರು
ವ್ಯಾಜವೆ ಎನ್ನ ಕೂಡ ಎಂದಿಗೆ ಮಾಡಬೇಡ
ರಾಜ್ಯದೊಳಗಪಾರ ನಿನಗಿದೆ ವ್ಯಾಪಾರ
ಪೂಜ್ಯನಾದ ಮೇಲೆ ಹಿಂದಾಗುವದು ಮೇಲೆ
ಅಬ್ಜ ಚಕ್ರಾಂಕಿತ ವಿಜಯ ವಿಠ್ಠಲ ಹೃದ
ಯಾಬ್ಜದಲ್ಲಿ ಪೊಳಿಯೊ ಸತತ ಸಂಯೋಗ ಬಿಂಬಾ ೫

## ಜತೆ

ಎತ್ತಲಾದರು ಎನಗೆ ಇಷ್ಟ ಪುಣ್ಯದಿಂದ
ನಿತ್ಯ ಸತ್ಯಮೂರ್ತಿ ತೋರೊ ವಿಜಯ ವಿಠ್ಠಲಾ ೬

## ೭೩

## ಧ್ರುವತಾಳ

ಮುಕ್ತಿಲಿ ಪಂಚಭೇದ ಜಡ ಜೀವ ಪರಮಾತ್ಮ ।
ಶಕ್ತಿ ಈಶಾಕೋಟಿ ಗಣನೆ ನಿತ್ಯ ।
ಮುಕ್ತಳು ಬೊಮ್ಮ ವಾಯು ಮುಂತಾದ ಸುರರಿಗೆ ।
ಮುಕ್ತಿಯ ಕೊಡುವಳು ಈಶಾವಶಳು ।
ಮುಕ್ತಾ ಮುಕ್ತರ ಒಡಿಯಾ ವೈಕುಂಠ ನಾಮಕ ।
ಶಕ್ತನೊಬ್ಬನು ಕಾಣೋ ತ್ರಿಲೋಕಕ್ಕೆ ।
ಭಕ್ತಿ ಯೋಗ್ಯತವರಿತು ಭವ ಹರಿಸಿ ಚತುರವಿಧ ।
ಮುಕ್ತಿಲಿ ಸುಖವೀವ ಸುಂದಾರಾಂಗ ।
ಸೂಕ್ತಾದಿಗೆ ನಿಲುಕನು ಮೂಲಾವತಾರಾ ಭಿನ್ನ ।

ರಕ್ತಾದಿವರ್ನ ರಾಜೀವ ಲೋಚನ ಶುಕ್ಲ ।
ರಕ್ತ ರಹಿತ ಪೂರ್ಣೇಂದು ವದನ ।
ವ್ಯ[ಕ್ತಾ]ವ್ಯಕ್ತಾ ವ್ಯಾಪಾರಾ ಅಚಿಂ[ತ್ಯಾ]
ಮಹಾ ಮಹಿಮಾ ।
ಭಕ್ತವತ್ಸಲ ಕರುಣಿ ಸರ್ವಸಾರಾ ।
ಭೋಕ್ತನು ಆದಿಮಧ್ಯಾಂತರಹಿತ ದೈವ ।
ಮೌಕ್ತಿಕ ಹಾರಾ ರತುನಾದಿ ಭೂಷ ।
ಉಕ್ತ ತಾರತಮ್ಯ ತತ್ವಕೆ ದೂರ ದೂರ ।
ರಿಕ್ತರಿಗತಿಪ್ರೀಯ ಶ್ರೀ ಭೂದುರ್ಗಾಪತಿ ವಿ
ರಕ್ತರ ಮನೋವಾಸ ವಿಜಯ ವಿಠ್ಠಲಯನ್ನ ।
ಉಕ್ತಿಗೆ ಸಹಯವಾಗು ದಾಸರ ಪ್ರೀಯ ೧

## ಮಟ್ಟತಾಳ

ಹರಿಪರಂಜ್ಯೋತಿ ಹರಿಪರದೈವತಿ ।
ಹರಿ ಸರ್ವೋತ್ತಮ ಹರಿ ಪುರುಷೋತ್ತಮ ।
ಹರಿಪೊರಬೊಮ್ಮ ಹರಿಜ್ಞಾನಗಮ್ಯ ।
ಹರಿ ವಿಶ್ವಾ ಮೂರ್ತಿ ಹರಿಚಕ್ರಾವರ್ತಿ ।
ಹರಿ ಪರಂಧಾಮಾ ಹರಿ ಸಾಸಿರ ನಾಮಾ ।
ಹರಿ ಸಾರ್ವಭೌಮ ಹರಿಭಕ್ತರ ಪ್ರೇಮ ।
ಹರಿ ಪರಿಪೂರ್ಣ ಹರಿ ನಾನಾ ವರ್ನ ।
ಹರಿ ಗುಣಗಣಾಂಬೋಧಿ ಹರಿ ಸರ್ವ ಸಿದ್ಧಿ ।
ಹರಿ ಸರ್ವದಾವೀರ್ಯ ಹರಿವಿ ಬುಧರವರ್ಯ ।
ಹರಿ ಪಾವನ ಕಾಯ ಹರಿಭುವನ ಮಾಯ ।
ಹರಿ ಪರಮಾತ್ಮ ಹರಿ ಉತ್ತ ಮೋ[ತ್ತಮ]
ಹರಿ ಪರತತ್ವ ಹರಿನಿರುತ ಸತ್ವಾ ।

ಹರಿ ನಿತ್ಯಾನಂದಾ ಹರಿಸಿರಿ ಗೋವಿಂದ ।
ಹರಿ ನಿತ್ಯಾತೃಪ್ತ ಹರಿ ಸಕಲ ವ್ಯಾಪ್ತ ।
ಹರಿ ವಿರಹಿತಜಾತ ಹರಿ ಜಗನ್ನಾಥ ।
ಹರಿ ಏಕಮೇವ ಹರಿ ಅಘವನದಾವಾ ।
ಹರಿ ನಿರ್ಭಯಶೂರ ಹರಿನಾನಾವತಾರ ।
ಹರಿ ಬಹುಲಾವಣ್ಯ ಹರಿ ಸದಾ ತಾರುಣ್ಯ ।
ಹರಿಯಲ್ಲದೆ ಮತ್ತೆ ಹರಿಯ ಬಲ್ಲವರುಂಟೆ ।
ಹರಿಯವತಾರ ಶ್ರೀ ವಿಜಯ ವಿಠ್ಠಲರೇಯ ।
ಹರಿಯೆ ತ್ರಿಭುವನ ಧೊರೆಯೆಂದವ ಜ್ಞಾನಿ ೨

## ತ್ರಿವಿಡಿ ತಾಳ

ಶೂನ್ಯ ನಾಮಕನಾಗಿ ಹರಿ ವಟದೆಲೆಯಲ್ಲಿ ।
ಸಣ್ಣವನೋಪಾದಿ ಬೊಮ್ಮಾಂಡ ನಾಯಕ ।
ಕನ್ಯಾರತುನವಾದ ಶ್ರೀಯಾಲಂಗನಿಯಿಂದ ।
ತನ್ನಿಚ್ಛೆಯಲೆ ತಾನೇ ಪವಡಿಸಿದ್ದು ।
ಮುನ್ನೆ ಬೊಮ್ಮನ ಮಾನಾ ತುಂಬಿ ಬೀರುತಲೀರೆ ।
ಹನ್ನೆರೆಡುವರೆ ವರುಷಾವಿರೆ ।
ಮನ್ಯುನಂತೆ ತೋರಿ ನಾಟ್ಯವನಾಡಿ ಹಿ ।
ರಣ್ಯ ಗರ್ಭಾದಿಗಳಾ ಉಳಿಯಗೊಡದೆ ।
ಕಣ್ಣಿಂದ ಉರಿಕಿಡಿ ಉದುರಿಸಿ ನೆರೆದವಾ ।
ರನ್ನೆ ಕವಳ ಮಾಡಿ ಭೂಷಣ ಧರಿಸೀ ।
ಅನ್ಯರ ಸಂಚಾರ ಜಗದೊಳಿಲ್ಲದಂತೆ ।
ಉನ್ನತ ಮಹಿಮನು ವೇದ ಪಾಲಾ ।
ಅನ್ಯಾಯಾವೆನಿಸಾದೆ ಉತ್ಪತ್ತಿಸ್ಥಿತಿ ಲಯ ।
ವನ್ನೆ ಮಾಡುತಲಿಪ್ಪ ವಿನಯಾದಲ್ಲಿ ।

ಅನಂತ ಜೀವಿಗಳ ಒಡಲೊಳಡಗಿಸಿಯಿಪ್ಪ ।
ಅಂಣೋರಣಿಯರೂಪ ವಿಜಯ ವಿಠಲರೇಯ ।
ಸನ್ನುತಿ [ಸ]ಲು ಬಂದು ಸನ್ನಿಧಿಯಾಗುವ ೩

## ಅಟ್ಟತಾಳ

ಪ್ರಳಯೋದಕದಲ್ಲಿ ಜಲಜನಾಭನು ನಿ ।
ಶ್ಚಲ ವರವೈಕುಂಠ ಪೊಳಲಲ್ಲಿ ಶ್ರೀ ಭಾಗ ।
ಸ್ಥಳದಲ್ಲಿ ಪವಳಿಸಿ ಬಲುವೇಗ ನಿದ್ರಾ ।
ಲಲನೆ ಕೂಡಾಲಿರೆ ಬೆಳಗುವುದಕೆ ಮೊ ।
ದಲು ಪೇಳಿದಂತೆವೆ ತಿಳಿವೋದು ಶುದ್ಧಾರು ।
ಲಲಿತಾಂಗಿ ಅಂಭ್ರಣಿಯ ಒಲಿಸಿ ವೇಗಾದಿಂದ ।
ಸಲೆಸ್ತೋತ್ರವ ಮಾಡೆ ಒಲಿದು ಪುರುಷದೇವ ।
ಸುಲಭದಿಂದಲಿ ತಮ ಉಳಿಯಾಲೀಸದೆನುಂಗಿ ।
ಮಿಳಿತವಾಯಿತು ವಟಜಲ ಶ್ರೀ ಭೂ ದೇವಿಯ ।
ಒಳಗೆ ಏಕೀಭೂತ ಮಳಲುಗೂಡನು
ಕಟ್ಟಲು ಮನ ಮಾಡಿದ ।
ತಲುವರಿಯಾನಂತೆ ಬಲು ಪ್ರಯಾಸಿಲ್ಲದೆ ।
ಬಲು ಹರುಷದಿಂದ ಸಲ್ಲಿಸಿದ ತನ್ನಯ ಲಲನೇಯ ಬಿನ್ನಹ ।
ಚಲುವ ದೇವರದೇವ ವಿಜಯ ವಿಠ್ಠಲರೇಯ ।
ನಲಿನಲಿದಾಡುವ ಹಲವು ಕಾಲದ ದೈವಾ ೪

## ಆದಿತಾಳ

ಚತುರ ವಿಧ ಸೃಷ್ಟಿ ನೆನೆದು ಹಿತವಾಗಿ ತನ್ನ ನಿಜ ।
ಸತಿ ಮುಕ್ತಾರೊಡನೆ ಸಂತತ ಕ್ರೀಡೆ ಮಾಡುವಂಥ ।
ಚತುರ ನಾನಾ ಮೂರುತಿಯಾಗಿ ಬೆಳಗುತಿಪ್ಪ ।

ತತುವ ನಿಯಮಕ ಸ್ವಭಾವಿತ ಕಾರ್ಯ ಅನುಪಮ ।
ದ್ವಿತಿಯಾನಿರ್ಗುಣಾ ಸಗುಣ ಸತುವಾದಿಗಣದಿ ಉ ।
ತ್ಪತ್ತಿ ಯಾಗುವಂತೆ ಪಂಚಾಶತ ಕೋಟಿ ಯೋಜನ ಪರಿ ।
ಮಿತ ಬೊಮ್ಮಾಂಡವ ರಚಿಸಿ ಚತುಂರಮೊಗನು ಸುರ ।
ತತಿಮಿಕ್ಕ ಜೀವರ ಪ್ರಕೃತಿಯಿದಾ ಪುಟ್ಟಿಸಿ ಭ ।
ರಿತ ವಾಗುವಂತೆ ಸಾಕಿ ।
ಪತಿತ ಪಾವನರಂಗ ವಿಜಯ ವಿಠ್ಠಲ ತನ್ನ ।
ತುತಿಸಿದವರಿಗೆ ಸಂತತಿ ಕಾಣೊ ಇಹಪರಾ ೫

## ಜತೆ

ಜಗತ್ಸತ್ಯಾ ಅನಿತ್ಯಾ ಎನಿಸುವುದು ಕಡೆಗೆ ।
ಜಗದ್ಯೆವ ವಿಜಯ ವಿಠ್ಠಲನೆ ಎಂದಿಗೆ ಸತ್ಯಾ ೬

## ೭೪

## ಧ್ರುವತಾಳ

ಮೂಲ ಮೂರುತಿಯಾಗಿ ಏಕಾರ್ಣವದೊಳಗೆ ।
ಲೀಲೆಯಿಂದ ಸಣ್ಣ ಬಾಲನಾಗಿ ।
ಆಲದೆಲಿಯ ಮ್ಯಾಲೆ ಮಲಗಿದ್ದು ಉದರದೊಳು ।
ಮೂಲೋಕವಿಟ್ಟ ಮುದ್ದು ಮೋಹನರಾಯ ।
ಕಾಲಾದಿಗಳ ಗೆದ್ದ ಸುಪ್ರತಾಪನೆ ನಿತ್ಯ ।
ಶ್ರೀಲತಾಂಗಿಯ ಕೂಡ ಸರಸ ಮಾಳ್ಪ ।
ಪಾಲ ಸಾಗರ ಶಾಯಿ ಪರಮ ಕಾರುಣ್ಯಾ ನಿಧಿಯೆ ।
ಮೇಲು ಮೇಲು ನಿನ್ನ ಮಾಯಾಶಕ್ತಿ ಪೇಳಿ ।
ಕೇಳುವನಾರು ಅನಂತ ವೇದದಲ್ಲಿ ।

ನಾಲಿಗೆ ಸಾಲದೆ ಹಿಂದಹರೊ ।
ಜಾಲ ಕರ್ಮಗಳಲ್ಲಿ ಬಿದ್ದ ಜೀವಿಗಳನ್ನು ।
ಪಾಲಿಸಬೇಕೆಂದು ದುರ್ಗಾದೇವಿಯು ವೇಗ ।
ವಾಲಗ ಮಾಡಿದಳು ಸರ್ವ ದೇವಾದಿ ದೇವನ ।
ವಾಲಯ ಶ್ರುತಿಗಳಿಂದ ಕೊಂಡಾಡುತ್ತ ।
ಕಾಲವನ್ನೆ ತಿಳಿದು ಅಜನಬ್ದ ದ್ವಾದಶಾರ್ಧ ।
ಶೀಲಿಸಿ ಇರಲಾಗಿ ಆರಂಭಿಸಿ ।
ಲಾಲಿಸಿ ಹರಿ ತಾನು ಪತ್ನಿಯ ಮಾತಿಗೆ ಹೀ
ಯಾಳಿ ಯಿಂದಲಿ ನಕ್ಕು ಮಲಗಿದವನು ।
ಏಳುವನಂತೆ ಕಣ್ಣು ತೆರೆದು ನೋಡಿದ ಅನು
ಕೂಲವಾದನು ಸಿರಿಯ ಭಕ್ತಿಗೊಲಿದು ।
ನಾಲ್ಕು ಬಗೆಯ ಸೃಷ್ಟಿ ರಚಿಸುವೆನೆಂದು ಗೋ
ಪಾಲನೆನದನಂದು ಜ್ಞಾನಾನಂದ ।
ಆಲೋಚನೆಯ ಮಾಡು ಎಲೊ ಮಾನವನೆ ನೀನು ।
ತಾಳಿದ ಪ್ರಥಮದಲ್ಲಿ ಶುದ್ಧ ಸೃಷ್ಟಿ ।
ಶೀಲಗುಣ ಸಂಪನ್ನ ನೀನೆ ನಿನಗೆ ನಿತ್ಯ ।
ಬಾಳುವೆನವತಾರಗಳನು ಮಾಡಿ ।
ಶ್ರೀ ಲಕುಮಿ ಮುಕ್ತರಿಗೆ ಪರಾಧೀನ ವಾಪ್ತ ಸೃಷ್ಟಿ ।
ಪೇಳುವ ದೇಯಿದೆ ದ್ವಿತಿಯಾ (ಸೃಷ್ಟಿ)ರ್ಥವೋ ।
ಸ್ಥೂಲ ದೇಹ ಸಂಯೋಗ ಸಲಿಂಗರಾದ ವಿವಿಧ ।
ಆಳುಗಳಿಗೆ ಇದೆ ತೃತೀಯ ಸೃಷ್ಟಿ ।
ಸ್ಥೂಲ ಸಂಸಾರದೊಳು ಇಪ್ಪುದಕೆ ಮಿಶ್ರವೆನ್ನಿ ।
ನಾಲ್ಕನೆ ಸೃಷ್ಟಿ ಕೇವಲ ನಾಮವೊ ।
ಕಾಲ ಕರ್ಮಾದಿ ಯಲ್ಲ ನಿರ್ಮಾಣವಾಗುವುದು ।
ಏಳೇಳು ಭುವನದಲ್ಲಿ ಇನಿತು ಜನನ ।

ಏಳಲ ಮಾಡದಿರು ಮಿಶ್ರ ಕೇವಲದೊಳಗೆ ।
ಕೇಳು ಪ್ರಾಕೃತ ವೈಕೃತ ಸೃಷ್ಟಿಯ ।
ಮೇಲೆ ದಿವಿಜಾದ್ಯರಿಂದ ಆಗುವುದೊಂದು ಕೂಡಿದರೆ ।
ನಾಲ್ಕು ಮೇಲಾರು ಸೃಷ್ಟಿಯ ವಿವರ ।
ನೀಲ ಮೇಘಶ್ಯಾಮ ವಿಜಯ ವಿಠ್ಠಲರೇಯ ।
ಬಾಲ ಕ್ರೀಡನಂತೆ ಬೊಮ್ಮಾಂಡ ಪುಟ್ಟಿಸುವ ೧

## ಮಟ್ಟತಾಳ

ಬೊಮ್ಮಂಡದ ಹೊರಗಿನ ಪ್ರಾಕೃತ ಗುಣವೈ ।
ಷಮ್ಯ ಮಹತತ್ವ ಅಹಂಕಾರ ವೈಕಾರಿಕ ।
ಸುಮ್ಮನಸರ ಮನಸು ಜ್ಞಾನ ಕರ್ಮೆಂದ್ರಿಯಗಳು ।
ಅಮ್ಮಹ ಪಂಚಭೂತಗಳು ತನ್ಮಾತ್ರಗಳೈದು ।
ಬೊಮ್ಮಾಂಡಾಂತರದಿ ಸ್ಥಾವರ ಪಶ್ವಾದಿ ।
ಘಮ್ಮನೆ ತಿಳಿವುದು ಪ್ರಾಕೃತ ವೈಕೃತ ।
ರಮ್ಮೆಯರಸ ನಮ್ಮ ವಿಜಯ ವಿಠ್ಠಲರೇಯನ ।
ಒಮ್ಮೆಗಾದರು ನೆನೆದು ಈ ಪರಿ ಕೊಂಡಾಡಿ ೨

## ರೂಪಕ ತಾಳ

ಮತ್ತೆ ದೇವತೆಗಳ ಸೃಷ್ಟಿ ಉಂಟು ಬಗೆ ದೇ ।
ವತ್ತೆಗಳು ಸರ್ವ ಪುರುಷಾದ್ಯರ ವಿಡಿದು ।
ಪಿತೃ ಋಷಿಗಳು ದಾನವ ಗಂಧರ್ವಾಪ್ಸರ ಸ್ತ್ರೀಯರು ।
ಪ್ರತ್ಯೇಕ ಸಿದ್ಧರು ಯಕ್ಷ ರಕ್ಷ ಚಾರಣ ।
ಉತ್ತುಮರಾಗಿಪ್ಪ ಇವರೊಳು ಎಣಿಸು ದೇ ।
ವತ್ತೆಗಳು ಎಲ್ಲ ನೂರು ಜನ ಋಷಿಗಳು ।
ಪಿತೃಜನ ನೂರು ಮಂದಿ ದಾನವರೊಳು ಮೂ ।

ವತ್ತು ಜನ ಗಂಧರ್ವರಿನ್ನೂರು ಇದರಷ್ಟೆ ।
ನೃತ್ಯವಾಡುವ ಅಪ್ಸರ ಸ್ತ್ರೀಯರು ಯಕ್ಷ ಎ ।
ಪ್ಪತ್ತು ಜನ ಇವರಂತೆ ರಕ್ಷ ಚಾರಣರು ಮೂ ।
ವತ್ತು ಜನ ಸಿದ್ಧರು ಇನ್ನೂರು ಜನ ಎ
ಪ್ಪತ್ತು ಎಪ್ಪತ್ತು ಜನ ಸರ್ವ ಜಾತಿಗಳೊಳಗೆ ।
ತತ್ವ ಈ ಪರಿ ತಿಳಿದು ನೀಚ ಕ್ರಮದಿಂದ ।
ಭಕ್ತಿಯ ಮಾಡು ನೀ ಮನ ಮುಟ್ಟಿ ಮನುಜಾ ।
ವಿಸ್ತರಿಸುವೆ ಇದರ ಸಂಗತಿಯು ಮುಂದೊಲಿಸಿ ।
ಇತ್ತಲಾದ ಸೃಷ್ಟಿ ಕ್ರಮದಿಂದಲಿ ।
ಪತ್ರ ಶಾಯಿ ಶೂನ್ಯ ನಾಮಕ ನಾರಾಯಣ ।
ಮೂರ್ತಿ ತಾನೇವೆ ಪುರುಷನಾದನಯ್ಯ ।
ಮತ್ತೆ ರೂಪ ಧರಿಸಿ ವಾಸುದೇವನೆಂಬೊ ।
ಕೀರ್ತಿಯಿಂದಲಿ ಮಾಯಾ ದೇವಿಯಲ್ಲಿ ।
ಪೆತ್ತನು ಪುರುಷ ನಾಮಕ ವಿರಂಚಿಯ ತ ।
ತ್ಪತ್ನಿ ಪ್ರಧಾನ ತ್ರಿರೂಪಾತ್ಮಕಳ ।
ಸೂತ್ರ ನಾಮಕ ಪ್ರಾಣ ಜಯ ಮುಸಲ ಧರಗೆವು ।
ತ್ಪತಿಯಾದನು ಬ್ರಹ್ಮನ ಯೆರಡು ವರುಷಕ್ಕೆ ।
ಇತ್ತಲಾದರು ಪ್ರದ್ಯುಮ್ನ ಕೃತಿಗೆ ಸಾ ।
ವಿತ್ರಿ ಗಾಯತ್ರಿ ಸರಸ್ವತಿನಾಮವು ।
ಪ್ರತ್ಯೇಕವಾಗಿದ್ದ ಪ್ರಕೃತಿ ಶಬ್ದ ಭಾ ।
ರತಿ ಶ್ರದ್ಧೆ ಯೆಂಬೊ ನಾಮವ ಧರಿಸಿ ।
ಉತ್ತಮ ಗುಣದಲ್ಲಿ ಈರ್ವರು ಜನಿಸಿ ಸಂ ।
ಪತ್ತು ಪಡೆದ ಕಾಣೋ ಅಜ ಪ್ರಾಣರ ।
ಪತ್ನಿಯರು ತಾವಾಗಿ ಪ್ರಜಾವಂತರಾದರು ದೇ ।
ವತ್ತಿಗಳ ಚರಿಯ ಎಣಿಸಾ ಸಲ್ಲ ।

ಸೂತ್ರ ನಾಮಕ ವಾಯು ಜನಿಸಿದ ತರುವಾಯ ।
ಅರ್ಥಿಯಿಂದಲಿ ಮೂರು ನಯನ ಶಿವರು ।
ಅತ್ಯಂತ ಜಗದ್ಭರಿತ ವಿಜಯ ವಿಠ್ಠಲರೇಯ ।
ಪುತ್ರ ಪುತ್ರಿಗಳಿಗೆ ವೈವಾಹ ಮಾಡಿದ ೩

## ಝಂಪಿ ತಾಳ

ಮೂರು ವಿಧವಾದ ಅಹಂಕಾರ ತತ್ವವು ವೈ ।
ಕಾರಿಕ ತೈಜಸ ತಾಮಸ ಸೂಕ್ಷ್ಮಗಳು ।
ಭಾರತಿ ಸರಸ್ವತಿ ಪುಟ್ಟಿದ ವರುಷ ಎರಡು ।
ಮೀರಿ ಹೋಗಲು ಪುರುಷ ಪ್ರಕೃತಿಯಲ್ಲಿ ।
ವಾರುಣಿ ಪತಿ ಶೇಷ ಜೀವನಾಮಕನಾಗಿ ।
ಈರ ಭಾರತಿಗೆ ಕಾಲ ನಾಮಕ ಗರುಡ ।
ಈರ ಜನ ಜನಿಸಿದರು ಪ್ರದ್ಯುಮ್ನ ಕೃತಿಯ ಕು ।
ಮಾರಿಗಳ ನೋಡೆ ಎರಡೂ ವರುಷಕೆ ।
ನೆ[ರೆ]ದ ಕಾಲನಾಮಕ ಗರುಡ ಪರ್ಯಂಕ ।
ವಾರುಣಿ ಪತಿಯರು ಹರಿಯ ಸೇವಿಸುತ್ತ ।
ವಾರಿಜ ಸಂಭವನ ವರುಷಗಳು ಇಲ್ಲಿಗೆ ।
ಆರೊಂದು ಸವೆದವು ಈ ಮಧ್ಯದಲಿ ಈ ।
ಮಾರುತನು ಭಾರತಿಯು ಈರ್ವರು ಪುಟ್ಟಿದರು ।
ಈರೆರಡು ಶಿರದವನ ಉದರದಲ್ಲಿ ।
ಶಾರೀರವನೆ ತೆತ್ತು ಬಲಾಖ್ಯ ನಾಮದಲಿ ।
ನಾರಿ ಕೊಡಲಿ ಮೆರೆದ ಮುಖ್ಯ ಪ್ರಾಣ ।
ಮಾರ ವೈರಿಯ ಸಮ ಜೀವ ನಾಮಕನು ಈ ।
ಮಾರುತನಿಂದಲಿ ಪುಟ್ಟಿ ಪುನಹ ತಾನೆ ।
ಪೂರುವದ ಜಯಸುತನ ಗರ್ಭದಲ್ಲಿ ಬಂದ ವಿ ।

ಹಾರದಲಿ ಕಾಲನೊಡನೆ ಉರಗೇಶ ।
ಸಾರುವೆನು ಜೀವ ಕಾಲಖ್ಯರಾದೊಂದು ವರುಷಕ್ಕೆ ।
ವಿರಿಂಚಿ ಬೊಮ್ಮನು ಪ್ರದ್ಯುಮ್ನ ಕೃತಿಗೆ ಕು ।
ಮಾರನಾದನು ಒಂದು ವತ್ಸರಕ್ಕೆ ।
ಈ ರೀತಿಯನು ತಿಳಿ ಬೊಮ್ಮರಾಯಗೆ ಇಲ್ಲಿಗೆ ।
ಆರೆರಡು ವರುಷ ಹೋದವು ಹಿಂದಾಗಿ ।
ಸಾರ ಹೃದಯರ ವಾಸ ವಿಜಯ ವಿಠ್ಠಲರೇಯ ।
ತಾರತಮ್ಯವ ಮಾಡಿ ಸಕಲರನು ಸಾಕುವಾ ೪

## ರೂಪಕ ತಾಳ

ಇದೆ ಅಜನು ತನ್ನ ಪತ್ನಿಯಾದ ವಾಣಿಯ ತ್ರಿ ।
ವಿಧ ರೂಪದಲಿ ಅಮೋಘ ವೀರ್ಯವಿಟ್ಟು ।
ಅದನ್ನೆಲ್ಲ ಏಕತ್ರಯ ಮಾಡಿ ಗಾಯತ್ರಿ ।
ಉದರದೊಳಗೆ ಇಟ್ಟು ಅವಳಿಂದ ತಾನೆವೆ ।
ಉದುಭವಿಸಿದನು ಬ್ರಹ್ಮನೆಂಬೊ ನಾಮದಲಿ ।
ಮುದದಿಂದ ಸೂತ್ರನಾಮಕ ವಾಯು ರೈ ವಾಣಿ ।
ವಿಧಿ ಕೂಡ ಜನಿಸಿದರು ಪುನಹ ಮುಂದೆ ಈ ।
ಪದುಮ ಗರ್ಭನು ಪ್ರಥಮ ರೂಪಳಾದ ಸ ।
ತ್ವದ ಗಾಯತ್ರಿಯಲ್ಲಿ ವೀರ್ಯವಿಟ್ಟು ।
ತದುಪರಿ ಬಲನೆಂಬೊ ಪ್ರಾಣನಿಂದಲಿ ಜನಿ ।
ಸಿದ ಜೀವನಾಮಕ ಶೇಷ ದೇವ ।
ಮೊದಲು ಉದುಭವಿಸಿದ ವೈಕಾರಿಕ ರುದ್ರ ।
ತದ ನಂತರದಲ್ಲಿ ಈರ್ವರ ಹೆಂಡರು ।
ಸದಮಲನಾಗಿ ಪುಟ್ಟಿಸಿದನು ಯಿತ್ತಲು ಗಾಯಿ ।
ತ್ರಿ ದೆಶೆಯಿಂದ ಬಂದ ವಾಯು ಭಾರತಿಯಲ್ಲಿ ।

ಒದಗಿ ಪುತ್ರರಾದರು ಉತ್ಸಹದಲಿ ರಜ ಲಿಂ ।
ಶದಲಿ ಗರುಡ ರುದ್ರ ಕಾಲ ತೈಜಸರೆಂದು ।
ಸುದತಿಯರೊಡನೆ ಪುಟ್ಟಿದರು ಗಡ ಆಮೇಲೆ ।
ವಿಧಿಯಿಂದ ಜನಿಸಿದ ಜೀವನಾಮಕನಿಂದ ।
ಉದಿತರಾದರು ತಾಮಸರುದ್ರ ಪಾರ್ವತಿ ।
ಮದನ ಕೋಟಿ ಲಾವಣ್ಯ ವಿಜಯ ವಿಠ್ಠಲರೇಯ ।
ಅದು ಭೂತ ಶಕ್ತನು ಯೋಗಿಯೋಗೇಶ್ವ ರ ೫

## ಧ್ರುವತಾಳ

ಚತುರಾಸ್ಯ ಸೂತ್ರ ಜೀವನಾಮಕ ಶೇಷರಿಗೆ ।
ಸತುವ ರಾಜಸ ತಮೊ ಗುಣಾಂಶ ಸೂಕ್ಷ್ಮಾದಿ ।
ಉತ್ಪತ್ತಿಯಾದ ರುದ್ರರ ಮೂರು ರೂಪಗಳು ।
ನ್ನತವಾಗಿ ಮೆರೆದವು ವಿಷ್ಣು ಬ್ರಹ್ಮೇಶ ಎಂದು ।
ತತು ತತು ಗುಣದಿಂದ ಕರೆಸಿದವಿದರೊಳು ।
ಸತುವ ಪ್ರಾಚುರ್ಯವುಳ್ಳ ವಿಷ್ಣುನಾಮಕ ರುದ್ರ ।
ಸುತರನ್ನು ಪಡೆದನು ಬುಧ್ಯಭಿಮಾನಿಯಲ್ಲಿ ।
ಚತುರರು ತಿಳಿವುದು ಅವರವರ ಪೆಸರು ।
ರತಿ ಪತಿ ಸಮನೀತ ಅಹಂಕಾರಿಕ ಬೃಹ ।
ಸ್ಪತಿ ಯಿಂದ್ರಾಣಿ ಶುಕ್ರ ಅನಿರುದ್ಧ ರುದ್ರರು ಸು ।
ಮತಿವಂತ ನಿಋರತಿ ಮೂಷಕವಾಹ ವಿತ್ತ ।
ಪತಿ ಸ್ವಾಹಾ ಸ್ವಧಾ ಬುಧ ಉಷ ಶನಿ ಪುಷ್ಕರ ।
ಪಿತರು ಗಂಧರ್ವ ಸಮಸ್ತ ಮುಕ್ತಿ[ಯೋಗ್ಯ]ಜನರು ।
ಪ್ರತ್ಯೇಕವಾಗಿ ಜನಿಸಿದರು ಆಗಮ ಕೇಳಿ ।
ಪ್ರತಿ ಮಾತು ಇನಿತರೊಳು ಸೂತ್ರ ನಾಮಕ ಭಾ ।
ರತಿ ಪತಿಯಲ್ಲಿ ಜನಿಸಿದರು ವಿ ।

ಪತಿ ಕಾಲ ನಾಮಕ ಇಂದ್ರ ಮೊದಲಾದವರು ।
ಕೃತು ಅಭಿಮಾನಿಗಳು ನಿಜವೆನಿಸಿ ಸೂಕ್ಷ್ಮ ಸೃಷ್ಟಿ ।
ಶಿತ ಮೊಗ ಸೌಪರಣಿಗೆ ಜಯ ವಿಷ್ವಕ್ ಸೇನಾದಿ ।
ಸುತರಾದರು ಕಾಣೊ ಉಚ್ಛ ಕ್ರಮಾನುಸಾರ ।
ಹಿತವೆನ್ನು ಪುನರಪಿ ಸಮಸ್ತ ಪುಟ್ಟಿದ ದೇ ।
ವತೆಗಳು ಸ್ಥೂಲ ದೇಹ ಇಚ್ಛೈಸುವರಾಗಿ ।
ಅತಿಶಯದಿಂದಲ್ಲಿ ತಮ್ಮ ತಮ್ಮ ಅಂಶ ಮಿ ।
ಳಿತವಾಗಿ ಶ್ರೀಹರಿಯಾಜ್ಞಾನು ಸಾರದಿ ।
ಕೃತಿ ಪತಿಯಾದ ಪ್ರದ್ಯುಮ್ನ ಸ್ವಾಮಿಯ ಉದರ ।
ಗತಿ ತಪ್ಪದಂತೆ ಪ್ರವೇಶವಾದರು ಮುಂದೆ ।
ಕೃತು ಭುಜ ಸಾವಿರ ವರುಷ ತನ್ನ ಗರ್ಭದಿ ಅ ।
ಚ್ಯುತನು ಇಟ್ಟು ಕೊಂಡು ಆಮೇಲೆ ಶಾಂತಿಯ ।
ಪತಿಯ ಕೈಗೆ ಕೊಡಲು ಸರ್ವ ಜೀವರ ನೋಡಿ ।
ಚತುರ ಮೂರುತಿ ಸ್ಥೂಲ ಗಾತ್ರವನ್ನೆ ನಿ ।
ರ್ಮಿತ ಮಾಡಲಾಗಿ ಪ್ರದ್ಯುಮ್ನ ತನ್ನ ಗರ್ಭದಿ ನ ।
ಗುತ ಪೊಂದಲಿಟ್ಟುಕೊಂಡ ಇಲ್ಲಿಗೆ ಅಜನಬ್ದ ।
ಮಿತವಾದವು ಕೇಳಿ ಜೀವಕಾಲರ ಉ ।
ತ್ಪತಿಯಾರಂಭಿಸಿ ದ್ವಯ ಸಂದಿದವು ಎಲ್ಲ ।
ಚತುರ ವಿಧ ಸೃಷ್ಟಿ ಮೊದಲು ಮಾಡಿ ಇಲ್ಲಿಗೆ ।
ಚತುರಾನನನ ವರುಷ ಹತ್ತು ಸಂದಿ ಪೋದುವು ।
ಪ್ರತಿಯಿಲ್ಲದ ದೈವ ವಿಜಯ ವಿಠ್ಠಲರೇಯ ।
ಸ್ತುತಿಸಿದವರಿಗೆ ಈ ಪರಿಯಿಂದ ಪ್ರೇರಿಸುವ ೬

## ಝಂಪಿ ತಾಳ

ಸರಸಿಜ ಸಂಭವನ ಹನ್ನೊಂದನೆಯ ವರುಷ ।
ಬರಲಾಗಿ ಪ್ರದ್ಯುಮ್ನ ಅರ್ಧನಾರಿಯ ರೂಪ ।
ಧರಿಸಿದನು ವರ್ಣಭೇದದಿಂದಲಿ ।
ಸರುವ ಜೀವರನು ಸೃಜಿಸಿದನು ಹೆಂಗಳ ಪೂಂಸ ।

ಇರುತಿಪ್ಪದು ವಿಸ್ತಾರವಾಗಿ ।
ಅರಿಯಬೇಕು ಸವ್ಯಾಪಸವ್ಯದಿಂದ ಚ ।
ತುರ ಸ್ಥಾನವ ತಿಳಿದು ಮುಖ ಬಾಹು ಉರಂಘ್ರಿ ।
ಪರಮೇಷ್ಠಿ ಅನಲ ಮರೀಚಾದ್ಯರು ।
ಧರುಣೀ ಸುರರೆನ್ನಿ ಮುಖದಿಂದ ಜನನ ।
ಮರುತ ಖಗ ಶೇಷ ಶಿವ ಇಂದ್ರ ಸ್ಮರ ರವಿ ಚಂದ್ರಾ ।
ದ್ಯರು ಕ್ಷತ್ರಿಯರು ಬಾಹುಜರು ಕಾಣೊ ।
ಎರಡೊಂದನೆ ಜಾತಿ ಉಳಿದ ಸೂರ್ಯರು ।
ರುದ್ರರು ವಸುಗಳು ಮಿಗಿಲಾದ ಜನರು ।
ಸರಿಮಾರು ದೆಶೆಯಿಂದ ಪುಟ್ಟಿದ ವೈಶ್ಯರು ಎನ್ನು ।
ಚರಣದಿಂದಲಿ ಜನಿತವಾದ ಶೂದ್ರ ಜಾತಿ ।
ನಿಋರತಿ ಭೂ ಮೃತ್ಯು ಕಾಲಾದ್ಯರು ।
ಎರೆಡೆರೆಡು ಜಾತಿಗಳು ಪುಟ್ಟಿದರು ಇವರ ಹೆಂ ।
[ಡಿರ] ವಾಮ ಭಾಗದಿಂದ ಜನಿಸಿದರು ।
ತರತಮ್ಯದಿಂದ ಸಾಧನ ಮಾಡುವ ಮುಕ್ತರು ಕಾಣೊ ।
ಹರಿಗೆ ಪ್ರೀತಿವಂತರು ಹಿರಿದಾಗಿ ಗ್ರಹಿಸುವುದು ಬ್ರಹ್ಮದೇ ।
ವರ ಹತ್ತು ವರುಷ ಪರಿಯಂತ ಪ್ರದ್ಯುಮ್ನ ದೇವ ।
ಮಿರುಗುವ ಅರ್ಧನಾರಿ ವೇಷವ ಧರಿಸಿ ।
ವಿರಚಿಸಿದ ಸೃಷ್ಟಿಯನೆ ಜಾತಿ ಭೇದ ।
ಪರಿತೋಷದಿಂದಲಿ ಇಲ್ಲಿಗಬ್ಜಭವನ ।
ವರುಷ ವಿಂಶತಿ ತುಂಬಿದವು ನೋಡಾ ।
ತರುವಾಯ ಪ್ರದ್ಯುಮ್ನ ದೇವನು ಸರ್ವ ಜೀ ।
ವರನು ಅಂಕುರನ್ಯೈಸಿ ಅನಿರುದ್ಧನ ।
ಕರಕೆ ಕೊಡಲಾಗಿ ಕೈಕೊಂಡ ಶಾಲ್ಯಾದಿ ಅಂ ।
ಕುರ ಪ್ರಕಾರದಲಿದ್ದ ಲಿಂಗಗಳನ ।

ನಿರುತ ಪ್ರಕೃತಿಯಿಂದ ಬಂದುದೆ ಇದು ಸತ್ಯ ।
ಪರಮ ಜ್ಞಾನಿಗಳು ಇನಿತು ಸಂಗ್ರಹಿಸಬೇಕು ।
ವರ ಪ್ರಳಯ ಜಲದಲ್ಲಿ ಇಂತು ಸೃಜಿಸಿತು ಸೂಕ್ಷ್ಮ ।
ತರವಾದ ದೇಹಗಳು ಪ್ರಾಪ್ತವಾಗಿ ।
ಸುರ ದಾನವರೊಡೆಯ ವಿಜಯ ವಿಠ್ಠಲರೇಯ ।
ಕರುಣಾಕರ ಕೇಳೊ ಕಾರಣ್ಯ ಮಾಳ್ಪ ೭

## ಮಟ್ಟತಾಳ

ಸರಸಿಜ ಸಂಭವನ ಇಪ್ಪತ್ತೊಂದನೆಯ ।
ವರುಷ ಪ್ರಾಪ್ತವಾದ ಮೊದಲು ದಿವಸದಲಿ ।
ಚರಿಯ ಮಾಡಿದ ದೇವ ಅನಿರುದ್ಧ ನಾಮಕನು ।
ಸರುವ ಜೀವ ರಾಶಿಗಳನು ತೆಗೆದುಕೊಂಡು ।
ಧರಿಸಿದನು ತನ್ನ ಉದರದೊಳಗೆ ಅಂದು ।
ಎರಡೊಂದು ಗುಣದೊಡತೆ ಶಾಂತಿ ದೇವಿಯಲ್ಲಿ ।
ಇರತಕ್ಕವರನು ಮಾಡಿ ಇಟ್ಟನು ಗಡ ।
ಸರಸವಾಗಿದೆ ನೋಡಿ ಗುಣದ ವಿಚಾರ ವಿ ।
ವರವ ತಿಳಕೊಂಬುವುದು ಚನ್ನಾಗಿ ಜನರು ।
ಎರಡೊಂದು ಗುಣವು ವರ್ಣಿಸ ಬೇಕಾದಡೆ ।
ಪರಿ ಪರಿ ವಿಧಿಯುಂಟು ಒಂದರೊಳಗೆ ಒಂದು ।
ಸರಿ ಬೆರಸಿ ಬೆರಸಿ ಅಚ್ಚ ಅಚ್ಚನಾಗಿ ।
ಇರುತಿಪ್ಪರು ಕೇಳೊ ಮಹದಾದಿಗಳೆಲ್ಲ ।
ಸರಸಿಜ ಜಾಂಡಕ್ಕೆ ಉಪಾದಾನವಾದ ।
ಪರಮಾಣುಗಳಿಂದ ಮೂಲ ಪ್ರಕೃತಿ ಗಣನೆ ।
ಕುರುಹು ಕಾಣಲಿ ಬೇಕು ಗುಣ ಸಾಮ್ಯ ವೈಷಮ್ಯ ।
ಹರಿಯೆ ಸ್ವತಂತ್ರನೆ ನೀನಲ್ಲದೆ ಮತ್ತೆ ಪರ ದೇವತೆಯುಂಟೆ ।

ತರಣಿ ಮಂಡಲದೊಳಗೆ ಕತ್ತಲೆಯನು ಪೊಗಿಸಿ ।
ಧರೆಯಲ್ಲಾತನೆ ಪೇಳಿಕೊಂಬೆನುಂದೂ ।
ಭರದಿಂದಲಿ ಕುಳಿತು ಜನಿಸಿದ ನರನ ತೆರದಿ ।
ಹರಿಗೆ ಮಾಯವ ತಂದು ಪೊಂದಿಸುವುದರಂತೆ ।
ಒರಲುವೆ ವದನದಲಿ ಕರದಿಂದಲಿ ಮಿಥ್ಯ ।
ಬರದು ನೋಡಿದರೆ ಏನಾಗುವುದೊ ಪಾಪಿ ।
ವರಣಗಳಿಗೆ ಭೇದ ಮಿ ಎಂಬುದು ಮೊಂದು ।
ಎರಡನೆ ಅಕ್ಷರ ಥ್ಯಾ ಯೆಂದು ನುಡಿಯಿತಲ್ಲೊ ।
ಚಿರಕಾಲ ನೀನೆ ಯೆಲ್ಲಾ ಒಂದೆಯೆಚಿಂತಾತುರ ಉ ।
ತ್ತರ ವ್ಯಾಕೆ ಬರದು ಓದಿನೋಡಿ ಪೂರ್ವೋ ।
ತ್ತರ ಸಂಗತಿ ಅರಿತು ಗುಣಿಸಲಾಗಿ ಭೇದವೆ ।
ತೋರುವುದು ಪರ ಇಹಲೋಕದಲಿ ।
ಎರಡೊಂದು ಗುಣನಿಯಾಮಕ ವಿಜಯ ವಿಠ್ಠಲರೇಯ ।
ತರಳ ನಂದದಿ ಬಾಲಕ್ರೀಡೆಯಾಡುತಿಪ್ಪ ೮

## ರೂಪಕ ತಾಳ

ತತು ಪೂರ್ವದಿಂದ ಲಿಂಗ ಕಾರ್ಯ ವಿಡಿದು ।
ಉತ್ಪತ್ತಿಯಾದ ಕ್ರಮದಂತೆ ಬ್ರಹ್ಮವಾಯು ಸರ ।
ಸ್ವತಿ ಭಾರತಿಯಿಂದ ಪುಟ್ಟಿದರು ಪಾರ್ವತಿ ।
ಪತಿ ತಸಕ ಅದರಂತೆ ಗುಣಿಪುದು ಪ್ರ ।
ಕೃತಿ ಕಾರ್ಯವಿದು ಸಿದ್ಧ ಬ್ರಹ್ಮಾಂಡದಲಿ ಸತ್ಯ ।
ಚತುರ ವಿಂಶತಿ ತತ್ವ ಕಾರಣ ಕಾರ್ಯಭಾವ ।
ಪತಿತರು ಈ ಪರಿ ಇರಲಿಕ್ಕೆ ಭುವನಕ್ಕೆ ।
ಪತಿತವೇನಹುದೆಂದು ಕೂಗ್ಯಾಡುವರು ಗಡ ।

ಮೃತ ಜೀವಿ ಹತಭಾಗ್ಯ ಜೀವೇಶವೊಂದೆಂಬ ।
ಕಥೆಯ ಪೇಳುವುದೆತ್ತ ಭುವನದಲ್ಲಿ ।
ಚತುರವಿಧ ದೋಷ ರಹಿತಗೆ ಜೀವನ ಕೂಡ ।
ಪ್ರತಿ ಪ್ರತಿ ಕಲ್ಪದಲಿ ಐಕ್ಯವೆಂತೊ ।
ಮತಿಹೀನಕೇಳೊ ಪರಬ್ರಹ್ಮ ಜೀವ ಭಾವ ।
ಕ್ಷಿತಿಯೊಳಗೈದಿದವೆಂಬೊದಲ್ಲದೆ ಸಿರಿ ।
ಪತಿ ಜೀವವೆ ಆದ ಯೆಂಬದು ಪುಶಿ ಕಾಣೊ ।
ಸತುವ ಪ್ರವೃತ್ತಿಗಳು ಆತನಾಧೀನದಲಿ ।
ಮಿತವಾಗಿ ಇರಲಿಕ್ಕೆ ಆ ಹರಿಗೆ ಸಂತತ ।
ತತು ತತು ತತು ಜೀವರ ಪೆಸರುಗಳುಂಟು ।
ತತ್ತ ತತ್ವದನಾಮ ಸ್ಥಿರವಾಗಿ ಇಪ್ಪದು ।
ಮತಿಗೆ ಗೋಚರಿಸುವ ಬಗೆ ಮನುಜ ಮಾ ।
ರುತ ಬಂಧ ಕಾಷ್ಟದಿ ದ್ರವ್ಯದಿಂದಲಿ ಕರ ।
ವುತಲಿಪ್ಪರು ನೋಡೊ ಆ ನರಗೆ ಅದೆ ಪೆಸರೆ ।
ಶ್ರುತಿ ವಿರುದ್ಧವು ಕಾಣೊ ಇನಿತೆಂದು ಸ್ಥಾಪಿಸಲು ।
ಹತವಾಗುವುದು ಪೂರ್ವ ಪುಣ್ಯದಿಂದ ।
ರತಿ ಪತಿ ಪಿತ ನಮ್ಮ ವಿಜಯ ವಿಠ್ಠಲರೇಯನ ।
ಸ್ತುತಿಸಬೇಕು ನಿತ್ಯ ಈ ಪರಿಯಲಿ ಗುಣಿಸಿ ೯

## ತ್ರಿವಿಡಿತಾಳ

ಕಮಲ ಪೀಠನಿಂದ ಪುಟ್ಟಿದ ಜೀವನೇ ಶೇಷ ।
ತಮೂಗುಣದ ರುದ್ರನ್ನ ಸತಿ ಸಮೇತದಿ ಪಡೆದ \
ಉಮೆಯರ ಸಂದ ಸುತ್ರಾಮ ಮನು ಮಥನ ।
ಜನನವಾದರು ಕಾಣೊ ಯೋಗದಿಂದ ।

ಕ್ರಮವನ್ನೆ ಕೇಳಿ ಅಹಂಕಾರದಲಿ ತ್ರಿರೂಪ ।
ಸಮನಾಗಿ ಇಪ್ಪ ಮಹರುದ್ರ ತನ್ನ ।
ಯಮ ನೇಮ ಅಷ್ಟಾಂಗ ಯೋಗದಿಂದಲಿ ಪರಾ
ಕ್ರಮಶಾಲಿ ಶಿವ ವೊಂದೆ ದೇಹನಾದ ।
ಉಮಿಗೆ ಅರ್ಧಾಂಗವನೆ ಕೊಟ್ಟು ಎಡ ಬಲದಿಂದ ।
ಸುಮನಸರ ಪಡೆದನು ಲೀಲೆಯಿಂದ ।
ಅಮರೇಶ ವಿಷ್ಣು ರವಿ ಧಾತ ಪೂಷ ತ್ವಷ್ಟಾ ।
ರ್ಯಮ ಭಗ ಮಿತ್ರ ಯಾದಸಾ (?) ಪರ್ಜನ್ಯ ।
ಸಮ ವಿಷಮ ಉಂಟು ಸವಿತಾನೊಡನೆ ಮುಂದಣಾ ।
ಗಮ ಕೇಳಿ ದಶ ವಿಶ್ವರುದ್ರ ಹನ್ನೊಂದು ಉ ।
ತ್ತಮರುಂಟು ಮರುತಗಳು ಒಂದು ಕಡಿಮೆ ಸಂಖ್ಯ ।
ವಿಮಲರು ಭೂಗಂಧರ್ವ ಋಷಿ ಯಕ್ಷ ಸಿದ್ಧ ।
ತಮ ತಮಗೆ ಜನಿಸಿದರು ರಮಣೀಯ ಮನದಿ ।
ಸಮಸ್ತಜನ ಸರ್ವ ಸ್ಥಾವರ ಜಂಗಮವೆಲ್ಲಾ ।
ತುಮದಿಂದ ಪುಟ್ಟಿಸಿದ ಕರಣಗಳಿಂದ ।
ಉಮೆಯ ಎಡಭಾಗದಿಂ ಸ್ತ್ರೀಯರ ಪಡೆದು ಅನು ।
ಪಮಳೆನಿಸಿ ಕೊಂಬಳೈ ಲೋಕಾಂಬಿಕೆ ।
ಹಿಮಕರ ಭೂಷಣನು ಹದಿನಾಲ್ಕು ವತ್ಸರ ಮಾನ ।
ಕಮಲ ಭವನಿಗೆ ಸಲ್ಲುವುದು ಗಣಿತ ।
ಅಮಮ ಈತನ ಶಕ್ತಿ ಪೊಗಳಲೊಶವೆ ತಿರುಗಿ ।
ಸಮರಾಗಿ ನಿಂತವು ರೂಪತ್ರಯ ।
ಉಮೆಯರಸ ಬ್ರಹ್ಮದೇವರವೊಂದು ವತ್ಸರ
ರಮೆಯರಸ ನಂಘ್ರಿಯನು ವೈರಾಗ್ಯದಿ ।
ಸಮ ಬುದ್ಧಿಯಲಿ ಭಜಿಸಿ ವರವ ಪಡೆದೊಂದೊಂದು ।
ಕ್ರಮದಿಂದ ತಾಳಿದ ಮೂರು ರೂಪ ।
ಅಮಿತ ಪ್ರತಾಪ ಸಿರಿ ವಿಜಯ ವಿಠ್ಠಲನಿಗೆ ।
ಸಮರ್ಪಿಸಿ ಸರ್ಗವನು ಮಾಡಿದನು ಮಹೇಶ ೧೦

## ಧ್ರುವತಾಳ

ವೈಕಾರಕ ಗುಣದಿಂದ ಮನಸ್ತತ್ವ ದಿಗ್ದೇವತೆ ।
ಪಾಕ ಶಾಸನ ಪ್ರಾಣ ವರುಣೇಶ್ವನೇಯ ವನ್ಹಿ ।
ಲೋಕ ಲೋಚನ ಯಜ್ಞ ಮಿತ್ರ ದಕ್ಷ ಪ್ರಜೇಶ ।
ವಾಕು ಮಿಕ್ಕಾದದಕೆ ಅಭಿಮಾನಿಗಳಿವರು ।
ನೀ ಕೇಳು ತೈಜಸ ಗುಣ ರುದ್ರನಿಂದಲು ।
ಏಕೇಕ ಎಂಟು ಇಂದ್ರಿಯಂಗಳುದ್ಭವ ।
ಬೇಕಾದ ಮಾತು ತಾಮಸ ಗುಣ ರುದ್ರನಿಂದ ।
ಆಕಾಶ ಶಬ್ಧ ಮಾತ್ರ ಭೂತಂಗಳು ಪಂಚ ।
ಈ ಕ್ರಮಕ್ಕಾಗುವ ದಿವಸದೊಳಗೆ ದಿ ।
ವಾಕರ ಖಗ ಶೇಷ ರುದ್ರೇಂದ್ರರು ತ್ಯಕ್ತ ವೈ ।
ದೀಕ ಮಾರುತ ಭಾರತಿಯಲ್ಲಿ ಜನಿಸಿದರೀ ।
ಪಾಕ ಶಾಸನ ಶೇಷ ಗರುಡಾದ್ಯರಿಗೆ ನೀಚ ।
ನಾಕವಾಸಿಗಳು ಯಾಗಾಭಿಮಾನಿಗಳೆಲ್ಲ ।
ತಾ ಕುಮಾರರಾಗಿ ಜನಿಸಿದರು ತಾವೆ ।
ಸಾಕುವ ಜನರೊಡನೆ ಆನಂದದಿಂದಲಿ ।
ಲೋಕೈಕನಾಥ ರುದ್ರನೊಂದು ವತ್ಸರವು ಅ ।
ನೇಕ ಬಗೆಯಿಂದ ತಪ ಮಾತಿದಾರಭ್ಯ ।
ಈ ಕಥೆಗೆ ಕೇಳಿ ಅಜನಬ್ದ ಮೊದಲಿಂದ ।
ಏಕ ವಾಕ್ಯ ಮಾಡಲು ಮೂವತ್ತೈದು ಸಂದಿದವು ।
ಶ್ರೀಕಂಠ ಮಾಡಿದನು ಹದಿನೈದು ವರುಷ ಸೃಷ್ಟಿ ।
ಗೋಕುಲಧರ ಪಾವನ ವಿಜಯ ವಿಠ್ಠಲರೇಯ ।
ಶ್ರೀಕಾಂತೆಯ ಕೂಡ ನಲಿ ನಲಿದಾಡುವ ೧೧

## ತ್ರಿವಿಡಿ ತಾಳ

ಭೂತನಾಥನು ಮೂರು ರೂಪವನ್ನೆ ಧರಿಸಿ ।
ಮಾತೃ ಮೊದಲಾದ ಜಡ ಜೀವಿಗಳ ।
ಪ್ರೀತಿಯಿಂದಲಿ ಪಡೆದು ಸುಮ್ಮನಾದನು ಮುಂದೆ ।
ಯಾತಕ್ಕೆ ಸೂಚಿಸದೆ ನಿಂದನಾಗ ।
ಸ್ವತಂತ್ರವಿಲ್ಲದೆ ತತ್ವ ತತ್ವೇಶ್ವರರು ।
ಭೀತಸ್ಥರಾಗಿ ಈ ಬೊಮ್ಮಾಂಡವ ।
ನೀತಿಯಿಂದಲಿ ತತ್ವ ತತ್ವಕ್ಕೆ ಸಂಯೋಗ ।
ಚಾತುರ್ಯ ತೋರದೆ ಹರಿಯ ತುತಿಸಿ ।
ಧಾತು ಪ್ರತೀಕಾದಂತೆ ಇದ್ದಾಭಿಮಾನಿಗಳ ।
ಆತುಮದೊಳಗೆ ಪ್ರವಿಷ್ಟನಾಗಿ ।
ಗಾತುರ ನಿಲಿಸಿದ ತತ್ವದೊಳಗೆ ಪೊಗಿಸಿ ।
ತಾತ್ವಿಕ ಜನರಿಂದ ಸಂಯೋಗದಿ ।
ಈ ತೆರದಲಿ ಸಮಸ್ತಾವರಣಾಂಬುಜ ।
ಜಾತಾಂಡ ಮಾಡಿದ ಶಕ್ತಿಪ್ರದನು ।
ಓತ ಪ್ರೋತನಂತೆ ಸರ್ವಾಧಾರನಾಗಿ ।
ಚೇತನರ ಪಾಲಿಸುವ ಅನುಕಂಪದಿ ।
ಶಾತ ಕುಂಭೋದರನ ಹತ್ತು ವತ್ಸರವಿಲ್ಲಿಗೆ ।
ಮಾತು ನಿಶ್ಚಯ ನಾಲ್ವತ್ತೈದು ವರುಷ ।
ದ್ವೈತ ಜನರ ಪ್ರೀಯ ವಿಜಯ ವಿಠ್ಠಲರೇಯ ।
ತಾತನಾಗಿ ಎಲ್ಲರನ ಸಾಕುತಲಿಪ್ಪ ೧೨

## ಧ್ರುವ ತಾಳ

ಇತ್ತಲಿತ್ತಲು ಕೇಳಿ ಸಲಿಲಾವೃತ ಭೂಭಾಗದಲಿ ।
ಚಿತ್ತಜ ಜನಕ ಸಿರಿ ವಾಸುದೇವ ।
ಮೂರ್ತಿ ಮಾಯಾದೇವಿಯರ ಸಮೇತವಾಗಿ ಸ ।

ಮಸ್ತ ಚೇತನರಾಶಿ ಸರ್ವಾಂಶದಲ್ಲಿ ಕೂಡಿ ।
ಅತ್ಯಂತವಾಗಿ ಕ್ರೀಡಿಸಿದ ಎರಡು ವರುಷ ।
ಸತ್ಯವಾಯಿತು ಇಲ್ಲಿಗಜನಬ್ದ ನಾಲ್ವತ್ತೇಳು ।
ಮತ್ತೆ ಮಹಲಕುಮಿ ದೇವನ ಒಂದು ವತ್ಸರ ।
ತುತ್ತಿಸಿ ಆರಾಧನೆ ಮಾಡಿದಳು ।
ಸತ್ವ ಗುಣಕೆ ಶ್ರೀ ಭೂ ದುರ್ಗ ರಜೋ ತಮಕೆ ।
ಪ್ರತ್ಯೇಕ ರೂಪಂಗಳು ಧರಿಸಿದಳು ।
ಅತಿಶಯವೇನಂಬೆ ಶ್ರೀ ಭೂ ದುರ್ಗಾದೇವಿ ।
ಪೆತ್ತಳು ವಿಷ್ಣು ಬ್ರಹ್ಮ ರುದ್ರರೆಂದು ।
ಉತ್ತುಮ ಶ್ಲೋಕ ತಾನೆ ವಿಷ್ಣುವಾಗಿ ಜನಿಸಿದ ।
ಸತ್ಯ ಲೋಕೇಶ ಬ್ರಹ್ಮ ರುದ್ರರು ಭಿನ್ನಾಂಶರು ।
ಉತ್ಪತ್ತಿ ಮಾಳ್ಪನೊಬ್ಬ ಸ್ಥಿತಿಗೊಬ್ಬ ಸಂಹಾರ ।
ಕರ್ತನಾಗಿಪ್ಪನೊಬ್ಬ ಮೂರು ಮೂರ್ತಿಗಳಿದ ಕೊ ।
ಆತ್ಮಾಂತರಾತ್ಮ ವಿಜಯ ವಿಠ್ಠಲರೇಯ ।
ನೇತ್ರದೊಳಗೆ ಯಿದ್ದು ಸರ್ವ ವಸ್ತು ಕಾಣಿಸುವ ೧೨

## ಅಟ್ಟತಾಳ

ಸತ್ವಾಭಿಮಾನಿ ಶ್ರೀ ದೇವಿಯಲ್ಲಿ ಇ ।
ಪ್ಪತ್ತು ನಾಲ್ಕು ತತ್ವಾಂಶ ಮಿಳಿತ ಮಾಡಿ ।
ಉಕ್ತುಮ ಶ್ಲೋಕ ವಿಷ್ಣುನು ವೀರ್ಯವ ನಿಟ್ಟು ।
ಎತ್ತ ನೋಡಿದರತ್ತ ಐವತ್ತು ಕೋಟಿಯು ।
ವಿಸ್ತಾರ ಖರ್ಪರ ಬ್ರಹ್ಮಾಂಡ ಸುವ ।
ರ್ಣಾತ್ಮಕವಾದ ತೇಜೊ ರಾಶಿಯಿಂದ ಉ ।
ತ್ಪತ್ತಿ ಮಾಡಿದನು ವಾರಿ ರಾಶಿಯ ಮಧ್ಯ ।
ಮತ್ತೆ ಬ್ರಹ್ಮ ನಾಮಕ ಪರಮಾತ್ಮ ಸ ।

ಮಸ್ತ ದೇವಾಂಶರ ನುಂಗಿದನು ಮಹ ।
ತತ್ವದೊಡೆಯನಲ್ಲಿ ಪ್ರವಿಷ್ಟನಾದನು ।
ಪ್ರತ್ಯೇಕ ರುದ್ರನಾಮಕ ಭಗವಂತನು ।
ತತ್ತಳಿಸುವ ಅಹಂಕಾರಾಭಿಮಾನಿಯ ।
ಗಾತ್ರದೊಳಗೆ ಪೊಕ್ಕನೀ ರುದ್ರನು ಸ ।
ರ್ವೋತ್ತಮ ನಾರಾಯಣನ ಆಜ್ಞೆಯಿಂದ ।
ಅರ್ಥಿಯಿಂದಲಿ ಬೊಮ್ಮರಾಯನೊಳಗೆ ಪೊಕ್ಕಾ ।
ಚಿತ್ತಾಭಿಮಾನಿಯಾಗಿದ್ದ ಬ್ರಹ್ಮ ಸರ್ವ ।
ಆತ್ಮಗಣಂಗಳ ಸಹಿತವಾಗಿ ಪುರು ।
ಷೋತ್ತಮ ವಿಷ್ಣು ನಾಮಕನಲ್ಲಿ ಪೊಕ್ಕನು ।
ಪ್ರತ್ಯಕ್ಷಯಿದು ಸಿದ್ಧ ಪ್ರಕೃತಿನಾಮಕ ಶ್ರೀ ।
ಪೊತ್ತಳು ತನ್ನ ಉದರದಲ್ಲಿ ಹರಿಯಿಂದ ।
ಪತ್ನಿ ಸಹಿತವಾಗಿ ವ್ಯಾಪ್ತ ವಿಷ್ಣು ಲೀಲಾ ।
ಮಾತ್ರದಿ ಬ್ರಹ್ಮಾಂಡವ ಪ್ರವೇಶಿಸಿದನು ।
ನಿತ್ಯವಾದ ವೈಕುಂಠದಲ್ಲಿ ವಿ ।
ಚಿತ್ರ ಸೇವೆಯಗೊಂಬ ಸ್ವಮೂರ್ತಿಗಳ ನೋಡಿ ।
ಮುಕ್ತರೊಡನೆ ತಾನೆ ಅಲ್ಲಿ ವಾಸವಾಗಿ ।
ಇತ್ತ ಕಾರ್ಯವನು ಮಾಡಿದನು ಬ್ರಹ್ಮಾಂಡದೊ ।
ಳುತ್ತುಂಬಿದ ಜಲಪೂರ್ಣವಾದದರಲ್ಲಿ
ಸುತ್ತಲು ಮುಸುಕಿದ ಅಂಡಖರ್ಪರ ಬುಡ ।
ಹತ್ತಿ ಎಣಿಸಲಾಗಿ ಮೇಲುಭಾಗಕೆ ತಿಳಿ ।
ಹತ್ತೈದು ಕೋಟಿ ಗಾವುದ ಪ್ರವೇಶದಿ ।
ಚತುರಯುಗ ಪರಿಯಂತ ದೇವ ನ ।
ಗುತ್ತ ಮಲಗಿದ ಗರ್ಭೋದಕದೊಳು ।
ಭೃತ್ಯ ವತ್ಸಲ ನಮ್ಮ ವಿಜಯ ವಿಠ್ಠಲರೇಯ ।
ಕೀರ್ತಿ ಪುರುಷ ಇಂತು ಸರ್ಗ ಮಾಡಿದನು । ೧೪

## ಆದಿತಾಳ

ಉದಯ ಕಾಲವೆ ವಿಡಿದು ಎರಡು ವರ್ಷ ಪರಿಯಂತ ।
ಸದಮಲ ವಾಸುದೇವನ ಸರ್ಗ ಪುರುಷ ಜನನ ।
ತದ ನಂತರದಲ್ಲಿ ಸಂಕರುಷಣ ಸೃಷ್ಟಿ ।
ಮುದದಿಂದ ತ್ರಯ ವತ್ಸರಮುಖ್ಯ ಪ್ರಾಣನ ಜನನ ।
ಇದರ ತರುವಾಯ ಪ್ರದ್ಯುಮ್ನ ದೇವನ ।
ಅದು ಭೂತಸೃಷ್ಟಿ ಎರಡು ವರುಷ ವಾಣಿ ಭಾರತಿ ।
ಉದುಭವ ಕಾಲವೆನ್ನಿ ಆಮೇಲೆ ಪುರುಷ ನಾಮಕ ।
ಪದುಮಜ ಪ್ರಾಣನಿಂದ ಸರ್ಗವೊಂದು ವತ್ಸರ ।
ಪದೊಪದಿಗೆ ತಿಳಿ ಬೊಮ್ಮ ವಾಯು ಜೀವ ನಾ ।
ಮದಲಿಪ್ಪ ಶೇಷಾದಿಗಳ ಸರ್ಗವೆರಡು ವರುಷ ।
ಒದಗಿ ಪೋಯಿತು ಪ್ರದ್ಯುಮ್ನ ಅರ್ಧನಾರಿ ರೂ ।
ಪದಲಿ ಮಾಡಿದ ಸೃಷ್ಟಿ ಸಮಾಧಿ ವೊಂದು ವರುಷ ।
ಇದನೆ ಗುಣಿಸುವದು ಆವರ್ಣ ಹತ್ತು ಕಲ್ಪ ।
ಉದಕಾವೃತ್ತದ ಕ್ರೀಡೆ ದ್ವಯ ವತ್ಸರ ।
ಪದುಮ ಸ್ತೋತ್ರ ವೊಂದು ವರುಷ ಯಿಲ್ಲಿಗೆ ಸಂ ।
ದಿದವು ನಾಲ್ವತ್ತೆಂಟು ಹಯನ ವುಳಿದಲೆಕ್ಕ ।
ಪದುಮಜಾಂಡ ಉತ್ಪತ್ತಿ ಬ್ರಹ್ಮೇಶ ರೂಪಗಳು ।
ವಿಧಿ ಭವರೊಳಗೆ ಪ್ರವೇಶವಾದ ಮರ್ಯಾದಿ ।
ಇದು ಮೊದಲಾಗಿ ಮಿಕ್ಕಾದ ಕಥೆಗಳೆಲ್ಲ ।
ತುದಿಯಿಂದ ಯೆಣಿಸಲು ಯಿಲ್ಲಿಗೈವತ್ತು ವರುಷ ।
ಪದುಮ ಗರ್ಭಗೆ ಸಂದಿದವು ಈ ತರುವಾಯಾ ।
ದದು ತಿಳಿಯಬೇಕು ಸೋತ್ತು ಮರಿಂದ ಕೇಳಿ ।

ಪದುವ ವಿರಾಟ ವರಹ ಕಲ್ಪವೆನಿಸಿ ಅಂ ।
ದದಲಿ ಶೊಭಿಸುತಿವೆ ವಿಸರ್ಗನಾಮದಿಂದ ।
ಮಧುಹಾ ವಿಜಯ ವಿಠಲ ಸ್ವತಂತ್ರ ತಾನಾಗಿ ।
ಪದುಮೆ ಕೂಡ ರಮಿಸಿ ತ್ರಿಭುವನ ಪುಟ್ಟಿಸುವ ೧೫

## ಜತೆ

ಇಲ್ಲಿಗೆ ಬಾಹ್ಯಾಂಡ ಸಿದ್ಧವಾಯಿತು ಸಿರಿ ।
ವಲ್ಲಭ ವಿಜಯ ವಿಠಲನಿಂದ ಕ್ರಮದಿಂದ ೧೬

## ೭೫

## ಧ್ರುವತಾಳ

ಮೂಲಾಧಾರದಲ್ಲಿ ಚತುರ ದಳ ಪದುಮ ಪ್ರ
ವಾಳ ಮಣಿ ವರ್ಣದಂತೆ ಇಪ್ಪದು
ಏಳು ಮರುತ ಜನ ಅಲ್ಲಿ ವಾಸಾ
ನಾಲ್ಕು ವೇದಂಗಳು ಒಂದೊಂದು ದಳದಲ್ಲಿ
ಮೇಲಾಗಿ ಇರುತಿಪ್ಪವು ಪೊಳೆವುತ್ತಲ್ಲೀ
ವಾಲಯ ಬ್ರಹಸ್ಪತಿ ಸೋಮಜ ಸೋಮ ಶನಿ
ಕಾಲ ಪೋಗಾಡದೆ ನಿರುತ ಅಲ್ಲಿ
ಶೀಲ ಗುಣರಾಗಿ ಭಗವಧ್ಯಾನವ ಮಾಳ್ಪರು
ಆಳುಗಳಾಗಿ ತಮ್ಮಿಂದುತ್ತಮರಿಗೆ
ಶ್ರೀಲೋಲ ಅನಿರುದ್ಧ ನಿಯಾಮಕ ಮಿಕ್ಕ
ನೀಲ ವರ್ಣಾದಿ ಮೂರ್ತಿ ಅಲ್ಲಿವುಂಟು
ಕಾಲ ಚಕ್ರದಂತೆ ಜಡವಾಯು ಸಂಚಾರ

ಮೇಲದೋಭಾಗ ಬಿಡದೆ ತಿರಗುವದು
ಪೇಳುವೆ ಸ್ವಾಯಂಭುವ ಇದಕ್ಕೆ ಅಭಿಮಾನಿಯಾಗಿವಿ
ಶಾಲ ಚಿತ್ತದಲ್ಲಿ ಅನಿರುದ್ಧನ್ನ
ಆಲಸ್ಯವಿಲ್ಲದೆ ಆರಾಧಿಸುವ ಕರು
ಣಾಳಿನ ಭಕ್ತಿಯಲಿ ಲೋಲಾಡುತ
ಬಾಲ ಗೋಪಾಲ ವಿಜಯ ವಿಠಲರೇಯ
ಪಾಲ ಸಾಗರ ಶಾಯಿ ಅಪ್ರತಿಹತನಯ್ಯಾ ೧

## ಮಟ್ಟತಾಳ

ಪೊಕ್ಕಳ ಭಾಗದಲಿ ಆರುದಳ ಕಮಲಾ
ರಕ್ತ ನೀಲ ವರ್ಣ ಸಪ್ತವಾಯುಗಳಲ್ಲಿ
ತಕ್ಕವರು ಆರುಜನ ಹರಿ ರಾಣಿಯರು
ಮುಕ್ಕಣನ ಪುತ್ರ ಗಣಪತಿ ಅಭಿಮಾನಿ
ಚಕ್ಕನೆ ವಿಶ್ವಮೂರ್ತಿಯ ಪೂಜಿಸುವ
ಲಕುಮಿಯ ರಮಣ ಪ್ರದ್ಯುಮ್ನ ನಿಯಾಮಕನು
ರಕ್ಕಸರಿಪು ಸಿರಿ ವಿಜಯ ವಿಠಲರೇಯ
ಪಕ್ಕಿ ಹಾರುವ ದೇಶ ನಿರ್ಮಿಸಿ ಇಪ್ಪ ೨

## ತ್ರಿವಿಡಿ ತಾಳ

ಹೃದಯದಲ್ಲಿ ಎಂಟುದಳದ ಕಮಲವು ಉಂಟು
ಉದಯಾದಿತ್ಯ ವರ್ಣದಂತಿಪ್ಪದು
ಅದರಲ್ಲಿ ಅಷ್ಟು ವಸು ದಿಕ್ಪಾಲಕರುಂಟು
ಮುದದಿಂದ ಸಪ್ತ ಸಮೀರವಾಸ
ತ್ರಿದಶ ನಾಯಕ ಇದಕೆ ಅಭಿಮಾನಿಯಾಗಿ ನಿ

ತ್ಯದಲಿ ಉಪೇಂದ್ರನ ಪೂಜಿಸುವಾ
ಇದರ ನಿಯಾಮಕ ಸಂಕರುಷಣ ಎನ್ನಿ
ಪದೊಪದಿಗೆ ಖಳನ ದಹಿಸುವನು
ಸದಮಲರಾಗಿ ಲಕುಮಿ ನಾರಾಯಣ
ಎದಿರಲಿ ಇಪ್ಪ ಪ್ರಾಜ್ಞಾನೆಂಬ ರುದ್ರ
ಸುದರಶನ ಶಂಖ ಗದಾ ಪದುಮ ಧರಿಸಿ ಚತುರಹಸ್ತ
ಹದುಳ ಕೊಡುತಲಿಪ್ಪ ಭಕ್ತಜನಕೆ
ಪದವಿಗೇ ಈತನಿಂದಲಿ ಅಪರೋಕ್ಷ ವಾ
ಗದೆ ಬಿಂಬನ ಕಾಂಬುವ ಮಾರ್ಗವಿಲ್ಲಾ
ಇದೆ ಮೂರುತಿ ಮುಕುತಿ ಯೋಗ್ಯ ಸ್ವರೂಪದಂತೆ
ತದನಂತರದಲ್ಲಿ ತನ್ನಾ ಕಾರವಾ
ಹೃದಯಾದೊಳಗೆ ಒಳಗೊಳಗೆ ಪೊಳೆದು ಸ
ನ್ನಿಧಿಯಾಗಿಪ್ಪದು ಲಿಂಗದೊಳಗೇ
ಇದೆ ಪೋಗಲು ವಿರಜಾನದಿಯ ಸ್ನಾನದಿಂದ
ಒದಗಿ ಜೀವನದಂತೆ ದೇವನಿಪ್ಪಾ
ಪದುಮನಾಭ ನಮ್ಮ ವಿಜಯ ವಿಠಲರೇಯ
ತ್ರಿದಶ ಲೋಕದಲ್ಲಿ ಸುರರ ಕೂಡಾಡುವ ೩

## ರೂಪಕ ತಾಳ

ಉರದಲ್ಲಿ ದ್ವಾದಶ ದಳವುಳ್ಳ ಸರಸಿಜ
ಮಿರಗುತಿದೆ ನೋಡಿ ಮುತ್ತಿನ ವರ್ಣದಲ್ಲಿ
ಉರುಕ್ರಮ ಸಹಿತ ದ್ವಾದಶ ಅಂಶು ಮಾಲೆಗಳು
ಮರುತ ಜನ ಜನ ಸಪ್ತರು ಮಹಾರುದ್ರ ಅಭಿಮಾನಿ
ನರಸಿಂಹ ಮೂರುತಿಯ ಪೂಜೆ ಮಾಡುತಲಿಪ್ಪ

ಗಿರಿಜೆ ಸಮೇತದಲಿ ಮುಂದೆ ಅಹಿಪತಿಯೆಂದು
ಪರಿನಾಮಕ ಪರಮಾತ್ಮ ನಿಯಾಮಕನಾಹಾ
ಸುರರು ವಾಲಗದಿಂದ ಜಯ ಜಯವೆನುತಿಹರು
ಮೆರೆವ ವೈಭವದಿಂದ ವಿಜಯ ವಿಠಲ ಮಹಾ
ಧರಣಿಗೊಡೆಯನಾಗಿ ಗತಿಕೊಡುವ ನಮಗೆ ೪

## ಝಂಪೆ ತಾಳ

ಇಂದ್ರ ಯೋನಿಯಲ್ಲಿ ಷೋಡಶ ದಳವುಳ್ಳ ಅರ
ವಿಂದ ಧವಳ ವರ್ಣದಂತಿಪ್ಪದು
ಚಂದ್ರ ಕಲಾಭಿಮಾನಿಗಳು ಅಲ್ಲಿ ವಾಸಾ
ಮುಂದೆ ದಧಿವಾಮನನ್ನು ಧ್ಯಾನಿಸುವ
ಅಂದವಾಗಿ ಸಪ್ತ ಮರುತಗಳು ಉಂಟು
ಫಣೀಂದ್ರನು ಅಭಿಮಾನಿ ಆ ಸ್ಥಾನದಲ್ಲಿ ವಾಸಾ
ನಂದ ಮೂರುತಿ ಲಕುಮಿರಮಣನ್ನ ಪೂಜಿಸುವ
ಪೊಂದಿಪ್ಪ ನಾರಾಯಣ ನಾಮಕ ಪರಮಾತ್ಮ
ಸಂದೇಹವಿಲ್ಲ ನಿಯಾಮಕನಾಗಿ ಗುಣ
ವೃಂದದಲ್ಲಿ ಪಾಲಿಸುವ ಸರ್ವರನ್ನು
ನಂದ ಗೋಪನಕಂದ ವಿಜಯ ವಿಠಲರೇಯ
ಎಂದೆಂದಿಗೆ ನಿತ್ಯ ತೃಪ್ತ ಜನರಲ್ಲಿ ವಾಸಾ ೫

ದ್ವಿದಳವುಂಟಾದ ಕಮಲ ಭ್ರೂಮಧ್ಯದಿ
ಮಧು ಪುಷ್ಪ ವರ್ಣದಂತಿಪ್ಪದು ಆವಾಗ
ಪದುಮ ಸಂಭವ ವಾಯುವಾಸ ದ್ವಯಭಾಗ
ಪದುಮನಾಭನ ವಹನ ಅಲ್ಲಿ ಅಭಿಮಾನಿ
ಸದರವಿಲ್ಲದೆ ಕೃಷ್ಣನ ಧೇನಿಸುವ ಜ್ಞಾ

ನದಲಿ ಕೊಂಡಾಡುತ ಸಪ್ತ ಮರುತ ಜನ
ಮೊದಲಾದವರು ಸೇವಿಸುವರು ಹರಿಪಾದ
ಇದಕೆ ನಿಯಾಮಕ ಕೃಷ್ಣನೆಂಬ ಮೂರುತಿ
ಅದುಭೂತ ಮಹಿಮನೆ ವಿಜಯ ವಿಠಲರೇಯ
ಉದಯ ಭಾಸ್ಕರನಂತೆ ತಪಕೆ ಮೆಚ್ಚಿ ಪೊಳೆವಾ ೬

## ಆದಿತಾಳ

ಸಾಸಿರ ದಳವುಳ್ಳ ಕಮಲ ಶಿರಸಿನಲ್ಲಿ
ಲೇಸಾಗಿ ಒಪ್ಪುತಿದೆ ವಜ್ರ ಪ್ರಕಾಶದಂತೆ
ವಿಶ್ವಾದಿ ರೂಪಗಳು ಒಂದೊಂದು ದಳದಲ್ಲಿ
ವಾಸವಾಗಿಪ್ಪ ತನ್ನಾಮಕ ಪ್ರಾಣ
ಸೂಸಿದ ಭಕ್ತಿಯಿಂದ ಭಜನೆ ಮಾಡುವ ನಿತ್ಯ
ವಾಸವಾದ್ಯರಿಂದ ಸ್ತುತಿಸಿಕೊಳ್ಳುತ
ಲೇಶ ಬಿಡದೆ ಇಲ್ಲಿ ಲೋಕೇಶ ಅಭಿಮಾನಿ
ಮೀಸಲ ಮನದಲ್ಲಿ ರಂಗನ್ನ ಧ್ಯಾನಿಸುವ
ವಾಸುದೇವ ನಾಮಕ ಪರಮಾತ್ಮ ನಿಯಾಮಕ
ದಾಸೋಹಂ ಎಂದವಗೆ ಸರ್ವದಳದಲ್ಲಿ ಪೊಳೆವ
ವಾಸುಕಿ ಶಯನ ನಮ್ಮ ವಿಜಯ ವಿಠಲರೇಯ
ಮೋಸವಿಲ್ಲಿದೆ ತನ್ನ ಸ್ಥಾನದಲ್ಲಿಟ್ಟು ಪೊರೆವಾ ೭

## ಜತೆ

ಬ್ರಹ್ಮನಾಡಿಯೊಳಗೀ ಪರಿ ವಿಧ ಉಂಟು
ಬ್ರಹ್ಮಾತೀತ ನಮ್ಮ ವಿಜಯ ವಿಠಲಸ್ವಾಮಿ ೮

## ೭೬

### ಧ್ರುವತಾಳ

ಮೇರು ಪರ್ವತ ಲಕ್ಷ ಯೋಜನೋಚ್ಚಿತ ಹದಿ ।
ನಾರು ಸಾವಿರ ಯೋಜನ ಭೂಮಗ್ನಾ ।
ಚಾರುವಾಗಿಪ್ಪದು ಕನಕ ಮಯದಿಂದ ।
ಸಾರಿರೈ ಉಳಿದ ಲೆಖ್ಖ ಊರ್ಧ್ವ ಭಾಗ ವಿ ।
ಸ್ತಾರವಾಗಿದೆ ನಾಲ್ಕು ಎಂಭತ್ತು ಸಹಸ್ರ ವಿ ।
ಚಾರ ಯೋಜನವಲ್ಲಿ ಸುರ ಮಂದಿರ ।
ಈರೆರಡು ನಾಲ್ಕು ಶೃಂಗದಿಂದೊಪ್ಪುವುದು ಶೃಂ ।
ಗಾರ ವನಗಳುಂಟು ವಾಪಿಕೂಪ ।
ವಾರಿಜಸಂಭವಸದನ ಈರೈದು ಸಾ ।
ವೀರ ಯೋಜನದಗಲ ಮಧ್ಯ ಗಂಗೆ ।
ಹಾರಿ ಯೋಜನ ಪರಿಮಿತ ಧುಮುತಿ ವಿ ।
ಹಾರದಿಂದಲಿ ಚತುರ ಭಾಗವಾಗಿ ।
ವಾರಿಧಿ ಕೂಡಿಗಳು ಪೂರ್ವದಿಕ್ಕಿನಲ್ಲಿ ।
ಮೂರೊಂದು ನಾಮ ಭೇದ ನಿರ್ಮಳನಾಗಿ ।
ಐರಾವತಗಮನ ದಿಕ್ಪಾಲಕರ ಆ ।
ಗಾರ ಸಹಸ್ರ ಎರಡುವರೆ ಯೋಜನ ।
ಸೂರ್ಯನ ರಥದ ಕೀಲು ಕವಿಸಿದೆ ಈ ಗಿರಿಗೆ ।
ವಾರವಾರಕ್ಕೆ ಸುತ್ತ ತಿರುಗುವುದೊ ।
ಆರೆರಡಾದಿತ್ಯ ಜನ ಮಾಸ ಮಾಸಕ್ಕೆ ವ್ಯಾ ।
ಪಾರ ಮಾಡುವರು ಕರ್ಮ ಸಾಕ್ಷಿ ।
ನಾರಾಯಣ ಗುಣ ಪೂರ್ಣ ಮೇರುವಿಗೆ ತಾನೆ ಆ ।

ಧಾರವಾಗಿ ಇಪ್ಪುದು ಶಿಂಶುಮಾರ ।
ಮೂರುತಿಯಾಗಿ ಮುದದಿ ಪೊಳೆವ ಯೋಜನ ಮುವ್ವ ।
ತ್ತಾರು ಲಕ್ಷ ಪರಿಮಿತ ನಾನಾ ಮಹಿಮ ।
ಸೇರಿಕೊಂಡಿಪ್ಪ ತನ ವಾಲಾಗ್ರದಲ್ಲಿ ಮಂತ್ರ ।
ಈರಾರು ವರಣ ಜಪಿಸಿದ ಬಾಲಕ ।
ಆರಿಗೆ ವಶವಲ್ಲ ಆ ಪದವಿ ಮಗುವಿಗೆ ।
ನಾರದ ಮುನಿಯಿಂದ ಪ್ರಾಪ್ತವೆನ್ನಿ ।
ಈ ರೀತಿಯನ್ನೆ ಗ್ರಹಿಸು ಇತ್ತ ಲಾಲಿಸು ।
ಮೇರು ಶೈಲದ ಅಧೋಭಾಗದಲ್ಲಿ ।
ಪೌರಸ್ತ ಮಿಗಿಲಾದ ಚತುರ ಕಕುಭದಲ್ಲಿ ।
ಈರೈದು ದಳ ಕೇಸರ ಪರ್ವತ ।
ಬ್ಯಾರೆ ಬ್ಯಾರೆ ಒಂದೊಂದು ನಾಮದಿಂದದೊಪ್ಪುತಿವೆ ।
ಕುರಂಗ ಕುರವ ವೈಕಂಕ ಕುಸುಂಭಕಾದ್ರಿ ।
ಮೂರು ಕೂಟ ಸಮೇತ ಇಂದ್ರದಿಶೆಗೆ ।
ಸಾರು ಪತಂಗ ಶಿಖರ ಉತ್ಸಂಗ ನಿಷೇದ ಮತ್ತೆ ।
ತೋರುವ ಶಿತ ವಾಸುಕಿ ದಕ್ಷಿಣ ದಿಶೆಗೆ ।
ಸಾರು ಪತಂಗ ಶಿಖರ ಉತ್ಸಂಗ ನಿಷೇದ ಮತ್ತೆ
ತೋರುವಶಿತ ವಾಸುಕಿ ದಕ್ಷಿಣದಿಶಿಗೆ ।
ವಾರೀಶನ ಕಾಷ್ಟಕ್ಕೆ ಕಪಿಲ ಶಂಖ ವೈಪಡೂರ್ಯ ।
ಚಾರುಧಿ ಹಂಸವೆಂಬೊ ಪರ್ವತಾವೈದು ।
ಓರಂತೆ ಗುಣಿಸು ವೃಷಭ ನಾಗ ಕಾಲಾಂಜನ ।
ನಾರದಾಖ್ಯಗಿರಿ ಚಂದ್ರನ ಕಣಿವೆಗೆ ।
ದಾರಢ್ಯಮಾದ ಕೇಸರ ಪರ್ವತಗಳನಿತು ।
ವಾರಿತಿ ಕೇಳು ಮುಂದೆ ಮಂದರಾದ್ರಿ ಮೇರು ಮಂ ।
ದರ ಪಾರ್ಶ್ವ ಕುಮುದ ನಾಮದಿಂದ ।

ಮೂರೊಂದು [ಕು]ಲಗೋತುರ ಸಿದ್ಧವೆನ್ನಿ ।
ಬ್ಯಾರೆ ಏ[ತ]ಕ್ಕೆ ಲೆಖ್ಖ ಹತ್ತು ಸಾ ।
ವೀರ ಯೋಜನ ಉನ್ನತ ನೋಡಿರೊ ।
ಕಾರಣವಾಗಿವೆ ಇಷ್ಟು ಯೋಜನ ಸುತ್ತ ।
ಭಾರಣೆಯಾಗಿರ್ದ ಜಂಬು ಚೂತ ಕದಂಬ ।
ಚಾರು ನ್ಯಗ್ರೋಧ ಯಿತ್ತ ಗಿರಿಗಿರಿಯಲ್ಲಿ ।
ಭೂರುಹ ಉಂಟಾಗಿದೆವೆ ಉಂದೊಂದು ಹನ್ನೊಂದು ।
ನೂರು ಗಾವುದ ಉದ್ದ ಶಾಖೆಯಿಂದ ।
ಕ್ಷೀರ ಮಧು ದಿವ್ಯ ಘೃತ ಶುದ್ಧೋದಕ ಹೃದ ।
ನೂರು ಗಾವುದ ವೊಂದೊಂದು ಕಾಣೊ ।
ಸರೋರವು ನಾಲ್ಕು ಅರಣೋದೆಯು ಭದ್ರೆ ।
ಚಾರು ಸೀತೋದೆ ಮಾನಸವೆಂದು ।
ನೀರೆ ಹೊಳೆವ ಸನಂದನ ಚಿತ್ರರಥ ವಿಭ್ರಾಜಿಕ ।
ಮಿೂರಿದ ಸರ್ವತೋಭದ್ರ ಪೆಸರು ।
ಚಾರು ಸುರರಿಂದೊಪ್ಪುವ ಚೂತಾದಿ ವೃಕ್ಷ ನಿತ್ಯ ।
ಕೋರಿದ ಜನಕೆ ಮನೋಭಿಷ್ಟ ಸಲಿಸಿ ।
ದಾರಾದಿ ಮೊದಲಾದ ಬಂಧು ಬಳಗ ಪರಿ ।
ವಾರದೊಡನೆ ಸರ್ವದೇವಾದ್ಯರು ।
ತಾರತಮ್ಯದಿಂದ ಕ್ರೀಡಿಸುವರು ಭಂ ।
ಗಾರ ಭೂಷಣ ನಾನಾ ಭೋಗದಿಂದ ।
ವೈರತ್ವವನ್ನು ಮರೆದು ಖಗ ಮೃಗ ಜೀವಿಗಳು ।
ಭೋರನೆ ಆಡುತಿವಕೊ ತತ್ಕಾಲಕ್ಕೆ ।
ತೇರು ಶೃಂಗರಿಸಿದಂತೆ ವನಗಳ ಸಂಭ್ರಮ ।
ಆರಿಗಾದರು ಸರಿಯೆ ತುತಿಸ ಸಲ್ಲ ।
ಮ್ಯಾರೆದಪ್ಪದೆ ನಾಲ್ಕು ಕೀಲ ಪರ್ವತದಂತೀ ವಿ ।

ಚಾರ ವೆಣಿಸೆ ಮುಂದೆ ಪರಿಸ್ತೀರ್ಣದ ।
ಧಾರಣಿಧರಗಳು ಎರಡೆರಡು ಇವೆ ಇವು ।
ಈರಾರು ಸಾವಿರ ಯೋಜನ ಅಗಲ ಉದ್ದ ।
ಮೂರು ಮೂರು ಒಂಭತ್ತು ಯುತ ಯೋಜನದಿಂದ ।
ಪಾರುಗಂಡಿವೆ ಪೂರ್ವ ದಿಶಿಗೆ ।
ಹಾರ್ೈಸು ಜಠರ ದೇವ ಕೂಟ ಕೈಲಾಸ ಕರ ।
ವೀರ ಪವನ ಪರಿಯಾತ್ರ ಸೃಂಗ ।
ಪೂರಿತ ಮಕರ ಭೂಭ್ರುತು ನಾಲ್ಕು ಪರಿ ।
ಸ್ತೀರ್ಣಾ ಸುಮೇರುವಿಗೆ ಸುತ್ತ ಶೋಭಿಸುತಿವಕೊ ।
ಗೌರೀಶ ಕೈಲಾಸದಲ್ಲಿ ವಾಸವಾಗಿ ।
ಶ್ರೀರಾಮ ಧ್ಯಾನವ ಮಾಡಿವನೊಲಿದು ।
ಆರಾರು ಕಡಿಮೆ ಯೆರಡು ಸಹಸ್ರ ಯೋಜನೆ ವಿ ।
ಸ್ತಾರ ಚತುರಶ್ರವಾದ ಮಧ್ಯಖಂಡ ।
ಧಾರಳಾ ಇಳಾವೃತ್ತ ವೆಂಬೊ ಪೆಸರು ಉ ।
ದ್ಧಾರವಾಗಿದೆ ಪಿಂತೆ ನುಡಿದುದೆಲ್ಲ ।
ಶೌರಿ ಪಾದೋದಕಧರ ಶಂಭು ಈ ವರ್ಷದಲ್ಲಿ ।
ವಾರುಣಿ ಪತಿಯಂತರ್ಗತವಾಗಿರ್ದ ।
ಮಾರುತ ಜನಕನ್ನ ಸಾಸಿರ ವದನನ್ನ ।
ಆರಾಧನೆ ಮಾಳ್ಪ ಮಾನಸದಲ್ಲಿ ।
ಮಾರಾರಾತಿಗೆ ಮುಂದೆ ಶೇಷ ಪದವಿ ಒಪ್ಪೋದು ।
ಮೂರನೇ ಈಶ್ವರ ನೀತ ಕಾಣೊ ।
ಶಾರದಾ ಪತಿ ಪಿತ ವಿಜಯ ವಿಠ್ಠಲರೇಯನ ।
ಕಾರುಣ್ಯದಿಂದಲಿ ಮುಂದಗಾಗಮ ಕೇಳು ೧

## ಮಟ್ಟತಾಳ

ಪೊಳೆವ ಇಳಾವೃತ್ತ ಖಂಡದ ಸುತ್ತಲು ।
ಉಳಿದ ಅಷ್ಟವರ್ಷ ಉಂಟಾಗಿವೆ ನೋಡು ।
ತಿಳಿವುದು ಭದ್ರಾಶ್ವ ಕೇತುಮಾಲ ಉಭಯ ।
ನೆಲೆ ಮೂವತ್ತೊಂದು ಸಾವಿರ ಯೋಜನ ವೆ ।
ಗ್ಗಳ ಗುಣಿಸು ಪೂರ್ವ ಪಶ್ಚಿಮ ದಿಕ್ಕು ಭಾಗ ।
ನಿಲವರ ಹರಿವರ್ಷ ಕಿಂಪುರುಷ ನಾಭಿ ।
ಜಲಜಾಪ್ತನ ಸಂತನ ಭಾಗಕೆ ಉತ್ತರಕೆ ।
ತಿಳುಪುವೆ ರಮ್ಯ ಹಿರಣ್ಮಯ ಕುರುಖಂಡ ।
ನೆಲೆ ಒಂದೊಂದು ಉದಧಿ ಪರಿಯಂತ ।
ಸಲೆ ಒಂಭತ್ತು ಸಾವಿರ ಯೋಜನಗಣನೆ ।
ಬಲಿಸಿ ಕೊಂಡಿಪ್ಪವು ಆರು ವರುಷ ಇನಿತು ।
ಬಳಿ ಬಳಿಯಲ್ಲ ಪೂರ್ವ ಪಶ್ಚಿಮ ದೀರ್ಘ ।
ಒಳಿತಾಗಿ ಒಂದೊಂದು ಧನುರಾಕಾರವು ।
ಉಳಿದ ನಾಲ್ಕು ಖಂಡ ಸ್ವಲ್ಪ ಸಮ ವಿಷಮಾ ।
ಜಲಜನಾಭ ರಂಗ ವಿಜಯ ವಿಠ್ಠಲರೇಯ ।
ಸುಲಭ ಮತಿಗಳಿಗೆ ಮನದಿಂದ ನುಡಿಸುವನು ೨

## ರೂಪಕ ತಾಳ

ಮರಿಯಾದೆ ಪರವತ ಮೊಂದೊಂದು ವರ್ಷಕ್ಕೆ ।
ಸ್ಥಿರವಾಗಿಪ್ಪವು ಕೇತುಮಾಲಾ ಭದ್ರಶ್ವ ।
ಎರಡು ಖಂಡಕ್ಕೆ ಮಾಲ್ಯವಂತ ಗಂಧ ಮಾದನ ।
ಗಿರಿಗಳಿವೆ ಉದ್ದ ವಿಸ್ತಾರ ದ್ವಯ ಸಾ ।

ವಿರ ಯೋಜನ ನೀಳ ಮೂವತ್ತು ನಾಲ್ಕು ।
ಇರತಕ್ಕ ಯೋಜನ ಇಳಾವರ್ತದಂತೀವೆ ।
ಪರಿಮಿತ ದಕ್ಷಣೋತ್ತರ ಕೈಲಾಸದ ।
ಗಿರಿಯ ತಪ್ಪಲ ವೈಶ್ರವಣನ ಮನೆಯುಂಟು ।
ಮಿರುಗುವ ಮಹ ಬದರಿ ಕಾಶ್ರಮದಲ್ಲಿ ಶ್ರೀ ।
ಹರಿ ಅವತಾರ ವೇದವ್ಯಾಸ ನಿಜ ।
(ಹ) ನರಸಿಂಹ ಕಾಣೊ ಯಿಂದ್ರಾದಿಗಳೆಲ್ಲ ವೋದುವರು ವಿದ್ಯ ।
ಗುರುತು ಗಂಧ ಮಾದನಗರಿ ಪೂರ್ವಕ್ಕೆ ।
ಮರಳಿ ಮಿಕ್ಕಾರು ಖಂಡಕ್ಕೆ ಉಳಿದ ಮರಿಯಾದೆ ।
ಗಿರಿಗಳು ಯಿದರಲ್ಲಿ ದಕ್ಷಣ ಭಾಗಕೆ ನಿಷಧ ।
ಸರಿ ಹೇಮ ಕೂಟ ಹಿಮಾಲಯ ಪೆಸರು ಉ ।
ತ್ತರಕೆ ನೀಲ ಶ್ವೇತ ಶೃಂಗ ಮಾಲ್ಯವಂತ ವೆಂದು ।
ಕರೆಸಿ ಕೊಳುತಿಪ್ಪವು ಮೊಂದೊಂದು ಯೋಜನ ।
ಎರಡು ಸಾವಿರ ವುದ್ಧ ವಿಸ್ತೀರ್ಣ ಅಷ್ಟೆ ನಿಂ ।
ದಿರದೆ ನೀಳ ಲಕ್ಷ ತೊಂಭತ್ತಾರು ಸಾ ।
ವಿರ ಮತ್ತೇ ವೊಂದಕ್ಕೆ ಹತ್ತು ಕಡಿಮೆ ಲೆಖ್ಖ ।
ಚರಿಯವಾಗಿದೆ ಪೂರ್ವ ಅಪರಭಾಗಕೆ ಆರು ।
ಶರಧಿ ಪರಿಯಂತ ಸಮ್ಮಂಧವಾಗಿವೆ ।
ಭರತ ಖಂಡಗಳಲ್ಲಿ ಪಾಪ ಪುಣ್ಯಗಳಿಂದ ।
ನರರಿಗೆ ಸಾಧನ ಸ್ವರ್ಗಾ ಪವರ್ಗ ಬಲು ।
ನರಕಕ್ಕೆ ಆವಾವ ಸುಖದುಃಖಾನುಭವಕೆ ।
ಸುರರಾದಿಗಳು ಪುಟ್ಟಿ ಕರ್ಮ ತೀರುವುದಕ್ಕೆ ।
ಹರಿ ಅವತರಿಸಿ ನಾನಾ ಲೀಲೆ ತೋರುವ ।
ಭರತ ಖಂಡ ಕರ್ಮಭೂಮಿ ಕಣೊಯಿಲ್ಲಿ ।

ಸುರನದಿ ಮಿಗಿಲಾದ ನದಿ ಪುಣ್ಯಕ್ಷೇತ್ರಗಳು ।
ವರತೀರ್ಥರಾಜ ವೆಂದೆನಿಸುವ ಪ್ರಯೊಗ ।
ಪರಿ ಪರಿ ವ್ರತ ದಾನ ಆಚಾರ ವಿಚ್ಯಾರ ।
ಕರಣ ಶುದ್ಧಿಗೆ ಯಿಲ್ಲಿ ಸಂಸಾರದಲಿ ಬೇಕು ।
ಹರಿಯ ಕಾಂಬುವದಕ್ಕೆ ಯಿದೆ ಮಹ ವುತ್ತಮ ।
ಧರಣಿ ಕಾಣುವರು ಜ್ಞಾನ ಭಕ್ತಿ ವೈರಾಗ್ಯಗಳು ।
ಗರುದ್ವಾರದಿಂದಲಿ ದೊರಕುವವು ನಿತ್ಯ ।
ತರುವಾಯ ಕೋಲ ಕಮಠ ಮತ್ಸ್ಯ ಹಯಗ್ರೀವ ।
ನರಸಿಂಹ ರಾಮ ನರ ನಾರಾಯಣ ಪ್ರದ್ಯುಮ್ನ ।
ವರ ಮೂರ್ತಿಗಳಕ್ಕು ಧರಣಿ ಆರ್ಯಮ ಮನು ।
ಅರಸು ಬಧ್ರಾಶ್ವ ಪಲ್ಹಾದಾಂಜನೇಯ ।
ಸುರ ಮುನಿ ನಾರದ ರತಿದೇವಿ ಯಿವರೆಲ್ಲ ।
ಪರಮ ಭಕುತಿಯಿಂದ ವೊಂದೊಂದು ಖಂಡದಲಿ ।
ಹರಿಯ ಪೂಜಿಸುವರು ಪಂಚ ಭೇದದಿಂದ ।
ಎರಡೇಳು ಖಂಡಾ ತುಮಕ ಜಂಬುದ್ವೀಪಕ್ಕೆ ।
ಪರಿಪೇಷ್ಟವಾಗಿದೆ ಲಕ್ಷ ಯೋಜನ ಲವಣ ।
ಶರಧಿ ಯೆನಿಸುತಿದೆ ಯಿದರ ಮಧ್ಯದಲಿನ್ನು ।
ಪುರಗಳೆಂಟು ಉಪದ್ವೀಪ ನಾಮವೆಂದು ।
ಕರೆಸಿ ಸ್ವರ್ಣ ಪ್ರಸ್ಥ ಚಂದ್ರ ಶುಕಾವರ್ತನ ।
ಉರಗ ಸೇರಿದರಮಣಕ ಮುದಹರಣ ಆಮ್ಯಾಲೆ ।
ವಿರಚಿಸುವ ಪಾಂಚಜನ್ಯ ಸಿಂಹಲ ಮುಖದಶ ।
ಶಿರನು ಆಳಿದನಗರ ಲಂಕಾ ದ್ವೀಪವು ಸತ್ಯ ।
ತುರಗ ವರಸಲಿ ಪೋಗಿ ಸಗರನ ಮಕ್ಕಳು ।
ಅರವತ್ತು ಸಾವಿರ ಜನವೊಂದಾಗಿ ಅಂದು ।

ಶರನಿಧಿ ಖನನವ ಮಾಡಿ ಹಾಕಿದ ಮೃತ್ತಿಕೆ ।
ಯಿರ ತಕ್ಕವಾದವು ಉಪದ್ವೀಪಗಳೆಂದು ।
ಕರುಣಿಗಳು ಕೇಳಿ ಜಂಬೂದ್ವೀಪದ ಮಹಿಮೆ ।
ಸರುವ ಬಗೆಯಿಂದ ವಿಸ್ತರಿಸ ಬೇಕಾದರೆ ।
ಮರಿಯಾದೆ ಕಾಣೆನೊ ಪೇಳಿದರೆ ಉಂಟು ।
ಉರಗಶಾಯಿ ನಮ್ಮ ವಿಜಯ ವಿಠಲನ್ನ ।
ಚರಣಾಬ್ಜ ಬಲಗೊಂಡು ಪ್ಲಕ್ಷ ವರ್ಣಿಸಬೇಕು ೩

## ಝಂಪಿತಾಳ

ದ್ವಿತೀಯ ದ್ವೀಪವು ನೋಡು ಪ್ಲಕ್ಷವೆಂಬೋ ನಾಮ ।
ಅತಿಶಯವಾಗಿ ಜಂಬುದ್ವೀಪದ ದ್ವಿಗುಣ ।
ಕ್ಷಿತಿರುಹಯಿದೆ ಪೆಸರಿನಿಂದ ಒಪ್ಪುತಿದೆ ।
ಶತಯೇಕಾದಶ ಯೋಜನ ವುನ್ನತ ।
ಮಿತಿಯಾಗಿವೆ ವರ್ಷ ಪರ್ವತ ನದಿಗಳು ಸ ।
ಮುತ ಸಂಖ್ಯೆವೊಂದೊಂದು ಪ್ರಥುಮ ನಾಮ ।
ತುತಿಸುವದು ಶಿವ ಈಶ ಸುಭ್ರದ್ರ ಶಂತನು ಕ್ಷಮ ಅ ।
ಮೃತ ಅಭಯವೆಂತೆಂಬೊ ಏಳು ಖಂಡ ।
ಹಿತವಹುದು ಮಹಿ (ಣಿ)ಕೂಟ ಪವಿಕೂಟ ಯಿಂದ್ರ ಶಯನ ।
ಜತೆ ಜ್ಯೋತಿ ಭಾನು ಧೂಮ್ರವರ್ಣ ಪ್ರ ।
ಕಾಶಿತ ಹಿರಣ್ಯಗ್ರೀವ ಮೇಘ ಮಾಲಾ ಪ ।
ರ್ವತಗಳು ಅರುಣ ವಿಮಲ ಅಂಗಿರಸ ಸುಶೋ ।
ಭಿತ ಸಾವಿತ್ರಿ ನಾಮಕ ಸುಪ್ರಭಾ ಋತುಂಭರ ।
ಅತುಳ ಸತ್ಯಂಭರ ಈ ಪರಿ ಸಪ್ತಸರಿತುಗಳು ।
ತಿಳಿವುದು ಈ ದ್ವೀಪದಲ್ಲಿ ಇದ್ದ ।

ಕ್ಷಿತಿ ಪಾಲಕರು ವರ್ಷನಾಮಕರು ಏಳು ಜನ ।
ಸತತ ಸೂರ್ಯಾಂತರ್ಗತ ನಾರಾಯಣ ಮೂ ।
ರುತಿಯ ಅರ್ಚಿಸುವರು ತಮ ತಮ್ಮ ಸ್ಥಳದಲ್ಲಿ ।
ರತಿ ಪತಿ ಪಿತ ಸಿರಿ ವಿಜಯ ವಿಠಲರೇಯನ ಸ ।
ದ್ಗತಿಯ ಬೇಡುವರು ತ್ರಿವಿಧ ಭಕುತಿಯಿಂದ ೨

## ತ್ರಿವಿಡಿ ತಾಳ

ಇದಕೆ ಇಕ್ಷು ಸಾಗರ ವಲಯಕಾರದಲಿ ಸು ।
ತ್ತಿದೆ ಯೋಜನಲಕ್ಷ ಎರಡು ಮುಂದೆ ।
ಇದನೆ ಪೋಗಾಗಳೆದು ಶಾಲ್ಮಲೀದ್ವೀಪ ಚಿ ।
ತ್ತದಲಿ ಗ್ರಹಿಸುವುದು ಯೋಜನ ನಾಲ್ಕು ।
ಶದ (ದಶ) ಶತ ಪತ್ತು ಯೋಜನ ವಕ್ಕಣಿಸುವದು ।
ಯಿದೆ ದ್ವೀಪದ ಪೆಸರುಳ್ಳ ವೃಕ್ಷ ಪರಿಮಳದಿಂದ ।
ಮುದದಿ ರಂಜಿಸುತಿದೆ ಏನಂಬೆನಯ್ಯಾ ಮ ।
ತ್ತಿದರೊಳು ಏಳು ಖಂಡಗಳು ಅದ್ರಿ ।
ನದಿಗಳು ಒಂದೊಂದು ಅಭಿದಾನದಿಂದಲಿ ।
ಸದಮಲ ತನದಿಂದ ಒಪ್ಪುತಿವೆಕೋ ।
ಒದಗಿ ಉಚ್ಚರಿಸು ಸುರೋಚನ ಶಶಿನಸ್ಯ ಬ್ರಣ್ಯನ್ಯ ಮಾನ ।
ಬದಿಯಲ್ಲಿ ರಮಣಕ ದೇವ ಬರ್ಹ ।
ಅಧಟ ಪಾರಿಭದ್ರ ಅಭಿ ಬರ್ಹ (ಪ್ಯುಮಾನ್) ಪ್ಯರದಾನು ।
ವಿದಿತವಾಗಿವೆ ಇವೆ ಏಳು ಖಂಡಗಳು ।
ಇದರ ಶೀಮಾ ಶೈಲ ಸುರ ಶತ ಶ್ರಂಗ ವಾ ।
ಮದೇವ ಕುಂದಕ ಮುಕುಂದ ದಿವ್ಯ ।
ಉದಿತ ಪುಷ್ಪವಂತ ಸಹಸ್ರತಿ ಸಪ್ತಾದ್ರಿ ।

ನದಿ ಶಿನಿವಲಿ ಸರಸ್ವತಿ ಕದ್ರುವೆ ।
ಚದುರೆ ರಂಜಿನಿ ನಂದ ರಾಕಾವೆಂಬೊ ಸಪ್ತ ।
ಮೊದಲು ಅನುಮತಿ ಕೂಡಿಸಿ ಎಣಿಕೆ ಮಾಡು ।
ವದು ಸನ್ನಿಧಿಯಾಗಿ ಖಂಡಾಖ್ಯ ನೃಪರುಯಿಲ್ಲ ।
ವಿಧು ದೇವನೊಳಗಿದ್ದ ಮೂರ್ತಿಯ ಭಜಿಸಿ ಸಂ ।
ಪದವಿಗೆ ಸಾಧನವ ಗೈಯ್ಯುವರೋ ।
ವಿಧಿ ನಿಷೇಧ ಜ್ಞಾನದಿಂದ ತಮ್ಮ ತಮ್ಮಾ ।
ಸದನದಲ್ಲಿ ಪ್ರತ್ತ್ಯೇಕ ದೈವದ ಭಜನೆ ।
ಇದಕೆ ಆವರ್ಣ ನಾಲ್ಕು ಲಕ್ಷ ಯೋಜನ ।
ಉದಧಿ ಇಪ್ಪುದು ಕಾಣೊ ಸುರನಾಮದಿ ।
ತ್ರಿದಶ ವಂದಿತ ನಮ್ಮ ವಿಜಯ ವಿಠ್ಠಲರೇಯ ।
ಹೃದಯದಲ್ಲಿ ನಿಲಿಸಿ ಸಾಧಿಸು ಸತ್ಕಥೆ ।

## ಧ್ರುವ ತಾಳ

ಕುಶಸ್ತಂಭ ಒಂದುಂಟು ಕನಕ ಪ್ರಕಾಶ ಏಕಾ ।
ದಶ ಶತ ಯೋಜನ ಉನ್ನತ್ತವೋ ।
ವಸತಿಯಾಗಿದೆ ದ್ವೀಪ ವಿದರಂತೆ ಖ್ಯಾತಿಯಾಗಿ ।
ಪೆಸರಿನಿಂದಲಿ ಎಂಟು ಲಕ್ಷ ಯೋಜನ ।
ಪುಶಿಯೆಲ್ಲ ಇದಕೆ ಏಳು ವರ್ಷಗಳುಂಟು ಕೇಳಿ
ವಸಧಾನ ಧ್ರುಪ ರುಚಿ ನಾಭಿ ಗುಪ್ತ ।
ಮಿಸಣಿಪ ಸತ್ಯ ವೃತ ವಿಪ್ರವಾಮದೇವ ।
ಹಸನಾಗಿ ಚಕ್ರ ಶೃಂಗ ಕಪಿಲ ಭಿನ್ನ ತ್ರಿ ।
ದಶನಿಕರ ಊರ್ಧ್ವ ರೋಮ ದ್ರವಿಣನಾಮಾ ।
ಋಷಿ ಪರ್ವತ ಮತ್ತೆ ಕುಲ್ಯ ಮಧು ಕುಲ್ಯ ।

ಎಸೆವ ಶೃತ ವಿಂಧ್ಯಾ ಮಿತ್ರವಿಂದ್ಯ ವೇದ ।
ಖಸುರ ಘೃತಸುತ್ತಾ ಮಂತ್ರಮಾಲಾ ಸಪ್ತ ತರಂಗಿಣಿ ।
ಬೆಸಸುವೆಯಿಲ್ಲಿ ಸಪ್ತರಾಯರನ್ನು ।
ಕುಶಲವಂತರು ತಾವು ಖಂಡಾಭಿಧಾನದಿಂದ ।
ದಶದಿಕ್ಕಿನೊಳು ಮಹ ಭಾಗರಾಗೀ ।
ಯಶಸಿನಿಂದಲಿ ಮೆರವುತ್ತಾವಾವ ಬಗೆಯಿಂದ ।
ವಸುಜೇಷ್ಠ್ಯಾಂತರ್ಯಾಮಿ ಭಾರ್ಗವನ್ನ ।
ಬೆಸನೆ ಪೂಜಿಸುವರು ತಮ ತಮ ನಗರದಲ್ಲಿ ।
ಕುಸುಮಾದಿ ದ್ರವ್ಯದಿಂದ ಸಂತೋಷದಿ ।
ಅಸಮ ಪ್ರತಾಪ ನಮ್ಮ ವಿಜಯ ವಿಠ್ಠಲ ರೇಯ ।
ಶಶಿವರ್ಣದಂತೆ ಪೊಳೆವ ಕೊಂಡಾಡಿದವರಿಗೆ ।
ಬಿಸಿನಿಧಿ ಸರ್ಪಿ ಪರಿಮಿತಿ ದ್ವೀಪದಂತೆ ಯೆಣಿಪದು । ೬

## ಝಂಪಿ ತಾಳ

ಒಂದು ನಾಲ್ಕನೇ ದ್ವೀಪ ಕ್ರೌಂಚ ನಾಮದಿಂದ ।
ಅಂದವಾಗಿದೆ ಹದಿನಾರು ಲಕ್ಷ ।
ಯೆಂದೆಂಬ ಯೋಜನ ಇಲ್ಲಿ ಇದೆ ಪೆಸರಿನಲಿ ।
ಒಂದು ಪರ್ವತವುಂಟು ಖಂಡಾದ್ರಿ ನದಿಗಳು ।
ಒಂದೊಂದು ಗುಣದಲ್ಲಿ ಸಪ್ತ ಪ್ರ ಭೇದಗ ।
ಳಿಂದ ಲೊಪ್ಪುತಲಿವೆ ಆಗಮಸಿದ್ಧ ।
ನಿಂದಿರದೆ ಅಮೋಘ ಮಧುರಹ ಮೇಧ ಪುಷ್ಯ ।
ಚಂದವಾದ ಸುಧಾಮ ಋಷಿ ಮೋಹಿತಾರ್ಯಕ ।
ಮುಂದೆ ವನಸ್ಪತಿ ಯೆನ್ನಿ ಸಪ್ತ ಖಂಡ ।
ಸಂದಿದೆ ಶುಕ್ಲಗಿರಿ ವರ್ಧಮಾನ ।

ಒಂದೊಂದು ಉಪಬರ್ಹಣ ಉಪಭಾಜವು ।
ನಂದ ನಂದನ ಸರ್ವತೋಭದ್ರ ಪರ್ವತವು ।
ಪೊಂದಿದೆ ಅಭಯ ಅಮೃತೋದಿ ಆರ್ಯಕು ।
ಮಂದ ಗಮನ ತೀರ್ಥ ವತಿರೂಪ ನತಿಶುಚ ।
ವಂದಿಪೆನು ಶುಕ್ಲಾವತಿ ಸಪ್ತನದಿಯು ।
ಕುಂದದಲೆ ಈ ದ್ವೀಪದಲಿ ಮಹರಾಯರು ।
ಸುಂದರಗಾತುರದಿಂದ ಬಾಳುತ್ತಿಹರು ।
ಹಿಂದೆ ಪೇಳು ಯೇಳು ಖಂಡದ ಪೆಸರು ಕಾಣೋ
ಸಂದೇಹವಿಲ್ಲ ಸಮಸ್ತ ನೃಪರು ।
ಮಂದಾಕಿನೀ ಪತಿಯ ಒಳಗಿದ್ದ ಮತ್ಸ್ಯನ್ನ ।
ವಂದಿಪರು ತಮ ತಮ್ಮ ಸಭೆಗಳಲ್ಲಿ ।
ಇಂದು ವರ್ನದಂತೆ ಕ್ರೌಂಚ ದ್ವೀಪದ ಸುತ್ತ ।
ಸಿಂಧು ಇಪ್ಪದುದಧಿ ನಾಮದಲ್ಲಿ ।
ಒಂದು ಹದಿನೈದು ಲಕ್ಷ ಯೋಜನದಗಲ ।
ಸಾಂದ್ರವಾಗಿ ಮನಕೆ ಒಪ್ಪುತಿದೆಕೊ ।
ಇಂದಿರೇಶ ಹರಿ ವಿಜಯ ವಿಠ್ಠಲರೇಯನ ।
ಸಂದರುಶನ ಮಾಳ್ಪ ಜನರಿಂದ ಪೂಜೆಗೊಂಬ ೭

## ರೂಪಕ ತಾಳ

ಅನಿಶಾಕ ದ್ವೀಪ ಮೂವತ್ತೆರಡು ಲಕ್ಷ ಯೋ ।
ಜನೆಯಿದೆ ನಾಮದಲಿ ಶಾಕ ವೃಕ್ಷವಕ್ಕು ।
ಎಣಿಸು ಯೇಳು ಖಂಡ ಪರ್ವತ ನದಿಗಳು ।
ನೆನೆಪು ರಾಜೀವ ಮನೋಜವವೆ ಪವಮಾನ ।
ಘನ ವಿಚಿತ್ರರೂಪ ಬಹುರೂಪ ವಿಶ್ವಧಾರಾ ।

ಗಣನೆಯಿಲ್ಲಿಗೆ ಸರಿ ಮುಂದೆ ಅದ್ರಿ ।
ಗುಣಿಸು ಈಶಾನ ವರಶೃಂಗ ಬಲಭದ್ರ ।
ವೆನಿಪ ಶತಕೇಶರ ಸಹ ಸ್ರೋತ ದೇವ ಪಾ ।
ಲಣ ಮಹಾಮಹ ಸಪ್ತಂಬುಧರ ಸಂಖ್ಯೆಯು ।
ಯಿನಿತರ ಮ್ಯಾಲೆ ಅಮೋಘ ಆಯುರ್ಧಾನದೀ ।
ವನ ಪೂರ್ಣಾ ಉಭಯ ಸ್ವೃಷ್ಯಾ ಪರಾಜಿತೆ ಪಂಚ ।
ಜನಾ ಸಹಸ್ರ ಶ್ರೋತಿ ನಿಜಧೃತಿ ಸಪ್ತಸರಿತಗಳು ।
ಜನ ಪತಿಗಳು ಇಲ್ಲಿ ವರ್ಷನಾಮಗಳಿಂದ ।
ಮಿನಗುತಿಪ್ಪರು ನೋಡಿ ಏಳು ಜನರು ।
ಸನುಮತವಿಲ್ಲ ಪ್ರಾಣಾಂತರ್ಗತ ದೇವನ ।
ಕ್ಷಣ ಕ್ಷಣಕೆ ಪೂಜಿಪರು ಬ್ಯಾರೆ ಬ್ಯಾರೆ ।
ವಿನಿಯದಲಿ ಇದಕೆ ವರ್ತುಳಾದಿ ದುಗ್ಧ ।
ವನಧಿ ಸುತ್ತಿದೆ ದ್ವೀಪ ಪರಿಮಿತ ಲೆಖ್ಖ ।
ಮನೋಹರವಾದ ಶ್ವೇತ ದ್ವೀಪ ಇದರೊಳಗೆ ।
ಮಣಿಗಣ ಪ್ರಕಾಶದಂತೆ ಸಿದ್ಧ ।
ಮುನಿಗಳ ಸಮ್ಮತ ಇದರ ವಿಸ್ತಾರ ಯೋ ।
ಚನೆಯ ಮಾಡಲಿಬೇಕು ಸಾವಕಾಶದಿ ।
ಮನೋಭವ ನೈಯ ಸಿರಿ ವಿಜಯ ವಿಠ್ಠಲನ್ನ ।
ಅನುಗ್ರಹವಾದರೆ ಒಂದು ದುರ್ಲಭ ಕಾಣೆ ೮

## ತ್ರಿವಿಡಿತಾಳ

ಪರಮ ಶೋಭಿತವಾದ ಪುಷ್ಕರಾಖ್ಯ ದ್ವೀಪ ।
ಅರವತ್ತು ನಾಲ್ಕು ಲಕ್ಷ ಯೋಜನ ।
ಪರಿಮಿತವಾಗಿದೆ ಇದಕೆ ರಮಣಕ ಧಾತ ।

ಎರಡು ವರ್ಷಗಳುಂಟು ಅರ್ಧಾರ್ಧದಿ ।
ವರ ಪುಷ್ಕರಣಿ ಒಂದಲ್ಲಿಹ ಹನ್ನೊಂದು ನೂರು ವಿ ।
ಸ್ತರ ಯೋಜನದಗಲಾ ಸ್ವರ್ನ ಕಮಲ ।
ಭರಿತವಾಗಿಪ್ಪವೊ ನಾನಾ ಶಕುನಿ ಜಾತಿ ।
ಸರಸ ವಾಡುತಲಿವೆ ಸೌಮ್ಯ ಗುಣದಿ ।
ವರುಷ ನಾಮಕ ರಾಯರು ಬ್ರಹ್ಮಾಂತರ್ಗತ ।
ಹರಿಯ ಕರಣ ಶುದ್ಧಿಯಲಿಂದ ಅರ್ಚಿಸುವರು ।
ಗಿರಿವೊಂದುಂಟು ಮಧ್ಯದಲಿ ಮನಸೋ ।
ತ್ತರವೆಂದು ಕರೆವುತ ವಲಯಾಕಾರ ।
ಎರಡೈದು ಸಾವಿರ ಅಗಲ ಇಷ್ಟೇ ಉದ್ದ ।
ಹಿರಿದು ಕಾಂತಿಯಿಂದ ಕಂಗೊಳಿಪದು ।
ತರಣಿ ಇದರ ಮ್ಯಾಲೆ ರಥದಲ್ಲಿ ಕುಳಿತು ಸಂ ।
ಚರಿಸುವ ವೊಂದು ಚಕ್ರವ ಪೊಂದಿಸಿ ।
ಸರುವೋತ್ತಮ ಹರಿ ನಾಲ್ಕು ರೂಪದಿ ಸುತ್ತ ।
ಇರುತಿಪ್ಪನು ಕೇಳಿ ವಸುದೇವ ಸಂ ।
ಕರುಷಣ ಪ್ರದ್ಯುಮ್ನ ಅನಿರುದ್ಧ ಪೆಸರು ।
ತುರ ದಿಕ್ಕಲಿ ಸುರರು ಸೇವಿಸುವರು ।
ಸರಸಿಜ ಬಾಂಧವನ ಗತಿ ರಥದ ವಿಚಾರ ।
ಅರುಹು ಮಾಡಲಿಬೇಕು ಮುಂದೆ ತಿಳಿದು ।
ಮರಳೆ ಈ ದ್ವೀಪದ ಪರಿಮಿತ ಶುದ್ಧೋದಕ ।
ಶರಧಿ ಕಂಕಣಾಕಾರ ಮಹ ಗಂಭೀರ ।
ಅರವತ್ತು ನಾಲ್ಕು ಲಕ್ಷ ತರುವಾಯ ।
ಸ್ವರಣಾತ್ಮಕ ಭೂಮಿ ವುಂಟು ವಿ ।
ಸ್ತರಿಪೆ ಯೋಜನ ತೊಂಭತ್ತಾರು ಲಕ್ಷವೋ ।

ಎರಡೆರಡು ವಜ್ರಧಡಿ ಪಂಚ ಪಂಚ ಸಾ ।
ವಿರ ಯೋಜನದನಿಪೆ ಭೂಮಿಯೆನ್ನಿ ।
ಪರಿ ಪರಿ ಸ್ವರ್ನಮಯ ತರು ಖಗ ಮೃಗಜಾತಿ ।
ಚರಿಸುತ್ತಿವೆ ತಮ್ಮ ಸ್ವ ಕ್ರೀಡೆಯಲಿ ।
ಸುರ ಗಂಧರ್ವಪ್ಸರ ಪೆಂಗಳೆಯರು ಪೋಗಿ ।
ಸುರತ ಕ್ರೀಡೆಯಿಂದ ಸುಖಿಸುವರೊ ।
ಚರಿಯ ಪೇಳುವದೇನೊ ದೇವತ ಕಾರ್ಯವು ।
ಚ್ಚರಿಸುವುದಕೆ ನಾಲಿಗೆ ಸಾಲದೊ ।
ಉರುಕಾಂತೆಯಿಂದೆಸೆವ ಲೋಕಾಲೋಕವೆಂಬೊ ।
ಪರುವತ ಸೂವರ್ಣ ಧರಣಿ ಪೊಂದಿ ।
ತಿರಗುವ ಸುಳಿಯಂತೆ ಸುತ್ತಲಿಪ್ಪದು ಅರ್ಧ ।
ತರಣಿ ಪ್ರಕಾಶ ಅರ್ಧಕೆ ಯಿಲ್ಲಮೊ ।
ಕರೆಸುವದರಿಂದ ಲೋಕಾ ಲೋಕವೆಂದು ।
ನಿರುತದಲಿ ಸರ್ವ ಓದಿನಲ್ಲಿ ।
ಪರಮ ಪುರುಷ ನಮ್ಮ ವಿಜಯ ವಿಠ್ಠಲರೇಯನ ।
ಶರಣರ ಕರುಣಕ್ಕೆ ಎಣೆಗಾಣೆ ಸರ್ವದ ೬

## ಅಟ್ಟತಾಳ

ಸಪುತ ಸಪುತ ದ್ವೀಪ ವನಧಿಯ ಮಹಿಮೆಯ ।
ಅಪರಿಮಿತವಾಗಿ ಕೊಂಡಾಡಿ ಹರಿ ಪಾದ ।
ಗುಪುತದಿ ಭಜಿಪ ಹರಿದಾಸರ ಕೂಡ ।
ತಪವ ಮಾಡುತ್ತ ಚಿತ್ತ ಶುದ್ಧಾತ್ಮಕರಾಗಿ ।
ಸಪುತ ದ್ವೀಪದಲ್ಲಿ ಅರಸುತನವೈದಿದ ।
ನೃಪರು ಖಂಡಾಭಿಧಾನದಂತೆ ತಿಳಿವುದು ।

ವಿಪುಳ ಮತಿಯಿಂದ ಪ್ಲಕ್ಷ ಮೊದಲು ಮಾಡಿ ।
ಅಪರ ದ್ವೀಪವೊಂದಲಿ ಒಂದೆ ಭಗವದ್ರೂಪ ।
ತಪನ ಜಾಂತರ್ಗತ ಅನೇಕವಾಗಿ ।
ಸಪುತ ಖಂಡ ಐದಕೆ ವೊಂದಕೆದ್ವಯ ।
ಗುಪಿತ ಮಂಗಳಮೂರ್ತಿ ತತ್ ತತು ವರ್ಷದ ।
ನೃಪನಿಂದ ಪೂಜೆಗೊಂಬನು ಈ ದ್ವೀಪಕೆ ಬ್ಯಾರೆ ।
ಸಪುತ ದ್ವೀಪಕೆ ವರುಷಗಳು ಲೆಖ್ಖಿವ ಮಾಡೆ ।
ಸಪುತ ಸಪುತಕೆ ಒಂದೆರಡು ಕಡಿಮೆ ಪೇಳೊ ।
ಕೃಪ ಪಯೋನಿಧೆ ದೇವ ವಿಜಯ ವಿಠ್ಠಲನಂಘ್ರಿ ।
ಜಪಿಸು ಈ ಭಾರತವರ್ಷದಲ್ಲಿ ಪುಟ್ಟಿ ೧೦

**ಆದಿತಾಳ**

ಸರಸಿಜೋದ್ಭವಗೆ ಸ್ವಾಯಂಭು ಮನು ಆತಗೆ ।
ಪರಮ ವೈರಾಗ್ಯ ನಿಧಿ ಪ್ರೀಯವ್ರತನೆಂಬೊ ।
ಧರಣೀಶ ಪುಟ್ಟಿದನೀತಗೇಳು ಮಂದಿ ।
ಅರಸು ಮಕ್ಕಳುಗಳು ಜನಿಸಿದವರಿಗೆ ।
ಎರಡೈದು ದ್ವೀಪಂಗಳು ವಿಭಾಗ ಮಾಡಿಕೊಡಲು ।
ಹರುಷದಿಂದಲಿ ರಾಜ್ಯಭಾರ ಮಾಡಿದರಾಗ ।
ಮರಿಯಾದೆಯಾಯಿತು ಆಮೇಲೆ ಇವರಿಗೆ ।
ವರಪುತ್ರರಾದರು ನೃಪನಾಭಿಗೊಂಭತ್ತು ।
ತರುವಾಯ ಪಂಚಜನಕೆ ಏಳೇಳು ಮಂದಿ ಕೇಳಿ ।
ಬ್ಬರು ಮಕ್ಕಳಾದರು ವೀತ್ರಿ ಹೋತ್ರರಾಯಗೆ ।
ಕರೆದು ತಮ್ಮಾತ್ಮಜರಿಗೆ ದ್ವೀಪ ಹಂಚಿಕೊಡಲಾಗಿ ।
ಕರೆಸಿದವು ನೋಡು ವರುಷ ಭೇದದಿಂದ ।

ಗಿರಿ ಮೇರುವಿನಿಂದ ಲೋಕಾ ಲೋಕಾದ್ರಿ ತನಕ ।
ಮರಿಯಾದೆ ಸಪ್ತದ್ವೀಪ ಸಪ್ತ ಶರಧಿ ತನಕ ।
ಧರಣಿ ಗಣಿತ ಮಾಡಿ ಎಣಿಸಿ ಕೊಂಡಾಡುವದು ।
ನಿರುತರ ಅಲ್ಲಿದ್ದು ಹರಿ ಕಾವು ತಲಿಪ್ಪ ।
ವರಣ ವೊಂದೊಂದರಲ್ಲಿ ಭಗವದ್ರೂಪ ಚಿಂತಿಸಿ ।
ಬರಿದೆ ಯಾಗದು ಕಾಣೊ ಪುಣ್ಯ ರಾಶಿ ಬಪ್ಪದು ।
ಮುರವೈರಿ ತ್ರಿಜಗಧೀಶ ವಿಜಯ ವಿಠ್ಠಲರೇಯ ।
ಶರೀರದೊಳಗೆ ಇನಿತು ಮಾಡಿಪ್ಪ ತಿಳಿದು ನೋಡಿ ೧೧

ಜತೆ

ಸಪ್ತ ದ್ವೀಪದ ಸತ್ಕಥೆ ಶ್ರವಣ ಮಾಡಿದ ಜ್ಞಾನಿಗೆ ।
ಆಪ್ತನಾಗಿಪ್ಪನು ವಿಜಯ ವಿಠ್ಠಲ ಒಲಿದು ೧೨

## ೭೭

### ಧ್ರುವತಾಳ

ಯಾಕೆ ಮುನಿಸು ಸರ್ವಲೋಕದ ಒಡಿಯನೆ
ಕಾಕನರನ ಕೂಡ ಈ ಕಪಟವೇ ಬಾಕುಳಿಗನು ನಿನ್ನ
ಪಾಕ ಶಾಲೆಯಲ್ಲಿ ಬಿದ್ದ ಕಾಳರಾಶಿತಿಂಬ ಲೆಂಕಿಗನು
ವಾಕು ಪುಸಿಯಲ್ಲಾ ಲೇಖಿಗೆ ತಾನೇ ಬಲ್ಲಾ
ಲೋಕದೊಳಗೆ ನಾನು ಏಕನೇ ರಿಕ್ತಾ
ಗೋಕುಲಾಂಬುಧಿ ಚಂದ್ರ ನೀ ಕಂಡದಕ್ಕೆ ನೋಡು
ನಾ ಕೊಡುವೆನು ತುಲಸೀಕ ಬಂಧ ನೀ ಕರುಣದಲಿ
ಕೈಕೊಂಡು ಪುಷ್ಪದಲಿ ಸ್ವೀಕರಿಸಿ ವೇಗ ಸಾಕಬೇಕು
ಕೋಕನದನಯನ ವಿಜಯ ವಿಠ್ಠಲ ನೀನೆ
ಬೇಕೆಂದೊಲಿದು ಅವಲೋಕವೇ ತೃಣಮೇರು ೧

## ಮಟ್ಟತಾಳ

ನೀರನೆ ನೈವೇದ್ಯ ತಂದಿಟ್ಟರೆ ನೀನು
ಮೋರೆ ತಿರುಹಿಕೊಂಡು ನೋಡದ ಬಗೆ ಏನೋ
ಧಾರುಣಿಯೊಳು ನಿನ್ನ ತೃಪ್ತಿಮಾಡುವ ವಸ್ತು
ಆರೈದು ನೋಡಿದರು ಆವಲ್ಲಿ ಕಾಣೆನೋ
ಮೀರಿದ ಮಹಾ ಮಹಿಮ ವಿಜಯ ವಿಠ್ಠಲ ಎನ್ನ
ಗಾರ ಮಾಡುವುದಲ್ಲದೇ ಮಿಗಿಲಿಲ್ಲಾ ೨

## ತ್ರಿವಿಡಿ ತಾಳ

ಪೇಳುವುದು ನಿನ್ನ ತೃಪ್ತಿಯ ಪರಿಮಿತ
ಏಳಾರು ಖಂಡಗವೆ ಮತ್ತೆ ಅಧಿಕಬೇಕೇ
ಕೇಳುವೆ ಕಾವಿಯಲ್ಲಿ ಸುಮ್ಮನಿರದೆ ಪರರ
ಆಳಾಗಿ ದುಡಿದು ಅನುಗಾಲ ತಪ್ಪದೆ
ಕಾಲ ಕಾಲಕೆ ಬಿಡದೆ ಪಂಚಾವೃತವೇ ತಂದು
ವಾಲಯದಲ್ಲಿ ಸಮರ್ಪಿಸುವೆನು ರಾಶಿಗಳು
ಮೂಲೋಕದರಸ ನೀನೆ ವಿಜಯವಿಠ್ಠಲ ಪಾಂ
ಚಾಲಿ ನಿನ್ನಯ ಕರದಲ್ಲಿ ಎರಡದೇನೋ ೩

## ಅಟ್ಟತಾಳ

ಉದಕವಾದರೇನು ಉಚಿತ ಪದಾರ್ಥವು
ಅಧಿಕ ಅಧಿಕವಾಗಿ ಮೇರುಪರ್ವತದಷ್ಟು
ಪದೋಪದಿಗೆ ನಿನ್ನ ಮುಂದೆ ಸುರಿದರೇನು
ಇದರಿಂದ ನಿನಗಿಂದು ಕಾಲಕ್ರಮೇಣವೆಂದು

ಉದರ ಪೋಷಣನಾಗಿ ದಿನವ ಕಳೆವನಲ್ಲಾ
ಸದಾ ನಿತ್ಯತೃಪ್ತನೆ ವಿಜಯ ವಿಠ್ಠಲ ನಿನಗೆ
ಇದು ಅದು ಎಂಬೋದು ವೈಷಮ್ಯವಿಲ್ಲದ ದೈವಾ ೪

ನೀರೇವೆ ಪಾವನ ನೀರೇನೇ ಜೀವನ
ನೀರೇವೆ ಸಕಲಕುಟುಂಬಿಗೆ ಆಧಾರ
ನೀರೇವೆ ಕಟ್ಟಕಡೆಗೆ ಒಂದೇ ಇಪ್ಪದು
ನೀರೇವೆ ಇಲ್ಲದಿರೆ ನಿಲ್ಲಲಾರದು ಲೋಕಾ
ನೀರೇರುಹ ನಾಭಾ ವಿಜಯವಿಠ್ಠಲ ನೀನೆ
ನೀರೊಳು ವಟಿ ಪತ್ರದಲ್ಲಿ ಮಲಗಿಪ್ಪೆ ೫

## ಜತೆ

ನೀರೇವೆ ನೋಡಲು ನಾನಾ ಕುಭೋಜನಾ
ಸಾರವಾಗುವದಯ್ಯಾ ವಿಜಯ ವಿಠಲ ಪ್ರೀಯಾ ೬

## ೭೮

## ಝಂಪೆ ತಾಳ

ಯಾಕೆಲವೋ ನಿಗಮಮಣಿ ಈ ಕುಟಿಲತನವೇನೋ
ಜೋಕೆ ಮಾಡುವುದು ನಿನ್ನಿಂದ ಆಗದೇ
ಸಾಕೆ ಸಾಕುವ ಬಿರಿದು ಭಕುತ ವತ್ಸಲನೆಂಬ
ವಾಕು ಬೇಕಾಗಿಲ್ಲವೇನೋ ಪೇಳೋ
ಏಕಮೇವಾನೆಂದು ಸ್ತುತಿಸಿದರೆ ನಿನ್ನ ಮೊಗ

ವಾಕಾಶ ನೋಡುತಿದೆ ಗರ್ವದಲಿ
ಬಾ ಕುಳ್ಳಿರಿಲ್ಲಿ ನಿನ್ನ ದೇವ ದೈವತನವೇನೋ
ಆಕಳನು ಕಾಯಿದಿ ಪೋಕತನದ
ಲ್ಲೇಕಿಕನಾಗಿ ಆರಿಸಿದ ಹಣ್ಣು ಹಂಪಲೆ
ನಾಕಜನ ನೋಡುತಿರೆ ಮೆಲಲಿಲ್ಲವೇ
ಈ ಕಥೆಯನಾರಾದರರಿಯದವರೇ ಇಲ್ಲ
ನಾ ಕಠಿಣ ಉತ್ತರ ಪೇಳಲೇಕೆ
ಪ್ರಕಾಶಾತ್ಮ ನಾಮ ವಿಜಯ ವಿಠ್ಠಲ ಎನ್ನ
ವಾಕ ಬರದದ್ದು ನೀನು ಬಿಡಿಸಲಾಪೆಯೋ ದೇವ ೧

## ಮಟ್ಟತಾಳ

ಭೂತ ಭೂತವೆಂದು ಭೀತಿಗೊಂಡರೆ ಆ
ಭೂತವೆ ಮಹದೊಡ್ಡ ಭೂತವಾಗಿ ತೋರಿ
ಆತುಮದೊಡನೆ ಸಂಗಾತ ತಿರುಗಿದಂತೇ
ತಾ ತೊಡಕಿಕೊಂಡು ಭೀತಿಗೊಳಿಸುವುದು
ಭೂತ ನಾಮಕ ದೇವಾ ವಿಜಯ ವಿಠ್ಠಲ ನಿನಗೆ
ಸೋತೆ ವೆಂದವರಿಗೆ ಭೂತನಾಗಿ ನಿಲುವೆ ।೨

## ತ್ರಿವಿಡಿ ತಾಳ

ಎದೆ ಮೇಲೊದದು ಅಂಜದಲೆ ನುಡಿಸಿದವನ
ಮುದದಿಂದಲರ್ಚಿಸಿ ಒದಗಿ ಬಿನ್ನೈಸಿದೆ
ಹುದಗಿ ಗದಗದ ನಡುಗಿ ಬೆದರಿ ನಿಂದವನಿಗೆ
ಬಧಿರನಂತೆ ಮಂದನಾಗಿ ಕೇಳದಲಿಪ್ಪೆ
ಪದೋಪದಿಗೆ ನಿನ್ನ ಪದಗಳ ನೆರೆನಂಬಿ

ಕದಲದಲೆ ನಿತ್ಯ ಹೃದಯದೊಳು
ಮೃದುವಾದ ಮನದಲ್ಲಿ ವಂದಿಸಿ ಕೊಂಡಾಡೆ
ಚದರಿ ದೂರಾಗಿ ಪೋಗುವುದು ಏನೋ
ಎದುರಿಲಿ ನಿಂದು ತಿರುಗದ ಭಕ್ತರಿಗೆಲ್ಲಾ
ವಹನದಿಂದಲಿ ಸೋಲಬಾರದ ಮುನ್ನ
ಬದಿಯಲಿ ನಿಂದು ಪರಿಪಾಲಿಸಿ ತೊಲಗದೆ
ಮದುವೆ ತೆತ್ತಿಗನಂತೆ ಇರಳು ಹಗಲು
ಪದುಮನಾಭನೆ ನಮ್ಮ ವಿಜಯವಿಠ್ಠಲ ಸ
ರ್ವದ ನಿನ್ನ ನೆನೆದವಗೆ ವಿಧಿ ನಿಷೇಧವಿಲ್ಲಾ ೩

## ಅಟ್ಟತಾಳ

ಬಿಟ್ಟರೆ ಸಿಗನೆಂಬೊ ದಿಟ್ಟತನವೇನೋ
ಇಟ್ಟಣಿಸಿ ನಿನ್ನ ಅಟ್ಟುಳಿಂದಲಿ ಬೆನ್ನಟ್ಟಿ ಬಿಡದೆ ಬಂದು
ಉಟ್ಟ ಪೀತಾಂಬರ ದಟ್ಟಿಯ ಶರಗನು
ದಟ್ಟಡಿಯಿಂದಲಿ ನಿನ್ನ ಮುಟ್ಟಿ ಪಿಡಿದು ಒಳ
ಗಿಟ್ಟು ಕೊಂಡು ಜಗಜಟ್ಟಿ ಚಿತ್ತದಲ್ಲಿ ಕಟ್ಟಿಹಾಕುವವೆನು
ಅಟ್ಟಹಾಸದಲ್ಲಿ ರಟ್ಟು ಮಾಡಿಬಿಡುವೆ
ಇಷ್ಟದೈವವೆ ವಿಜಯ ವಿಠ್ಠಲರೇಯನೇ
ಪುಟ್ಟದಂತೆ ಪಾಪ ನಷ್ಟವ ಮಾಡೋ ೪

## ಆದಿತಾಳ

ತಿಲವನ್ನು ಕರತಳದಲ್ಲಿ ಇಟ್ಟುಕೊಳ್ಳಲು
ಸುಲಭತನದಿಂದಲಿ ತೈಲ ಫಲಿಸೋದೆ ಎಲೋ ದೇವಾ
ಸಲಿಗೆಯಿಂದಲಿ ನಿನಗೆ ಪಲ್ಲುದೆರೆದು ಬೇಡಿದರೆ
ಒಲಿದು ಕೊಡುವದು ಗಣಾವಳಿಗಳು ನಿನ್ನವಲ್ಲ

ಒಳಗೆ ನಿಲಿಸಿಕೊಂಡು ಸಲೆ ಭಕುತಿಯಿಂದ
ಕೆಲಸಕ್ಕೆ ಪೋಗಗೊಡದಲೆ ಸಿಗಿಸಿಕೊಂಡು
ಚಲುವ ಕ್ಷೇತ್ರಜ್ಞ ವಿಜಯ ವಿಠ್ಠಲ ನಿನಗೆ
ಬಲವಂತ ನಾಗದಲೆ ಅಲಿಯವು ಪಾಪಾ ೫

### ಜತೆ

ನಾ ಮುಂದೆ ನೀ ಹಿಂದೆ ಗುರುವಿಕೆ ನಿನಗೇಕೋ
ಸಾಮಗ ವಿಜಯ ವಿಠಲನೆ ನಿನ್ನಾಧೀನಾ ೬

## ೭೯

### ಧ್ರುವತಾಳ

ರಕ್ಷಿಸುವ ಭಕ್ತರ ನಾನಾ ರೂಪದಿಂದ
ಅಕ್ಷರ ಪುರುಷ ರಮಣ ಕರುಣಾಂಬುಧಿ
ಅಕ್ಷಿ ಮೊದಲಾದ ಕಾರ್‍ಯದಲ್ಲಿದ್ದು ಭಕ್ತರ
ಶಿಕ್ಷೆ ಮಾಡುವ ಉಕ್ಕು ತಗ್ಗಿಸುವ
ಈಕ್ಷಿಸುತಿಪ್ಪನು ಒಳಗೆ ಹೊರಗಿದ್ದು ಬಿಡದೆ
ದೀಕ್ಷ ಬದ್ಧನಾಗಿ ದೀನ ಬಂಧು
ಅಕ್ಷಯ ಕೊಡುತಲಿ ಆವಾವಕಾಲಕ್ಕೆ
ಮೋಕ್ಷಕ್ಕೆ ಸಾಧನ ಮಾಡಿಸುತ್ತ
ಲಕ್ಷಣ ಮೂರುತಿ ಕೇವಲ ನಂಬಿದವರು
ಲಕ್ಷ ಕೋಟಿ ಜನರ ನಡುವೆ ಇರಲು
ಲಕ್ಷ್ಮೀ ಸಹಿತ ಬಂದು ಕಾವನು ಆಪದ್ಧರ್ಮ
ರಕ್ಷಕನೆಂಬೊ ಬಿರದು ಕೂಗುತಿದಕೋ

ಭಿಕ್ಷುಕ ಭಾಗ್ಯವಂತನೆಂಬೊ ವೈಷಮ್ಯವಿಲ್ಲಾ
ಲಕ್ಷ ಇಟ್ಟು ಮೇಲೆ ಒಪ್ಪಿಸಿ ಕೊಡನೋ
ವಕ್ಷಸ್ಥಳದ ಮೇಲೆ ಒದ್ದ ಬ್ರಾಹ್ಮಣವ
ಉಪೇಕ್ಷ ಮಾಡದಲೆ ಮನ್ನಿಸಿದ ನೋಡು
ಈ ಕ್ಷಿತಿ ಮಧ್ಯದಲಿ ಇನ್ನೊಂದು ದೈವವುಂಟೆ
ತ್ರಕ್ಷ್ಯ ಜನಕ ಮೊದಲಾದವರು
ರಕ್ಷಿಸಬೇಕೆಂದು ಕರವ ಜೋಡಿಸಿ
ಅಪೇಕ್ಷದಿಂದಲೆ ಸ್ತುತಿಸಿ ಬೆಂಡಾಹರೋ
ತೀಕ್ಷಣವಾಗಿ ಹರಿಯ ಕಾಣಬೇಕೆನೆ ಪ್ರ
ತ್ಯಕ್ಷ ಸೋಮನ ಶ್ರುತಿಯಲಿ ಕಾಣಿರೊ
ವೃಕ್ಷ ಸ್ಥಾವರ ಜಂಗಮ ನಾಲ್ಕು ಎಂಭತ್ತು ಜೀವಿಗಳನ್ನು ಚಕ್ರದಂತೆ
ಚಕ್ಷು ಲವ ನೋಟದಿಂದ ಬೊಮ್ಮಾಂಡ ವರ್ಣ ಮಹಾ
ಲಕ್ಷೀ ಸಮೇತ ಸದ ಸರಸರಗಿದ್ದಾನೆ
ಆಕ್ಷಣದಿಂದಲಿ ತೃಣಮಾಯರಂದದಿ ಲಪ
ರೋಕ್ಷ ತಾನಾಗಿ ಇನಿತು ತಿರುಗಿಸುವ
ಕುಕ್ಷಿಗೋಸುಗವಲ್ಲ ಸರ್ವ ಸ್ವಾತಂತ್ರ ನಿತ್ಯ
ದಕ್ಷಕ ಸುಖ ಸಂಪೂರ್ಣ ಇಂಥವರನ್ನ
ಲಕ್ಷಿಗೆ ತಾರನೇನೊ ಸ್ವರತಾ ನಿರ್ದೋಷಮಣಿ
ಅಕ್ಷೀಣ ಬಲವಂತ ಸ್ವಪ್ರಕಾಶಾ
ಸಾಕ್ಷಾತ್ಕಾರ ಸ್ವಭಾವ ಕಾಲದಿಯಲ್ಲೀ ಸಮ
ಕಕ್ಷಿಗಳಿಲ್ಲ ಕಾಣೊ ಚಿಂತಿಸಿದರು
ನಕ್ಷತ್ರ ಗಣ ಪುಲಿನರಾಶೀ ಪರಾಗ ಸಂಖ್ಯ
ನೀಕ್ಷಿಸಿ ಎಣಿಸಬಹುದೋ ಇದು ತೀರದು
ಸಾಕ್ಷಿ ಪ್ರೇರಕ ಕರ್ತಕಾರಯಿತ ಅನಾದಿಯಿಂದ
ಸೂಕ್ಷ್ಮ ಶರೀರದೊಳು ಮಹಾತಮ ತರದೀ

ಪಕ್ಷಿನಾಮಕದೇವ ವಾಸವಾಗಿಪ್ಪ ವಿಶ್ವ
ಚಕ್ಷು ನಾರಾಯಣಾ ಬಿಂಬ ವ್ಯಾಪ್ತಿ
ದಕ್ಷಣಾದೇವಿ ರಮಣ ವಿಜಯ ವಿಠ್ಠಲ ಬಲು
ಪಕ್ಷಪಾತಿ ಕಾಣೊ ಒಮ್ಮೆ ನೆನಿಸಿದರೂ ೧

## ಮಟ್ಟತಾಳ

ಸ್ಥಳದಲ್ಲಿ ವಾಮನ ಅಟವ್ಯ ನರಸಿಂಹ
ಜಲದಲ್ಲಿ ಮತ್ಸ್ಯ ಗಗನದಿ ತ್ರಿವಿಕ್ರಮಾ
ಕುಲಗಿರಿಯಲ್ಲಿ ಪರಶುರಾಮನು ಮಾರ್ಗ
ದಲಿ ಭೂ ವರಾಹಾತ್ಮಾ ಬಲು ಪ್ರವಾಸದಲಿ
ಸಲಕ್ಷ್ಮಣ ಭರತಾಗ್ರಜ ಜಾನಕಿಪತಿ ರಾಮಾ
ತಿಳಿವದು ಈ ವಿಧದಿ ರಕ್ಷಕ ಮೂರ್ತಿಗಳ
ಬಲಿಮರ್ದನಿ ಪಾದ ವಿಜಯ ವಿಠ್ಠಲರೇಯ
ಒಲಿದು ಸಂಗಡಿಲಿದ್ದು ಸುಖವೇ ಕೊಡುತಿಪ್ಪಾ ೨

## ತ್ರಿವಿಡಿ ತಾಳ

ಮತ್ತೆ ನಿಖಿಳಾ ಪ್ರಮಾದ ರಕ್ಷಕ ಶಭ
ಮೂರ್ತಿ ನಾರಯಣಾತ್ಮಕನೊ ಉ
ನ್ಮತ್ತವೊಮಾದಾ ಹಾಸಕನೆ (?) ನರ ನಾಮಕಸ್ವಾಮಿ
ದತ್ತನೂ ಅ ಯೋಗ ದ್ರಕ್ಷಕ ನಾಗಿಪ್ಪಾ
ಮೊತ್ತ ಕರ್ಮಾ ಕರ್ಮ ಬಂಧ ಮೋಚಕ ಕಪಿಲಾತ್ಮಕ ಸ
ನತ್ಕುಮಾರನು ಯೋಗ್ಯತಾವ ಕಾಮಕೆ ಇನ್ನೂ (ತಾಪಸಕಮ ಎನ್ನ)
ಭೃತ್ಯಧರ್ಮವೇ ಮರದು ಪತಿದೇವ
ಹೇಳನ ಕೃತ್ತೀಗೆ ಹಯಗ್ರೀವ ಪಾಲಿಸುತಿಪ್ಪನು
ತತ್ವೇಶರ ಕೂಡ ಅರ್ಚನೆ ಮಾಡ ಹರಿಗೆ

ತುತ್ತು ಈಯದೆ ಲಕ್ಷಣ ಕರ್ಮ ಸ್ಮರಣ ರ
ಹಿತ್ತವಾಗಿದ್ದ ಪೂಜೆಯ ದೋಷಹ ಮಹಿದಾ
ಸಾತ್ಮಕ ಹರಿಯೆನ್ನು ಅಶೇಷ ನಿರಯವಾ
ಉತ್ತರಿಸುವಾ ಕೂರ್ಮ ಧನ್ವಂತರಿದೇವಾ
ಪತ್ಯ ರಕ್ಷಕಾ ದ್ವಂದ್ವಾ ಭಯ ಪರಿಹಾರಕ
ಕೀರ್ತಿ ಪುರುಷ ಋಷಭ ಯಜ್ಞ ಕೃತಫಲದಲ್ಲಿ
ನಿತ್ಯ ಯಜ್ಞಾತ್ಮಕ ಸುರನಾಯಕಾ
ವೃತ್ತಿ ಕ್ರೋಧಾವೇಶ ಕಳೆದ ಬಲ ಭದ್ರಾತ್ಮಕಾ
ಸತ್ಯಸಂಕಲ್ಪನೋ ಪರಮಾತ್ಮನೋ
ಸತ್ಯವತೀಸೂನು ಸಂಪ್ರಮೋಹ ಬಿಡಿಪಾ
ಮಿಥಾಜ್ಞಾನಿಗಳ ಸಂಗವ ಹರಿಸುವ ಬುದ್ಧಿ
ಚಿತ್ತಾದಿಯಲಿ ಕಲಿಯ ಕಲ್ಮಷವಿರೆ ನು
ಗೊತ್ತುವಾ ಕಲ್ಕಿರೂಪವೆನಿಸಿ
ಸತ್ಯಾ ಪರಮಣ್ಯ (ಯಣ) ಸ್ವಾಮಿ ಮಿಜಯ ವಿಠ್ಠಲ ಸ
ವರ್ತ್ರದಲ್ಲಿ ಇದ್ದು ಅಘನಾಶ ಮಾಡುವಾ ೩

## ಅಟ್ಟತಾಳ

ಪದಜಾನು ಉರು ರಕ್ಷಕ ಅಜಾ ಅಣಿಮಾಯಜ್ಞ
ಮೃದು ಕಟಿ ಅಚ್ಯುತಾ ಜಠರ ಹಯಗ್ರೀವಾ
ಪದುಮನಾಭ ನಾಭಿ ಗುಹ್ಯೇಂದ್ರಿಯನಿರುದ್ಧಾ
ಹೃದಯ ವಕ್ಷಸ್ಥಳ ಕೇಶವಾ ಈಶಾನಾ
ಇದೇ ಸಿದ್ಧಾಕರ ಸ್ವ ಆತ್ಮ (ಕಂಠಸ್ವಾತ್ಮಕ) ಭುಜೆವಿಷ್ಣು
ವದನ ಉರುಕ್ರಮಾ ಶಿರೋ ಈಶ್ವರನೆನ್ನು
ಎದುರಿಗೆ ಚಕ್ರಿಯಾತ್ಮಕ ಪೃಷ್ಠಭಾಗಕ್ಕೆ
ಗದಾಧರ ಪಾರ್ಶ್ವಕ್ಕೆ ಧನುರ್ಧಾ ಕಾಣೊ

ತದುಪರಿ ಉಪೇಂದ್ರ ಕ್ಷಿತಿಗೆ ತಾರಕ್ಷನೋ
ಮುದದಿಂದಲಿ ಸಮಾ ಅಂತಿಗೆ ಹಲಧರಾ
ಒದಗಿ ಇಂದ್ರಿಯಗಳಿಗೆ ಹೃಷಿಕೇಶ
ಸದಮಲ ಪ್ರಾಣಚಿತ್ತಾ ಮನೋಬುದ್ಧಿಗೆ
ಪದುಮೇಶ ನಾರಾಯಣ ದೇವ ಶ್ವೇ
ತದ್ವೀಪದವಾಸಿ ಯೋಗೇಶ್ವರ ಪ್ರಶ್ನಿಗರ್ಭ (ಪ್ರಶನಿಗರ್ಭ)
ಇದೇ ಸತ್ಯವೆನ್ನಿ ಆತ್ಮನಿಗೆ ಪರಶುರಾಮಾ
ಪದೋಪದಿಗೆ ಕ್ರೀಡಾ ಶಯನಾ ವ್ರಜಾಸಿನಾ
ವಿಧಕ್ಕೆ ಗೋವಿಂದ ಮಾಧವ ವೈಕುಂಠ ಶ್ರೀಪತಿ
ಪದ ಪ್ರದಾತಾ ನಮ್ಮ ವಿಜಯ ವಿಠ್ಠಲ ಸ
ನ್ನಿಧಿಯಾಗಿ ಇರುತಿಪ್ಪಾ ಆನಂದ ಕೊಡುತಲಿ ೪

## ಆದಿತಾಳ

ಮುನ್ನೆ ಕೇಳುವುದು ಭೋಕ್ತಾರಕ್ಷಕ ಯಜ್ಞಭೋಕ್ತ
ಉನ್ಮಾದಾ ಅಪಸ್ಮಾರ ಅರ್ಭಕ ಗೃಹಾ ಯಾತೂ
ಧನ್ಯ ಕೂಷ್ಮಾಂಡ ಭೂತಪ್ರೇತ ಪೈಶಾಚಿ ಡಾ
ಕಿನ್ಯ ಶಾಕಿನಿ ದೇಹ ಪ್ರಾಣೇಂದ್ರಿಯಗಳಲ್ಲಿ
ಭಿನ್ನಾ ದುಸ್ವಪ್ನ ದುಷ್ಟ ಮೋಹೋತ್ಪಾತಾ ಬಾಲ ಯಾ
ವನ ವೃದ್ಧಾಪ್ಯ ವಿಡಿದು ನಾನಾ ಭಯ ವಿಚಿತ್ರಾ
ಘನ್ನವಾಗಿ ಬಂದಿರೆ ವಿಶ್ವನಾಮಕನ
ಚೆನ್ನಾಗಿ ನೆನಿಸುವುದು ಯಮ ನೇಮನದಿಂದ
ಇನ್ನು ಈ ವಿಚಾರಕ್ಕೆ ಸುಲಭ ಮಾರ್ಗವೆ ಉಂಟು
ಅನಂತರೂಪಗಳು ಸರ್ವದಲ್ಲಿ ಇಪ್ಪವು
ಇನಿತು ಜ್ಞಾನದಲ್ಲಿ ಇದರೊಳಗಾವ ಒದಗೆ
ನಿನ್ನ ಚಿತ್ತಕ್ಕೆ ಬಂದದ್ದು ಸ್ಮರಿಸೆ ನಿರ್ಭಯವೋ

ಧನ್ಯನಾಗೆಲೊ ಜೀವಿ ಈ ಬಗೆ ಕೊಂಡಾಡಿ
ಪುಣ್ಯ ಸಂಪಾದಿಸು ಅರಿಷ್ಟ ಪೋಗಾಡು
ಸಣ್ಣೋಪಾಯವೆ ಉಂಟು ಒಂದೆರಡು ಮೂರು ನಾಲ್ಕು
ಭಿನ್ನ ಅರೇಳು ಎಂಟು ಒಂಭತ್ತು ಈರೈದು
ಹನ್ನೊಂದು ಹನ್ನೆರಡು ಈ ಪ್ರಕಾರವೆ ಹರಿಯಾ
ಉನ್ನತ ಪ್ರೇರಣೆ ಸ್ವಾಮಿತ್ವ ತಿಳಿಯ ಬೇಕು
ತಿನ್ನಲಾಗಿ ಮೇಲಿದ್ದ ರಸ ಪೋದ ಮಾವಿನ
ಹಣ್ಣಿನಂದದಿ ಎಲ್ಲ ಅನುಭವ ನೋಡಿಕೊಳಿರಿ
ಮನ್ನಿಸಿ ಓದಿ ಕೇಳಿ ಲಾಲಿಸಿದವರಿಗೆ
ಇನ್ನಿತು ಆಗುವದು ದೀಪದಿಂದಲಿ ದೀಪವ
ಬಿನ್ನಾಣದಲಿ ಪಚ್ಚಿಕೊಂಡು ಪೋದಂತೆ ಇದು
ಪುಣ್ಯತಂದು ಕೊಡುವುದು ಹರಿಕಥಾಮೃತ ನಿತ್ಯ
ಪೂರ್ಣ ಗುಣಾರ್ಣವ ಹರಿ ವಿಜಯ ವಿಠ್ಠಲ
ತನ್ನ ತೋರಿಸಿ ತನ್ನ ಪದವಿಯ (ನೀವಾ) ಕೊಡುವಾ ೫

## ಜತೆ

ಭಗವನ್ಮೂರ್ತಿಗಳನ್ನು ಚಿಂತಿಸು ಅಲ್ಲಲ್ಲಿ
ಅಘ ನಿರ್ಲೇಪನಾಗು ವಿಜಯ ವಿಠ್ಠಲ ಪೊಳಿವಾ ೬

# ೮೦

## ಧ್ರುವತಾಳ

ವಿರಾಟ ಮೂರ್ತಿ ಧ್ಯಾನ ಮಾಡು ಇದೆ ಸ್ಥೂಲ
ತೋರಾಟವಲ್ಲ ಕಾಣೊ ಕೇವಲ ಯೋಗ ।
ಮಾರಾಟ ಮಿಗಿಲಾದ ವಿಷಯಕ್ಕೆ ಶಿಲ್ಕಿ ಮಹ ।

ಘೋರಾಟದಲ್ಲಿ ಬಿದ್ದು ಹಗಲಿರಳು ।
ಆರಾಟದೊಳು ಹೊರಳಿ ಬಳಲಿದರಾಗೆಯಿದು ।
ಹೇರಾಟದಂತೆ ಕಾಣೊ ಇಹದ ಸೌಖ್ಯ ।
ನೂರಾಟಾ ಕತ್ತೆ ಕೂಡ ಓಡಾಡಿದರೆ ಮೂರ್ಖ ।
ಪೋರಾಟವೆನ್ನರೆ ನೋಡಿದವರು ।
ಮಾರಾಟ ನಿಲ್ಲಿಸೆಂದು ಹರಿಯ ಸ್ತುತಿಸಿ ನುತಿಸಿ ।
ಧೀರಾಟವನ್ನೆ ಬಯಸು ಮರಳೆ ಮರಳೆ ।
ಸ್ವಾರಾಟಗಾದರು ಹರಿ ಭಕುತಿರಹಿತ ಕರ್ಮ।
ತೀರಾಟವಾಗದು ಲಿಂಗದೆಡಿಗೆ ।
ಹಾರಾಟದಿಂದಲಿ ದುಃಖನಾಶನ ಕಾಣೊ ।
ಜೋರಾಟ ಬಿಡು ಬಿಡು ನಾನೆಂಬೊದು ।
ಬೀರಾಟ ಸಿದ್ಧವೆನ್ನು ಜ್ಞಾನಿ ನಿರ್ಭಯನೆಂದು ।
ಭೀರಾಟ ಭೂಮಿಯೊಳಗೆ ಪಾಡುತಲಿ ।
ಕೋರಾಟ ಮುಕ್ತರೊಡನೆ ವಿಲಿಂಗನಾಗಿ ಯಿದೆ ।
ಸಾರಾಟ ಸಂತತ ಸುಜನಾ ಮೆಚ್ಚು ।
ಭೂರಾಟ ಮೊದಲಾದ ವೈಭವ ಪ್ರಾಪ್ತಿಯಿಂದ ।
ಆರಾಟದೊಳು ಮುಳುಗಿ ತೇಲಬೇಕು ।
ದೂರಾಟ ವಿಚಾರಿಸು ಅನಂತ ಕಾಲಕ್ಕೆ ಬ ।
ಹೀರಾಟ ವೆಗ್ಗಳಿಸೆ ಬಲು ಜನ್ಮವು ।
ಆರಾಟ ಬಲ್ಲವರೆಂಬಿಯಾ ಮುನ್ನಿನ ಪಿರಿಯರು ।
ಸ್ತ್ರೀರಾಟ ಉದಾಸಿಸಿ ಗತಿಯೈದಿದರು ।
ವೀರಾಟ ಗಮನ ನಮ್ಮ ವಿಜಯ ವಿಠ್ಠಲರೇಯ ।
ನೀರಾಟ ಆಡಿದ ಸತಿಯರಿಗೆ ಮುಕುತಿಯಿತ್ತ ೧

## ಮಟ್ಟತಾಳ

ಶ್ರೀಕಾಂತನ ರೂಪ ಪಾತಾಳ ಸತ್ಯ ।
ಲೋಕವಿಡಿದುವುಂಟು ಒಂದೊಂದು ಅವಯವದಿ ।
ಲೋಕೇಶನೊಳಗೆ ಚತುರ್ದಶ ಭುವನಗಳು ।
ನಾಕ ಜನರು ಮಿಕ್ಕ ಜೀವರು ತುಂಬಿಹ್ಯರು ।
ಏಕೈಕ ಧ್ಯಾನ ಮಾಡು ಮುಖ್ಯವಾಗಿ ।
ಲೋಕಂಗಳು ಅಲ್ಲಿ ಯಿದ್ದ ವ್ಯಾಪಾರಂಗಳು ।
ವಾಕು ಗಾತುರ ಮನಸು ಪೂರ್ವಕದಿಂದ ವಿ ।
ವೇಕ ಭಕುತಿಯಲ್ಲಿ ಭವದೂರನಾಗಿ ।
ಏಕಾಂತದಿ ಕುಳಿತು ಹರಿಪಾದಾ ನೆರೆನಂಬಿ ।
ವಾಕು ಸಾರಥಿ ನಮ್ಮ ವಿಜಯ ವಿಠಲರೇಯ ।
ಶೋಕ ಪೋಗಾಡುವನು ಈ ಪರಿ ಧ್ಯಾನಿಸಲು ೨

## ರೂಪಕ ತಾಳ

ಪಾತಾಳೋತ್ಪಾದಕ ತದಾಶ್ರಯ ತದ್ಭಿನ್ನ ।
ನೀತಿಯಿಂದಲಿ ತಿಳಿ ಪಾದ ಮೂಲವೆನ್ನು ।
ಖ್ಯಾತಿಯಾದ ವಾಸುಕಿ ಶಂಖ ಕಾಳಿಕೆ ಪ್ರಬಲ ।
ಶ್ವೇತ ಧೃತರಾಷ್ಟ ಮಹಶಂಖ ಧನಂಜಯ ।
ಧಾತ ಶಂಖ ಚೂಡ ಮಿಗಿಲಾದ ಸರ್ಪಗಳು ।
ಜಾತಿ ಸಮೇತದಲಿ ತುಂಬಿಕೊಂಡಿಪ್ಪರು ।
ಭೂತಿಗಳಿಂದೊಪ್ಪುತಲಿ ಮಹ ಮಣಿ ವಜ್ರ ।
ಭಾತಿಯ ತೋರುತ್ತ ಬಲುಕೋಪವುಳ್ಳವರಾಗೆ ।
ಜೋತಿರ್ಮಯ ಕಾಯ ವಿಜಯ ವಿಠ್ಠಲರೇಯ ।
ಪಾತಾಳ ಲೋಕ ಧರಿಸಿಹ್ಯನು ಧ್ಯಾನ ಮಾಡಿ ।

## ಝುಂಪಿತಾಳ

ಪೃಥ್ವಿ ಉತ್ಪಾದಕ ತದಾಶ್ರಯವಾಗಿದೆ ।
ಚತುರಮೊಗ ಭವ ಮುಖ್ಯ ಸುರವಂದಿತ ।
ಸತತ ಧ್ವಜ ವಜ್ರಾಂಕುಶ ಶಂಖ ಚಕ್ರ ಶೋ ।
ಭಿತ ಗದಾ ಪದುಮ ಲಾಂಛನ ಸ್ವರ್ನದಿಯ ಜನಕ ।
ಚತುರ್ಜಾತಿ ಉದ್ಭವ ತರುಣಾದಿತ್ಯ ವರ್ಣ ।
ಅತಿಶಯ ಅಶ್ವತರ್ಯುಷ್ಟ್ರ ಗಜ ಜನಕ ರ ।
ತುನ ಕಾಂತಿಗೆ ಮಿಗೆ ಸಖ ಭಕ್ತ ಜನಕ ಆ ।
ಶ್ರಿತವಾಗಿ ಇಪ್ಪ ಪದ ರಸಾತಳೋತ್ಪಾದಕ ।
ದಿತಿ ಸುತರು ಇಲ್ಲುಂಟು ನಾಮ ಭೇದದಲ್ಲಿ ಉ ।
ತ್ಪತ್ತಿ ಮೊದಲಾದ ಮಹ ಸಾಹಸದಲ್ಲಿ ।
ತತಿ ಸಹಿತವೊಂದು ಬಿಲದಲ್ಲಿ ಉಳಗೆ ಅಡಗಿಹರು ಅ ।
ಚ್ಯುತನ ವಾಗ್ರೂಪ ಮಂತ್ರದ ಭೀತಿಗೆ ।
ಕಥೆಯುಂಟು ಇಲ್ಲೊಂದು ಶ್ವಾನ ರೂಪವುಳ್ಳ ।
ಶತ ಮೇಧದಲ್ಲಿ ಇದ್ದ ತನ್ನಾಮಕ ಹರಿ ।
ತತುವೇಶರೊಡನೆ ಪೂಜೆಯಗೊಳುತಿಪ್ಪ ।
ಪತಿತ ಪಾವನ ನಮ್ಮ ವಿಜಯ ವಿಠ್ಠಲರೇಯನ ।
ಸತತ ಧ್ಯಾನವ ಮಾಡಿರೊ ಪಾದ ಪೃಷ್ಟವನು । ೪

## ತ್ರಿವಿಡಿ ತಾಳ

ಪರಡು ಎರಡರಲ್ಲಿ ತಜ್ಜನ್ಯ ತದಾಶ್ರಯ ।
ಮೆರೆವ ಮಹಾತಳ ಲೋಕವಿಪ್ಪದು ಅಲ್ಲಿ ।
ಉರಗ ನಾಯಕರು ಬಹು ಶಿರಸಾವುಳ್ಳವರು ವಿ ।
ಸ್ತರವಾಗಿ ತಮ್ಮ ಬಳಗೆ ಸಹಿತದಲ್ಲಿ ।

ಮರಳೆ ಕುಲಹಕಿ ತಕ್ಷಕ ಕಾಲಿಯ ಸುಶೇಣ ।
ವರ ಕ್ರೋಧವಶವಾದ ಸರ್ಪಗಳು ವಾಸ ।
ಗರುಡನ ಭಯದಿಂದ ಸತಿಸುತರೊಡನೆ ಸಂ ।
ಚರಿಸುತ್ತಲಿಪ್ಪರು ಸ್ವಲ್ಪ ಪ್ರಮತ್ತರಾಗಿ ।
ಶರಧಿ ಶಯನ ನಮ್ಮ ವಿಜಯ ವಿಠಲ ಮೂರುತಿಯ ।
ಸ್ಮರಿಸಿ ಧ್ಯಾನವ ಮಾಡೊ ಗುಲ್ಭದ ದ್ವಯದಲ್ಲಿ ೫

## ಧ್ರುವತಾಳ

ಗುಣಿಸು ತಳಾ ತಳೋದ್ಭವ ಕ್ರಮೂಲ ವೃತ್ತ ಪಾ ।
ವನ ವರಜಂಘೆ ದ್ವಯದ ತದಾಶ್ರಯವೆನ್ನು ।
ದನುಜ ಕುಲದ ಬಡಿಗ ಮಯನೆಂಬುವನು ನಿ ।
ಪುಣದಿಂದ ತಾನೆ ಮಾಡಿದ ತ್ರಿಪುರವ ।
ಅನಲಾಕ್ಷನಿಂದ ಚಕ್ರದಿಂದಲಿ ಅಂದು ನಾ ।
ಶನವಾಗಿ ಪೋದಮೇಲೆ ಹರಿ ಪ್ರಸಾದ ।
ಘನವಾಗಿ ಸಂಪಾದಿಸಿ ಮಹದೇವನಿಂದ ರ ।
ಕ್ಷಣಿಯಾಗಿ ಸುಖಿಸುತಿಪ್ಪ ಪ್ರಬಲನಾಗಿ ।
ಗುಣವಂತ ಮಹ ದೈವ ವಿಜಯ ವಿಠ್ಠಲರೇಯನ ।
ನೆನಿಸು ತಳಾತಳ ಜಂಘೆ ದ್ವಯದಲ್ಲಿ ೬

## ರೂಪಕ ತಾಳ

ಚನ್ನಾಗಿ ನೋಳ್ಪದು ಸುತಳ ಲೋಕದ ಸ್ಥಿತಿ ।
ಕನ್ನಡಿಯಂತಿಪ್ಪುದು ಜಾನುಮಂಡಲ ದ್ವಯದಿ ।
ಬಿನ್ನಣದಿಂದಲಿ ಪುಟ್ಟಿತು ನೋಡಾ ಸಂ ।
ಪನ್ನ ಸತ್ಕೀರ್ತಿ ಪ್ರತಾಪ ಸಜ್ಜನ ಮಣಿ ।

ಪುಣ್ಯ ಶ್ಲೋಕ ಬಲಿ ಚಕ್ರವರ್ತಿ ಮಹ ।
ಧನ್ಯನು ಕಣೊ ವಾಮನ ರೂಪ ಕೃಷ್ಣಗೆ ।
ತನ್ನ ಮಸ್ತಕವಿತ್ತು ದಾನವಾಂತಕನ ಕಾ ।
ರುಣ್ಯ ಸಂಪಾದಿಸಿ ಇಂದ್ರಪದವಿ ಪಡೆದ ।
ಇನ್ನಿತು ಧ್ಯಾನಿಸಿರೊ ವಿಜಯ ವಿಠ್ಠಲನು ಪ್ರ ।
ಸನ್ನ ನಾಗುವ ಬಿಡದೆ ಭಕುತಿಗೆ ಒಲಿದು ೭

## ಝಂಪಿತಾಳ

ಇಂದ್ರಿರಾಶ್ರಯ ವೈಶ್ಯಕುಲಜನ್ಯ ತದಾಶ್ರಯಾ ।
ನಂದ ಪ್ರಭಾಶೋಭನ ಪರಮೋರು ದ್ವಯವು ।
ಅಂದು ಪುಟ್ಟಿದ ಲೋಕ ವಿತಳವೆನಿಸುವದು ಮಯ ।
ನಿಂದ ಜನಿಸಿದ ಬಲನೆಂಬೊ ದನುಜಾ ।
ನಿಂದ ಪುಟ್ಟಿದ ತೊಂಭತ್ತಾರು ಮಾಯಗಳು ಬಲು ।
ಸಾಂದ್ರವಾಗಿವೆ ಇವೆ ಓದುವ ಜನರ ।
ಸಂದೋಹರುಂಟು ಬಲ ಅಕಳಿಸಿದರೆ ಮುಖ ।
ದಿಂದ ಪೂಂಶ್ಚಲಿ ನಾರಿಯರು ಧ್ಭವ ।
ಮಂದಹಾಸದಲ್ಲಿ ಪುರುಷರೊಡನೆ ಮನ ।
ಬಂದಂತೆ ಕ್ರೀಡಿಪರು ಅನುರಾಗದಿ ।
ಇಂದು ಮೌಳಿ ಅಲ್ಲಿ ಹಾಟಕಾಖ್ಯನದಿ ।
ಪೊಂದಿ ಪರಿವಾರದಿಂದಲ್ಲಿ ವೊಪ್ಪುತ ।
ಒಂದೊಂದು ವಾಲಗವ ಕೈಕೊಳುತ ಪರ್ವತ ।
ನಂದಿನಿಯ ಕೂಡ ಕ್ರೀಡೆಯನಾಡುತ ।
ಚಂದವಾಗಿದೆ ನೋಡಿ ಈ ಜನರು ಆಯುತ ।
ಶಿಂಧೂರ ಬಲ ಸಮರು ಸಕಲ ಕಾಲ ।

ವೃಂದಾರಕ ವಂದ್ಯ ಹಾಟಕ ನದಿಯಲ್ಲಿ ।
ಬಂದು ಪಾವನ ಮಾಡಿ ಹಾಟಕ ಸ್ವರ್ನ ।
ಒಂದೊಂದು ವಿಚಿತ್ರ ಭೂಷಣವು ಧರಿಸಿ ಗುಣ ।
ದಿಂದ ಚರಿಸುವರು ಹರಿ ಸೇವೆಯಲ್ಲಿ ।
ಒಂದೊಂದನಂತ ರೂಪ ವಿಜಯ ವಿಠ್ಠಲರೇಯಗೆ ।
ವಂದಿಸಿ ವಿತಳ ಲೋಕದ ಮಹಿಮೆ ತಿಳಿಯೊ ೮

## ತ್ರಿವಿಡಿ ತಾಳ

ಅತಳ ಲೋಕ ಸರ್ವ ಮೃಗ ಪಶು ಜಾತಿವು ।
ತೃಪ್ತಿ ಕಾಣೊ ಶ್ರೋಣಿದೇಶದಿಂದ ಅಲ್ಲೀಗ ।
ಅತಿ ಮೋದದಿಂದ ನಾನಾಪರಿ ವನವು ।
ನೃತ ಕ್ರೀಡೆಯೊಡೆ ಆಡುವ ದೈತ್ಯ ದಾನವ ಕದ್ರುವೆ ।
ಸುತರು ಮಿಗಿಲಾದವರು ತಮ ತಮ್ಮ ನಿಜನಾರಿ ।
ಸುತ ಬಂಧುಗಳು ಬಳಗ ಕೂಡ ಇಹರಯ್ಯ ಲೇಸಾಗಿ ।
ಪ್ರತಿಯಿಲ್ಲದೆ ಮಯನ ಮಾಯದಿಂದಲಿ ಮಹ ।
ರತುನ ತೆತ್ತಿಸಿದ ಮನಿಗೋಪುರ ಉಪ್ಪರಿಗಿ ಬೀದಿ ।
ಚತುರಂಗ ಮೊದಲಾದ ಶ್ರೀಂಗಾರ ಸ್ಥಳಗಳು ।
ಮಿಥುನ ಭಾವವುಳ್ಳ ಮೃಗ ಪಕ್ಷಿ ಜಾತಿಗಳು ।
ಶತಪತ್ರ ಮೊದಲಾದ ಪುಷ್ಪ ಫಲ ತರುಜಾತಿ ।
ಕೃತ ಕೃತ್ಯರಾಗಿ ಎಲ್ಲರಿಗೆ ವಾಸವಕ್ಕು ।
ಚ್ಯುತ ದೂರ ವಿಜಯ ವಿಠ್ಠಲ ಆತ್ಮನಹುದೆಂದು ।
ಅತಳ ಲೋಕವನು ಧ್ಯಾನವ ಮಾಡು ಮನುಜಾ ೯

## ರೂಪಕ ತಾಳ

ಅವನಿ ಉತ್ಪಾದಕ ತದಾಶ್ರಯವಾಗಿ ಮಿಂ ।
ಚುವ ಜಾಂಬೂನದ ವಸನ ಸ್ವರ್ಣಮಂಜೀರ ಜಘನ ।
ರವಿಯಂತೊಪ್ಪುವ ನಾನಾ ಪ್ರಕಾರದಲ್ಲಿ ।
ನವ ಖಂಡವುಳ್ಳ ಜಂಬುದ್ವೀಪ ವುಳಿದಾದ ।
ಭುವನ ರಾಶಿಯೊಳು ಅಲ್ಲಿಗಲ್ಲಿಗೆ ದ್ವೀಪ ।
ವಿವರ ಪರ್ವತ ನದಿಗಳು ಕರ್ಮಸಾಧನ ಮಾ ।
ಡುವ ಮೃಗ ಪಶು ಪಕ್ಷಿ ಮಾನವರುಂಟು ।
ದಿವಿಜ ದಾನವರ ಅವತಾರಗಳಾಗೋವು ।
ತವಕದಿಂದಲಿ ಹರಿಯ ಅವತಾರಗಳುಂಟು ।
ದಿವಾ ರಾತ್ರಿ ಎಂಬೋದು ಈ ಲೋಕದಲಿಸಿದ್ಧ ।
ಕವಿಗಳು ಪೇಳ್ವರು ಮಹ ಪುಣ್ಯಮಾಳ್ಪರು ।
ಅವಿಕಾರಮೂರ್ತಿ ನಮ್ಮ ವಿಜಯ ವಿಠ್ಠಲರೇಯನ ।
ಪವನನ ಮಧ್ಯದಲ್ಲಿ ಯಿನಿತು ಚಿಂತಿಸಬೇಕು ೧೦

## ಮಟ್ಟತಾಳ

ಪೊಕ್ಕಳ ಬಗದಿಂದಂತರಕ್ಷದ ಲೋಕ ।
ವ್ಯಕ್ತವಾಯಿತು ನೋಡಿ ಯಿದರ ವರ್ನ ।
ಉತ್ತೆಯಿಂದಲಿ ಕೇಳಿ ಮೇಘಾದಿ ಮಂಡಲವು ।
ಉಕ್ತಕ್ರಮದಿಂದ ಯೋಜನದ ಭೇದ ।
ದಿಕ್ಕು ಪಾಲಕರುಂಟು ಅಲ್ಲಿಗಲ್ಲಿಗೆ ದೇವ ।
ಲಕ್ಕುಮಿ ರಮಣನು ವಾಲಗವ ಕೊಂಬುವನು ।
ಇಕ್ಕೆಲದಲ್ಲಿ ವುಳಿದ ದೇವತೆಗಳುಂಟು ।

ರುಕ್ಕುಮಾ ಪರ್ವತಕ್ಕಾಧಾರನಾಗಿ ।
ಭಕ್ತವತ್ಸಲ ಹರಿ ಶಿಂಶುಮಾರ ।
ಶಕ್ತಿ ಅನಂತವುಳ್ಳ ಪರಮಾತ್ಮ ದೇಹದಲಿ ।
ನಕ್ಷತ್ರಾದಿಗಳನುದ್ಧರಿಸಿ ಕಾವುತಲಿಪ್ಪ ।
ಅಕ್ಕಟ ಬಾಲಾಗ್ರದಲಿ ಧ್ರುವರಾಯ ಬಾಲದಲಿ ।
ಶಕ್ತಿಧರ ಪ್ರಜಾಪತಿ ಇಂದ್ರ ಧರ್ಮ ।
ತಕ್ಕವರೆನ್ನು ಪುಚ್ಛಮೂಲಧಾತಾ ವಿಧಾತ ।
ತರ್ಕೈಸಿದಂತೆ ಕುಕ್ಷಿಯಲಿ ಸಪ್ತ ಋಷಿಗಳು ।
ಶುಕ್ರನಾಭಿಯಲ್ಲಿ ಮನಸಿನಲಿ ಚಂದ್ರಮ ।
ಅರ್ಕವಕ್ಷ ಸ್ಥಳದಲ್ಲಿ ಕಕುಭ ಬ್ರಹಸ್ಪತಿ ।
ರಕ್ತಾಂಗ ಮುಖದಲ್ಲಿ ಶಶಿ ಉಪಸ್ಥದಲ್ಲಿ ।
ಮಿಕ್ಕಾದವರುಂಟು ಬುಧರಾಹು ಕೇತು ತಾ ।
ರಕ್ಕಿಗಳು ವೊಂದೊಂದು ಸ್ಥಾನ ವಿಶೇಷದಲಿ ।
ಸಿಕ್ಕಿಕೊಂಡಿಪ್ಪರು ಯೆಲ್ಲಕಾಲದಿ ಬಿಡದೆ ।
ಚಕ್ರದಂತೆ ತಿರುಗಿ ಹೊತ್ತುಗಳ ನಡಿಸುತ್ತ ।
ಚಕ್ರಧರ ವೃಷ್ಟಿಕಾ ಕಾರನಾಗಿ ।
ಮುಕ್ತರಿಗೆ ದರುಶನವ ಕೊಡುವ ವಿಜಯ ವಿಠಲ ।
ಲೆಖ್ಖವಿಲ್ಲದೆ ವೈಮಾನಿಕರ ಪಾಲಿಪನು ೧೧

## ತ್ರಿವಿಡಿ ತಾಳ

ಸುರಲೋಕೋತ್ಪಾದಕ ತದಾಶ್ರಯ ತದ್ಭಿನ್ನ ।
ಪರಮ ಸುಂದರ ವಿಗ್ರಹ ನಿತ್ಯ ಇಂ ।
ದಿರೆ ಭುಜಾಂತರ್ಗತ ಅನಘರನ್ನಮಯ ವನಮಾಲಾ ।
ಪರಿ ಪರಿಹಾರ ವಿಸ್ತರ ಭೂಷಣ ।

ಪುರುಹೂತನಿಲ್ಲಿ ವಾಮದೇವನ ಪೂಜಿಸುವ ।
ಸರಿ ಸರಿ ಬಂದಂತೆ ಭೋಗದಲ್ಲಿ ನಲಿವ ।
ಕರಿ ಐರಾವತ ಉಚ್ಚೈಶ್ರವವೆಂಬ ತುರಗ ತಳೋ ।
ದರಿಶಬೆ ಸೂತ ಮಾತಳಿ ನಂದನವನವು ।
ಪುರವೆ ಅಮರಾವತಿ ಸಿಂಹಾಸನದಿ ಶ್ರೀಂ ।
ಗರದಿಂದ ಕುಳಿತು ಲೋಕದಲಿ ನಾನಾ ರೂಪ ।
ಧರಿಸಿದ ನಿರ್ಜರರು ಇಂದ್ರದೇವನ ಬಲು ।
ಹರುಷ ವುಳ್ಳವರಾಗಿ ಭಜಿಸುವರು ।
ತರಣಿ ಪ್ರಕಾಶ ನಮ್ಮ ವಿಜಯ ವಿಠ್ಠಲರೇಯನ ।
ನಿರುತ ಧ್ಯಾನವ ಮಾಡೆ ದಿವ ಲೋಕವ ೧೨

## ಧ್ರುವ ತಾಳ

ಮತ್ತೆ ಮಹರ್ಲೋಕೋತ್ಪಾದಕ ತದಾಶ್ರ ।
ಯ ತದ್ಭಿನ್ನ ಕಂಬು ಸನ್ನಿಭ ।
ಕೌಂಸ್ತೂಭ ಭೂಷಣ ಅಖಿಶ ವೇದೋಚ್ಚಾರ ಕಂಠ ।
ವೃತ್ತ ವಿರೋಧಿ ಇಂದ್ರ ಪ್ರಭುವಾಗಿ ಇಪ್ಪ ಸ ।
ಮಸ್ತ ದೇವತೆಗಳು ಪ್ರದ್ಯುಮ್ನ ಅನಿರುದ್ಧ ।
ಉತ್ತಮ ನಾರದ ಋಷಿ ಅಲ್ಲಿಇದ್ದು ಶ್ರೀ ಹರಿಯ ।
ಚಿತ್ತದಲಿ ಧ್ಯಾನಮಾಡುವರಯ್ಯಾ ।
ಇತ್ತ ಲಾಲಿಸಿ ಕೇಳಿ ಇಂದ್ರಾಗ್ನಿ ಬ್ರಹ್ಮಾಣಿ ಸರ ।
ಸ್ವತ್ಯೋತ್ಪಾದಕ ಜ್ಞಾನನಿಧಿ ಮಹಪರಮ ।
ಕತ್ತಲೆ ನಾಥ ಸಹಸ್ರ ಮಿಗೆ ಕಾಂತೆ ।
ಭಕ್ತರ ಭವತಾಪ ನಾಶ ಜನೋಲೋಕೋತ್ಪಾದಕ ಮುಖ ।
ಮೈತ್ರೇಯ ಸನಕಾದಿ ಋಷಿಗಳು ರುದ್ರ ಅಧಿ ।
ಪತ್ಯನಾಗಿ ಇಪ್ಪಲೋಕದಲ್ಲಿ ।

ಶಕ್ರ್ಯಾದಿ ದೇವತೆಗಳು ಭೂತಗಣ ಸಮಸ್ತ ।
ಸ್ತೋತ್ರ ಮಾಡುವರು ಶಿವನ ಬೃಹಸ್ಪತಿ ವಾಸ ।
ಚಿತ್ರವಾದ ಉದ್ಯಾನವನಗಳಿಪ್ಪವು ವಿ ।
ಚಿತ್ರ ಧ್ವನಿ ಮಾಡುವ ಖಗ ಮೃಗ ಜಾತಿ ।
ಚಿತ್ತದೊಡೆಯ ನಮ್ಮ ವಿಜಯ ವಿಠ್ಠಲರೇಯನ ।
ನಿತ್ಯ ಈ ಪರಿಯಿಂದಲಿ ಧ್ಯಾನವ ಮಾಡಿರೋ ೧೩

## ತ್ರಿವಿಡಿ ತಾಳ

ರುದ್ರೋತ್ಪಾದಕ ತಪೋಲೋಕ ಲಲಾಟ ।
ಪದುಮ ಸಂಭವನಲ್ಲಿ ಅಧಿ ಪತಿಯು ।
ರುದ್ರನು ಇರುತಿಪ್ಪ ಸಕಲ ಋಷಿಗಳೊಡನೆ ।
ರೌದ್ರ ಮೂರುತಿ ನೃಕೇಸರಿಯ ಪೂಜಿ ।
ನಿರ್ದೋಷ ಮನದಲ್ಲಿ ಮಾಡುತ್ತಲಿ ತನ್ನ ।
ಪೊದ್ದಿಕೊಂಡು ಸ್ತೋತ್ರ ಗೈವುತಲಿ ।
ತ್ರಿದ್ದೇಶ ನಾಯಕನು ದೇವತೆಗಳ ಕೂಡ ।
ರುದ್ರನ್ನ ಭಜಿಸುವರು ವಿನಯದಿಂದ ।
ಬುದ್ಧಿವಂತರುವುಂಟು ವೇದಾಭಿಮಾನಿಗಳು ।
ಉದ್ಯಾನವ ಮತ್ತೆ ಪುರಗೋಪುರ ।
ಪದ್ಮ ಗರ್ಭನ್ನ ನೋಡಗೋಸುಗಸುರರೆಲ್ಲ ।
ರುದ್ರನ್ನ ಬಳಿವಿಡಿದು ಪೋಗುವರು ।
ಭದ್ರ ಮೂರುತಿ ನಮ್ಮ ವಿಜಯ ವಿಠ್ಠಲನಂಘ್ರಿ ।
ಪದ್ಮ ಪೊಂದಬೇಕಾದರೆ ತಪೋಲೋಕ ಚಿಂತಿಸು ೧೪

## ಝಂಪಿತಾಳ

ವಿರಂಚಿ ಸತ್ಯ ಲೋಕೋತ್ಪಾದಕ ಶೀರ್ಷ ।
ಸರ್ವ ಅವತಾರ ಶ್ರೀಹರಿ ಮೂರ್ತಿಯ ।
ಪರಿ ಪರಿಯಿಂದಲಿ ಚತುರ್ಮುಖ ಪೂಜಿಪನು ।
ಸುರರಾದಿ ಗಣದಿಂದ ಸ್ತುತಿಸಿ ಕೊಳುತ ।
ಮರುತದೇವನು ಅಲ್ಲಿ ವಾಸವಾಗಿ ಇಪ್ಪ ಅತಿ ।
ಪರಮ ಪ್ರಧಾನತನ ಮಾಡಿ ಕೊಳುತ ।
ವಿರಜೆಯೆಂಬೋ ನಾಮದಿಂದ ಗಂಗೆಯು ಬಿಡದೆ ।
ಕರೆಸಿಕೊಂಬುವಳು ಪವಿತ್ರಳಾಗಿ ।
ತರುವಾಯ ಮಹ ಮಹಿಮೆ ತೋರಿಕೊಳುತ ಭಜ ।
ಕರ ಪಾಪವು ಭೂಲೋಕದಲಿ ಕಳೆವುತ್ತ ।
ಎರಡೇಳು ಭುವನದ ವರ್ತಮಾನವ ತಿಳಿದು ।
ಇರಳು ಹಗಲು ಯೋಚನೆ ಮಾಡಿರಯ್ಯಾ ।
ವರ ಶೀರ್ಷ ಪಾದ ಮೂಲ ಮಧ್ಯದಲ್ಲಿದ್ದ ವಿ ।
ಸ್ತರವೆಲ್ಲ ಧೇನಿಸು ಸರ್ವಾಂಗದಿ ।
ಪುರುಷ ಪಾಲಕ ಸಿರಿ ವಿಜಯ ವಿಠ್ಠಲರೇಯನ ।
ಚರಿತೆಯನು ಕೊಂಡಾಡಿ ಮನದಣಿಯ ನೋಡಿ ೧೫

## ಮಟ್ಟತಾಳ

ಪಾ(ಪ)ದದಲಿ ಜಯಂತ ಮೇಂಢ್ರದಿಂದ ದಕ್ಷ ।
ಉದುಭವಿಸಿದನು ಮಿತ್ರ ವೃಷಣದ್ವಯದಿಂದ ।
ಒದಗಿ ರೇತಸು ರುದ್ರ ಜರಾಯುಜ ಶಶಿ ।
ನದಲಿ ಪುಟ್ಟಿತು ನೋಡ ಕೇತಸಿನಿಂದಲ್ಲಿ ।
ಉದಕ ಜನಕ ವೀರ್ಯದಿಂದಲಿ ಬ್ರಹ್ಮಾಂಡ ।

ತ್ರಿದಶ ಗಣದಿ ಅನ್ನ ಉದ್ಭವವೆನ್ನು ।
ಸ್ವಧ ಸ್ವಪಾ ವೆರಡು ವೀರ್ಯ ಗುಣದಿಂದ ।
ಉದಧಿಗಳು ತನುವ ಧರದಿಂದಲಿ ಸಿದ್ಧ ।
ಇದೆ ಪಾರ್ಶ್ವಗಳಲ್ಲಿ ಶೇಷ ಗರುಡಾದಿ ವಾಸ ।
ಹೃದಯದಲ್ಲಿ ಮೂಲ ಪ್ರಕೃತಿ ಆಶ್ರಯವು ।
ವಿಧಿ ರುದ್ರಾದಿಗಳು ಮಧ್ಯ ದೇಹದಿಂದ ।
ಮುದದಿಂದಲಿ ಕೇಳಿ ಸ್ತನದಿಂದಲಿ ಧರ್ಮ ।
ಉದಸಿದ ಕಾರಣ ಗೋಳಕದಿಂದ ಶಬ್ದಗಳು ।
ವಿಧಿ ಮೊದಲಾದ ದಿಪತಿ ಕರ್ಣೇಂದ್ರಿಯದಲ್ಲಿ ।
ಪದುಮ ಬಾಂಧವ ಚಂದ್ರ ಚಕ್ಷುರೇಂದ್ರಿಯದಲ್ಲಿ ।
ಉದ ಶಿರರುದ್ವಯ ಈ ಗೋಳಕದಿಂದ ।
ಹೃದಯ ನಿವಾಸ ಸಿರಿ ವಿಜಯ ವಿಠ್ಠಲರೇಯ ।
ಸದಮಲ ಮೂರ್ತಿಯ ಸರ್ವದ ಕೊಂಡಾಡಿ ೧೬

## ರೂಪಕ ತಾಳ

ನಾಸದಿಂದಲಿ ವೈದ್ಯರು ಪ್ರಸಾದದಿಂದ ಕಮ ।
ಲಾಸನ ಕ್ರೋಧದಿಂದಲಿ ರುದ್ರ ಪುಟ್ಟಿದರು ।
ನಾಶಿಕೇಂದ್ರಿಯದಿಂದ ಗಂಧ ದೇವಾನ್ನ ಮಾ ।
ನಿಸಾನ್ನ ಪಕ್ಷದಿಂದಲಿ ಜನಿಸಿತು ನೋಡ ।
ಶ್ವಾಸ ದಿಂದಲಿ ವಾಯು ಪ್ರೀತಿಯಲ್ಲಿ ಲಜ್ಜಾ ।
ಹಾಸದಿಂದಲಿ ಮಾಯ ಲೋಭ ಔಷ್ಠದಿಂದ ।
ಲೇಸು ಜಿಂಹ್ವೆಯಿಂದ ಉದಕೇಶ ಉದ್ಭವ ।
ಆ ಸಮಸ್ತ ಮಧುರ ರಸ ಜಿಂಹ್ವೇಂದ್ರಿಯಲ್ಲಿ ।
ಮೀಶೆಯಿಂದಲಿ ಮಿಂಚು ಮಕುಟದಿಂದಲಿ ಮೇಘ
ಔಷಧಿ ಮಹಿರೂಪ ವನಸ್ಪಾತ್ಯಾದಿ ಸರ್ವ

ಕೇಶದಿಂದಲಿ ಜನಿಸಿದವು ಕ್ರಮವಾಗಿ ।
ವಾಸಲ ವೈಶ್ವಾನರ ವಾಕ್ಯದಿಂದಲಿ ಜನನ ।
ಈಶ ವಂದಿತ ಪಾದ ವಿಜಯವಿಠ್ಠಲರೇಯ ।
ವಾಸವಾಗಿಪ್ಪನು ಈ ಪರಿ ಧ್ಯಾನಿಸೆ ೧೨

## ಅಟ್ಟತಾಳ

ಮನದಿಂದ ಬ್ರಹ್ಮ ಚಂದ್ರ ಮಿಕ್ಕಾದವರಯ್ಯ ।
ಅನಿಲ ಸ್ವಯಂಭಾವ ಬುದ್ಧಿಯಿಂದ ।
ಲಿ ನಾಡಿ ಗಣದಿಂದ ನದಿಗಳು ಅಸ್ಥಿಯಿಂದಲಿ ಅದ್ರಿ ।
ಗುಣ ತ್ರಯಂಗಳು ವ್ಯಾಪಾರದಿಂದಲಿ ತಾರ ।
ಗಣ ಪುಟ್ಟಿತು ನೋಡಾ ದಂತಗಳಿಂದ ವ ।
ಚನದಿಂದ ಗಾಯತ್ರ್ಯಾದಿ ಛಂದಸ್ಸು ಕೇಳಿ ।
ಘನಗಿರಿ ವಿಜ್ಞಾನ ಶಕ್ತಿನಾಮಕ ಬ್ರಹ್ಮ ।
ಜನನವಾದನು ಅಂತಃಕರಣದಿಂದಲಿ ಅಂದು ।
ಮನುಜ ಅಧರ್ಮ ಪೃಷ್ಠದಿಂದ ಉದುಭವ ।
ಗುಣಿಸು ತ್ವಕಿಂದ ಪ್ರಾಣ ಇಂದ್ರಿಯದಿಂದ ।
ಜನನ ವಾಯಿತು ಲೋಮ ಸ್ಪರಿಶ ಬಿಡದೆ ತಿಳಿ ।
ತನುರೂಪಹ ಕೂಪದಿಂದಲಿ ಪ್ರಳಯೋದಕ ।
ಎಣಿಸು ವೈದಿಕ ಲೌಕಿಕ ವ್ಯವಹಾರ ।
ಜನಿಸಿದವು ನೋಡಾ ದೌಂಷ್ಟ್ರದ್ವಯದಿಂದ ।
ವನಜನಾಭನ ರೂಪ ವಿರಾಟ ಮೂರ್ತಿಯ ।
ತನುವಿನಿಂದಲಿ ಯಾವತ್ತು ಪುಟ್ಟಿತು ।
ಮನುಜಾ ಎಣಿಕೆ ಮಾಡುವದಕ್ಕೆ
ಮನಕೆ ಅಗೋಚರ ।

ಗಣಿತ ಮಾಡುವುದೇನೋ ಸರ್ವಾಂಗದಿಂದಲಿ ।
ಜನನವಾದರು ಕೇಳಿ ಸರಿಸರಿ ಬಂದಂತೆ ।
ಬಿನಗು ಜೀವರಿಗೆ ಈ ಪರಿ ಶಕ್ತಿಯುಂಟೆ ।
ಗುಣನಿಧಿ ವಿಜಯ ವಿಠ್ಠಲರೇಯನ ವಿಗ್ರಹ ।
ಅನುದಿನ ಧ್ಯಾನವ ಗೈಯ್ಯೋ ನಿರ್ಮಲನಾಗಿ ೧೮

## ಆದಿತಾಳ

ಆಪಾದಮೌಳಿ ಪರಿಯಂತ ವಿರಾಟ ದ್ವಿ ।
ರೂಪವನ್ನೆ ಧ್ಯಾನಿಸು ಎರಡೊಂದು ಬಗೆಯಲ್ಲಿ ।
ಆಪಾರ ಜಡಜೀವ ಇದರೊಳಗಿಪ್ಪವೆಂದು ।
ತಾಪಸ ಜನರಿಂದ ತಿಳಿದು ಅನಂತ ಜನುಮದ ।
ಪಾಪೌಘ ಪೋಗಗಳೆದು ಪರಮ ಶುದ್ಧಾತ್ಮಕನಾಗಿ ।
ತಾಪತ್ರಯ ತಂದೀವ ಅಹಂಭಾವವೆ ಬಿಟ್ಟು ।
ಶ್ರೀ ಪತಿ ಶ್ರದ್ಧಪತಿ ಗತಿಯೆಂದು ನಂಬಿ ಜ್ಞಾನ ।
ದೀಪ ಸಂಪಾದಿಸಿ ನಾನಾ ಪ್ರಕಾರದಿಂದ ।
ರೂಪ ಕರ್ಮಕಾಲ ಗುಣ ಕರ್ಮ ದೇಹಾದಿಯೆ ।
ವ್ಯಾಪಾರವೆಲ್ಲ ಹರಿಯ ಆಧೀನವೆಂದು ಚಿಂತಿಸಿ ।
ಆಪದ್ಧರ್ಮ ರಕ್ಷಕ ಹರಿ ಸ್ವಾತಂತ್ರ ಪುರುಷ ।
ಕೋಪ ದಾನವ ಭಂಗ ಸರ್ವದಾನಂದ ವಿಗ್ರಹ ।
ಗೋಪಾಲ ಗುಣ ಪೂರ್ಣ ಪೂರ್ಣ ಜಗನ್ಮಂಗಳ ಮಂಗಳ ಪ್ರ ।
ತಾಪ ಪ್ರಾಕೃತ ರಹಿತ ನಿರ್ದೋಷ ಮುಖ್ಯ ದೈವ ।
ಈ ಪರಿಯಿಂದಲಿ ಪ್ರಾಣಾಧಿಷ್ಠಾನದಲಿ ।
ವ್ಯಾಪುತನಾಗಿದ್ದ ಅನಾದಿ ಪುರುಷನ್ನ ।
ರೂಪಾತಿಶಯಗಳನ್ನೆಲ್ಲ ನೆನದು ನೆನದು ಜಂಬು ।

ದ್ವೀಪ ದಕ್ಷೀಣ ಭಾಗದಲ್ಲಿ ಸಾಧನ ಮಾಡು ।
ಆಪತ್ತು ಎತ್ತವಯ್ಯ ಇಂತು ಏಕಾಂತ ಧ್ಯಾನ ।
ಪೋಪಗೊಡದೆ ಮಹಧೃಢ ತರದಲ್ಲಿ ಮಾಡೆ ।
ಕೂಪಾಂಧವೆಂದೆಂಬೊ ಸಂಸಾರ ಉತ್ತರಿಪ ।
ದ್ರೌಪದಿ ಪತಿ ಪ್ರೀಯ ವಿಜಯ ವಿಠ್ಠಲರೇಯನ ।
ಆ ಪಾದ ಸೇರುವದಕ್ಕೆ ಇದೆ ಇದೆ ಉಪಾಯ ೧೯

## ಜತೆ

ಪ್ರತಿ ಪ್ರತಿ ಪ್ರತೀಕಾಲದಲ್ಲಿ ಅಪ್ರತಿಹತನಾದ ।
ಪತಿ ವಿಜಯ ವಿಠಲ ವಿರಾಟ ಮೂರ್ತಿಯ ಧ್ಯಾನಿಸು ೨೦

## ೮೧

## ಧ್ರುವ ತಾಳ

ವೈರಾಗ್ಯವೆಂಬೊದಿದೆ ಆವಾವ ಕಾಲಕ್ಕೆ
ಸಾರಾಂಶವನ್ನೆ ತಿಳಿ ಹರಿ ತಿಳುಪಿದ್ದು
ಭಾರವೆ ವಹಿಸದಿರು ನಾನೆ ಸ್ವತಂತ್ರನೆಂದು
ಸಾರಿ ಸಾರಿಗೆ ನುಡಿದು ಹಿಗ್ಗುವಂಥಾ
ಮೇರೆದಪ್ಪಿದ ಮಾತು ಬಿಡು ಬಿಡು ಸಿರಿ ಅರಸಾ
ಪ್ರೇರಿಸಿದಂತೆ ಸಂಚರಿಪೆನೆನ್ನು
ಹಾರಾವಾಗಿರು ಬಾಲಹಾಲುಂಡ ಸದನದೊಳು
ಚಾರು ವಿಲಾಸದಲ್ಲಿ ಆಡಿದಂತೆ
ಕ್ರೂರ ಅಕ್ರೂರರಲ್ಲಿ ಸಮ ಬುದ್ಧಿಯನ್ನು ಮಾಡು
ತಾರತಮ್ಯ ಪಂಚಭೇದಜ್ಞಾನ

ತಾರಕವೆಂದು ಘೋರ ಸಂಸಾರಾಬ್ಧಿಗೆ ಸದಾ
ಚರಾಚರದಲ್ಲಿ ವಿಹಿತಾವಿಹಿತ ಗ್ರಹಿಸೀ
ಮೂರುಗುಣಗಳ ಮೀರಿದ ಮಾತಿನಲ್ಲಿ
ಸಾರಾ ಹೃದಯನಾಗು ಸತ್ಕಾಲದಲ್ಲಿ
ಶರೀರದಲ್ಲಿ ತಿಳಿ ಏನೇನು ಬಗೆವುಂಟು
ಭಾರಿ ಭಾರಿಗೆ ಬರುವ ಸೌಭಾಗ್ಯವ
ದಾರಿದ್ರವನ್ನೆ ನೋಡಿ ಸುಖದುಃಖ ಹಚ್ಚಿಕೊಂಡು
ಘೋರ ಸಣನಾಗುವ ಮನಸೆ ತೊರೆಯೊ
ಆರಾರು ಕೊಡುವರು ಕೊಂಬುವರಾರು ಮ
ತ್ತಾರರೊ ಆರೊ ನಾನಾ ಚೇಷ್ಟಿಗಳು
ಆರಾರು ಕೂಡಿ ಮತ್ತಾರು ಮಾಡಿಸುವರು
ಆರಿಂದಲೇನಹುದು ಕಡೆ ಭಾಗಕ್ಕೆ
ಕಾರಣ ಕರ್ತನಾಗಿ ಇಪ್ಪ ಸಮರ್ಥನು
ನಾರಾಯಣನ ಮಾಯವನ್ನೆ ತುತಿಸಿ
ಮೂರೇಳು ಗೋತ್ರವೆ ಸಂಬಂಧದಲಿ ವಿ
ಸ್ತಾರ ಗೈಸುವ ಭವದ ಭ್ರಮಣವೆಂದೂ
ಹಾರೈಸಿ ದಿನ ದಿನ ಮುಕ್ತಿಗೆ ಪೋಗುವ
ದಾರಿಯ ನಿರೀಕ್ಷಿಸು ನಿತ್ಯದಲ್ಲಿ
ಭಾರತಿಪತಿ ಪ್ರೀಯ ವಿಜಯ ವಿಠ್ಠಲನ್ನ
ಸಾರಿ ಕೊಳ್ಳುತ ಸಿದ್ಧನಾಗಿ ತಿರುಗಬೇಕು ೧

## ಮಟ್ಟತಾಳ

ಜಾಡಾ ಉಂಕಿಯನ್ನು ಜೋಡಿಸಿ ಮಗ್ಗವನು
ಹೂಡಿ ನಡಿವೆ ನಡಿವೆ ನೋಡಿ ಕಾಷ್ಟೆಗಳನ್ನು
ನೀಡಿ ನಾನಾ ವಸ್ತ್ರವ ಮಾಡುವ ಬಗೆಯಿಂದ

ಆಡುತ ನೇವುತಲೀ
ನಾಡಿ ನಾಡಿಗೆ ಹಿಂದು ಮಾಡುವ ಕಾಷ್ಟಗಳ
ಆಡಲೇನು ತಿರುಗಿ ಪಾಡಿಲ್ಲದೆ ಉಂಕಿ
ಹೂಡಿಕೊಂಬುವನೇನೊ
ಪ್ರೌಢ ಮೂರುತಿ ನಮ್ಮ ವಿಜಯ ವಿಠ್ಠಲರೇಯನ
ಹಾಡುತ ದಿನಗಳನು ಪೋಗಾಡಲಿಬೇಕು ೨

## ತ್ರಿವಿಡಿ ತಾಳ

ಪರಿ ಪರಿ ದೇಹದಂಡಣಿ ಮಾಡಿದರೇನು
ಚರುವ ಚಾಂದ್ರಾಯಣ ಚರಿಸಲೇನು
ಇರದೆ ಸತಿಸುತರ ತೊರೆದು ದೇಶವೆಲ್ಲ
ತಿರಿಗಿ ದಿಗಂಬರನಾದರೇನು
ಶಿರಮುಂಡವಾಗಿ ಶೀಲನಾದರೇನು
ಗಿರಿ ಗಂಹರದಲ್ಲಿ ಸೇರಲೇನು
ಮರಳೆ ನಾನಾಭೋಗ ಕೈಕೊಂಡರೆ ಏನು
ತೆರವಿಲ್ಲದೆ ಬಹು ವಿಷಯದಲ್ಲೀ
ಸರಿ ಸರಿ ಬಂದಂತೆ ಸರಸವಾಡಿದರೇನು
ವಿರಕುತಿ ಮಾಡಿವ ಬಗೆ ಬೇರಕ್ಕು
ಬರಿದೆ ಸರ್ವದ್ರವ್ಯ ತೆರೆದರೇನು ಫಲ
ಸರ್ವ ಪದಾರ್ಥಗಳ ಕೊಂಡರೇನೈ
ನರನು ವೈರಾಗ್ಯದ ಚರಿಸುವ ಉಪಾಯ
ಅರಿತಲೆ ಕೈವಲ್ಯ ಪುರವೆಂಬೋದು
ಕರತಳದಲಿ ಉಂಟು ಕಠಿಣವೊಂದಿಷ್ಟಿಲ್ಲ
ವರಬೀಜ ನುಡಿ ಉತ್ತಮರು ಕೇಳಿ

ಸರ್ವದಾತ್ಮಕ ನಮ್ಮ ವಿಜಯ ವಿಠ್ಠಲರೇಯನ
ಸ್ಮರಣೆ ಬಲ್ಲವ ಬಲ್ಲ ಇದರ ಪ್ರಕೃತಿಯನ್ನು

## ಅಟ್ಟತಾಳ

ರಸ ರಸಾಯನ ರುಚಿ ಭುಂಜಿಸಬೇಕು ಮಾ
ನಸರೊಳಗಿದ್ದರು ತನ್ನ ಮನಸು ಬೇರೆ
ಹಸನಾಗಿ ಇರಬೇಕು ಹಸುಳೆಯಂದದಲಿ
ಚರಿಸಬೇಕು ಸ್ವಾತಂತ್ರ ಅಸ್ವಾತಂತ್ರವು
ವಶವಾಗಿ ಎನಗಿಲ್ಲವೆಂದು ತಿಳಿದು ರಂ
ಜಿಸ ಬೇಕು ನಿಚೋಚ್ಚವಸ್ತುವೆ ಸಮನಾಗಿ
ಉಸರಲೇನ್ನೈ ಸರ್ವೇಂದ್ರಿಯಗಳ ವ್ಯಾ
ಪಿಸಿದ ವ್ಯಾಪಾರ ಸ್ಥಿತಗತಿ ಧರ್ಮವ
ಬಿಸಿಜ ಜಾಂಡದ ಮಧ್ಯ ಚಕ್ಷುಕೆ ಯೋಗ್ಯ ಸು
ರಸದ್ರವ್ಯಗಳೆಲ್ಲ ಮೆಲುವ ಬಗೆ ತಿಳಿ
ಅಸಮ ದೈವವಾದ ಹರಿ ಮುಖ್ಯ ಆತನ
ಪೆಸರು ಒಂದನೆ ಕೇಳಿ ಅನಂತ ಅಲ್ಲೈನ್ನು
ಪುಸಿಯದೆ ಅಲ್ಲಿದ್ದ ಅಭಿಮಾನಿ ದೇವತಿಯ
ಪೆಸರನೆ ತಿಳಿವುದು ಮತ್ತೆ ಸಮಸ್ತರು
ವಸತಿಯಾಗಿಪ್ಪರು ನಿಬಿಡಿ ಕೃತಿಯಾಗಿ
ಎಸದು ಚತುರವಿಂಶತಿ ತತ್ವಾತ್ಮಕ
ರಸವುಂಟಲ್ಲದೆ ಬರಿದೆ ಇಲ್ಲವೆನ್ನು
ಅಸುರರು ತಮ್ಮ ತಮ್ಮ ವ್ಯಾಪಾರದಲ್ಲಿ
ವಿ ಸಕದೆ ಇಪ್ಪರು ಒಂದೊಂದರಲಿ
ಪಶುಪಾಲ ವಿಜಯ ವಿಠ್ಠಲರೇಯ ಸರ್ವದಾ
ವಸತಿಯಾಗಿಪ್ಪ ಚೇತನ ಅಚೇತನದಿ ೨

## ಆದಿತಾಳ

ಹರಿ ಹರಿಗೆ ಐಕ್ಯ ಸಿರಿಗೆ ಸಿರಿಗೆ ಐಕ್ಯ
ಸರ್ವ ತಾತ್ವಿಕರಗೆ ಅವರವರಿಗೆ ಐಕ್ಯ
ಮಿರಗುವ ಚತುರ ವಿಂಶತಿ ಜಡತತ್ವ ತತ್ವಕೆ ಐಕ್ಯ
ಸರಿ ಬಂದಂತೆ ತಿಳಿ ಸರಸಿಜಾಂಡವೆ ಐಕ್ಯ
ತರತಮ್ಯಗುಣದಿಂದ ಚಿಂತಿಸಬೇಕು ಇಂತು
ನಿರುತ ಶ್ರೀಹರಿ ಇಚ್ಛಾ ಸರ್ವರಿಗೆ ಪ್ರೇರಕ
ಪರಸ್ಪರ ವ್ಯವಹಾರವಾಡುವ ಆಡಿಸುವ
ಚಿರಕಾಲ ಶಕ್ತನು ಚಿನ್ಮಯ ವೈಚಿತ್ರ
ನಿರವೈರ ವೆಂಬೊದೇನು ಇದ್ದಂತೆ ತಿಳಿ ಒಂದು
ಧರೆಯೊಳಗೆ ಅವ ಪರಮ ವೈರಾಗ್ಯ ಕಾಣೊ
ಸರ್ವ ಸಮರ್ಪಣೆ ವಿಜಯ ವಿಠ್ಠಲಗೆಂದು
ಕುರುಹ ಕಂಡವ ಸರ್ವ ಉಂಡವಾ ಬಿಟ್ಟವಾ ೬

## ಜತೆ

ಬಿಂಬ ಐಕ್ಯವೆ ಸಿದ್ಧಾ ವೈರಾಗ್ಯ ಮೂರೊಂದು (ಮೂರೆಂದು)
ಎಂಬೋದೆ ಇಪ್ಪದು ವಿಜಯ ವಿಠ್ಠಲ ಬಲ್ಲಾ ೫೫

## ೮೨

## ಧ್ರುವತಾಳ

ಸಂಧಿಕಾಲವೆ ತಿಳಿಯುಗ ಮನ್ವಂತರ ಭೇದ ।
ಒಂದೊಂದು ಪ್ರಕಾರ ಗುಣಿತದಿಂದ ।
ಎಂದೆಂದಿಗೆ ಇದು ಪ್ರವಾಹ ರೂಪವಾಗಿ ।
ಒಂದರ ತರುವಾಯ ಒಂದು ಬರುತಿಪ್ಪವು ।
ಮುಂದೊಲಿದು ಕೇಳಿ ಯುಗನಾಲ್ಕು ಮತ್ತೆ ಹ ।

ನ್ನೊಂದು ಮೂರು ಮನುಗಳಸಂಧಿಯ ।
ಚಂದವಾಗಿದೆ ನಾಲ್ಕು ಯುಗದ ಲೆಖ್ಖ ಮನುಜಮಾನ ।
ದಿಂದ ನಾಲ್ವತ್ತು ಮೂರು ಲಕ್ಷ ಮೂವತ್ತೆರಡು ಸಾವಿರ ।
ಯಂದೆಂಬ ವರುಷಂಗಳು ಇದರೊಳು ವಿವರವುಂಟು ।
ಸಂಧಿಕಾಲ ಯಾವತ್ತು ಇಪ್ಪತ್ತು ಸಹಸ್ರ ಆ
ರೊಂದು ಲಕ್ಷದ ವರುಷವಾಗುತಿದಕೂ ।
ಒಂದೊಂದು ಯುಗದ ಸಂಖ್ಯ ಇತ್ತಂಡದಲ್ಲಿ ಗ್ರಹಿಸು ।
ಕುಂದದಲೆ ಕಲಿ ಅಂತ ಕೃತಾದಿ ಭಾಗ ।
ಸಂಧಿಕಾಲವೆ ಸರಿ ಎಂಭತ್ತು ಸಾವಿರ ।
ಒಂದು ಲಕ್ಷವೆ ಸಿದ್ಧವು ಕೃತಾಂತ ಆದಿತ್ರೈತ ।
ಸಂಧಿ ಎರಡು ಲಕ್ಷ ಐವತ್ತೆರಡು ಸಹಸ್ರ ।
ಪೊಂದಿ ತ್ರೇತಾ ಅಂತ ದ್ವಾಪರಾದಿ ಭಾಗ ।
ಒಂದು ಲಕ್ಷ ಎಂಭತ್ತು ಸಹಸ್ರ ವತ್ಸರ ಕಾಣೊ ।
ಸಂಧಿ ಪೋಯಿತು ದ್ವಾಪರಾಂತ ಕಲಿಯುಗದಿ ।
ಒಂದು ಲಕ್ಷ ಎಂಟು ಸಾವಿರ ವರುಷವೆನ್ನಿ ।
ಸಂಧಿ ಕಾಲ ಉಭಯ ವಿವರ್ಣವು ಪ್ರಥಮದಲ್ಲಿ ।
ನಂದನ್ನ ನಂದ ವಿಜಯ ವಿಠ್ಠಲರೇಯ ಆ
ನಂದದಲಿ ಸರ್ವಕಾಲದಲ್ಲಿ ಇಪ್ಪ ೧

## ಮಟ್ಟತಾಳ

ಉಳಿದ ವರ್ಷಂಗಳು ಅರವತ್ತು ಸಾವಿರ ।
ತ್ರಿಲಕ್ಷ ನಿಜಕಾಲ ನಾಲ್ಕು ಯುಗಕೆ ಲೆಖ್ಖ । (೩,೬೦,೦೦೦)
ತಿಳಿದು ಈ ಪರಿಯಿಂದ ಕೊಂಡಾಡಲಿಬೇಕು ।
ಒಲಿಸಿ ಚತುರ್ದಶ ಮನುಗಳ ವೃತ್ತಾಂತ ।

ಸುಲಭ ಮನಸಿನಲ್ಲಿ ಭುಕ್ತಿ ಸಂಧಿಕಾಲ ।
ಇಳಿಯೊಳು ಚನ್ನಾಗಿ ಅವರವರ ಕ್ಲಪ್ತ ।
ಜಲಜನಯನ ನಮ್ಮ ವಿಜಯ ವಿಠ್ಠಲರೇಯನ ।
ಒಲಿಮೆಯಿಂದಲೆ ಇದೆ ಧ್ಯಾನ ಮಾಡಲಿ ಬೇಕು ೨

## ತ್ರಿವಿಡಿ ತಾಳ

ಮನುವೋರ್ವನಿಗೆ ನೋಡು ಭೋಗಿಸುವ ಕಾಲ ಯೋ ।
ಚನೆ ಮಾಡು ಮಾನವ ತ್ರಿಂಶತಿ ಕೋಟಿ ಮೇ ।
ಲೆಣಿಸು ಎಂಭತ್ತೈದು ಲಕ್ಷ ಎಪ್ಪತ್ತೊಂದು ।
ಗಣನೆ ಮಾಡು ಸಾವಿರ ನಾನೂರಿಪ್ಪತ್ತೆಂಟು ಹಾ ।
ಯನ ತಿಂಗಳಾಗು ಆ ತರುವಾಯ ಎಪ್ಪತ್ತೈದು ।
ದಿನ ತಾಸು ಹದಿನೇಳು ಯಿಪ್ಪತ್ತೊಂದು ಪಳ (ವಿಘಳಿಗಿ)
ಇನಿತು ಸಿದ್ಧವೆನ್ನು ಯಿದರಂತೆ ಚತುರ್ದಶ ।
ಮನುಗಳಿಗೆ ಲೆಖ್ಖ ಮಾಡಬೇಕಯ್ಯ ।
ಅನುಮಾನಯಿದಕ್ಕಿಲ್ಲ ಮರಳೆ ಸಂಧಿ ಕಾಲ ।
ಗುಣಿಸು ಯಿಂಗಡವಾಗಿ ಪ್ರತ್ಯೇಕದಿ ।
ಘನ ಮೂರುತಿ ನಮ್ಮ ವಿಜಯ ವಿಠ್ಠಲರೇಯ ।
ಮನಗಳೊಳಗೆ ತಾನೆ ತಾಪಸನಾಗಿಪ್ಪ ೩

## ಅಟ್ಟತಾಳ

ಮೊದಲು ಮನುವಿಗೆ ಯೆರಡು ಸಾವಿರ ವರುಷ । ೨೦೦೦
ಇದೆಸಿದ್ಧ ಸ್ವಾರೋಚಿಷ ಚಾಕ್ಷುಷ ತನಕ ।
ಹದಿನಾಲ್ಕು ನೂರು ವತ್ಸರ ಐದು ಮಂದಿಗೆ । ೭೦೦೦
ಇದರ ತರುವಾಯ ವೈವಸ್ವತಮನು ।

ಮುದದಿಂದ ದೇವ ಸಾವರ್ಣಿ ಪರಿಯಂತ ।
ಹದಿನೈದು ನೂರು ಪ್ರಕಾರ ಯೆಂಟು ಜನಕೆ । ೧೨೦೦೦
ಹದಿನೆಂಟು ಮೂರು (೧೮+೩=೨೧) ಸಾವಿರ
ವತ್ಸರಾದವು ೨೧೦೦೦
ಇದೆ ಲೆಖ್ಖದಿಂದಲಿ ಆದಿ ಅಂತ್ಯಭಾ ।
ಗದ ಸಂಧಿಕಾಲವೆ ತಿಳಿವುದು ವಿಸ್ತಾರವ ।
ಮದನ ಲಾವಣ್ಯ ನಮ್ಮ ವಿಜಯ ವಿಠ್ಠಲರೇಯ ।
ಪದುಮಗರ್ಭನ ದಿನದಲಿ ನೇಮಿಸಿಯಿಪ್ಪ । ೪

## ಆದಿತಾಳ

ಇಂತು ಕೊಂಡಾಡುವದು ಭಕ್ತಿಮಾರ್ಗದಲಿ ಮ ।
ನ್ವಾಂತರ ಹದಿನಾಲ್ಕು ಪುನರಾವರ್ತಿ ಯೆಣಿಸು ।
ಇಂತಿವರೊಳಗೆ ಹದಿಮೂರು (ನಾಲ್ಕು)ಇಂದ್ರರುವುಂಟು ।
ಕಂತುಪಿತನ ಅವತಾರಂಗಳು ವುಂಟು ಪ್ರತಿದಿನ ।
ಚಿಂತಿಸು ಯಿವರಿವರ ಕಾಲದಲ್ಲಿ ಯಿದ್ದ ।
ಸಂತರಾ (ನಾ)ಮನುಗಳ ಮುನಿಗಳ
ತ್ರಿದಶ ಜನರ ಪೆಸರುಗಳ ।
ಮುಂತೆ ಲಕುಮಿರಮಣನ್ನ ತಂದೆ ತಾಯಿ ಮಿಕ್ಕಾದ ।
ಸಂತತಿಗಳ ನೆನಸೆ ಇಹ ಪರದಲಿ ಸೌಖ್ಯ ।
ಎಂತೆಂತು ಹರಿ ಲೀಲೆ ಜಗದೊಳು ತುಂಬಿವೆ ।
ಸಂತುಜನ ಸ್ತೋತ್ರಮಾಡಿ ಧನ್ಯರಾಗಲಿ ಬೇಕು ।
ಅಂತರಂಗದ ಸ್ವಾಮಿ ವಿಜಯ ವಿಠ್ಠಲರೇಯ ।
ಸಂತತ ಜ್ಞಾನವಂತರ ಕಾವುತಲಿಪ್ಪನಯ್ಯ ೫

## ಜತೆ

ಸಂಧಿ ಕಾಲವೆ ತಿಳಿದು ಸತತ ಸಾಧನ ಮಾಡು ।
ಮಂದರಾದ್ರಿಧರ ವಿಜಯ ವಿಠ್ಠಲ ಒಲಿವ ೬

## ೮೩

### ಧ್ರುವತಾಳ

ಸಂಪೂಜೆಮಾಡು ಮನವೆ ಸಂತತ ನಿನಗೆ ಜ್ಞಾನ
ಸಂಪತ್ತು ಸಿದ್ಧ ಸುಲಭಮಾರ್ಗ
ಸಂಪದವಿಗೆಯನ್ನು ಸಮಸ್ತಕಾಲದಲ್ಲಿ
ಸಂಪುಲ್ಲಾಕ್ಷನ ನೋಳ್ಪ ಸೌಭಾಗ್ಯವೆ
ಇಂಪಾಗಿದೆ ನೋಡು ಈಶಾವಾಸ್ಯಾ ಜಗತ್ತು
ಸಂಪ್ರೀತಿಯಾಗಿದ್ದ ಪ್ರಮಾಣದಾ
ಗುಂಪು ತಿಳಿದು ನಿತ್ಯ ಸುಖದಲ್ಲಿ ಇಪ್ಪುದೊಂದೆ
ಸಂಪೂಜೆ ಕಾಣೊ ಕೇವಲ ಸಾಧನ
ಪುಂ ಪೆಂಗಳಿಂದ ಪ್ರಪಂಚ ನಿರ್ಮಾಣ ಮಾಳ್ಪಾ
ಕೆಂಪು ಮಿಕ್ಕಾದ ಗುಣದ ಕಾರ್ಯ ಬಲಿಸಿ
ಕೆಂಪು ಹೇಯ ಹೊಲಸು ಹಗರಣ ದುರ್ವಿಷಯ
ಲಂಪಟಾ ನಾನಾ ಬಗೆಯು ಚಿಂತಾತುರ
ಸಂಪೂಜೆ ಇದೆ ಎಂದು ಬಿಗಿವಿಲಿ ನುಡಿಯದಿರು
ಸಂಪಿಗೆ ಪ್ರತಿಕೂಲ ವಿಚಾರಿಸು
ಸಂಪ್ರಮೋಹದಿಂದ ಕೆಡದಿರು ಕೆಡದಿರು
ಸಂಪ್ರದಾಯಕ ತಿಳಿದು ಸಂಚರಿಸು
ಪುಂ ಪುಂಗವ ರಾಜ ವಿಜಯ ವಿಠ್ಠಲನಂಘ್ರಿ
ತಂಪಿನಲ್ಲಿ ವಾಸವಾಗು ವ್ಯಾಕುಲ ನೀಗು ೧

## ಮಟ್ಟತಾಳ

ಹರಿ ಹರಿದಾಸರ ವೇದ ಪ್ರಮಾಣವ
ನಿರುತ ನಿಂದ್ಯಮಾಳ್ಪ ಅಧಮರನ ನೋಡಿ
ಪರಿ ಪರಿಯಿಂದಲಿ ನಿಂದ್ಯಮಾಡೊದೊಂದೆ
ಪರಮ ಭಕುತರಿಗೆ ಇದು ಸಂಪೂಜೆ
ಕರಣಶುದ್ಧದಲ್ಲಿ ಉತ್ತಮರ ದಿವ್ಯ
ಚರಣವನು ನೋಡಿ ಕೊಂಡಾಡುವುದೊಂದೆ
ಧಾರಣಿಯೊಳಗೆ ಇದೆ ಪರಿಶುದ್ಧ ಸಂಪೂಜೆ
ಎರಡರ ವಿರಹಿತ ನಾನಾ ಬಗೆಯಿಂದ
ಸರುವ ಉಪಸ್ಕರವು ಸಂಭ್ರಮದಿ ತಂದು
ಹರಿಯ ಪೂಜಿಸಿದರು ಅದು ಸಂಪೂಜೆ ಅಲ್ಲ
ಕರುಣಾಕರ ಮೂರ್ತಿ ವಿಜಯ ವಿಠಲನ್ನ
ಚರಣವಾರಿಜ ದಳವೆ ನಂಬಿದವಗೆ ಸಾಧ್ಯ ೨

## ತ್ರಿವಿಡಿ ತಾಳ

ಹರಿಗೆ ಪ್ರತಿಮೆ ಎರಡು ಬೊಮ್ಮಾಂಡ ದೊಳಗೆ ವಿ
ವರಿಸುವೆ ಜಡ ಜೀವವೆಂಬೊವೆ ಅನಂತ
ಪರಿಯಲ್ಲಿ ಇಪ್ಪವು ಕೇಳಿ ಭಗವನ್ಮೂರ್ತಿಗಳೆಂದು
ಎರಡರಲ್ಲಿ ಉಂಟು ಅಂತದಲ್ಲಿ
ವರ ಪ್ರತಿಮೆಯಲ್ಲಿ ಮೂರು ಅವರಾದಲ್ಲಿ ಎರಡು
ತರತಮ್ಯ ಇದರೊಳಗೆ ಬಲು ಇಪ್ಪದೋ
ಸ್ಮರರಿ ನೋಡು ಕೇಳಿ ಮಾತಾಡು ಧ್ಯಾನಿಸು
ಹರಿಯ ಮೆಚ್ಚಿಸು ಇದಕೆ ವಿವರ ಕಾಣೊ

ಅರಹುವೆ ಇದರ ವೃತ್ತಾಂತ ತೋರಿದಿನಿತು
ಕುರುಹು ತಿಳುಕೊಂಬುವುದು ಕಠಿಣವಲ್ಲಾ
ಸರುವ ಪ್ರಕಾರದಲಿ ವ್ಯಾಪ್ತ ಮೂರ್ತಿಯ ಪೂಜಾ
ವರ ಅವರಾದಲಿ ನಿರ್ಲಿಪ್ತನೆಂದು
ಇರಳು ಹಗಲು ಇದೆ ಚಿಂತಿಸುತಿಪ್ಪದೆ ಪೂಜೆ
ಮರಳೆ ತತ್ತದಾಕಾರ ಮೂರ್ತಿಯಲ್ಲಿ
ವಿರಚಿಸುವ ಬಗೆ ಕೇಳು ಎರಡು ಪರಿ
ಇರತಕ್ಕ ಜಡದೊಳು ಸ್ತಂಬಾದಿ ಪಾಷಾಣ
ಧರಣಿ ಮೊದಲು ಮಾಡಿ ತದ್ವ್ಯಾಪಾರ
ಹರಿಯಿಂದಾಗುವುದೆಂದು ತಿಳಿವುದು ತದಾಕಾರ
ವರ ಸಂಪೂಜೆ ಎಂದು ಗ್ರಹಿಸಬೇಕು
ತರುವಾಯ ಮತ್ತೊಂದು ತದಾಕಾರದ ಪೂಜೆಯ
ಚಿರಕಾಲದಲ್ಲಿ ಮಾಳ್ಪ ಸಂತೋಷವೋ ಕರ
ಚರಣಗಳಿಂದ ಒಪ್ಪು ಮೂರುತಿ ಸುಂ
ದರ ಲಕ್ಷಣೋಪೇತ ವಾಗಿದ್ದದಕೆ
ವರ ಮಂತ್ರಗಳಿಂದ ಅಭಿಷೇಚನೆ ಗಂಧ
ಪರಿಮಳಾಭರಣಾ ತುಲಸಿ ಕುಸುಮ
ಮಿರಗುವ ಧೂಪಾರ್ತಿ ಯೇಕಾರ್ತಿ ನೈವೇದ್ಯ
ಮರಿಯದೆ ಮಂಗಳಾರತಿ ಕರ್ಪುರ
ಭರದಿಂದ ಸ್ತವನ ಮಂತ್ರ ಪ್ರದಕ್ಷಿಣಿ ನಮ
ಸ್ಕರಿಸುವ ಸೊಬಗು ನಾನಾ ಸೇವೆಯು
ನಿರುತ ಮಾಡುವುದಿದೆ ಒಂದು ಪೂಜೆ
ಎರಡು ವಿಧ ಪೂಜೆ ಜಡದಲ್ಲಿ ನಿರ್ಣೈಸಿ
ಹರಿಯ ಪ್ರೀತಿ ಬಡಿಸಿ ಸುಖಿಸುವರು

ಕರ ಚರಣಾದಿಗಳು ಇಲ್ಲದ ಪ್ರತಿಮೆ ಒಂದೆ
ವರ ಸಾಲಿಗ್ರಾಮದಲಿ ಇದೇ ಪ್ರಕಾರ ಆ
ಚರಣೆ ಮಾಡುವರಯ್ಯಾ ಇತ್ತ ಲಾಲಿಸು ಸಂ
ಚರಿಸುವ ಪ್ರಾಣಿಗಳ ವಿಚಾರವ
ಎರಡೆರಡು ಎಂಭತ್ತು ಲಕ್ಷ ಯೋನಿಗಳುಂಟು
ಇರುವು ಮೊದಲಾಗಿ ಗಜ ಪರಿಯಂತ
ವರ ಅವರಾ ಉಂಟು ಕೇಳಿ ಇದರೊಳು ತಿಳಿದು ಅನು
ಸರಿಸು ಗೋ ಪೂಜೆ ಉಳಿದ ಭೂತ ದಯವೊ
ತರುವಾಯ ಮಾನವರೊಳು ಗ್ರಹಿಸಲಿಬೇಕು
ಎರವು ನೋಡದೆ ಅನ್ನೋದಕವ ಕೊಟ್ಟು
ಸುರ ಮುನಿ ನುತ ನಮ್ಮ ವಿಜಯ ವಿಠಲರೇಯನ
ಸ್ಮರಣೆ ಮಾಡುತಲಿರಬೇಕು ತತು ತತುರೂಪಗಳಾ ೩

## ಅಟ್ಟತಾಳ

ಇದರೊಳು ಕೇವಲ ಭಗವಂತ ಪೊಂದಿಹ
ಅಧಿಷ್ಠಾನ ಪೇಳುವೆ ಭೂಸುರ ಜಾತಿಲಿ
ವಿಧಿನಿಷೇಧ ಕರ್ಮ ತಿಳಿದು ವೈಷ್ಣವ ಜ್ಞಾನ
ಮುದ ಭಕ್ತಿಯಿಂದ ಸಂತತ ಇಪ್ಪ ಮನುಜನ್ನ
ಸದಮಲನಾಗಿ ವಂದಿಸಿ ನಾನಾ ಬಗೆಯಿಂದ
ಮಧುರನ್ನ ಮಿಗಿಲಾದ ಉಪಚಾರದಿಂದ
ಪದೋಪದಿಗೆ ಪ್ರೀತಿ ಬಡಿಸಿದರಾಗಿದು
ತದಾಕಾರದ ಪೂಜೆ ಇದೆ ಮಾನಸ ಪೂಜೆ
ಅಧಿಕಾರತನ ಭೇದದಲಿ ತಿಳಿಯಬೇಕು
ಚದುರನಾದವ ಆಲಸ್ಯ ಮಾಡದೆ ನಿತ್ಯ
ಪದುಮನಾಭ ನಮ್ಮ ವಿಜಯ ವಿಠ್ಠಲರೇಯ
ಒದಗಿ ಕೈಕೊಂಬ ತದಾಕಾರ ವ್ಯಾಪ್ತಿಲಿ ೪

ಆದಿತಾಳ

ಇಂತು ಜಡ ಜಂಗಮದಲಿ ಭಗವಂತನ
ಸಂತೋಷ ಐದಿಸುವದು ವಿವಿಧ ಮೂರ್ತಿಗಳನ್ನು
ಸಂತರು ತಮ ತಮ್ಮ ಬಿಂಬನ ಧ್ಯಾನದಿಂದ
ಮಂತ್ರೋಕ್ತಿಯಲ್ಲಿ ಮೆಚ್ಚಿಸಿ ಒಲಿಸುವರು
ಅಂತು ಗಂಡವರಾರೊ ಅವರವರ ಯೋಗಮಾರ್ಗ
ಗ್ರಂಥದಲ್ಲಿ ಉಂಟು ಮುಕ್ತಿಗೆ ಸೋಪಾನ
ಮುಂತೆ ನೀನು ನಿನ್ನ ಅಧೀನವಾಗಿದ್ದ ಸಿರಿ
ಕಾಂತನ ಪೂಜೆ ಮಾಡು ಮೂರು ಮೂರ್ತಿಗಳನ್ನು
ಪಿಂತೆ ಪೇಳಿದಂತೆ ವ್ಯಾಪ್ತತ್ವ ತಿಳಿದು
ಚಿಂತಿಸು ಪರಿಪರಿ ಭೋಜ್ಯಾದಿ ಭೋಗದಲ್ಲಿ
ಸಂತಾಪ ಹರಿಸುವ ದೇಹಾಕಾರ ಮೂರ್ತಿಯ
ಸಂತೃಪ್ತಿ ಮಾಡುವುದು ಈತನೆ ನಿತ್ಯ ಪೂರ್ಣ
ಅಂತರಂಗದ ಪೂಜೆ ಕೇವಲ ಪ್ರೀತಿಪ
ಕಾಂತದಲ್ಲಿ ಮಾಳ್ಪುನ್ನತೋನ್ನತ ಆತ್ಮಾ
ಅಂತರಾತುಮ ಮೂರುತಿ ಎರಡು ಅಭೇದವೆಂದು
ಅಂತರಾತುಮದಲ್ಲಿ ನಿಲಿಸಿ ಒಲಿಸಿ
ಎಂತು ಪೇಳಲಿ ಈ ಮನದಲ್ಲಿ ಸರಸ್ವತಿ
ಕಾಂತಂಡ ತುಂಬಿದೆ ಧ್ಯಾನಮಾಡೆ
ಕಂತು ಪಿತನ ಪೂಜೆ ಮಾಳ್ಪ ಲಕ್ಷಣ ಆ
ದ್ಯಂತ ಕಾಲದಲ್ಲಿ ತಕ್ಕವೆಂದು
ಚಿಂತಾಮಣಿ ಕಾಮಧೇನು ಕಲ್ಪ ವೃಕ್ಷ
ಇಂತಿವೆ ಮನದಲ್ಲಿ ಅಂಶಿ ಅಂಶಾ

ಚಿಂತಿಸು ಪ್ರಾರ್ಥಿಸು ಕಲ್ಪಿಸು ಮೂರರಿಂದ
ಎಂಥಾ ಪವಿತ್ರ ಷಡುರಸ ಪದಾರ್ಥ
ಅಂತು ಇಲ್ಲದೆ ಸೂಕ್ಷ್ಮತರವಾಗಿ ಕೊಡುವುವೋ
ಶಾಂತ ದಾಂತ ಸೂಚಿತ್ತ ತರತಮ್ಯ ಭಕ್ತಿಜ್ಞಾನ
ವಂತೆಗೆ ವೇಗದಿಂದಾ ವಾಸನಮಯದಿ
ಇಂತು ಸಂಪೂಜೆಮಾಡು ಆವಾವ ಬಗೆಯಿಂದ
ನಂತ ಕಾಲಕ್ಕೆ ಬಿಡದೆ ಯೋಚನೆಯಿಂದ
ನಿಂತಲ್ಲಿ ಕುಳಿತಲ್ಲಿ ಮಲಗಿ ತಿರುಗಾಡುತಲಿ
ಇಂಥದ್ದೇ ಕೈಕೊಂಡು ಕರ್ಮ ತೊರಿಯೊ
ಸಂತೆ ಕೂಟದ ಪೂಜೆ ಯಾತಕ್ಕೆ ಪ್ರಯೋಜನ
ಭ್ರಾಂತಿಯಲ್ಲದೆ ಅಲ್ಪ ಸುಖವಾಹೊದೇ
ಅಂತಿ ಕಂತಿಕ ಪೂಜೆ ಮಹಿಮೆ ನಿರ್ಜರ
ಸಂತರು ಮೆಚ್ಚಿಕೊಡರು ಕೊಡುವರು ಕೆಲರು
ಅಂತಕನಗರಿಯ ಭಯ ಶೋಕ ಆದಿ ಮ
ದ್ಯಾಂತದಲ್ಲಿ ಇಲ್ಲ ಕಾಯದಲ್ಲಿ
ಎಂತು ಕೊಂಡಾಡಲಿ ಧ್ಯಾನ ಸಾಧನ ಪೂಜೆ
ವಂತನ ಭಾಗ್ಯಕ್ಕೆ ಎಣಿಸಲಾಗಿ
ಅಂತ್ಯಕಾಲ ಕೇಳು ಕಠಿಣವಾಗಿದ್ದ ಹೃದಯ
ಗ್ರಂಥಿ ಭೇದಿಪದಕ್ಕೆ ಇದೇ ಉಪಾಯ
ಜಂತು ಅಲ್ಪ ಯೋಗ್ಯತನೆ ನಿನಗೆ ತಿಳಿದಷ್ಟು ಸ
ತ್ವಂಥವ ಬಿಡು ಬಿಡು ಬಾಹ್ಯ ಅರ್ಚನಿಗೆ ಈ
ಅಂತರಂಗದ ಪೂಜೆ ಕೂಡದಲೆ
ಅಂತರಿಕ್ಷವಲ್ಲದೆ ಫಲವಿಲ್ಲ ನಿರ್ಜಲ
ಕಾಂತಾರದಲ್ಲಿ ಪೊಕ್ಕು ಅಳಲಿದಂತೆ

ದಂತಿಯ ದಾಡಿಗೆ ತೂಗಿ ಬಿದ್ದಂತೆ ವಿ
ಶ್ರಾಂತನಾಗುವ ಜನ್ಮ ಧರಿಸುವನು
ದಂತಕ್ಕೆ ರುಚಿ ತಂದು ಸ್ವರುಶ ಮಾಡಿಸಲಾಗಿ
ಸಂತಸವಾಗುವುದೆ ರಸವ ತಿಳಿದು
ಮಂತ್ರ ತಂತ್ರೋಪಕರಣ ನಾನಾ ಚಿತ್ರ ವಿಚಿತ್ರ
ಚಿಂತನೆ ಮಾಡು ಒಳಗೆ ಪ್ರಾಣಂತಸ್ಥ
ದಂತಿ ವರದ ನಮ್ಮ ವಿಜಯ ವಿಠ್ಠಲರೇಯ
ಕುಂತಿ ಮಕ್ಕಳಿಗೆ ಒಲಿದಂತೆ ಒಡನೆ ತಿರುಗುವ ೫

## ಜತೆ

ಸಂಚಿತಾಗಾಮಿ ನಾಶ ಪ್ರಾರಬ್ಧ ಉಪಮರ್ದಾ
ಪಂಚ ಪ್ರಾಣೇಶ ಸಿರಿ ವಿಜಯವಿಠ್ಠಲಾ ಸಮ್ಮುಗಾ ೬

## ೮೪

## ಧ್ರುವತಾಳ

ಸತ್ಯ ಸಂಕಲ್ಪ ಸಿದ್ಧ ಅನಾದಿದ್ದೈವ ।
ಸತ್ಯ ಸತ್ಯವು ನಿನ್ನ ಮಹಿಮೆ ಪ್ರತಾಪ ।
ಸತ್ಯವೆ ನಿನ್ನ ಗುಣಜ್ಞಾನ ಪರಿಪೂರ್ಣ ।
ಸತ್ಯವೆ ನಿನ್ನ ಚರಿತೆ ಸೂತ್ರಧಾರಕನೆ ।
ಸತ್ಯವೆ ನಿನ್ನ ಲೀಲೆ ಜಗವನಡಿಸುವುದು ।
ಸತ್ಯವೆ ನಿತ್ಯಾನಂದ ಸಕಲೈಶ್ವರ್ಯ ।
ಸತ್ಯವೆ ನಿನ್ನ ಕಪಟ ನಾಟಕ ತನವು ।
ಸತ್ಯವೆ ನಿನ್ನ ವ್ಯಾಪ್ತಿ ಅಣೋರಣಿಯಲ್ಲಿ ।
ಸತ್ಯ ಪರಾಕ್ರಮ ವಿಜಯ ವಿಠ್ಠಲ ನೀನೆ ।
ಸತ್ಯ ವಂತನಲ್ಲದೆ ಮತ್ತಾರುವುಂಟೆ ೧

## ಮಟ್ಟತಾಳ

ವರಣ ಭರಿತದಲಿ ವರುಣ ನಾಮಕನಾಗಿ ।
ವ ರಣಾಂತರ್ಯಾಮಿ ವರನಾಮಕದಲ್ಲಿ ।
ಕರಸಿಕೊಂಡೆ ಓಂ ಕಾರವೆಂಬೊ ಶಬ್ದಾ ।
ಕ್ಷರ ಮೂರರಿಂದ ಪರಿಮಿತವಾಗಿ ।
ಪರತರ ಪರದೂರ ವಿಜಯ ವಿಠ್ಠಲ ।
ಹಿರಣ್ಯ ನಾಭನೆ ಸಿರಿ ದೇವಿಯರಸ ।
ಸರುವೋತ್ತಮ ಸಗುಣ ಸರ್ವೋತ್ತಮ ಸಗುಣ ೨

## ತ್ರಿವಿಡಿ ತಾಳ

ಆರು ಅಕ್ಷರದಿಂದ ವ್ಯಾಹೃತಿ ಮಂತ್ರ ವಿ ।
ಸ್ತಾರವನು ಮಾಡಿ ಪ್ರಕಾಶಿಸಿದೆ ।
ಸಾರವನು ಹರಹಿ ಚತುರವಿಂವಶತಿ ಅ ।
ಕ್ಷಾರದಿಂದಲಿ ಸಾ ಗಾಯತ್ರಿ ಬೆಳಸಿ ।
ಬೇರಿಳಿದಂತೆ ಪುರುಷಸೂಕ್ತ ರಚಿಸಿ ಆ ।
ಧಾರವೆನಿಸಿದೆ ಅನಂತಶ್ರುತಿಗೆ ।
ತಾರಕ ಬ್ರಹ್ಮಕೃತು ವಿಜಯ ವಿಠ್ಠಲವೇದ ಸಂಚರಿಸುತಿಪ್ಪೆ ೩

## ಅಟ್ಟತಾಳ

ನಾಶರಹಿತನಾಗಿ ಅಚ್ಯುತನೆನಿಸಿದೆ ।
ಸಾಸಿರ ಸಂಖ್ಯ ನಿಗಮ ಪ್ರತಿಪಾದ್ಯ ।
ಲೇಸಾಗಿ ಗೋವಿಂದನೆಂದು ಕರೆಸಿಕೊಂಡು ।
ಭಾವಿಸಿ ತಾವಾನಂ ತನಂತನೆನಿಸಿದೆ ।
ಈಶಾದ್ಯರಿಗೆ ಈಶ ವಿಜಯ ವಿಠ್ಠಲನೇ ಸ ।
ರ್ವೇಶ ಶುದ್ಧ ದೈವವೆ ಅಪ್ಪನು ೪

## ಆದಿತಾಳ

ರಜೋಗುಣಾತ್ಮಕವಾದ । ತ್ರಿಜಗವನ್ನು ಪುಟ್ಟಿಸಿ ವ ।
ನಜ ನಾಭಿಯೆಲ್ಲಿ ಪೊತ್ತು । ಅಜನ ಪಡೆದ ತತ್ವ ।
ವ್ಯಜದಲ್ಲಿ ಅಭಿಮಾನ್ಯರ । ಸೃಜಿಸಿ ಸಂಘಟನೆಯಿಂದ ।
ಪ್ರಜಾಪತಿಗೆ ನೇಮಿಸಿ । ನಿಜ ತ್ರಿಧಾಮದಲಿ ಪಂ ।
ಕಜ ಪಾಣಿ ಸೇವೆಯಿಂದಾಂ । ಗಜಕೋಟಿ ಲಾವಣ್ಯ ।
ಪ್ರಜಾಪತಿಯೆಂಬ ನಾಮ ವಿಜಯ ವಿಠ್ಠಲರೇಯ ।
ಅಜರಾಮರಣ ರಹಿತ । ಅಜಭುಜಗಾದಿದಾತ ।
ಸುಜನರ ಮನೋವಾಸ । ಕುಜನ ಶೈಲ ಕುಲಿಶ ೫

## ಜತೆ

ಅಂತರ ಬಹಿರದೊಳು ವ್ಯಾಪಿಸಿ ವ್ಯಕ್ತದಲ್ಲಿ ।
ತಂತುವರ್ಧನಾ ವಿಜಯ ವಿಠ್ಠಲ ನೀನದ್ಭುತ ೬

## ೮೫

## ಧ್ರುವತಾಳ

ಸಪ್ತಾವರಣ ದೇಹ ಸತತ ಸಾಧನಗೇಹ
ಆಪ್ತನು ಅನಂತ ಗುಣ ರೂಪಾತ್ಮಕ ಹರಿ
ತಪ್ತ ಕಾಂಚನದಂತೆ ಒಳಗೆ ಸುಳಿವ ನಿ
ರ್ಲಿಪ್ತನು ಸಮಸ್ತ ದೋಷರಾಶಿಗಳಿಂದ
ತೃಪ್ತನು ಅನಾದ್ಯಂತ ಕಾಲದಲಿಂದ
ಪ್ರಾಪ್ತ ನಾಗುವ ಕೇವಲ ನಂಬಿದವರಿಗೆ
ಗುಪ್ತ ಮಹಿಮ ಗುಣಾಸಾಂದ್ರ ಸುಜನಾಬ್ಧಿ ಚಂದ್ರ

ವ್ಯಾಪ್ತ ಪ್ರಧಾನ ಪುರುಷ ಅಣುರೇಣು ಸ್ಥಾನದಲ್ಲಿ
ಶಪ್ತಮಾಡಿದಮೇಲೆ ಭಕ್ತರ ಪೊರೆಯದಿರಾ
ಸುಪ್ತಿಕಾಲದಲ್ಲಿ ಏಕಮೇವನೆನಿಸುವ
ಕ್ಲಪ್ತಿಗೆ ಲೇಶಾಂಶ ಕೊರತೆ ಎನಿಸಾ ಶ್ರೀಶ
ಜಾಪ್ತರ ಮನದಲ್ಲಿ ಮುಂದೊಲಿದು ಪೊಳೆವ
ದೀಪ್ತ ಮೂರುತಿ ನಮ್ಮ ವಿಜಯ ವಿಠಲ ಕಮ
ಲಾಪ್ತನಂತೆ ಪೊಳೆದು ಅಜ್ಞಾನಾಂಧ ಓಡಿಸುವ ೧

## ಮಟ್ಟತಾಳ

ತ್ವಕ್ಚರ್ಮ ಮಾಂಸ ಮಜ್ಜ ಮೇದಸ್ಸು ಅಸ್ಥಿ
ರಕುತ ಸಮೇತ ಸಪುತಧಾತುಗಳು
ಯುಕ್ತಿವಂತರು ಮನಃ ಪೂರ್ವಕದಿಂದ
ಉಕ್ತಿ ತಿಳಿದು ಹರಿಯ ಕೊಂಡಾಡುವರು
ಭಕುತಿಯಿಂದಲಿ ಒಮ್ಮೆ ಸ್ಮರಣೆ ಮಾಡೇ
ಮುಕುತಿಗೆ ಇದೆ ಮಾರ್ಗ ಅನ್ಯಯೋಚನೆ ಸಲ್ಲ
ಕಕುಲಾತಿಯಿಂದ ಅನ್ಯ ಗ್ರಂಥವನೋದಿ
ಕಕ್ಕಸ ಯಾತನೆಯ ಒಳಗಾಗುವದಲ್ಲ
ನಖ ಶಿಖ ಪರ್ಯಂತ ಗುಣಿಸಿ ಎಣಿಸುವುದು
ಸುಖ ತೀರ್ಥರ ಮತದ ಮನುಜರ ನೆರೆನಂಬಿ
ಸುಖ ಪೂರ್ಣ ನಿತ್ಯ ವಿಜಯ ವಿಠಲರೇಯನ
ಭಕುತರೊಳಗೆ ನಲಿದು ಭವ ಉತ್ತರಿಸುವದು ೨

## ರೂಪಕತಾಳ

ತನುರೂಪದಲ್ಲಿ ಓಂಕಾರ ಪ್ರದ್ಯುಮ್ನ
ನನು ಕಾಣೋ ತ್ವಕ್ಕಿನಲ್ಲಿ ಪ್ರಸ್ತಾವ ನಾಮಕ
ಅನಿರುದ್ಧ[ನಾ]ಮನು ಚರ್ಮದಿ ಸಂಕರು
ಷಣನೆಂಬ ಪ್ರತಿಹಾರ ನಾಮಕ ಶ್ರೀಪತಿ

ಗುಣನಿಧಿ ಉದ್ಗೀಥ ನಾಮಕ ವಾಸುದೇ
ವನು ವರಾಹಾಮೂರ್ತಿಗಳು ಮಾಂಸದಲ್ಲಿ ಉಂಟು
ಎನಿಸು ಶಾಂತಿ ಸಂವಿದ ನಿಧನ ನಾಮಕ ನಾರಾ
ಯಣ ದ್ವಯ ರೂಪಗಳು ಶೋಣಿತದಲಿ ವಾಸ
ಪ್ರಣವ ಪ್ರತಿಪಾದ್ಯ ವಷಟ್ಕಾರ ನಾಮಕನು ಷ
ಡ್ಗುಣನೆಂಬೊ ಎರಡನ್ನು ಮೇದಸ್ಸಿನಲ್ಲಿ ತಿಳಿ
ಘನಶೋಕ ಹರ ಸಾರನೆಂಬೊದಾದಿ ನಾರಾ
ಯಣ ಮೂರ್ತಿ ಇಪ್ಪರು ಮಜ್ಜದಲ್ಲಿ ಬಿಡದೆ
ಜನನರಹಿತ ಹಂಸನಾಮಕ ಉಪೇಂ
ದ್ರನು ಪೊಳೆವ ಅಸ್ಥಿಗಳೊಳಗಿದ್ದು ತಪ್ಪದೆ
ಮನೋ ನಿಯಾಮಕ ನೊಡೆಯ ವಿಜಯ ವಿಠಲರೇಯ
ಅಣುರೇಣು ತೃಣಕಾಷ್ಟ ಬಹಿರಂತರ ಭರಿತ ೩

## ಝಂಪೆತಾಳ

ಪೇಳಲೇನು ಮುಂದೆ ಅಸ್ಥಿ ಮಜ್ಜದಲಿ ಅಂ
ಗುಲಿ ಪರ್ವಗಳಲ್ಲಿ ಸಾವಿರದ ಎಂಭತ್ತು
ಮೇಲು ಭಗವದ್ರೂಪ ಮೂರುಕಡೆ ಇಪ್ಪದು
ಪೋಲಿಕೆಯ ಬಲ್ಲವರಾರು ಬುಧರು
ಏಳು ಧಾತುಗಳೊಳಗನ್ನ ಮಯಾದಿ ಕೋಶ
ಮೇಲು ಕೆಳಗೆ ಕವಚದಂದದಿ
ವಾಲಯವಕ್ಕು ಅದರೊಳಗೆ ತನ್ನಾಮಕ
ಶ್ರೀ ಲೋಲನಿಪ್ಪನು ಅಯಿದು ರೂಪಾ
ಏಳಲವ ಮಾಡದೆ ಸೂಕ್ಷ್ಮ ಸೃಷ್ಟಿಯಲ್ಲಿ
ನಾಲ್ಕು ಮೂರ್ತಿಗಳು ಅನಿರುದ್ಧಾದಿ
ಆ ಲಿಂಗ ದೇಹಕ್ಕೆ ಆವರಕವಾಹವು

ಆಲಿಸಿದರೆ ಅಂಗಿತೊಟ್ಟ ತೆರದಿ
ಪಾಲಿಸುವ ಪ್ರತಿದಿನ ವಿಜಯ ವಿಠಲರೇಯನ
ಊಳಿಗವನು ಮಾಡೆ ಉದ್ಧಾರನಾಗುವಾ ೪

## ತ್ರಿವಿಡಿತಾಳ

ಹದಿನಾರುಕೂಡಿದ ಅನಾದಿ ಲಿಂಗದೇಹ
ಇದು ಉಂಟು ಕವಳೆಯಂದದಿ ಜೀವಕ್ಕೆ ಮುಚ್ಚಿ
ಅದರೊಳು ಪುರುಷನಾಮಕ ಭಗವಂತನು
ಕದಲಿಪೋಗದೆ ಸರ್ವ ಸ್ವರೂಪದಿ
ಮುದದಿಂದ ಇಪ್ಪನು ಅಗಲನು ಕ್ಷಣ ಮಾತ್ರ
ಪದುಮಜ ಜೀವಿಗಳೊಳಗೆ
ಕುದುರೆಯ ಕೂದಲು ಸಹಸ್ರ ಭಾಗ ಮಾಡೆ
ಅದರ ಪ್ರಮಾಣ ನಿಶ್ಚಯ ಜೀವವೊ
ಇದೇ ಬ್ರಹ್ಮಾದಿಗಳಿಗೆ ಒಂದೇ ಪ್ರಕಾರವು
ಅಧಿಕಾರತನ ಭೇದ ಗುಣವನೋಡು
ತ್ರಿ ದಶಗಣಕೆ ಅಂಶತೋವ್ಯಾಪ್ತಿ ಶರೀರ
ವದೆ ಮಿಕ್ಕಾದವರಿಗೆ ಪ್ರಕಾಶಿತಾ
ಇದೆ ಇದೆ ಸಿದ್ಧ ಶ್ರುತಿ ಸ್ಮೃತಿ ಸಮ್ಮತ
ಪದೋಪದಿಗೆ ಹರಿಯ ಮರಿಯದಿರು
ವಿಧಯಿಂತು ಇರಲಿಕ್ಕೆ ಜೀವೇಶವೊಂದೆಂಬ
ಅಧಮಾಧಮರ ಕರ್ಮವೇನೆಂಬೆನೋ
ಕ್ಷುಧೆಯಗೋಸುಗ ಪೋಗಿ ಕಂಡ ಕಂಡ ಜನರ
ಪದಕೆ ಬೀಳುವ ಮನುಜ ಬೊಮ್ಮನೆಂತೊ
ಸುದತಿ ವಂಚಿಸಿ ಸುತರ ಪಡದ ಕಾರ್ಯವ ತಿಳಿಯಾ

ಮದ ಗರ್ವ ಮತಿತಾನು ದೈವ ಸಮನೇ
ಮದುವೆಯ ಮಾಡುವ ತನ್ನ ನಷ್ಟವ ತಿಳಿಯದೆ
ತದುಪರಿ ಶೋಕಿಸುವ ನೆಲೆಗಾಣದೆ
ಒದಗಿ ಪೋಗುವ ಪಯಣಗತಿಯಲ್ಲಿ ಗ್ರಾಮಕ್ಕೆ
ಹದುಳ ಕಾಣದಲಿಪ್ಪ ಸೇರುವುದೊ
ಮದ ಸೊಕ್ಕಿದವರನ್ನು ಕೊಲ್ಲುವ ವಿಜಯ ವಿಠಲ
ಇದೇ ದೇಹ ನಿರ್ಮಾಣ ಮಾಡಿದ ಮಹಾಮಹಿಮ ೫

## ಧ್ರುವತಾಳ

ಆರಂಗುಲ ಪ್ರಮಾಣ ಪೊಕ್ಕಳಧೋ ಭಾಗ
ಶಿರಸು ಪರಿಯಂತ ಬಹ್ಮನಾಡಿ
ದೋರ ನೋಡಿದರು ಕೇವಲ ಸೂಕ್ಷ್ಮ ನಿರ್ಮಳ
ಧಾರಾಳವಾಗಿಪ್ಪದು ಮಧ್ಯದಲ್ಲಿ
ಈ ರೀತಿ ಇದೆ ಸುಷುಮ್ನವೆಂದೆನಿಪದು
ಮೂರೊಂದು ಇದಕೆ ಪ್ರಭೇದನಾಡಿ
ಚಾರು ವಜ್ರಿಕಾರ್ಯಕ ಪ್ರಕಾಶಿನಿ ವೈದ್ಯುತಿ
ಸೇರಿಸಿಕೊಂಡಿಪ್ಪವು ಚತುರ ಭಾಗ
ಸಾರಿರೈ ಹರಿತಾ ನೀಲ ಶ್ವೇತ ಪಿಂಗಳ ರಕ್ತ
ನಾರಾಯಣಾಂತ ಕೃತಿಪತಿತನಕ
ಮೂರೊಂದು ಒಂದು ನಾಡಿಯೊಳಗೆ ಈ ಕ್ರಮವವರ್ಣ
ಮೂರುತಿಗಳಿಪ್ಪವು ವಾಸವಾಗಿ
ಬೇರೆ ಬೇರೆ ನಾಡಿ ಸ್ಥಾನದಲ್ಲಿ ಲಕುಮಿ
ವಾರಿಜಾದ್ಯರಿಂದ ತುತಿಸಿ ಕೊಳುತ
ಪಾರತಂತ್ರವಿಲ್ಲದ ವಿಜಯ ವಿಠಲರೇಯ
ಆರಾಧಿಸುವ ಜನಕೆ ಬೆಂಬಿಡದೆ ಬೆಂಬಲನು ೬

## ಮಟ್ಟತಾಳ

ಸತತ ಈ ನಾಡಿ ಮೂಲ ಸ್ಥಾನದಲ್ಲಿ
ಚತುರದಳ ಪದುಮರಕುತ ವರ್ಣ
ಹುತಾಶನ ಮಂಡಲ ತ್ರಿಕೋಣಾಕಾರ
ಅತಿಶಯವಾದ ನಾಭಿ ಸ್ಥಾನದಲ್ಲಿ
ಚತುರ ದ್ವಿದಳ ವನಜ ರಕ್ತ ವರ್ಣ
ಪತಿತನ ಶೋಷಿಸುವ ಆರುಕೋಣೆಯು ಮಾ .
ರುತ ಮಂಡಲವೆನ್ನಿ
ಕತಿಪತಿ ಮೊದಲಾದ ಐದು ಮೂರುತಿಯು ಉ
ಕೃತ ಕ್ರಮದಿಂದ ಇಪ್ಪವು ಅನುಗಾಲ
ಚ್ಯುತ ದೂರ ನಮ್ಮ ವಿಜಯ ವಿಠಲ ಕಾಣಿರೊ
ನುತಿಸಿದವರಿಗೆ ಸದ್ಗತಿಯನು ಪಾಲಿಸುವಾ ೭

## ತ್ರಿವಿಡಿ ತಾಳ

ಹೃದಯಸ್ಥಾನದಲಷ್ಟದಳದಿಂದಲೊಪ್ಪುವ
ಪದುಮ ಇದರ ಮೇಲೆ ರವಿ ಮಂಡಲ
ಅದನು ನೋಡಲಾಗಿ ಮೂರು ಕೋಣೆಯುಳ್ಳ
ತ್ರಿದಶ ಮೊಗ ಮಂಡಲ ಪೊಳೆವುತಿದೆಕೊ
ಅದನು ಕಳೆಮು ತಿಳಿ ಹನ್ನೆರಡು ದಳವುಳ್ಳ
ಪದುಮವೆ ಉಂಟು ಉರಸ್ಥಾನದಲ್ಲಿ
ದ್ವಿದಳ ಶುಕ್ಲ ಪದುಮತಾಲುದಲ್ಲಿ ನೋಡು
ವಿಧುಮಂಡಲವದರ ಮೇಲೆ ಸಿದ್ಧಾ
ಪದುಮ ಶುಭ್ರ ಎಸಳ ಎರಡರಿಂದೊಪ್ಪುತ
ಇದೆ ಭ್ರೂ ಮಧ್ಯಾಗ್ನಿ ಮಂಡಲ ತ್ರಿಕೋಣ
ಪದುಮ ದ್ವಾದಶ ಎಸುಳ ಶುಕ್ಲವರ್ಣದಲ್ಲಿ

ಪ್ಪದು ಶಿರಸ್ಸಿನಲ್ಲಿ ವರ್ತುಳ ಮಂಡಲ
ನದಿ ಪತಿ ನಾಮದಲಿ ಕರಿಸಿಕೊಂಬದು
ಇದಕೆ ಮೊದಲು ಪೇಳಿದಂತೆ ಮೂರುತಿಗಳು
ಯದುಕುಲೋತ್ತಮರಂಗ ವಿಜಯ ವಿಠಲರೇಯ
ಪದವಿಯ ಕೊಡುವನು ಈ ಪರಿಧ್ಯಾನಿಸೆ ೮

## ಝಂಪೆ ತಾಳ

ಹಿರಿಯ ನಾಡಿಯಸುತ್ತ ಪೂರ್ವಾದಿವಿಡಿದು ಚ
ತುರ ನಾಡಿಗಳುಂಟು ಉತ್ಸಹದಲಿ
ಕರಿಸಿದವು ವಜ್ರಿಕಾ ಈಡಾಪಿಂಗಳಾಧಾರಣಿ
ತರುವಾಯದಲಿ ಗುಣಿಸು ಎಪ್ಪತ್ತೆರಡು ಸಾ
ವಿರ ನಾಡಿಗಳು ಸತ್ಯ ಸವ್ಯಾಪಸವ್ಯದಲಿ
ಬೆರದಿಪ್ಪುದು ಅರ್ಧಾರ್ಧ ಉಭಯಪಕ್ಷ
ಹರಿ ತಾನೆ ಸ್ತ್ರೀ ಪುರುಷರು ರೂಪವನ್ನೆ ಧರಿಸಿ
ಇರುಳು ಹಗಲು ಕ್ರೀಡೆಯಾಡುತಿಪ್ಪ
ನರನುತ್ತಮನೊಬ್ಬ ವೈಷ್ಣವನ ಮನ್ನಿಸಿ
ಕರೆದು ಮೃಷ್ಟಾನ್ನ ಭೋಜನವ ಮಾಡಿಸೆ
ಪುರುಷಾಯು ಉಳ್ಳನಕ ನಿತ್ಯ ಕುಟುಂಬಕ್ಕೆ
ಪರಿತೋಷ ಬಡಿಸಿದಂತೆ ಕಾಣಿರೈ
ತುರಿಯನಾಮಕದೇವ ವಿಜಯ ವಿಠಲ
ಹರಿಯ ಕರುಣವನು ಪಡೆದವನು ಬಲು ಧನ್ಯನು ೯

## ರೂಪಕ ತಾಳ

ಆ ಶಿಖೆಯಲ್ಲಿ ಬ್ರಹ್ಮನಾಮಕ ನಾರಾಯಣ
ಕೇಶದಲಿ ಪ್ರದ್ಯುಮ್ನ ತದಭಿಮಾನಿ ರುದ್ರ
ಕೇಶವ ಫಣಿಯಲ್ಲಿ ಬಲಗಣ್ಣಿನಲಿ ಸ್ತಂಭ
ವೇಷ ನಾರಾಯಣ ದಾಮರೂಪ ಲಕುಮಿ

ಆ ಸಮೀರನು ವತ್ಸರೂಪದಲಿಪ್ಪ ಉ
ಪಾಸನೆ ಸರ್ವ ದೇವತೆಗಳು ಮಾಳ್ಪರು
ಸುಶುಕ್ಲ ರಕ್ತ ನೀಲ ರೇಖೆಗಳಲ್ಲಿ
ವಸಿಷ್ಟ ಗೌತುಮ ವಿಶ್ವಾಮಿತ್ರರೆಂದು
ಈಶ ಇಂದ್ರ ಸೂರ್ಯ ನಾಮಕರಾಗಿ ಕ
ರಸಿ ಕೊಂಬರು ಕಾಣೊ ಉದಕಾಗಮದಲ್ಲಿ
ಲೇಸು ಭಾರದ್ವಾಜ ನಾಮಕ ಪರ್ಜನ್ಯ
ವಾಸ ವೊರ್ಧ್ವಯವೆ ಅಧೋಯವೆ ಪ್ರತಿಮೆ ಜೋ
ತಿಷಕ್ಕೆ ಅತ್ರಿ ಕಶ್ಯಪ ಕಪಿಲನಾಮಕಾ
ಕಾಶ ದೇವಾದ್ಯರು ಶೋಭಿಸುತಿಪ್ಪರು
ಈ ಸಮಸ್ತದ್ರವ್ಯ ಕಾಣಿಸಿಕೊಡುವ ಮಾ
ನಿಸ ಮೊಗ ಹದಿನೆಂಟು ಒಂದು ಆನಿಯಮೋರೆ
ಏಸುಬಗೆಯಿಂದ ಮೆರೆವ ಸಪ್ತಾಂಗ
ವಿಭೂಷಿತ ವಿಶ್ವನು ದಕ್ಷಿಣಾಕ್ಷಿಯಲ್ಲಿ
ಮೀಸಲ ಪದಾರ್ಥ ಶುಭ ರಸವನುಭವಿಪ
ಆಶೆಯಿಲ್ಲ ನಿತ್ಯ ತೃಪ್ತ ನಿರ್ದೋಷನು
ಈ ಸವ್ಯಗಣ್ಣಿನಲ್ಲಿ ದಾಮನ ದ್ವಯಗಣ್ಣಿ
ಗಾ ಸೂರ್ಯಗಭಿ ಮಾನಿಯಶ್ವಿನಿದೇವತೆಗಳು
ನಾಸಕ್ಕೆ ಸ್ಥಾನಿಗಳು ಅಲ್ಲಿ ಶ್ರೀ ಧನ್ವಂತ್ರಿ
ಶ್ವಾಸೋಚ್ಛ್ವಾಸದಲ್ಲಿ ಮುಖ್ಯಪ್ರಾಣ ಭಾರತಿ
ದ್ಯು ಸರಿತು ಮೊದಲಾದ ತೀರ್ಥಗಳು ಕಿವಿಯಲ್ಲಿ
ಲೇಶ ಬಿಡದಿಪ್ಪರಲ್ಲಿ ತ್ರಿವಿಕ್ರಮ
ಧೀಶಾ ದೇವತೆಗಳು ತದಭಿಮಾನಿಗಳು
ವೈಶ್ರವಣ ಚಂದ್ರಮ ಧರ್ಮಾದ್ಯರು ಕಾಣೋ
ದಾಸೋಹಮ್ಮೆಂದೆನಲು ತನ್ನನೆ ಕೊಡುವ ಜಗ
ದೀಶ ವಿಜಯ ವಿಠಲ ಸರ್ವರನಾಳುವಾ ೧೦

## ಧ್ರುವತಾಳ

ಗಲ್ಲ ಓಷ್ಠೆಗಳಲ್ಲಿ ಮಧುಸೂದನಾದಿ ಮೂರ್ತಿ
ಪಲ್ಲಿನಲ್ಲಿ ಓಜೋಭೃತ ಔರಸ
ಇಲ್ಲಿ ಪೇಳಿದವೆರಡು ಬಿಟ್ಟು ಉಳಿದ ಹದಿ
ನಾಲ್ಕು ಅಜಾದಿಗಳ ತಿಳಕೊಂಬೋದು
ಸೊಲ್ಲು ನುಡಿವ ಜಿಹ್ವೆಯಲ್ಲಿ ವರುಣದೇವ
ಅಲ್ಲಿ ಮತ್ಸ್ಯಾದಿ ಮೂರ್ತಿ ನಲಿದಾಡುವ
ಮೆಲ್ಲುವ ವದನದಲಿ ವಹ್ನಿ ಮತ್ತೆ ಭಾರ್ಗವ
ಸೊಲ್ಲಿನಲ್ಲಿ ಸರಸ್ವತಿ ನಾಮಕ ನಾರಾಯಣ
ಎಲ್ಲಾ ನುಡಿಗಳು ಉಮೆ ನಿಂದಾಡಿಸುವಳು
ಬಲ್ಲವರಿಗೆ ಇದೆ ಕರದರ್ಪಣ
ಉಳ್ಳ ಕಿರಿನಾಲಿಗೆಯಲಿ ಇಂದ್ರನಾಮಕ ಭಗವಾನ
ಅಲ್ಲಿಪ್ಪ ದಾಮೋದರ ದೇವತೆ
ಮೆಲ್ಲನೆ ಕಂಠದಲಿ ತೈಜಸ ವಿಶ್ವನಂತೆ
ಸಲ್ಲಲಿತವಾದ ಮನ ಮಂದಿರ
ಸಲ್ಲುವರದಕಭಿಮಾನಿ ದೇವತೆ ಶಚಿ
ವಲ್ಲಭಾದ್ಯರು ಉದಾನ ವಾಸಾ
ಸಲ್ಲದು ಎಚ್ಚರಿಕೆ ಸ್ವಪ್ನದಲಿ ಇಂದ್ರಾದ್ಯರಿಗೆ
ಬಲ್ಲಿದರುದ್ರನೊಬ್ಬಗೆ ಜಾಗ್ರತ್ರವೋ
ಬೆಳ್ಳಿಗಿರಿಯರಾಯ ತನ್ನ ರಾಣಿಯ ಸಹಿತ
ದಲ್ಲಿಯಭಿಮಾನಿಗಳು ಅಹಂ ಬುದ್ಧಿಗೆ
ದಲ್ಲಣ ಸರ್ಪಗಳಿಗೆ ಗರುಡ ಚಿತ್ತಕೆ ಚೇತನ
ದಲ್ಲಿಗೆ ಶೇಷದೇವರಿಗೊಡೆತನವೋ
ಎಲ್ಲರಿಗೆ ದೊರೆ ವಿಜಯ ವಿಠಲರೇಯ
ಅಲ್ಲಲ್ಲಿ ತಾನೆ ನಿಂದು ವ್ಯಾಪಾರ ಮಾಡಿಸುವಾ ೧

## ತ್ರಿವಿಡಿ ತಾಳ

ಸಾರಭೋಕ್ತ ವಿಶ್ವ ತೈಜಸನೆ ಪ್ರಾಜ್ಞ
ಮೂರುತಿಗಳು ಮೂರು ಅವಸ್ಥಾಕ್ಕೆ
ಪ್ರೇರಣೆಕಾರರು ದಿನ ಪ್ರತಿದಿನದಲ್ಲಿ
ತೋರುವ ಕನಸು ಗಾಢ ನಿದ್ರೆಯು
ಧೀರ ವಿಶ್ವನು ಬಂದು ತೈಜಸನನ್ನು ಕೂಡೆ
ಹಾರುವದು ನರಗೆ ಬಾಹಿರ ಸ್ಮರಣೆ
ಕಾರಣಮಾಡುವ ವಾಸನಮಯ ಸೃಷ್ಟಿ
ವಾರುಣ ಹಯ ಛತ್ರ ಚಾಮರಗಳು
ಭೂರಿ ಧನ ಸತಿಸುತರು ನಾನಾ ಸೌಖ್ಯ
ತೋರುವ ಬಹು ಪರಿಕ್ಲೇಶಂಗಳು
ಆರೊಂದು ಜನುಮದ ಅನುಭವ ಮಾಡಿಸುವ
ಸಾರೆ ದೂರದಲ್ಲಿ ಇದ್ದವಸ್ತು
ಪಾರಗಣಿಸುವ ಕಂಠದಿಂದ ಈರ್ವರು
ಜಾರಿ ಪ್ರಾಜ್ಞನಲ್ಲಿ ಕೂಡಿಕೊಳಲು
ತೋರುವದು ಕನಸಿನ ವ್ಯಾಪಾರ ಮನಸಿಗೆ
ಭಾರಣೆ ನಿದ್ರೆಯಾಸಕ್ತನಾಗೆ
ಮಾರುತನು ಶ್ರೀ ಹರಿಯ ತರ್ಕೈಸಿ ಜೀವಕ್ಕೆ
ಸ್ವರೂಪ ಸುಖಾಭಿ ವ್ಯಕ್ತಿಯಹದು
ಮೂರುತಿಗಳು ತಮ್ಮ ತಮ್ಮ ಸ್ಥಾನಕ್ಕೆ ಬರಲು
ಶಾರೀರವಾಡಿಸುವ ಎಚ್ಚರವ
ಈ ರೀತಿಯಲ್ಲಿ ಜೀವನ ಪ್ರಕಾಶವ ಸೆಳೆದು
ಈರ ಮೂರುತಿಗಳು ಮಾಳ್ಪರಯ್ಯಾ
ಆರು ಎಣಿಸುವರು ಹರಿಯ ವಿಚಿತ್ರವ

ಸಾರಿ ವೇದಗಳು ಹಿಂದಾಗುತಿವಕೋ
ಮೀರಿದವರ ಗಂಡ ವಿಜಯ ವಿಠಲರೇಯ
ಕಾರುಣ್ಯನಿಧಿ ಕಾಣೊ ಕಂಡಮಾತುರದಲ್ಲಿ ೧೨

## ಝಂಪೆ ತಾಳ

ಸ್ಥೂಲಾಂಗುಟ ಪ್ರಮಾಣ ಮೂರುತಿ ಪ್ರಾಜ್ಞ
ಮೂಲೇಶನಂಗುಟಾಗ್ರ ಪರಿಮಿತನು
ಕೇಳಿ ಪ್ರಾದೇಶ ಪರಿಮಿತಿ ಪುರುಷನಾಮಕನು
ಕಾಲಕಾಲಕೆ ಬಿಡದೆ ಪೂಜಾರ್ಹರೂ
ಮೂಲ ಮುಖ್ಯ ಗುರುವು ಪವಮಾನ ದೇವತೆ
ಮೂಲೇಶನ ಪಾದ ಬಳಿಯ ವಾಸ
ವಾಲಗ ಮಾಡುವ ಸಮ್ಮೊಗವಾಗಿ ಹೀ
ಯಾಳದಿಂದಲಿ ಕರವ ಮುಗಿದು ನಿಂದು
ಬಾಳುವ ಜೀವನು ಪ್ರಾಣನಂಘ್ರಿಯರೇಣು
ತಾಳಿ ಆತನ ಪಾದ ಸಾಮಿಪ್ಯದಿ
ವ್ಯಾಳೆ ವ್ಯಾಳೆಗೆ ವಾಯು ಹಂಸಮಂತ್ರವ ಮೂರು
ಏಳು ಸಾವಿರದಾರುನೂರು ಜಪಿಸಿ
ಆಳಾಗಿಯಿದ್ದ ಜೀವಕ್ಕೆ ಪುಣ್ಯತಂದೀವ
ಏಳಲ ಮಾಡುವ ಹರಿದ್ವೇಷಿ ಜನರ
ಖೂಳರಿಗೆ ಪ್ರಾಜ್ಞನು ಅನಿತ್ಯ ಸುಖವದಾ
ಶಾಳ ಪುಷ್ಪದ ಬಳಿಯಲಿ ಪಟಕಧರಳು
ಕೀಲಿಸಿದಂತೆ ಮಾಡುವನಲ್ಲದೇ ದೈತ್ಯ
ಜಾಲಕ್ಕೆ ಸುಖವಿಲ್ಲ ಒಮ್ಮ್ಯಾದರೂ
ಶ್ರೀ ಲೋಲ ನಾಭಿಯಲಿ ಅಜನ ಪಡದುದೇ
ಸತ್ಯ ಮೂರ್ಲೋಕ ಬಲ್ಲು ದೈ (ದೇವರು) ಇವರು ತಮ್ಮ

ಆಳುತನ ವುಳ್ಳವರೇ ಪೊಕ್ಕಳಿಂದಲಿವಂದು
ಕೋಳಿಯನು ಪಡೆದರೆ ದೈವವೆಂಬೆ
ಹಾಳಾಗಿ ಹೋಗುವನು ಗತಿಯಿಲ್ಲ ನರಕದಲಿ
ಹೂಳುವರು ಯಮಭಟರು ತಿರುಗ ಗೊಡದೆ
ಫಾಲ ಲಿಪಿಯನು ತಿಳಿದು ಓದಿ ನಡೆಯದವನು
ಕಾಲ ಮೂರುತಿ ವಿಷ್ಣುವೆಂತಾಹನೋ
ಶೀಲಗುಣ ಸಂಪನ್ನ ವಿಜಯ ವಿಠಲರೇಯ
ಆಲದೆಲೆಯ ಮೇಲೆ ಮಲಗಿದ ವಿನೋದಾ ೧೩

## ಮಟ್ಟತಾಳ

ಬಲಗಡೆ ಹಸ್ತದಲಿ ಮಧುಸೂದನ ಸಂಧಿ
ಗಳಲಿ ಕಪಿಲಾದಿ ಪಂಚ ಮೂರುತಿಗಳು
ಸಲೆ ಎಡ ಹಸ್ತದಲಿ ಶ್ರೀ ಧರನು ಸಂಧಿಗ
ಳಲಿ ಚರ್ವಾಂಗದಿ ಪಂಚ ಭಗವದ್ರೂಪ
ಚಲುವ ಪಾಣಿಗಳಲ್ಲಿ ದಕ್ಷ ಪ್ರಜೇಶ್ವರ ಕುಕ್ಷಿ
ನಾರಾಯಣ ಎರಡು ಪಾರ್ಶ್ವದಲ್ಲಿ
ಬಲಿ ಮಥನ ವಿಷ್ಣು ಪೃಷ್ಠ ಭಾಗದಲ್ಲಿ
ನಳಿನನಾಭನು ನಾಭಿಯಲಿ ಸಮಾನನನಿಲ ದೇವನುವಾಸ
ಪೊಳೆವ ಮಿತ್ರನೆಂಬ ಸೂರ್ಯನು ಪಾಯ್ವಿಂದ್ರಿ
ಯಲಿ ಸ್ವಾಯಂಭುವ ನಿಲವರು ಗುಹ್ಯದಲಿ
ಫಲಿ ಪರ ಮನು ಭಗ ಬಲಿಮೂರುತಿ ಐದು
ನೆಲೆಯಾಗಿ ಇಪ್ಪವು ತತುಸ್ಥಳದಲ್ಲಿ
ಸುಲಭ ಮೂರುತಿ ನಮ್ಮ ವಿಜಯ ವಿಠಲರೇಯ
ಕಾಲ ತಾನೇ ನಿಯಾಮಕ ಅವರವರ ೧೪

## ಧ್ರುವತಾಳ

ಅನಿರುದ್ಧ ಕಟಿಯಲ್ಲಿ ದಕ್ಷಿಣಪಾದದಲ್ಲಿ
ವಿನುತನಂದನ ಶೇಷ ರುದ್ರ ಸಂಧಿಗಳಲ್ಲಿ
ಗುಣವಂತ ಟಂಕಿನೀ ಐದು ರೂಪಗಳುಂಟು
ಮನು ಮಥನಿಂದ್ರನು ಎಡಕಾಲಿನಲ್ಲಿ
ಮಿನಗುವ ತಾರಾದಿ ರೂಪ ಸಂಧಿಗಳಲ್ಲಿ
ಮನೆ ಮಾಡಿ ಕೊಂಡಿಪ್ಪ ಜಯಂತನಲ್ಲೀಗ
ಘನ ಯಜ್ಞ ಮೂರುತಿ ನಾರಾಯಣನಿಪ್ಪ
ಅನಿಲಾಧಿಷ್ಠಾನ ದಿಂದಲಿ ದೇಹಧರದ
ಕ್ಷಿಣಾಂಗುಟದಲ್ಲಿ ತೀರ್ಥ ನಾರಾಯಣ
ಎಣಿಪದು ಈ ಪರಿ ಹಗಲಿರಳು ನೋಡಿ
ಕ್ಷಣ ಮಾತುರ ಬಿಡ ವಿಜಯ ವಿಠಲರೇಯ
ಅನಿಮಿಷರೊಡೆಯನತ್ಯಂತಾದ್ಭುತ ಶಕ್ತಾ ೧೫

## ಅಟ್ಟತಾಳ

ಈ ದೇಹದಲ್ಲೀಗ ನವಕೋಟಿ ಸುರರು ವಿ
ವಾದವಿಲ್ಲದೆ ವಾಸವಾಗಿಪ್ಪರು
ಆ ದೇವತೆಗಳೊಳು ಶ್ರೀ ಭಗವದ್ರೂಪ
ಆದಿ ಕಡೆಯಿಲ್ಲದಂತಿಪ್ಪವು
ಈ ದೇಹಿ ಮಾಡಿದ ಕರ್ಮಗಳನಂತ
ಶೋಧಿಸೆ ಒಂದೊಂದು ಅನಂತವೊ
ಆದ ಕರ್ಮಗಳಲ್ಲಿ ತನ್ನಾಮಕನಾಗಿ
ಸಾಧುಗಳಿಪ್ಪರು ಇವರಿಗೆಲ್ಲ
ಮಾಧವ ನಿಯಾಮಕ ಬಹು ರೂಪದಿ

ಸಾಧನೆ ಸಂಪತ್ತು ಮಾಡಿಸುವ
ವೇದೋದ್ಧಾರಕ ವಿಜಯ ವಿಠಲರೇಯ
ಕ್ರೋಧ ದೈತ್ಯ ನಿಯಾಮಕ ಬಹುರೂಪ ೧೬

### ಆದಿತಾಳ

ಚತುರ ಮೂರುತಿ ಹತ್ತು ಮತ್ಸ್ಯಾದಿ ಮೂರುತಿ
ಚತುರ ವಿಂಶತಿ ಮೂರುತಿ ಮತ್ತೆ ಶತಮೂರುತಿ
ಶತನೂರು ಮೂರುತಿ ಕೃದ್ಧೋಲ್ಕಾದಿಗಳೈದು
ಪ್ರತಿದಿನ ಪುಂಡ್ರದಲ್ಲಿ ದ್ವಾದಶ ಮೂರುತಿ ಶ
ಕುತಿ ಮೊದಲಾದ ಏಕಾದಶ ಮೂರುತಿ ವಿಂ
ಶತಿಯಷ್ಟ ಋಷಭಾದಿ ಮೂರುತಿ ವಿಮಲ ಮೂ
ರುತಿಗಳೆಂಟು ವಿಶಿಷ್ಟ ಮೂರುತಿಯೊಂದು
ಪೃಥಿವಿಯುದಕ ತೇಜ ಭೂತ ವಾಯು ತಾರಾ
ಪಥ ಶಬ್ದ ಸ್ಪರುಶ ರೂಪ ರಸ ಗಂಧದೊಳುನಿ
ರುತವಾದ ಮೂರುತಿ ಅಜಾದಿ ಮೂರುತಿ
ಸತುಚಿತು ಆನಂದಾತ್ಮ ವಿಜಯವಿಠಲ ಶಾ
ಶ್ವತವಾಗಿ ಎನ್ನ ಪೊರೆವ ದಯವಂತ ಮೂರುತಿ ೧೭

### ಜತೆ

ಅಧ್ಯಾತ್ಮ ತಿಳಿಯುವುದು ಭೌತಿಕ ದೇಹದೊಳು
ವಿದ್ಯಾವಂತರು ಒಲಿಸೆ ವಿಜಯ ವಿಠಲ ಒಲಿವಾ ೧೮

೮೬

## ಧ್ರುವತಾಳ

ಸಮರ್ಪಣೆ ಪ್ರಕಾರ ತಿಳಿವುದು ಚೆನ್ನಾಗಿ
ಸಮ ಬುದ್ಧಿವುಳ್ಳ ಜನರು ಸತತದಲ್ಲಿ
ಹಿಮಶೇತು ಮಧ್ಯದಲ್ಲಿ ಪುಟ್ಟಿದ ದೇಶದೊಳಗೆ
ಕ್ರಮಉಂಟು ಸ್ವಲ್ಪ ಪ್ರದೇಶ ಧರಣಿ
ಶಮೆದಮೆ ಉಳ್ಳ ಮಧ್ವಮತದಲ್ಲಿ ಪೊಂದಿದ್ದ
ಸುಮನೋಹರ ಜೀವಿಗಳಿಗೆ ಪೇಳತಕ್ಕ
ಪ್ರಮೇಯ ಇದು ಕೇವಲ ಹರುಷ ರಹಸ್ಯ ಆ
ಗಮದಲ್ಲಿ ಸರಿ ಪೇಳುತಿದೆ ಉತ್ತಮ
ರಮೆಯರಸನ್ನ ದಿವ್ಯ ವಿಗ್ರಹ ಮನಸಿಗೆ
ರಮಣೀಯವಾದದ್ದು ಲಕ್ಷಣೋಪೇತ
ದ್ಯುಮಣಿ ಪ್ರಕಾಶದಂತೆ ಒಪ್ಪುತಿಪ್ಪದು ಆ
ತುಮ ಅನಾತುಮದೊಳು ಚಿಂತನೆಗೈದು
ಸಮ ವಿಷಯದಲ್ಲಿ ಗೋಳಕವ ನೆನೆದು ಮ
ಹಿಮೆಯನ್ನು ಮರಳೆ ಮರಳೆ ಧೇನಿಸುತ್ತ
ತಮೋಗುಣದ ಕಾರ್ಯವನ್ನು ಹಿಂಗಳದು ಶುದ್ಧ ಸತ್ವ
ಮಮತೆಯಿಂದಲಿ ಹರಿಯ ಮೆಚ್ಚಿಸಬೇಕು
ಅಮರದಿ ಸಮುದಾಯ ಜೀವಿಗಳಿಗೆ ಲ
ಕುಮಿ ವಲ್ಲಭನೆ ಮುಖ್ಯ ಮೂಲನೆಂದೂ
ಕಮಲ ಕರ್ನಿಕೆಯಲ್ಲಿ ಇದ್ದ ಬಿಂಬನ ಪ್ರ
ತಿಮೆಯಲ್ಲಿ ಇಡುವದು ವಿವಿಧ ತಿಳಿದು

ಸಮನ್ವಯ ಇಲ್ಲೆ ಮಾಡಿ ಮುಕ್ತಿ ಮಾರ್ಗವ ಪೊಂದು
ಗಮನವಾಗಲಾರದು ಕಂಡಕಡಿಗೆ
ಅಮಲವಾದ ಪೂಜೆ ಹದಿನಾರು ದಿಕ್ಕಿನಿಂದ
ಕ್ರಮತಿಳಿದು ಅವಾಹನ ಧ್ಯಾನಮಾಡಿ
ಅಮಿತ ಪ್ರತಾಪ ಹರಿ ನಿಸ್ಪ್ರಹ ನಿತ್ಯ ತೃಪ್ತ
ಕಮಲ ಭವಾದಿ ಮನಕೆ ದೂರಕ್ಕೆ ದೂರ
ಅಮಿಶ್ರ ಮಿಕ್ಕಾದ ರಸಭೋಕ್ತಾ ನಾನಾ ರೂಪದಲಿ
ಭ್ರಮೆ ಇಲ್ಲವಗೆ ನಿಜಪೂರ್ಣ ಸುಖನೊ
ಕ್ಷಮ ಮಧ್ಯದಲಿ ಸ್ಥೂಲ ಮಧ್ಯಮ ಸೂಕ್ಷವೆಂದೀ
ಕ್ರಮದಿಂದ ಪ್ರಸಿದ್ಧ ವಾಸನ ಚಿತ್ತು
ಚಮತ್ಕಾರ ಒಂದೊಂದಕೆ ತ್ರಿವಿಧಬಗೆ ಉಂಟು
ಸುಮತಿಲೋಕಕೆ ಸುಲಭವಾಗಿಪ್ಪದೂ
ಸಮನಸಿ ತಿಳಿಯಬೇಕು ಚತುರ ವಿಧ ಅನ್ನ
ರಮೆ ಬೊಮ್ಮ ತಾತ್ವಿಕರು ಸಾಕ್ಷಾತ್ಪರಮಾ
ನಿಮಿಷ ಬಿಡದೆ ಇನಿತು ಕಷ್ಣಾದಿ ಇಷ್ಟವಾಸ
ನಾಮಯದಿ ಪ್ರಾಜ್ಞಬಿಂಬ ಕೈಕೊಂಬೋರು
ಕಮಠ ಕಪಿಲ ಭೃಗು ನರಸಿಂಹ ನಾಮದಲಿ
ರಮಿಪ ಜಿಹ್ವೇಂದ್ರಿಯದಲಿ ಸ್ವೀಕರಿಸಿ
ಕುಮತಿ ಜನಕೆ ತಿಳಿಯಗೊಡನೊ ಅನಾದ್ಯ ವಿದ್ಯ
ತಿಮಿರ ಭಾನು ಭವಾರ್ಣವ ತಾರಕ ಉ
ತ್ತಮವಾದ ಯೋಗ್ಯ ರಸ ತತ್ ತ್ವದಾರ್ಥದಲಿ
ಸಮ ತಿಳಿಸಿಕೊಂಡರೆ ಯೋಗ ಮಾಯಾ
ಅಮರರಿಗೆ ಉಣಿಸುವ ತಾನು ಕೈ ಕೊಂಬದು ದು
ರ್ಗಮ ಕಾಣೊ ದುಃಖ ದೂರ ಮಾಹಾ ಪ್ರಭುವೊ

ಉಮೆಯರಸ ಪರಿಯಂತ ಈ ರಸ ಸಲ್ಲುವದು
ಕಮಲಭವಗೆ ಲಕುಮಿಗೆ ಇಲ್ಲವೋ
ಸುಮನಸ ಗಣಕೆ ಲೇಪನವಿಲ್ಲಾ ಅವರ ಆ
ತುಮದೊಳಗಿದ್ದ ಖಳರಲ್ಲಿ ಐಕ್ಯ
ಕ್ರಮ ಗೆಡುವರು ಒಮ್ಮೆ ಇದರ ಪ್ರಾಚುರ್ಯದಿಂದ
ತಮ ತಮ್ಮ ಸ್ವಾಭಾವಿಕ ನಡತೆಯಲ್ಲಿ
ಅಮಮ ಹರಿ ಪರಮ ಶಕ್ತಿ ಸೃಷ್ಟಾ ಉಪ
ರಮದಲ್ಲಿ ಸರ್ವರನ್ನು ಉದರದೊಳಗು
ತ್ತಮ ತರದಿಂದ ಪೊಂದಿಟ್ಟುಕೊಂಡಿಪ್ಪ ಉ
ತ್ತಮ ಶ್ಲೋಕ ಪೂರ್ಣನ್ನ ಚರಿತೆ ಎಂತೊ
ಮಮತಾ ರಹಿತ ಪರಾಯು ಆರಂಭಿಸಿ
ನವಿಪ ಜನರು ಇತ್ತ ಭೋಗ್ಯಾವಸ್ಥಾ
ಕ್ರಮದಲಿ ಆವಾವ ತತ್ವಾತ್ಮಕ ರಸಂಗಳು
ಸಮಸ್ತ ಜೀವಿಗಳಿಗೆ ಏಕ ಮಾಳ್ಪ
ಕಮಲೇಶ ಶುಭರಸ ಸವಿದುಂಬೋದು ನಿಶ್ಚಯವು
ಅಮಿತ ವಿಜ್ಞಾನಪೂರ್ಣ ಸ್ವರಮಣನು
ಕ್ರಿಮಿ ಮೊದಲಾದ ಚೇತನಕೆ ಉಪಜೀವ್ಯ ಅ
ಕ್ರಮಕೆ ಭಗವಂತನಿಗೆ ಆಗುವದೇನೊ
ಭ್ರಮಣನಲ್ಲವೊ ಸ್ವಾಮಿ ಭಿನ್ನಾಂಶಿ ಅಂಶಕೆ ಸಂ
ಗಮ ಮಾಡಿಸುವ ಒಂದೇ ಜೀವರನ್ನು
ನಮೊ ನಮೊ ನಮೊ ಎಂದು ಆದ್ಯಂತ ತಿಳಿದ ನರಗೆ
ಸಮವೃತ್ತಿ ಭೀತಿ ಇಲ್ಲ ಎಲ್ಲಿದ್ದರೂ
ಹಿಮಕರಾವರ್ಣ ವಿಜಯ ವಿಠಲನನು
ಪಮನೆಂದದರ್ಪಿಸೆ ಕೈವಲ್ಯಾ ಸರ್ವದಾ ಕೈಕೊಂಬಾ ೧

## ಮಟ್ಟತಾಳ

ಅರ್ಚಿಸಲಿಬೇಕು ಅಧಿಕಾರ ಭೇದದಲಿ
ಸರ್ಪಿಮೊದಲಾದ ನಾನಾ ವಸ್ತುಗಳಿಂದ
ದರ್ಪತನ ಬಿಟ್ಟು ಧರ್ಮಮಾರ್ಗದಲಿ ಕಂ
ದರ್ಪ ಪಿತನೆ ಸರ್ವ ವ್ಯಾಪ್ಯ ವ್ಯಾಪಕನೆಂದು
ದರ್ಪಣದೊಳು ಬಿಂಬನೋಳ್ಪ ತೆರದಂತೆ
ಸರ್ಪಭೂಷಣ ತತ್ವದಲ್ಲಿ ಇದ್ದದ್ದೆ ಗ್ರಹಿಸು
ದರ್ಪಜನರವೈರಿ ವಿಜಯ ವಿಠ್ಠಲರೇಯಾ
ಅರ್ಪಿತ ಕೈಕೊಂಬ ಭಕುತಿ ಮಾತ್ರಕೆ ಒಲಿದು ೨

## ತ್ರಿವಿಡಿತಾಳ

ಒಂದೊಂದು ಪದಾರ್ಥಕ್ಕೆ ಒಬ್ಬೊಬ್ಬ ಅಭಿಮಾನಿಗಳು
ವೃಂದಾರಕ ಜನ ಉಂಟು ಅದಕೆ
ಒಂದೊಂದು ಭಗವದ್ರೂಪಗಳಲ್ಲಿ ಇಪ್ಪವು
ಕುಂದದಲೆ ತಿಳಿದು ಕೊಂಡಾಡುವದು
ನಂದವಾಹದು ಜನಕೆ ಅನ್ನ ಪಾಯಸದಲ್ಲಿ
ಚಂದ್ರ ಭಾರತಿ ಕೇಶವ ನಾರಯಣ
ಸಂದೋರು ಭಕ್ಷ ಘೃತ ಕ್ಷೀರದಲ್ಲಿ ಅರ
ವಿಂದ ಭಾಂಧವ ಲಕುಮಿ ವಾಣಿಯಲ್ಲಿ
ನಿಂದಿಹ ಮಾಧವ ಗೋವಿಂದ ವಿಷ್ಣು ಬಲು
ಅಂದಾ ಮಂಡಿಗೆ ಬೆಣ್ಣೆದಧಿ ಸೂಪಕ್ಕೆ
ಒಂದೊಂದಿರಾ ಮೌಳಿ ವಾಯು ಚಂದ್ರ ವರುಣಾ
ವೀಂದ್ರ ಮಧುರಿಪು ಕ್ರಮಾತು ಶ್ರೀಧರ

ಮಮುದೆ ಪತ್ರ ಫಲ ಶಾಖಾ ಆಮ್ಲ ಅನಾಮ್ಲಕ್ಕೆ
ಪೊಂದಿ ಮಿತ್ರ ಶೇಷ ಗೌರೀ ಗೌರೀಶರು
ಇಂದ್ರೀಶ (ಪದ್ಮ)ನಾಭ ದಾಮೋದರ ಗುಣ
ಸಾಂದ್ರ ಸಂಕರುಷಣ ಮೂರ್ತಿ ಎನ್ನೂ
ಇಂದ್ರಯಮ ವಾಸುದೇವ ಪ್ರದ್ಯುಮ್ನ ಆ
ನಂದ ಅನಿರುದ್ಧನು ಸಕ್ಕರೆ ಬೆಲ್ಲ
ಚಂದ ಉಪಸ್ಕಾರ ಕಟುಗಳಿಗೆ ಇವರೆನ್ನು
ವಂದಿಸುವುದು ಈ ಪರಿ ತಿಳಿದೂ
ಗಂದುಗ್ರ ಯಾಲಕ್ಕಿ ಸಾಸವಿ ಮತ್ತೆ ಶ್ರೀ
ಗಂಧ ಕರ್ಪುರ ಇವಕ್ಕೆಲ್ಲ ಕೇಳಿ
ಕಂದರ್ಪ ಪುರುಷೋತ್ತಮ ತೈಲ ಪಕ್ವಕ್ಕೆ
ಇಂದ್ರಜ ಅಧೋಕ್ಷಜ ದೇವತಿಯೂ
ಸಂದೀದ ಕೂಷ್ಮಾಂಡ ಪರಿಶುದ್ಧ ತಿಲಮಾಷ
ದಿಂದ ನಿರ್ಮಿತಕ್ಕೆ ದಕ್ಷ ನರಸಿಂಹನೆ
ರಂಧ್ರವುಳ್ಳ ಭಕ್ಷಮಾಷ ಮಿಕ್ಕಾದದಕೆ ಸ
ಬಂಧವಾಗಿಹ ಮನು ಅಚ್ಯುತ ದೇವಾ
ಸೈಂಧವ ಸಂದಿಜಕೆ ನಿರುಋುತಿ ಪ್ರಾಣ ಉ
ಪೇಂದ್ರನು ಜನಾರ್ಧನ ಯುಕ್ತ ಕ್ರಮದಲ್ಲಿ
ತಂದಿಡುವ ತಾಂಬೂಲ ಸ್ವಾದೋದಕದಲ್ಲಿ
ಮಂದಾಕಿನಿ ಸೌಮ್ಯಹರಿ ಕೃಷ್ಣನೋ
ಒಂದೊಂದು ಅಭಿಮಾನಿ ಒಂದೊಂದು ಮೂರ್ತಿ ಮು
ಕುಂದನ ಪ್ರೇರಣೆಯಿಂದ ಪೇಳಿದೆ
ಮಂದರಾದ್ರಿಧರ ವಿಜಯ ವಿಠ್ಠಲ ಕರುಣಾ
ದಿಂದ ಸುಳಿದಾಡುವ ಸವಿದು ತೃಪ್ತನಾಗಿ ೨

## ಅಟ್ಟತಾಳ

ಪುಷ್ಕರ ರತಿ ಹಂಸನಾಮಕ ಪರಮಾತ್ಮ
ವಿಶ್ವನು ಪಾವಕ ಶುದ್ಧಿಗೆ ಸ್ವಾದು ರಸಕೆನ್ನಿ
ವಸುಜೇಷ್ಟ ವಸಂತ ಒಲಿಗೆ ಗೋಮಯ ಪಿಂಡ
ಕೂಸತಿಯಾಗಿಪ್ಪರು ಭಾರ್ಗವ ಋಷಭನು
ಅಸಮಾ ಗುಣದೇವಿ ಪಾಕಕರ್ತೃಗಳಿಗೆ
ವಿಶ್ವಂಭರದೇವ ಅಲ್ಲಿ ವಾಸಾ
ವಸುಧಿ ವರಾಹ ನೈವೇದ್ಯ ಮಂಡಲದಲ್ಲಿ
ಉಸವ ಮೇಲು ಭಗಕೆ ವಿಘ್ನೇಶ್ವರ ಕುಮಾರ
ಮಿಸುಣಿಪ ವರ್ಣಕೆ ವಿಷ್ವಕ್ಸೇನ ಪು
ರುಷನಾಮಕ ಭಗವಂತನ ಚಿಂತಿಸು
ಎಸಳು ತುಳಿಸಿಗೆ ಶ್ರೀದೇವಿ ಕವಿಲ ರಂ
ಜಿಸುವ ಪಾತ್ರಿಯಲ್ಲಿ ವಾರುಣಿ ಆನಂದ
ಬೆಸಸೂವೆ ಭೋಜನ ಪಾತ್ರಿ ವ್ಯಂಜನಕೆ ಶೋ
ಭಿಸುವರು ದುರ್ಗಾ ಸೌಪರ್ಣಿ ಸತ್ಯಾದತ್ತ
ಮಶಕಾದಿ ಸ್ಪರ್ಶದೋಷ ಪರಿಹಾರಕ್ಕೆ
ಶ್ವಶನ ಮುದ್ರೆ ಎನಬೇಕು ತಾರ್ಕ್ಷ್ಯ ಮುದ್ರೆಯು
ವಿಷ ನಿವಾರಣಾರ್ಥ ತೋರಿಸಬೇಕು ಶುಭ
ರಸ ಸಿದ್ಧಿಗೆ ಧೇನು ಮುದ್ರೆ ತೋರಿಸ ಬೇಕು
ಬಿಸಿಜ ಮುದ್ರೆಯು ಶೋಧನಾಥವು ಸು
ದರ್ಶನ ಮುದ್ರೆಯು ರಕ್ಷಣಾರ್ಥ ಶಂಖಗದಾಕ
ಲಶ ಮುದ್ರೆಗಳು ತೋರಿಸಬೇಕು ಚೆನ್ನಾಗಿ
ದಶ ದಿಗ್ಬಂಧನ ಅಮೃತ ಬಿಂದು ಪವಿತ್ರಕೆ

ಬೆಸಸೆ ತಿಳಿದು ಮತ್ತೆ ಹಂಸ ಮುದ್ರೆಯು
ಪೆಸರುಗೊಳಲಿಬೇಕು ಎಲ್ಲಿ ಬೇಕಾದಲ್ಲಿ
ಕುಶಲಮಂತ್ರ ಜ್ಞಾನಪೂರ್ವಕದಿಂದ ಚಿಂ
ತಿಸಬೇಕು ನಾನಾ ಪದಾರ್ಥದ ವೈಭವ
ಅಸು ಕರಣ ಕಾಯ ಭೇದವನರಿತು ತು
ತಿಸಬೇಕು ಹರಿಯ ಈ ಪರಿಯಲ್ಲಿ ಸ್ವತಂತ್ರ ನಿ
ರ್ದೋಷಾ ಗುಣ ಪೂರ್ಣ ನಿಸ್ಪ್ರಹ ಸಾರಭೋಕ್ತ ಅಪ್ರಮೇ
ಯ ಸತ್ಯ ಸಂಕಲ್ಪ ಕರುಣಾ ನಿಧಿ ಭಕ್ತ
ವತ್ಸಲ ನಾರಾಯಣಾತ್ಮಕ ಅಂಶಿ
ಅಂಶಾವತಾರಾವೇಶ ದ್ರವ್ಯಪ್ರಾ ಪೂರ್ತಿ
ಉಸರಿಕ್ಕದೆ ನಿನ್ನ ದಾಸನೆಂದು
ಪುಶಿಯಲ್ಲ ಪುಶಿಯಲ್ಲ ಪುಶಿಯಲ್ಲ ಎನುತಲಿ
ವಶವಾಗಿ ಇಷ್ಟ ದೇವನ ನೀಕ್ಷಿಸಿ
ಹಸುಳೆ ಯಂದದಲಿ ಪರಮೋತ್ಸಹ ಪಿಡಿದು ಸಾ
ಧಿಸು ಗುಣರೂಪ ಕ್ರೀಯಾದ ಸಮರ್ಪಣೆ
ಅಸುರ ಸಂಹಾರ ನಮ್ಮ ವಿಜಯ ವಿಠ್ಠಲರೇಯಾ
ವಿಷಯಂಗಳಿಗೆ ದೂರ ಅನಾದಿ ಸ್ವಭಾವಾ ೪

## ಆದಿತಾಳ

ರತ್ನಮಂತ್ರ ವಿಷ್ಣು ಸಹಸ್ರನಾಮ ತಂತ್ರಿಕ
ಚಿತ್ತ ಶುದ್ಧನಾಗಿ ಮೂರು ಪ್ರಕಾರದಲ್ಲಿ
ತತ್ವಜ್ಞಾನದಿಂದ ಅಲ್ಪಜ್ಞ ನಾನು ಎಂದು
ತುತಿಸಿ ಮಂಗಳಮೂರ್ತಿಗೆ ನೈವೇದ್ಯ
ಉತ್ತಮ ಗುಣವುಳ್ಳ ಹವಿಸ್ಸು ಪರಮ ಪಾ

ವಿತ್ರ ಸ್ವಾದು ಸುಗಂಧ ಹವ್ಯ ಭಾವಕ್ರಿಯಾದಿ
ಅತ್ಯಂತ ವಿಶುದ್ಧಮನೋಹರ ಅ
ಮೃತವಾಗಿಹ ಸತ್ಯ ಭೋಗದ್ರವ್ಯ ಹರಿಯ ಮುಂಭಾಗದಲ್ಲಿ
ನಿತ್ಯ ಹೀಗೆ ಚಿಂತಿಸಿ ಪರಮಾನ್ನ ಹರಿದ್ರಾನ್ನ
ಚಿತ್ರಾನ್ನ ಮುದ್ಗಾನ್ನಅ ಪೂಪ ವಿಧಗಳು
ಮತ್ತೆ ಕದಳಿ ಫಲ ಸಂಭ್ರಾಣ ಸುಫಲ ಪಕ್ವ
ತರ್ದಳಿಸುವ ಕಂದಮೂಲ ವ್ಯಂಜನ ನಾನಾ
ವಸ್ತು ಗೋಘೃತ ಮಿಶ್ರ ಫಲ ಮೊದಲಾದವು
ತತ್ತಸ್ಥಾನದಲಿ ಇಡಿಸಿಕೊಂಡು ಸರ್ವ
ಕರ್ತು ನೀನೆ ಎಂದು ಮೇರು ಮುದ್ರೆ ತೋರಿಸಿ
ಭೃತ್ಯ ಇತ್ತದ್ದು ಕೈ ಕೊಳ್ಳಬೇಕೆಂದು ಚಿಂತಿಸು
ಪ್ರತ್ಯೇಕ ಪ್ರತ್ಯೇಕ ಧ್ಯಾನದಿಂದಲಿ ತಿಳಿದು
ತತ್ತದ್ರಸ ಸಂಯೋಗ ವಿಭಾಗ ಯೋಚಿಸು
ಸತ್ವ ರಾಜಸ ತಮೋಗುಣದಿಂದ ಷಡುರಸ ಇ
ಪ್ಪತ್ತು ನಾಲ್ಕು ರಸ ಅದರೊಳಗಿಪ್ಪವು
ಉತ್ತಮ ರಸ ಎರಡು ಎಂದಿಗೆ ನಾಶವಿಲ್ಲ
ವ್ಯಾಪ್ತವಾಗಿಪ್ಪವು ಆದಿಮಧ್ಯಾಂತದಲ್ಲಿ
ಸುತ್ತುವ ಮನಸು ನಿಲ್ಲಿಸಿ ಸಾಧನದಲಿ ಮಾನು
ಷೋತ್ತಮ ಮಾಡಬೇಕು ಅನಪರೋಕ್ಷ ಕಾಲಕೆ
ಸತ್ಯ ಸಂಕಲ್ಪನೆಂದು ಮೌನವಿಡಿದು ಪೂರ್ವ
ಉತ್ತರಾಪೋಶನ ವಿಧಿ ಅಚಮನಾನೀಯೊ
ಪ್ರತ್ಯಕ್ಷವಾಗಿದ್ದ ಗ್ರಹಮೇಧಿ ಯಾದವ
ನಿತ್ಯ ಈ ಪರಿಯಿಂದ ಚರಿಸಬೇಕು ಚನ್ನಾಗಿ
ತುತ್ತು ತೊರದು ಗುಹಾಶೇರಿದವನಾದರು

ಹೊತ್ತು ಹೊತ್ತಿಗೆ ಕೊಂಬ ಆಹಾರ ಅರ್ಪಿಸಬೇಕು
ಉತ್ತಮ ಮಧ್ಯಮ ಅಧಮರ ಬಗೆ ಬೇರೆ
ಆತ್ಮ ಭಜನೆಯೊಳಗೆ ಸರ್ವವು ಇದ್ದ ತೆರದಿ
ಚಿತ್ತದಲ್ಲಿ ಸರ್ವವು ಎಣಿಸಿ ಉಣಿಸಲಿಬೇಕು
ಹತ್ತದು ಮನಸಿಗೆ ಒಮ್ಮಿಂದೊಮ್ಮೆಲೆ ಗು
ಣೋತ್ಕರ್ಷಣೆ ಮಾಡಿದರೆ ಸುಲಭವಾಗಿಪ್ಪವು
ನಿತ್ಯಾನಂದ ನಮ್ಮ ವಿಜಯ ವಿಠಲರೇಯಾ
ಅರ್ಥಿಯಿಂದಲಿ ಸಾಲಿಗ್ರಾಮಾದಿಯಲ್ಲಿ ಉಂಬ ೫

## ಜತೆ

ಸ್ವಲ್ಪ ಪೇಳಿದೆ ಇದೆ ಬಿಡದೆ ಚಿಂತಿಸು ಅಹಿ
ತಲ್ಪ ವಿಜಯ ವಿಠಲಗರ್ಪಿಸೆ ಕೈ ಕೊಂಬಾ ೬

## ೮೭

## ಧ್ರುವ ತಾಳ

ಸಾಮಾನ್ಯ ಧ್ಯಾನವಿದು ಮಾನ್ಯವಂತರು ಕೇಳಿ
ತಾಮಸ ಭಕ್ತಜನಕೆ ಪೇಳಸಲ್ಲ
ಸ್ವಾಮಿ ಭೃತ್ಯನ್ಯಾಯಬಲ್ಲ ತಾತ್ವಿಕರಿಗೆ
ಈ ಮಹಾ ಮಹಿಮೆಯ ತಿಳಿವುದೊ
ಕಾಮ ಕ್ರೋಧಗಳಳಿದು ತನ್ನ ಚಿತ್ತಕ್ಕೆ ಸುಖ
ಸ್ತೋಮವಾಗುವ ಸೂಚನೆ ಗ್ರಹಿಸಿ
ನೇಮವಾದ ಭೋಜನ ನಿದ್ರಾ ನಾನಾ ವ್ಯಾಪಾರ
ಭುವಿ ವೊಳಗೆ ನಿರ್ಭಯವೆ ಸರಿ

ಕೋಮಲನಾಗಿ ಮಾಡಿ ಸ್ವಧರ್ಮ ಬಿಡದಲೆ
ಯಾಮ ಯಾಮಕೆ ಹರಿ ನಾರಾಯಣ
ರಾಮಾನಂತ ಗೋವಿಂದ ಅಚ್ಯುತ ಕೃಷ್ಣನೆಂಬೊ
ನಾಮಾಮೃತದಲ್ಲಿ ವೋಲಾಡುತ
ಹೇಮ ರಜತ ರತುನ ಧನಧಾನ್ಯ ಪಶುವ್ರಾತ
ಧಾಮ ಸತಿಸುತರ ಕೇವಲವಾಗಿ
ತಾ ಮುನಿದು ಪೋಗದೆ ನಶ್ವರ ದೇಹದಲ್ಲಿ
ಪ್ರೇಮ ಅನವರತ ಇದ್ದದರೊಳು
ಕಾಮ ಅನುದಿನ ಹೊರ್ತು ಶ್ರೀರಮಣನ್ನ ಪಾದ
ತಾಮರಸದಲ್ಲಿ ಏಕಾಗ್ರದಿ
ಪ್ರೇಮ ಉಳ್ಳವನಾಗಿ ಹರಿ ಪರ ಪರ ಬೊಮ್ಮ
ಕಾಮಾದಿಗಳ ಒಡೆಯ ಸುಲಭನೆಂದು
ಸಮಸ್ತ ವೇದಾತೀತ ನಿರವರಧಿಕ ನಿಗಮ
ತಮ ಸರ್ವ ಭವ ತಾರಕನೀತಾ ನಿತ್ಯ
ನಿಷ್ಕಾಮದಲ್ಲಿಗೆ ಮನಸು ಮಾಡಿ ಪ್ರಮೋದದಿಂದ
ರೋಮಾಂಚನ ಮಹ ಸ್ನೇಹದಿಂದ ಬಿಡದೆ
ಯಾಮಿನಿನಾಥ ವರ್ಣ ವಿಜಯ ವಿಠಲರೇಯ
ಕಾಮಿಸಿದ ಫಲಕೊಡುವನು ಭಕ್ತರಿಗೆ ೧

## ಮಟ್ಟತಾಳ

ತನಗಿಷ್ಟವಾದ ಪ್ರತಿಮೆಯನು ಸುಲ
ಕ್ಷಣ ಉಳ್ಳದೊಂದು ಕ್ಷಿಪ್ರಮತಿಯಲ್ಲಿ
ದಣಿ ದಣಿ ನೋಡುತ್ತ ಮುಂಭಾಗದಲ್ಲಿ ಇಟ್ಟು
ಮಣಿಮಯ ಮಕುಟ ಕಾಂಚನ ತೊಡಗಿಯ ತೊಡಿಸಿ

ಗುಣ ಗಣ ಪೂರ್ಣ ಸಾಕಾರನೆಂದು
ಇನಿತು ಚಿಂತಿಸಿ ಪ್ರತೀಕದೊಳಗೆ ಇದೆ
ನೆನೆದು ತದ್ಗತವಾದ ಮೂರ್ತಿಯ ಮಧ್ಯದಲ್ಲಿ
ಅನಿಲದೇವನ ಸ್ಮರಿಸಿ ಇದರಂತೆ ಯೋ
ಚನೆ ಮಾಡು ವೊಳಗೆ ಚಿನುಮಯ ಕಾಯನ
ನಿನಗೆ ನೀನೆ ತಿಳಿ ದ್ವಯ ಬಿಂಬವ ತರುವಾಯ
ಸನುಮಾರ್ಗವನ್ನೆ ಸು (ಸ) ಜ್ಜನ ದಿಂದಲಿ
ಇನಿತು ಗೋಳಕವೆಂದು ನುಡಿಯದಿರೊ ಮಂದ
ಜನರಿಗೆ ಮಾತುರ ಪೇಳಿದೆ ನೋಡಿರೊ
ಘನ ಜ್ಞಾನಿಗಳೊಡೆಯ ವಿಜಯ ವಿಠಲರೇಯ
ಅನುದಿನ ಯೋಗ್ಯರಿಗೆ ಗೋಚರಿಸುವ ಕಾಣೊ ೨

## ತ್ರಿವಿಡಿತಾಳ

ಎದುರಿಲಿ ಮೂರ್ತಿಯ ಇಟ್ಟು ಪೂಜಿಸಿ ತನ್ನ
ಸದಮಲ ದೃಷ್ಟಿಯಲಿ ನೋಡಿ ನೋಡಿ
ಪದ ಮೂಲ ಪಿಡಿದು ಕಿರೀಟ ಪರಿಯಂತ
ಇದೆ ಇದೆ ಪರಿಯಲ್ಲಿ ನಿರೀಕ್ಷಿಸುತ್ತ
ಸುಧೆಯನ್ನು ಕುಡಿದಂತೆ ಇದ್ದ ಮೂರ್ತಿಯ ಬಾಹಿ
ರದ ಧ್ಯಾನ ಚನ್ನಾಗಿ ನಿಲ್ಲಲಾಗಿ
ಒದಗಿ ವಾಸನಮಯ ಜಡದಿಂದ ನಿರ್ಮಾಣ
ಹೃದಯದೊಳಗೆ ಬೇಗ ಮಾಡಿಕೊಂಡು
ಅದನೆ ಪೂಜಿಸಬೇಕು ಮರಳಿ ಮರಳಿ ಮರಳಿ ಚಿತ್ತದಲ್ಲಿ
ನಿಂದಲ್ಲಿ ಕುಳಿತರೆ ಮಲಗಿದರೆ
ಇದೆ ಇದೆ ಅಭ್ಯಾಸ ಮಾಡಲು ಬಲು ಜ

ನ್ಮದಲ್ಲಿದ್ದ ವಾಸನಮಯ ಮೂರುತಿ
ಪದೊ ಪದಿಗೆ ಸಾಂಗೋಪಾಂಗದಿಂದಲೆ ಪೊಳೆವ
ಎದುರಲಿ ಇಟ್ಟಿದ್ದ ದ್ರವ್ಯದಂತೆ
ಮದನ ಜನಕ ನಮ್ಮ ವಿಜಯ ವಿಠಲರೇಯ
ಇದನೆ ಹಿಂದು ಮಾಡಿ ಹೊಸ ಪರಿ ತೋರಿಸುವಾ ೩

## ಅಟ್ಟತಾಳ

ನಿರುತ ವಾಸನ ಮೂರ್ತಿ ಪೂಜಿಸಲು ಕಾಲ
ಪರಿಪಕ್ವ ಬರಲಾಗಿ ಹರಿಕರುಣದಿಂದ ಗುರುಕೃಪೆ ಮಾಡುವ
ಸರನೆ ಈ ಮೂರ್ತಿ ಇವನ ಕಣ್ಣಿಗೆ ಗೋ
ಚರಿಸೋದು ಈತನೆ ತೋರುವ ಪ್ರಾಜ್ಞಾ ಪೆ
ಸರು ಉಳ್ಳ ಆತ್ಮ ಬಿಂಬ ನಾಮಕನೆಂದು
ಕರಿಸಿಕೊಳ್ಳುತಲಿಪ್ಪ ಕಡೆಮನೆ ಧೊರೆಯೆಂದು
ಶರಣರಿಗೆ ಮಿರಗುವ ಅಂತರಂಗದಲ್ಲಿ
ಅರಿದೆ ಅವನ ಯೋಗ್ಯತವನ್ನೆ ಪಸರಿಸಿ
ಪರಮ ಪುರುಷ ನಮ್ಮ ವಿಜಯ ವಿಠ್ಠಲ ಮುಂದೆ
ಕುರುಹ ತೋರುವ ನಿಜ ಸ್ವರೂಪದೇವನ್ನಾ ೪

## ಆದಿತಾಳ

ಜೀವಾಂತರ್ಗತವಾದ ಮೂರ್ತಿಯೆ ತಾನಾಗಿ
ಆವಾಗ ಪೊಳೆಯಲು ಸಂಚಿತಾಗಾಮಿ ಕರ್ಮ
ಬೇವೋದು ಅನುಭವಿಸಿ ಪ್ರಾರಬ್ಧ ಕರ್ಮಂಗಳೆಲ್ಲ
ನೋವು ಸುಖವಾದರು ಉಂಡು ತೀರಿಸಬೇಕು
ಆ ವಿರಜಾನದಿಯಲ್ಲಿ ಮುಳುಗುವ ಪರಿಯಂತ

ತ್ರಿ ವಿಧ ಯೆನಿಸುವ ದೇಹ ನಾಶವಿಲ್ಲ
ದೇವನ ಲೀಲೆಯಂತೊ ಅಧಿಕಾರ ಭೇದದಿಂದ
ತಾ ಒಳಗಿದ್ದು ಸರ್ವಬಗಿಯನ್ನು ಮಾಡಿಸುವ
ಪಾವನ ಜೀವಕ್ಕೆ ತಮಸ್ಸು ಎಂದಿಗೂ ಇಲ್ಲ
ಕೋವಿದರು ಕೇಳಿ ಕೌತಕವೆನ್ನದಿರಿ
ಶ್ರೀ ವಲ್ಲಭ ನಮ್ಮ ವಿಜಯ ವಿಠಲರೇಯ
ಜೀವರ ಸ್ವರೂಪದಂತೆ ಧ್ಯಾನವ ಕೊಡುವಾ ೫

ಜತೆ

ಆಚಾರವಂತನಾಗಿ ಧ್ಯಾನಮಾಡಲಿಬೇಕು
ರೋಚನ ಪ್ರೀಯ ವಿಜಯ ವಿಠಲನ್ನ ಮೂರ್ತಿಗಳ ೬

## ೮೮

### ಧ್ರುವತಾಳ

ಸಾಮೋಪಾಸನೆ ಮಾಡು ಶುದ್ಧಾಂತಃಕರಣದಲ್ಲಿ
ಸಮಸ್ತ ಬೊಮ್ಮಾಂಡವನ್ನೆ ತಿಳಿದೂ
ಶ್ಯಾಮ ಶಬಲವರ್ಣ ಇದ್ದ ಬಿಂಬ ಮೂರ್ತಿಯ
ಭೂಮಾದಿ ಗುಣಗಳಿಂದ ಹರಿಯ ಒಲಿಸೊ
ನೇಮ ನಿತ್ಯದಲ್ಲಿ ನಿಸ್ಸಂಗನಾಗಿ ಇದೆ
ಕಾಮಿಸು ಕಾಲ ಕಾಲಕ್ಕೆ ಯೋಗಮಾರ್ಗ
ಕಾಮಿನಿ ಮೊದಲಾದ ಭೋಗ ಭಾಗಗಳೆಲ್ಲ
ಶ್ರೀ ಮನೋಹರ ವಿಷ್ಣು ಸರ್ವೋತ್ತಮ
ರೋಮ ರೋಮಾಂತರದಿ ಮುಕ್ತಾ ಮುಕ್ತರವಿಟ್ಟು

ಸ್ವಾಮಿ ಮಮ ಸ್ವಾಮಿ ಸರ್ವಸ್ವಾಮಿ
ತಾಮಸ ತಾಮಸ ನಿರ್ಲೇಪ ತಾತ್ವಿಕ ಸಾತ್ವಿಕ
ಸಾಮಗಾಯನ ಪ್ರಿಯ ಭೂತಸ್ಥನೆ
ಪ್ರೇಮ ಪರಮನೆಂದು ಹಿಂಕಾರಾದಿ ಪಂಚ
ಸಾಮಾದಿ ಉಪದ್ರವ ಇಂತು ಗ್ರಹಿಸೊ
ಈ ಮಾತಿಗೆ ಪ್ರದ್ಯುಮ್ನ ವಾಸುದೇವ ನಾರಾಯಣ
ನಾಮಾ ಅನಿರುದ್ಧ ಸಂಕರುಷಣ ವರಹಾ
ನೃಮೃಗ ಸಪ್ತ ಭಗವದ್ರೂಪಗಳು ಅಲ್ಲಿಗಲ್ಲಿ
ನೀ ಮುದದಲ್ಲಿ ಧ್ಯಾನವ ಮಾಡೋ
ಧೂಮರಹಿತ ಅಗ್ನಿಯಂತಾಹನೊ
ಕಾಮಕ್ರೋಧಗಳೆಲ್ಲ ದಹಿಸಿ ಭಸ್ಮ ಮಾಡುವ
ಆ ಮೃತ್ಯು ಮಾರಿಗಳು ಭೃತ್ಯರಾಹರೊ
ಹೇಮ ವರ್ಣದಂತೆ ಪೊಳೆವ ಸಜ್ಜನರೊಡನೆ
ಭೂಮಿಯೊಳಗೆ ಅಪ್ರತಿಮಾ ನವಾ
ಭೀಮ ಭವ ವಾರಧಿ ಆವಾಗ ಗೋವತ್ಸ ಪಾದೋದಕ
ಸಾಮಿಪ್ಯದಲ್ಲಿ ಕಾಣಿಸುತಿಪ್ಪದೊ
ಶ್ಯಾಮ ಶಬಲವರ್ಣ ದೇವನೆ ಅತ್ಯಣುನಿ
ಸ್ತೀಮ ಇಂದ್ರಿಯಗಳಿಗಾಗೋಚರ ಪುರುಷ
ವ್ಯಾಮೋಹ ಪುಟ್ಟಿಸುವ ಈತನೆ ಇಷ್ಟ ದೈವ
ಕೋಮಲ ಗಾತುರು ಬಲು ಸುಲಭ
ಸಾಮಸ್ತ ವ್ಯಾಪ್ತ ವಿಶಿಷ್ಟಾವರಣ ಲಕುಮಿ ಮೀರಿ
ಸ್ವಾಮಿಯ ದಯದಿಂದಲಿ (ಸಾಮದಿಂದಲಿ)ಸ್ವಮಹಿಮ ಕಾಣೊ
ವ್ಯೋಮ ಕಾಲ ವೇದ ಗುಣ ಜೀವರಾಶಿ ತ್ರಿವಿಧ
ಈ ಮಾತಿನಂತೆ ಸರ್ವದ ಎಣಿಸೊ

ಸಾಮೋಪಾಸನೆ ಇದೆ ಮಾಡೊ ಮನುಜಾ
ಸಾಮವಂದಿತ ನಮ್ಮ ವಿಜಯ ವಿಠಲರೇಯಾ
ಕಾಮಿಸಿದಂತೆ ಫಲವ ಕೊಡುತಿಪ್ಪನೊ

### ಮಟ್ಟತಾಳ

ಓಂಕಾರ ಪ್ರದ್ಯುಮ್ನ ಪ್ರಸ್ಥಾವ ವಾಸುದೇವ
ಉದ್ಗೀಥ ನಾರಾಯಣ ಪ್ರತಿಹಾರ ಅನಿರುದ್ಧ
ಸಂಕರುಷಣ ನಿಧನ ಈ ಪರಿ ಪಂಚ ಸಮ
ಶಂಕೆ ಇಲ್ಲದೆ ಜನರು ಕೊಂಡಾಡಿ ಭಕುತಿಯಲಿ
ಮಂಕು ಬುದ್ಧಿ ಬಲು ದೂರಾಗಿ ಪೋಗುವದು
ಸಂಕಟ ತೊಲಗುವುದು ದೇಹದೊಳಗಿದ್ದ
ಓಂಕಾರ ಮೂರ್ತಿ ವಿಜಯ ವಿಠಲನಲ್ಲಿ ಅ
ಲಂಕಾರನಾಗಿ ಪೂಜಿಪ ಜೀವ ಹೃದ್ಗತನಾ ೨

### ತ್ರಿವಿಡಿ ತಾಳ

ಬಿಂಬೋಪಾಸನೆ ಮಾಡು ಭಕುತಿ ಪೂರ್ವಕದಿಂದ
ಡಂಭಕವನೆ ತೊರೆದು ತ್ರೀವ್ರದಲ್ಲಿ
ಡಿಂಬಾದೊಳಗೆ ಇದ್ದ ಹೃದಯಸ್ತ ಮೂರ್ತಿಯ
ಬೆಂಬಿಡದೆ ನೋಡುವುದು ಬಹು ಪ್ರಕಾರ
ನಂಬು ಸಂತತ ಸಂಯೋಗ ಮೊದಲಾವರ್ತಿಲಿ
ಹೊಂಬಂಣ ವರ್ಣನು ಆ ತರುವಾಯ
ಕಂಬ ಮೂರ್ತಿಗಳ ಪೆಸರು ಕೇಳು ಶ್ರೀ ವಿಷ್ಣು
ಅಂಬುಜ ಸಂಭವ ರುದ್ರನಾಮಾ
ಇಂಬಾಗಿ ಇಪ್ಪದು ಪರಿಚ್ಛೇದ ತ್ರಯದಲ್ಲಿ

ಅಂಬುಧಿ ನಂದನೆ ಲಕುಮಿವಾಣಿ
ಅಂಬಿಕ ನಾಮಾದಲ್ಲಿ ತತ್ತ ಸ್ಥಾನದೆಡಿಯಾ
ಬೆಂಬಲವಾಗಿ ಪಾಲಿಸು ತಿಪ್ಪಳು
ತುಂಬದ ಪ್ರಕೃತಿ ಗುಣ ಸಾಮ್ಯ ಪರಮಾಣುಗಳು
ಎಂಬೊವು ಒಂದೊಂದಾನಂತ ಮಿಳಿತ
ಇಂಬುಗೊಂಡಿಹುದು ಅವ್ಯಕ್ತದಿ ಮನ
ಅಂಬಕ ಮಿಕ್ಕಾದ ದಶ ಕರಣ
ಅಂಬರಾದಿ ಭೂತ ಪಂಚ ತನ್ಮಾತ್ರಿಗಳು
ಎಂಬ ತತ್ವಗಳು ಇಪ್ಪತ್ತುನಾಲ್ಕು
ತುಂಬಿದ ಚಿತ್ತದಲ್ಲಿ ವಿಚರಿಸಿಹರು
ಷಾಂಬುಧಿಯೊಳಗಿರು ಹಗಲಿರಳು
ಶಂಬರಾರಿ ಜನಕ ವಿಜಯ ವಿಠಲರೇಯ
ನಂಬಿದ ಭಕ್ತರಿಗೆ ನಾನಾ ಪರಿ ೩

## ಅಟ್ಟತಾಳ

ಗುಣ ಕಾಲ ದೇಶವು ಕರ್ಮ ನಾನಾ ಜೀವಾ
ನೆನೆಸೋದು ಅನಾದಿಯಿಂದ ಸಿದ್ಧವೆಂದು
ಎಣಿಸಿ ಕಾರ್ಯಗಳೆಲ್ಲ ಸೂಕ್ಷ್ಮ ಸ್ಥೂಲ ಬಹು
ಗಣನೆ ಇಲ್ಲದೆ ಬೊಮ್ಮಾಂಡ ಬಾಹ್ಯಾಂತರ
ಕ್ಷಣ ಬಿಡದಲೆ ಸಾಮ ವಿದ್ಯವನು ಗ್ರಹಿಸಿ
ಇನ ಮಂಡಲದಲ್ಲಿ ಉಪಾಸನೆ ಹೃ
ದ್ವನಜದಲ್ಲಿ ಇದೆ ವಿಧದಲ್ಲಿ ತಿಳಿದು
ಗುಣವಂತನಾಗು ಭವ ಭೀಜವ ನೀಗು
ತೃಣ ಮೊದಲಾದ ದ್ರವ್ಯದಲ್ಲಿ ಯೋಚಿಸು

ಗುಣಗಣ ಪೂರ್ಣ ಶ್ರೀ ವಿಜಯ ವಿಠಲನ್ನ
ಮನ ಮೆಚ್ಚಾ ಭಜಿಸಿ ಮಹಾತ್ಮರ ಸೇರೊ ೪

## ಆದಿತಾಳ

ಒಂದೆರಡು ಮೂರು ನಾಲ್ಕು
ಮುಂದೈದು ಅರೇಳೆಂಟು
ನಂದಾನ ಹತ್ತು ಹನ್ನೊಂದು ಹನ್ನೆರಡು ಇಂ
ತೆಂದು ಈ ಪರಿ ಇಪ್ಪತ್ತೆರಡರ ಪರಿ ಯಂತಸು
ನಂದದಿಂದಲಿ ಎಣಿಸಿ ಸಾಮೋಪಾಸನೆ ಮಾಡು
ಕುಂದದಲೆ ಕೇಶವಾದಿ ಮತ್ಸ್ಯಾದಿ ವಾಸುದೇವ
ವಂದಿಸಿ ಇನಿತು ನಿತ್ಯ ಕೊಂಡಾಡಿ ಕಂಡಲ್ಲಿ
ನಿಂದಲ್ಲಿ ಧ್ಯಾನಮಾಡು ಸ್ಮರಿಸು ವಿವೇಕನಾಗಿ
ಎಂದೆಂದಿಗೆ ಕೇಳು ಪಾಪಲೇಪವೆ ಇಲ್ಲಾ
ಬಂಧನ ಪರಿಹಾರ ಭಕುತಿ ಮಾತುರ ಮಾಡು
ನಂದ ಮೂರುತಿ ನಮ್ಮ ವಿಜಯ ವಿಠಲರೇಯ
ಬಂದು ಹೃತ್ಕಮಲದಲ್ಲಿ ಸುಳಿದಾಡುವ ನಲಿದು ೫

## ಜತೆ

ಸಕಲಬಗೆಯಿಂದ ಸಾಮವಂತನಾಗು
ರುಕುಮಣಿಪತಿ ವಿಜಯ ವಿಠಲನ್ನ ಸ್ಮರಿಸು ೬

## ೮೯

## ಧ್ರುವತಾಳ

ಸುಧಾಂಬುಧಿ ಮಧ್ಯ ಈರೈದು ದಶ ಲಕ್ಷ ಗಾ
ವುದ ಮಿತಿ ವಿಸ್ತಾರ ಶ್ವೇತ ದ್ವೀಪ ।

ಅದರೊಳು ತ್ರಿ ಭಾಗ ಈರಾರು ವೊಂದೆಂಟು ।
ಭೂ ದುರ್ಗ ಶ್ರೀ ಭಾಗ ವೆಂಟು ಲಕ್ಷ ।
ಉದಧಿ ಎರಡು ಉಂಟು ಅರಣ್ಯ ವೆಂ ।
ಬುದರಗಲಾ ಲಕ್ಷ ವೊಂದೊಂದು ಗಾವುದ ।
ವಿದಿತದಿಂದಲಿ ಶ್ರೀ ಭಾಗದೊಳಗೆ ಲಕ್ಷ ।
ತದನಂತರದಲ್ಲಿ ಹೊ ಕದ ಲಕ್ಷ ದ್ವಯದೊಳು ।
ಪದುಮ ನಿಭೇಕ್ಷಣ ವಿಜಯ ವಿಠ್ಠಲನು ।
ಮದುವಣಿಗನಾಗಿ ಶ್ರೀ ಭಾಗದೊಳಿಪ್ಪ ೧

## ಮಟ್ಟತಾಳ

ಲಕ್ಷತ್ರಯ ಗಾವುದ ರನ್ನ ಮಂಚ ।
ಚಕ್ಷು ಶ್ರವನು ಅದರ ಪರಿಮಿತಿ ।
ಲಕ್ಷ ದ್ವಯ ಸಾರ್ಧ ಗಾವುದ ಉನ್ನತ ।
ಅಕ್ಷರ ಪುರುಷ [ಸಿತ] ವಾಸುದೇವ ।
ಅಕ್ಷ (ಯ) ಮೂರುತಿ ಪವಡಿಸಿ ನಲಿವ ।
ದಕ್ಷಣನಾಮಾ ವಿಜಯ ವಿಠ್ಠಲ ।
ಕುಕ್ಷಿಯೊಳು ತ್ರಿಭುವನ ತಾಳುವ ।
ಮೋಕ್ಷಾದ್ಯರಿಗೆ ಈತನ ಸಿದ್ಧ ೨

## ತ್ರಿವಿಡಿ ತಾಳ

ವರ ಮೂರ್ತಿ ಎರಡುವರೆ ಲಕ್ಷಯೋಜನದುದ್ಧ ।
ಪರಿಯಂಕದಲಿ ವಿಗ್ರಹದ ವಿವರ ।
ಚರಣದುನ್ನತ ಗಾವುದ ಮೂವತ್ತಾರು ಸಾ ।
ಸಿರ ಮೇಲೆ ಕಟಿ ಪರಿಯಂತರ ಲಕ್ಷ ।

ಪರಿಮಿತನಾಭಿ ಅಲ್ಲಿಗೆ ಹದಿನೆಂಟು ಸಾ ।
ಸಿರಗಾವುದ ಮತ್ತೆ ವಕ್ಷ ಉದರ (ಉರ) ಸಹ ।
ಅರಿವದು ಐವತ್ತೆರೆಡು ಸಾವಿರ ಎಪ್ಪ ।
ತ್ತೆರಡು ಸಾವಿರ ಮುಖ ನಯನ ಸಾಹಸ್ರ ಈ ವಿ ।
ವರದಿರುವ ಬಗೆ ತಿಳಿದು ಬೃಹತಿ ವಿಜಯ ವಿಠ್ಠಲ್ಲ ।
ಪರದೈವವೆಂದು ಸ್ಮರಿಸಿರಿ ನಿರುತ ಸಾರಿ

## ಅಟ್ಟತಾಳ

ಮುನ್ನೂರ ಯೋಜನ ಲಲಾಟದಲಿ ಸಂಖೆ ।
ಕರ್ನಗಳು ಎರಡು ಒಂದೊಂದು ಸಾವಿರ ।
ಕಣ್ಣು ದ್ವಯಂಗಳು ಕರ್ನದ ಪರಿಮಿತಿ ।
ಚನ್ನ ಭ್ರೂಗಳ ದ್ವಯ ಸಾವಿರ ಒಂದೊಂದು ।
ಇನ್ನೇನು ಉಸುರುವೆ ನಾಶಿಕ ಕೂಡಿಸಿ ।
ಮುನ್ನೂರು ಗಾವುದವೆಂಬೋದು ।
ಪುಣ್ಯ ಶ್ರವಣ ಕೀರ್ತಿ ವಿಜಯ ವಿಠ್ಠಲನ್ನ ।
ಅನಂತ ಶಯನನ್ನ ಆದಿ ಮೂರುತಿಯು ೪

## ಆದಿತಾಳ

ಬಾಹುಗಳು ಯೆರಡುಲಕ್ಷ ಒಂದೊಂದು ಪರಿಮಿತಿ ।
ಸಾಹಸ್ರಗಾವುದ ಏನ್ನತ ಒಂದೊಂದು ಬೆರಳ್ಗಳು ।
ಮೋಹನ ದಿವ್ಯ ಮಂಟಪ ಯೇಳುಲಕ್ಷ ಗಾವುದು ।
ಮಾಹ ವಿಮಾನ ವುನ್ನತ ಲಕ್ಷ ಐವತ್ತೊಂದ್ಯೋ ಜನ ।
ಮಹ ವೀರ್ಯಾ ವಿಜಯ ವಿಠಲ ವಾಸವಾಗಿ ತಾನೆ ವ್ಯಾಪಿಸಿ ।
ಮಹಿಯೊಳು ಬಂದು ಮೆರೆವ ಕ್ಷೀರವಾರಿಧಿ ಶಯನ ೫

## ಜತೆ

ಜಂಭಾರಿ ಶಂಭು ಸ್ವಾಯಂಭು ನಿರ್ಜರ ಹೃದಯ ।
ಅಂಬುಜವಾಸ ಲಕ್ಷೀಶ ವಿಜಯ ವಿಠಲ ೬

# ೯೦

## ಧ್ರುವತಾಳ

ಹತ್ತೈದು ವಿಂಶತಿ ಮ್ಯಾಲೆರಡು ಸಾವಿರ ।
ಮತ್ತೆ ನೂರೊಂದು ನಾಡಿ ದೇಹದೊಳಗೆ ।
ತಥ್ಥಳಿಸುತಿಪ್ಪದು ಬಲಸವ್ಯ ವಿಡಿದು ಯಿ ।
ನ್ನಿತ್ತು ಕೇಳುವುದು ನಾಡಿಗಳ ಶಾಖಾ ।
ಹತ್ತು ಹತ್ತೊಂದು ಮುಖ್ಯ ನಾಡಿಯ ನೂರರಿಂದ ।
ಬಿತ್ತರಿಸಿ ಗುಣಿಸೆ ಅಯುತ ನೂರು ।
ಸತ್ಯವಾಯಿತು ನೋಡಿ ಇದಕೆ ವಿವರವುಂಟು ।
ಉತ್ತಮ ಗುಣದವರು ತಿಳಿಯಬೇಕು ।
ಹತ್ತು ಹತ್ತು ಗುಣಿಸಿ ಅದನ್ನು ಅಷ್ಟರಿಂದ ।
ಜತ್ತಾಗಿ ಹೆಚ್ಚಿಸಲು ಸಾವಿರವಹುದು ।
ಇತ್ತ ಮುಂದಕೆ ನೂರು ಇಟ್ಟುಕೊಂಡು ಒಂ
ಭತ್ತರಿಂದಲಿ ಗುಣಿಸೆ ಒಂಭತ್ತು ನೂರು ।
ಸುತ್ತದಿರಿ ಇನ್ನು ತ್ರಯನೂರು ಎಂಟರಿಂದ ।
ಚಿತ್ತದಲ್ಲಿ ಗುಣಿಸೆ ಆದಾದಿ ದಕೊ ಇ ।
ಪ್ಪತ್ತು ನಾಲ್ಕು ನೂರು ಆ ತರುವಾಯ ಒಂ ।
ಭತ್ತು ಸಾವಿರದ ಆರುನೂರು ।
ಆರ್ಥಿಯಿಂದಲೆ ಇದೆ ಆರಾರಿಂದ ಗುಣಿಸೆ ।
ಹತ್ತೈದು ಯೇಳು ಸಾವಿರಾರು ನೂರು ।
ಇತ್ತಂಡದಿಂದ ಪೂರ್ವೋತ್ತರ ನೋಡೆ ಅರ ।
ವತ್ತೊಂದು ಸಾವಿರೆಂಟೊಂದು ನೂರು ।
ಮತ್ತೆ ಇದರ ಕೆಳಗೆ ಮ್ಯಾಲಿನ ಅಯುತ ನೂರು (೧೦೧೦೦)
ಇತ್ತರೆ ಸಪ್ತೆರಡು ಆ ಅಯುತನಾಡಿಯು
ನಿತ್ಯವೆಸರಿಯೆದಕೆ ನೂರೆಂದು ಮುಖ್ಯನಾಡಿ ।

ತತ್ತಳಗೊಳ್ಳದಲೆ ಕೂಡಿಸಲು ।
ಮತ್ತೆ ವುಳ್ಳದಕೆ ಹೆಚ್ಚುವಾದಿಷ್ಟೆ ನಾಡಿಗಳು ।
ಮರ್ತ ಲೋಕದ ಜನರು ಗುಣಿಸಿದರು ।
ಅತ್ಯಂತ ಮಹಿಮಾ ನಮ್ಮ ವಿಜಯ ವಿಠ್ಠಲರೇಯ ।
ಸ್ತೋತ್ರ ಮಾಡಿದವರ ಮನಕೆ ಇಂತು ತಿಳಿಪುವಾ

## ಮಟ್ಟತಾಳ

ಇನಿತು ನಾಡಿಯ ಶಾಖ ಭೇದವನ್ನೆ ತಿಳಿದು ।
ಗುಣಿಸುವರು ನಿತ್ಯ ಸಕಲರು ಮನದಲ್ಲಿ ।
ಇನಿತರೊಳಗೆ ಮುಖ್ಯ ನೂರೊಂದು ನಾಡಿ ।
ಅನಿತರ ಮಧ್ಯದಲಿ ಕೇವಲ ಪೆಸರಾಗಿ ।
ಮಿನಗುತಿಪ್ಪವು ದ್ವಾದಶ ನಾಡಿಗಳಲ್ಲಿ ।
ಕೊನೆ ಮೊದಲೊಂದಾಗಿ ನವ ದ್ವಾರವೆ ವಿಡಿದು ।
ಘನನಾಡಿವೊಂದೆ ಅಡಿ ಅಂಬರವ್ಯಾಪ್ತಿ ।
ತನುವು ವ್ಯಾಪಿಸಿ ಕೊಂಡದು ಒಂದು ನಾಡಿ ।
ಯನು ತಿಳಿವದು ಒಂದೆನಾಡಿಯು ಒಂದೇ ತಾ ।
ವಿನಲಿ ಪೊಂದಿಪ್ಪದು ತಿಳಿದರೆ ಬಲು ಸುಲಭ ।
ಕ್ಷಣ ಬಿಡದಲೆ ಕಾವ ವಿಜಯ ವಿಠ್ಠಲರೇಯ ।
ಚಿನುಮಯನಾಗಿ ಕಾಣಿಸುವನು ಒಂದರಲ್ಲಿ ೨

## ತ್ರಿವಿಡಿ ತಾಳ

ಒಂದೊಂದು ನಾಡಿಯಲಿ ಒಂದೊಂದು ನದಿಗಳು ।
ಕುಂದದೆ ಉಂಟು ಹನ್ನೆರಡರಲ್ಲಿ ।
ಮಂದಾಕಿನಿ ೧ ಇಡಾ ನಾಡಿಯಲ್ಲಿ ಭಾನು ।
ನಂದನೆ ೨ ಪಿಂಗಳಾನಾಡಿಯಲ್ಲಿ ।
೩ ಗಾಂಧಾರಿಯಲಿ ವುಂಟು ಕಾವೇರಿ ೪ ಹಸ್ತಿನಿಗೆ ।
ಸಿಂಧು ನದಿಯೆನ್ನಿ ತಾಮ್ರಪರ್ಣಿ ।

ಸಂದಿದೆ ಬಹು ಬಗೆ ೫ [ಸಂ] ಖು ಶಿನಾಡಿಯಲ್ಲಿ ।
ಛಂದುಳ್ಳ ಗೋಮತಿ ೬ ಮಧ್ಯನಾಡಿ ।
ಯಿಂದ ಗಂಡಿಕೆನೋಡಿ ೭ ಸರಸ್ವತಿ ನಾಡಿಯಲ್ಲಿ ।
೮ ನಂದ ಕೃಷ್ಣವೇಣಿ ೯ ಕುಹದಿ ಸೋಮ ।
ನಂದನೆ ತಪತಿ ೧೦ ಶಂಖಿನಿ ನಾಡಿಯಲ್ಲಿ ವಾಸ ।
ವೆಂದು ತಿಳಿಯೊ ಗೋದೆ ೧೧ ವಾರುಣಿ ನಾಡಿಯಲ್ಲಿ ।
ಅಂದವಾದ ೧೨ ಪೂರ್ಣ ಪೂರ್ಣ ಪಯಶ್ವಿನಿ ।
ಯಿಂದ ಪುಟ್ಟಿಪದು ಅಲ್ಲಿಗಲ್ಲಿ ।
ಪೊಂದಿ ಕೊಂಡಿಪ್ಪವು ಜ್ಞಾನಿಗಳು ಸ್ತುತಿಸಿ ।
ಎಂದು ಪರಮ ಪದವಿಯ ಪಡಕೊಂಬುವರೊ ।
ವೃಂದಾರಕ ವಂದ್ಯ ವಿಜಯ ವಿಠ್ಠಲರೇಯನ ।
ಸಂದುರಶನ ಮಾಳ್ಪ ಮಾಹತ್ಮ ಬಲ್ಲನು

## ಅಟ್ಟತಾಳ

ಮಹತತ್ವಾತ್ಮಕ ಬಲಭಾಗದ ನಾಡಿ ।
ಮಹದೇವತತ್ವಾತ್ಮಕ ಎಡಗಡೆ ನಾಡಿ ।
ಇಹದನು ನೋಡಿ ಇವಕಿಟಕೆ ಮಾನಿಗಳುಂಟು ।
ಆ ಹಿರಣ್ಯೋಧರ ವಾಯು ಇವರ ಪತ್ನಿ ।
ಮಹಕೇಶ ಸರ್ಪ ಖಗೇಶ್ವರ ತರುವಾಯ ।
ರೋಹಿಣಿ ನೀಲ ಮೊದಲಾದ ಸತಿಯರು ।
ಶ್ರೀಹರಿಗೆ ಹೆಂಡರು ಕಾಣೊ ತಿಳಿವದು ।
ಗುಹನ ಜನನಿ ವಾರುಣಿ ಸೌಪರಣಿಯು ।
ಮೋಹದಿಂದಲಿ ನಾಡಿ ನಾಡಿಯಲಿಪ್ಪರು ।
ರಹಸ್ಯವಿದು ಬಿಚ್ಚಿ ಬಿಸಾಟದಿರು ।
ಕುಹಕರಿಗೆ ಪೇಳಿದರೆ ಫಲಿಸದು ।
ಮೋಹನ ಮೂರುತಿ ನಮ್ಮ ವಿಜಯ ವಿಠ್ಠಲರೇಯ ।
ಇಹನೊ ಜ್ಞಾನಾನಂದ ಮಯನಾಗಿ ೪

### ಆದಿತಾಳ

ಪೊಕ್ಕಳ ಭಾಗದಿಂದ ನಾಡಿಗಳೊಂದೊಂದು ।
ದಿಕ್ಕಿಗೆ ಪೋಗಿಪ್ಪವು ಶೋಧಿಸಿ ನೋಡುವದು ।
ಮುಕ್ಕಣ್ಣನುತ ವಾಯು ನಿತ್ಯ ಜೀವಿಗಳ ।
ತಕ್ಕು ವ್ಯಾಪಾರವ ಮಾಡುವ ಬಿಡದೆ ದೇ ।
ವಕ್ಕಳ ಕೂಡತಾನೆ ಹರಿ ಪ್ರೇರಣೆಯಿಂದ ।
ಭಕ್ತಿ ಭುಕ್ತಿಯ ಕೊಡುವ ವಂದನೇಕ ರೂಪನಾಗಿ ।
ಸಿಕ್ಕು ಗೊಡನು ತನ್ನ ಭಕ್ತರ ನರಕದಲ್ಲಿ ।
ರಕ್ಕಸಗಣಕೆ ಕುವೃತ್ತಿಯ ಪ್ರೇರಿಸಿ ।
ಕಕ್ಕಸಗತಿಯಲ್ಲಿ ಸೇರಿಸುವ ಹರುಷದಲ್ಲಿ ।
ಸೊಕ್ಕಿದವರ ಗಂಡ ವಿಜಯ ವಿಠ್ಠಲರೇಯ ।
ದಕ್ಕುವ ಯಿದರಂತೆ ಧೇನಿಪಸುಜನರಿಗೆ ೫

### ಜತೆ

ನಾಡಿ ಪ್ರಕರಣವನು ತಿಳಿದು ಕೊಂಡಾಡಲು
ಗೂಡಿನೊಳಗಿದ್ದಂಥ ವಿಜಯ ವಿಠ್ಠಲ ಒಲಿವ ೬

## ೯೧

### ಧ್ರುವತಾಳ

ಹರಿಯಾರ್ಚನೆಯ ಮಾಡು ಹರುಷದಿಂದಲಿ ಮನವೆ
ನಿರುತ ಯೋಚಿಸು ನಿನ್ನೊಳಗೆ ನೀನು
ಧರಣಿ ಮೇಲಿದ್ದ ಪುಷ್ಪಫಲ ಉದಕಾದಿಯಿಂದ
ಪರಿಪರಿ ಪೂಜೆಯನ್ನು ಮಾಡಿದರೂ

ಹಿರಿದಾಗಿ ಜ್ಞಾನ ನಿನಗೆ ಪುಟ್ಟಿದು ಕಾಣೊ ನಿಂ
ದಿರದು ಈ ಪುಣ್ಯ ಮೇಲುಗತಿ ಮಾರ್ಗಕೆ
ಬರಿದಾಗಿ ಪೋಗುವುದು ಸಂತತ ತಿಳಿವುದು
ಹರಣಾ ಬಳಲಿಪಲಾಗದು ಸುತ್ತಿ ಸುತ್ತಿ
ಕುರುಡನ್ನ ಕೈಯ ಪಿಡಿದು ಕುರುಡ ಪೋದಂತೆಯೊ
ಪರಮ ಭಕುತಿ ಜ್ಞಾನ ವೈರಾಗ್ಯವ
ದೊರಿಯದೆ ಬಗೆ ಬಗೆ ಪೂಜಿಸಿ ಹಾರಿದರು
ಸ್ಪರುಶ ವಾಗದು ಕಾಣೊ ಪುಣ್ಯ ಜನರ
ಸಿರಿ ಸತ್ವ ವಿಡಿದು ಗುಣಿಸು ಶನ್ಯೆಶ್ವರ ತತ್ವ
ಪರಿಯಂತ ಹರಿವ್ಯಾಪ್ತಿಗಲ್ಲಿಗಲ್ಲಿ
ಪರಮರೂಪಗಳುಂಟು ಒಂದಾನಂತವಾಗಿ
ಮಿರುಗುತಿವೆ ನೋಡು ಭೇದವಿಲ್ಲಾ
ಸುರಗಣನುತ ವಿಜಯ ವಿಠ್ಠಲರೇಯನ
ಚರಣಾರ್ಚನೆ ಮಾಡಲು ಸರ್ವ ಲೋಕವೆ ತೃಪ್ತಿ ೧

## ಮಟ್ಟತಾಳ

ಒಂದು ಬಿಂದೋದಕ ಒಂದು ತುಲಸಿ ಪತ್ರ
ಒಂದು ಫಲವು ಮತ್ತೊಂದು ಮಂಗಳಾರ್ತಿ
ಒಂದು ಧೂಪಾರತಿ ಒಂದು ಚರವು ಅನ್ನ
ಒಂದು ಸ್ತೋತ್ರದ ಪಠಣೆ
ಒಂದು ವಂದನೆ ಒಂದೇ ನಮಸ್ಕಾರವನ್ನು
ನಂದದಿಂದಲಿ ಮಾಡೆ ಕುಂದದೆ ಶ್ರೀ ಹರಿ
ಮಂದಹಾಸದಲಿಂದ
ಚಂದವಾಗಿ ಒಲಿದು ನಿಂದಿರದೆ ಕೊಂಬ
ಸಿಂಧುಶಯನ ನಮ್ಮ ವಿಜಯ ವಿಠ್ಠಲರೇಯನ
ಒಂದು ಮೂರುತಿಗೀಯೆ ಬಲು ರೂಪಕೆ ಉಂಟು ೨

## ತ್ರಿವಿಡಿ ತಾಳ

ಒಬ್ಬ ಮನುಜ ತಾನು ಸಭೆಯೊಳಗೆ ಕುಳಿತು
ಶಬ್ದ ನುಡಿದರೆ ಸರ್ವರು ಕೇಳಿದಂತೇವೆ
ಅಬ್ಜನಾಭನ್ನ ಒಂದು ಮೂರುತಿಗೆ
ತಬ್ಬಿಬ್ಬು ಕೊಳದಲೆ ಉದಕಗಳಿಂದ
ಉಬ್ಬಿ ಉತ್ಸಹದಲ್ಲಿ ಪೂಜೆಯ ಮಾಡಿದರೆ
ದಭ್ರ ಬಿಡದಲೆ ಹರಿ ಸರ್ವರೂಪಗಳಿಂದ
ನಿಬ್ಬಡೆಯಾಗಿ ಮೊಪ್ಪುಗೊಂಡು ಕೃಪೆಯಿಂದ
ಹಬ್ಬಿದ ಕರ್ಮಗಳಿಂದ ಕಡೆಗೆ ಮಾಡಿ
ಒಬ್ಬಗೆ ಗತಿಯನ್ನು ಕೊಡುವ ವೇಗದಲ್ಲಿ
ಶಬ್ಧಗೋಚರ ನಮ್ಮ ವಿಜಯ ವಿಠ್ಠಲನಂಘ್ರಿ
ಅಬ್ಜವ ನೆನದವಂಗೆ ಆವಾಗ ಫಲವಕ್ಕು ೩

## ಅಟ್ಟತಾಳ

ಪದೋಪದಿಗೆ ನಿನ್ನ ಹೃದಯದೊಳಗೆ ಧ್ಯಾನ
ಮುದದಿಂದ ಮಾಡೋದು
ಪದುಮನಾಭನ ವ್ಯಾಪ್ತಿ ಅಖಂಡದಲ್ಲಿ ಉಂಟು
ಅದರ ತರುವಾಯ ಸಿರಿ ಅಜಭವ ಇಂದ್ರ
ಮದನ ವಿಡಿದು ಶನೇಶ್ವರ ವ್ಯಾಪ್ತಿ ತಿಳಿದು ನಿ
ಲ್ಲದೆ ಇವರ ಪೂಜೆ ಆವಾವ ಬಗೆಯಿಂದ
ಉದಯಾಸ್ತಮಾನ ಪರಿಯಂತ ರಚಿಸಲು
ಇದೆ ಇದೆ ತತ್ವೇಶರ ವ್ಯಾಪ್ತಿ ಪರಿಯಂತಾ
ಸದಮಲವಾಗಿ ಮುಟ್ಟುವದೆಂದು ಧ್ಯಾನಿಸಿ
ಪದವಿಗೆ ಸೋಪಾನ ವೇಗದಿಂದಾಗೋದು
ಚದುರ ಮೂರ್ತಿ ನಮ್ಮ ವಿಜಯ ವಿಠ್ಠಲರೇಯ
ನೆನೆದರೆ ಕೈಕೊಂಡು ಸರ್ವರಿಗೀವಾ ೪

## ಆದಿತಾಳ

ಉಣಲಿ ಉಡಲಿ ಭೂಷಣಗಳು ಧರಿಸಲಿ
ಕುಣಿಯಲಿ ನಡಿಯಲಿ ಗುಣಗಳು ಎಣಿಸಲಿ
ತೃಣ ಮೊದಲಾದಲ್ಲಿ ಯೋಚನೆ ಮಾಡಲಿ
ಇನಿತು ಪೇಳಿದವರ ಸ್ಮರಣೆ ಮರಿಯದಿರು
ಜನರೊಳಗಿಪ್ಪ ನಮ್ಮ ವಿಜಯವಿಠ್ಠಲ ರೇಯನ ೬
ಶನಿಶನಿಯಲ್ಲಿ ತಿಳಿದು ಮುಕುತಿ ಸುಖಬಡು

## ಜತೆ

ಹಗಲಿರಳು ಚಿತ್ತ ವ್ಯಾಪ್ತ ಮಾರ್ಗದಲ್ಲಿಡೂ
ತ್ರಿಗುಣಾತೀತ ನಮ್ಮ ವಿಜಯ ವಿಠಲ ಒಲಿವಾ

## ೯೨

## ಧ್ರುವತಾಳ

ಹರಿ ವಿಷ್ಣು ರೂಪಾತ್ಮಕ ಚತುರವಿಂಶತಿ ತತ್ವ ।
ಬೆರಸಿ ಸ್ಪಷ್ಟದಿಂದ ಬೊಮ್ಮಾಂಡವ ।
ವಿರಚಿಸಿದನು ಉದಯ ಕಾಲದೊಳೈವತ್ತು ಕೋಟಿ ।
ಪರಿಮಿತ ಯೋಜನ ವಲಯಾಕಾರ ।
ನಿರಿಕ್ಷಿಸು ಈ ಪ್ರಕಾರ ದಳವನ್ನು ತಿಳಿದು ಮುಂ ।
ದರಿದು ನೋಳ್ಪದು ಇದಕೆ ನೂರು ಕೋಟಿ ।
ಧರಣಿ ಆವರಣವು ಅಲ್ಲಿಂದ ಮೇಲು ಭಾಗ ।
ಇರುತಿಪ್ಪವು ಕೇಳಿ ಉದಕಾಗ್ನಿ ಮರುತಾಕಾಶ ।
ತರುವಾಯ ಮಹನ ಹಂಕಾರವಿದರೊಳು ಕಾರಣವುಂಟು ।

ಮರಳೆ ಮಹತತ್ವ ಅವ್ಯಕ್ತದ ಸಮೇತ ।
ಸ್ಥಿರವಾಗಿಯಿಪ್ಪದು ಬೊಮ್ಮಾಂಡಕೆ ಸುತ್ತಲು ।
ಎರಡೈದಾವರಣಾ ಒಂಭತ್ತು ಹತ್ತು ಎನಿಸುವದು ।
ಸಿರಿ ಬೊಮ್ಮಾದಿಗಳು ತಾತ್ವಿಕರಾಗಿ ಎರುವರು ।
ಹಿರಿದಾಗಿ ವೊಂದಂದಕ್ಕೆ ದಶಮಡಿ ಗುಣಿತದಿಂದ ।
ಧರಣಿಯ ಬಿಟ್ಟು ಮೇಲಿಂದತ್ತ ಯೆಣಿಸುವದು ।
ಪರಮ ಭಕುತಿಯಿಂದ ಹರಿ ವ್ಯಾಪಾರವ ।
ಇರಳು ಹಗಲು ತುತಿಸಿ ಧನ್ಯನಾಗೊ ।
ಸುರರು ಅಂಶಗಳಿಂದ ತುಂಬಿಪ್ಪರು ಕಾರ್ಯ ಧಾ ।
ರರಾಗಿ ತಮ ತಮ್ಮ ಉದ್ಯೋಗದಿ ।
ಹರಿಯೆ ಬಾಹಿರ ಸರ್ಗಮಾಡಿ ಆಮ್ಯಾಲೆ ವಿ ।
ಸ್ತರಿಸಿದ ಒಳಗಿನ ಬೊಮ್ಮಾಂಡವ ।
ವಿರಂಚಿಯ ಗರ್ಭದಲಿ ಇಟ್ಟು ವಿನೋದದಿಂದ ।
ಸಿರಿ ಕೂಡ ಬೊಮ್ಮಾಂಡವ ಪ್ರವೇಶಿಸೆ ।
ಸುರರ ಸಾವಿರವರುಷ ಮಲಗಿದ್ದ ಪರಮಾತ್ಮ ।
ಹರಿಪ್ರೀತನಾಗಿ ನಾಭಿ ಕಮಲದಿಂದ ।
ಸರಸಿಜ ಸಂಭವನ ಪೆತ್ತ ಪ್ರೇಮದಿಂದ ।
ಹಿರಣ್ಯಗರ್ಭಾಖ್ಯ ನಾಮದಲ್ಲಿ ।
ಎರಡೇಳು ಭುವನಾತ್ಮಕ ವಾರಿಜ ಸತ್ಯಲೋಕದ ।
ಪರಿಯಂತ ಬೆಳಿಯಿತು ಪಾತಾಳವಿಡಿದು ।
ಮೆರೆವ ವೈಭವ ಮೂರ್ತಿ ವಿಜಯ ವಿಠ್ಠಲರೇಯ ।
ವರ ಪದ್ಮನಾಭ ರೂಪಾತ್ಮಕನಾದ ಉರಗಶಾಯಿ ೧

## ಮಟ್ಟತಾಳ

ಜನನವಾದಾ ಕ್ಷಣಕೆ ನಾಲ್ಕು ದಿಕ್ಕನು ನೋಡಾ ।
ಆನನ ನಾಲ್ಕಾದವು ಬ್ರಹ್ಮ ದೇವರಿಗೆನ್ನಿ ।
ಮಣಿ ಭೂಷಣ ಅಕ್ಷ ಮಾಲೆ ಜ್ಞಾನ ಮುದ್ರೆ ।
ಘನ ದಂಡ ಕಮಂಡುಲ ಚತುರ ಹಸ್ತ ।
ಮಿನಗುವ ಉಪವೀತ ಶುಭ್ರ ವಸನ ದ್ವಯವು ।
ವನಜಾ ಮಧ್ಯದಲ್ಲಿ ತನುಜಾನಾಗಿ ಕುಳಿತು ।
ವನಜಾಗರ್ಭನು ತನ್ನ ನೋಡಿಕೊಂಡು ಮೇ ।
ಲನಿತು ನೋಡಲಾಗಿ ಐದನೆ ಮೊಗವಾಯಿತು ।
ಚಿನುಮಯ ಮೂರುತಿ ವಿಜಯ ವಿಠ್ಠಲರೇಯನ ।
ಮನದಿಚ್ಛೆ ಲೀಲೆ ಆವಾವ ನೆಣಿಸುವನೊ ೨

## ತ್ರಿವಿಡಿ ತಾಳ

ಅದೆ ಸಮಯದಲ್ಲಿ ಪದುಮಾತ್ಮ ದು ।
ರ್ಗಾದೇವಿಯು ಮಹಚಂಡ ಮಾರುತ ಪುಟ್ಟಿಸಿ ।
ಉದಕ ಬಿಂದುಗಳಿಂದ ಬ್ರಹ್ಮರಾಯನ ಗಾ ।
ತ್ರದ ಮೇಲೆ ಸೂಸಿ ತೋಯಿಸಿದಳಂದು ।
ವಿಧಿ ತಾನೆ ಬೆರಗಾಗಿ ಮಹ ಅಂಧಕಾರದೊಳು ।
ಗಡ ಗಡನೆ ನಡುಗುತ ಮಹ ಘಾಳಿಯಿಂದ ।
ಉದಕದ ಧೆರೆಯಿಂದ ಪೀಡಿತನಾಗಿ ಅಂ ।
ಜಿದ ಕ್ಷಣ ಮಾತುರ ತನ್ನ ಪಿತನ ।
ಪದ ಪದುಮ ಸ್ಮರಿಸಿದನು ಏನಂಬೆ ಬೊಮ್ಮನಿಗೆ ।
ಮುದದಿ ಅಜ್ಞಾನ ಭಯ ನಾಲ್ಕು ಎರಡು ಸಾರಿ ।

ಒದಗಿದವು ನೋಡಾ ನಾನಾ ಪರಿಯಿಂದಲಿ ।
ಪದುಮ ಸಂಭವಗೆ ಈ ಕಾಲದಲ್ಲಿ ।
ಇದೆ ಸತ್ಯವೆನ್ನದಿರಿ ಅನಾದಿ ನಿರ್ದೋಷ ।
ನಿಧಿಗೆ ಎತ್ತಣ ದೋಷ ಈ ವಾರತಿ ।
ಪದುಮ ಬಾಂಧವ ಮಧ್ಯಾನ್ಹದಲ್ಲಿಗೆ ಬಂದ ।
ಅದರಂತೆ ಕಾಣೊ ಚಂಚಲ ತೋರುವ ।
ಮದಡ ಮಾನ್ನವರಿಗೆ ಅಜ್ಞಾನಿಯಂತೆ ತೋ ।
ರಿದ ತನ್ನ ವಿಚಿತ್ರ ಮಹಿಮೆಯನ್ನು ।
ಉದಿಸಿದ ಜನರಿಗೆ ಈ ಪರಿಯಾಗಲೆಂದು ।
ಪದುಮನಾಭನ ಮಗನು ನಡುಗಿದನು ।
ಇದನೆ ಎಣಿಸದಿರಿ ಇನ್ನೊಂದು ರಹಸ್ಯ ।
ಸದಮಲವಾಗಿದೆ ಬಲು ಸೋಜಿಗ ।
ತ್ರಿದಶ ಗಣಕೆ ದುಃಖ ಲೇಶ ಮಾತುರವಿಲ್ಲ ।
ಮುದ ಪುಟ್ಟುವದು ದಿವಸ ದಿವಸದೆಡಿಗೆ ।
ಚದುರರಿವರು ಕಾಣೊ ಕಿಂಚಿದಸುರಾವೇಶ ।
ಒದಗಿದಾಗಲು ದುಃಖ ಪ್ರಾಪ್ತವಹದೊ ।
ಇದರಂತೆ ತಿಳಿ ದೈತ್ಯ ಜಾಲಕೆ ಸುಖವಿಲ್ಲ ।
ತ್ರಿದಶರಾವೇಶದಿಂದಲಿ ಬಪ್ಪದೊ ।
ಮಧು ವೈರಿ ವಿಜಯ ವಿಠ್ಠಲರೇಯ ವೈಕುಂಠ ।
ಸದನನ ಕ್ರೀಡಿಗೆ ನಮೊ ನಮೊ ಕರ ಮುಗಿದು ೨

## ಅಟ್ಟತಾಳ

ಬೆರಗಾಗಿ ಪರಮೇಷ್ಠಿ ಮಹ ಜಲಧಿಯಲ್ಲಿ ।
ಇರುತಿದ್ದು ನೋಡಿದ ನೀ ಕಮಲಕೆ ಒಂದೊಂದು ।
ಗುರುತು ಕಾಣಲಿಬೇಕೆಂದಾಲೋಚಿಸಿ ।
ಸರನೆ ನಾಳ ಮಧ್ಯ ವಿಳಿ ವಿಳಿದು ಪೋಗಲು ಮಹ ।

ಬಿರಸು ಉನ್ನ ತವಾಗಿ ಇರಲಾಗಿ ಕಂಡು ಅ ।
ಚ್ಚರಿಯ ದೇವರ ಮೋಹ ವರ್ಜನೆ ಬ್ರಹ್ಮ ।
ಧರೆ ಚಂಡವಾತ ಮಹಾಧ್ವನಿ ಸುಳಿ ದೆಶೆ ।
ಹಿರಿದಾಗಿ ಹೊಡಸಿಕೊಂಡು ಉದಕದೊಳಗೆ ತಾ ।
ನರಿಯಲಾರದೆ ಭಯದವನಂತೆ ತೋರಿದ ।
ತಿರಿಗಿ ಐದ್ವ ದೇಶವ ಊದಿದ ತಾನಾಗಿ ಕು ।
ಳ್ಳಿರಲಾಶ್ರಯವಾದ ಕಮಲ ಪೀಠದಲ್ಲಿ ।
ಹರಿಯಾ ಭಜನೆಯಲ್ಲಿ ಅತ್ಯಂತ ಉದ್ಯೋಗ ।
ತರನಾಗಿ ರೇಚಕ ಕುಂಭಕ ಪೂರ್ವಕ ।
ಎರಡೊಂದರಲಿ ವಾಯು ಧಾರಣಿ ಮಾಡಿ ವಿ ।
ಸ್ತರ ಸಮಾಧಿಯೋಗ ಧ್ಯಾನಂಗತನಾಗಿ ।
ಹರಿತಾನೆ ತಪ ತಪವೆಂದಾ ಮಾತಿಗೆ ಇಂಥ ।
ಸುರರ ಸಾವಿರ ವರುಷ ತಪವ ಮಾಡಿದನು ।
ಕರುಣದಿಂದಲಿ ಸ್ವಾಮಿ ಪ್ರಸನ್ನನಾದ ಮು ।
ಕ್ತರ ಸಹಿತ ನಾನಾ ದಿವ್ಯ ಭೂಷಣದಿಂದ ।
ಮೆರವ ತನ್ನ ಸ್ವಮೂರ್ತಿಯು ಹದಿನಾರು ।
ಕರೆಸಿಕೊಂಡವು ವಾಸುದೇವಾದಿ ವಿಮಲೋ
ತ್ಕರಷಣಿ ಮೊದಲಾದ ಅಣಿಮಾದ್ಯ ಪೆಸರಿಲಿ ।
ಪರಿವಾರದಿಂದಲಿ ಸೇವೆ ಕೊಳುತಲಿದ್ದು ।
ಪರಮೇಷ್ಟಿಯಿಂದಲಿ ದಿವ್ಯ ಸಾವಿರ ವರುಷ ।
ಪರಮ ಮುಖ್ಯ ಸ್ತೋತ್ತರ ಮಾಡಿಸಿಕೊಂಡು ।
ಕರುಣದಿಂದಲಿ ಸರ್ವ ವೇದ ಬ್ರಹ್ಮ ತರ್ಕ ।
ಇರದೆ ಪಂಚರಾತ್ರಗಮ ವುಪದೇಶಿಸಿ ।
ಹರಿ ಅದೃಶ್ಯನಾದ ತರುವಾಯ ಅಜದೇವ ।

ವರುಷ ಸಾಸಿರವನ್ನು ವೋದಿದ ವೇದ ವು ।
ಚ್ಚರಿಸಿ ಕೊಳುತಲಿದ್ದು ಸರ್ವ ಜಗವನು ।
ತ್ವರದಿ ಪುಟ್ಟಿಸುವ ಮನಸು ಮಾಡಿ ।
ನಿರುಪಮ ನಿರ್ಗುಣ ನಿಧಿ ವಿಜಯ ವಿಠ್ಠಲನ್ನ ।
ಪರಿ ಪರಿ ರೂಪಗಳ ಧ್ಯಾನವ ಮಾಡುತ ೪

## ಆದಿತಾಳ

ನಳಿನ ಚತುರದಶ ಭುವನಾತ್ಮಕವಾಗಿ ।
ಬೆಳೆಯಿತು ಇದಕೆ ಆಧಾರ ಭೂತವಾಗಿ ।
ನಳಿನ ಸಂಭವ ತನ್ನ ವೈರಾಜ ರೂಪ ಧರಿಸಿ ।
ಸಲೆ ಮೆರದಾ ಮಹದಹಂಕಾರ ತತ್ವದಿ ನಿರ್ಮಾಣ ।
ಜಲಜನಾಭ ತಾನೆ ಸರ್ವ ಜೀವರಾಶಿ ।
ಗಳ ಸಹಿತ ಪುರುಷ ರೂಪದಿಂ ಪ್ರವೇಶಿಸಿದ ।
ತಲೆ ಮೊದಲು ಮಾಡಿ ಪಾದ ಮೂಲ ಪರಿಯಂತ ।
ಬೆಳಗಿದವು ಹದಿನಾಲ್ಕು ಲೋಕಂಗಳು ।
ಬಲುಜನ ಪುಟ್ಟಿದರು ತತ್ವಾಭಿಮಾನಿಗಳು ।
ಬಲವಂತ ರುದ್ರನಿಂದ ಪೂರ್ವದಂತೆ ಉತ್ಪತ್ತಿ ।
ತಿಳಿವದು ಆಮ್ಯಾಲೆ ವಿರಾಟ ಕಲ್ಪದಲಿ ।
ನೆಲೆಗೊಳಿಸಿತು ಅಹಂ ತ್ವಾಹಂ ಯೆಂದು ಪ್ರಾಣಾ ।
ಕಲಹ ಪುಟ್ಟಿತು ತತ್ವರೊಂದಾಗಿ ನಿ ।
ಶ್ಚಲ ಮಾಡಬೇಕೆಂದು ಒಂದು ಶರೀರದಲಿ ।
ಬಲು ಪರೀಕ್ಷೆಯ ಮಾಡಿ ಪ್ರಾಣ ದೇವರಿಗೆ ಪ್ರ ।
ಬಲತನದಿಂದಲಿ ಜೀವ ದೇವಾಧಿಪತಿ ।
ನಿಲಕರವಾಯಿತು ಸೂತ್ರ ನಾಮಕ ಪ್ರಾಣಗೆ ।

ಬಲಿಯ ತಂದಿತ್ತ ನಮಗೆ ಸ್ವಾಮಿ ನೀನೆಂದು ।
ತಲೆ ಬಾಗಿ ಸ್ತುತಿಸಿ ಕಾವುಧಾನೆಂದು ಕರೆದರು ।
ಜಲಜ ಸಂಭವಗೆ ಐದನೆ ಶೀರ್ಷವುಂಟಾದ್ದು ।
ಒಲಿಮೆಯಿಂದಲಿ ಕೇಳಿ ರುದ್ರನಿಗೆ ಮೋಚಕವು ।
ಪೊಳೆವ ಸಮಸ್ತ ಜಗತನ್ನು ಪುಟ್ಟಿಸಿ ಅವರ ।
ಬಳಗದೊಡನೆ ಮೊದಲು ಯಾಗಗೋಸುಗ ಸಂಭರಾದಿ ।
ಗಳನು ಸೃಜಿಸಿ ಹರಿಯ ಪ್ರೀತಿ ಬಡಿಸಲಾಗಿ ।
ಒಲಿದು ಪ್ರಸನ್ನನಾದ ಪರಮಾತ್ಮ ಲಕ್ಷೀಪತಿ ।
ಅಲೌಕಿಕ ಸ್ತೋತ್ರದಿಂದ ಸುರರಿಂದ ತೃಪ್ತನಾಗಿ ।
ಸುಲಭ ಮೂರುತಿ ಅಂತರ್ಧಾನ ಐದಿದನು ।
ಇಳಿಯೊಳಗಿವರು ಪೂರ್ವ ಸಾಧ್ಯರು ಎಂದು ।
ಕಲಕಾಲ ಪ್ರಸಿದ್ಧರಾದರು ದೇವತೆಗಳು ।
ಸಲಹಿದ ಬೊಮ್ಮನಿವರ ಅನುಲೋಮ ಪ್ರತಿಲೋಮ ।
ಕುಲದಿಂದ ಸಮಸ್ತರಿಗೆ ಬುದ್ಧಿಯನಿತ್ತು ।
ಜಲಜ ಕಲ್ಪಾಂತದಲಿ ಈ ಪ್ರಕಾರವಾಗಿ ।
ಪ್ರಳಯ ಮಾಡುವದಕ್ಕೆ ಅಂತ್ಯ ದಿನದಲ್ಲಿ ।
ಜಲಜ ಪೀಠನು ಇಚ್ಛೆವುಳ್ಳವನಾದ ಭೂಮಿಯ ।
ಮಳೆ ಮಿಕ್ಕಾದದರಿಂದ ಮುಳಗಿಸಿದ ನೀರೊಳಗೆ ।
ಲಲನೆ ಗಾಯಿತ್ರಿ ಸಹಿತ ಸತ್ಯ ಲೋಕದಲ್ಲಿ ।
ಮಲಗಿದ್ದ ಸರ್ವ ಜೀವರನ ಪಾವನ ಮಾಡಿ ।
ನಲುವಿನಿಂದ ಯಿದ್ದನು ಪ್ರಕೃತಿ ಸಂಗಡ ಪುರುಷ ।
ಕಳೆಗುಂದದಲೆ ಇಲ್ಲಿಗೆ ಪದ್ಮ ಕಲ್ಪಕಡೆಭಾಗ ।
ತಿಳಿಯಬೇಕು ಜ್ಞಾನಿಗಳು ಮುಂದಿನ ವರಹ ಕಲ್ಪ ।
ಭಳಿರೆ ಭಳಿರೆಯಿದೆ ತತ್ವಕ್ಕೆ ಸಾನು ಕೂಲ ।

ಜಲಧಿ ಶಯನ ನಮ್ಮ ವಿಜಯ ವಿಠ್ಠಲರೇಯ ।
ಸುಳಿದಾಡುವ ಮುಂದೆ ಈ ಪರಿ ಧೇನಿಸಲು ೫

## ಜತೆ

ಪದ್ಮ ಕಲ್ಪದ ಕಥೆ ಕೇಳಿದ ಮನುಜಂಗೆ ।
ಪದ್ಮೆ (ಪದ್ಮಿ) ವಲ್ಲಭ ನಮ್ಮ ವಿಜಯ ವಿಠ್ಠಲ ಕಾವ ೬

## ೯೩

## ಝುಂಪೆತಾಳ

ಹೃತ್ಕಮಲ ಮಧ್ಯದಲಿ ಪೊಳೆವ ವೈಚಿತ್ರಾ
ಸತ್ಕಾಲ ಕ್ರಮಣಿಯ ಮಾಡಿಸುವದನುದಿನಾ
ಸತ್ಕರುಣದಲಿ ಎನಗೆ ನಿನಗೆ ನಾನೊಂದು ಚ
ಮತ್ಕಾರದಲಿ ಪೇಳ್ವೆ ನಮಿತರಿಗತಿ ಪ್ರೇಮ
ಸತ್ಕಾರ ಪೂಜೆ ಪುರಸ್ಕಾರದಿಂದಲ್ಲಿ
ಮತ್ಕಾಯದಲಿ ನಿಲಿಸಿ ಒಲಿಸಿ ಅರ್ಚಿಸಲಾರೆ
ಸತ್ಕುಲದಲಿ ಜನಿಸಿ ಹಗಲಿರಳು ಬಿಡದೆ ಬ
ಲತ್ಕಾರ ಭಜಿಸಿದರೆ ಸುರರಿಗಸಾಧ್ಯವೆ
ಮತ್ಕುಲದ ಸತ್ಕೃತವ ನಾನರಿಯೆ ವರ್ನಿಸಲು
ಶತ್ಕೋಟಿ ಧರನು ಬಲ್ಲನು ಕಾಣಿರೋ
ಸತ್ಕಥೆಗೆ ಒಳಪೊಕ್ಕು ಭೇದಿಸುವ ಪ್ರಬಲ ಜ
ಗತ್ಕಾರಣನೆ ವಿಜಯ ವಿಠ್ಠಲ ರಮೇಶಾ ೧

## ಮಟ್ಟತಾಳ

ಹರಿ ಪರದೇವತಿ ಪರಿಪೂರ್ಣ ಮೂರುತಿ
ಧರೆಯೊಳು ಕೀರುತಿ ಮೆರೆವ ಜಗತ್ಪತಿ
ಸುರರೊಳಗ ಪ್ರತಿ ದುರುಳದಾನವರಾತಿ
ಶರಣೆಂದರೆ ಸುಮತಿ ಪರಿಪಾಲಿಪ ಪ್ರೀತಿ
ವಿಜಯ ವಿಠ್ಠಲಶ್ರುತಿ ವರಗಳಿಗೆ ಗತಿ ೨

## ರೂಪಕ ತಾಳ

ಅಪ್ರಾಕೃತ ಮಹಿಮಾ
ಅಪ್ರಾಕೃತ ಲೀಲಾ
ಅಪ್ರಾಕೃತ ಕಾಯಾ
ಅಪ್ರಾಕೃತ ರೂಪ
ಅಪ್ರಾಕೃತ ತೇಜ
ಅಪ್ರಾಕೃತ ಪೂಜೆ
ಕ್ಷಿಪ್ರದಲಿ ಲಕುಮಿ
ಸುಪ್ರೇಮ ದಿಂದ ನಾ
ನಾ ಪ್ರಕಾರ ಮಾಡು ಪ್ರತಿಗಾಣಳೂ
ಅಪ್ರಮೇಯನೆ ರಂಗ
ವಿಜಯ ವಿಠ್ಠಲ ನಿನ್ನ
ಅಪ್ರಬುದ್ಧನು ನಾನು
ಸುಪ್ರೀತಿ ಬಡಿಸುವೆನೆ

## ಧ್ರುವತಾಳ

ಆವಾದು ನಿನ್ನ ಪೂಜೆ ಆವಾದು ನಿನ್ನ ಸ್ತೋತ್ರ
ಆವಾದು ನಿನ್ನ ಪ್ರೀತಿ ಆವಾದು ನಿನ್ನ ಸೇವೆ
ಆವುದಾವುದರಿಂದ ವಿವರಿಸುವೆನೆ ನಾನು ಒಂದು ಕಾಣೆನೊ
ಪಾವನರೂಪ ಕೋವಿದರರಸ ಶ್ರೀ ವಿಜಯ ವಿಠಲ ಎನ್ನ
ಭಾವದಲ್ಲಿನಿತು ಭಾವಿಸುವೆನು ಕೇಳೊ ೪

## ತ್ರಿವಿಡಿ ತಾಳ

ತನುವೆ ನಿಕೇತನ ಶಿರವೆ ಉತ್ತಮ ಕಳಸ
ಅನಿಲಾ ಬರುವ ರಂಧ್ರಯುಗಳ ಶ್ರವಣಗಳು
ಮಿನುಗುತಿಪ್ಪ ಪೂರ್ವದ್ವಾರ ವದನವೇ ದ
ಕ್ಷಿಣ ಉತ್ತರದ್ವಾರ ದ್ವಯ ನಾಸರಂಧ್ರ ಲೋ
ಚನ ವೆಡೆ ಸುರದೀಪ ನಾಲಿಗೆಂಬೋದೆ ಘಂಟೆ
ವನಜ ಕರಗಳೆ ಬೀಸುವ ಚಾಮರ ಚೌರ
ಅನುವಾದ ಹೃದಯವೆ ಮಂಟಪವನೆ ರಚಿಸಿ
ಘನ ಕಳೆಯು ಕಾಂತಿ ಮಕರತೋರಣ ತಳಿಗೆ
ಅನುಪಮಾ ಬುದ್ಧಿ ಎಂಬೊದೇ ಗದ್ದಿಗೆ ಮಾಡಿ
ಎನ್ನ ಬಿಂಬ ಮೂರುತಿ ವಿಜಯ ವಿಠ್ಠಲರೇಯನ
ಮನವೆಂಬೊ ಭಟನಟ್ಟಿ ಕರೆಸಿ ನಿಲಿಸಿ ನೋಳ್ಪೆ ೫

## ಅಟ್ಟತಾಳ

ಕುಡಿವ ಜಲಭಿಷೇಕ ಇಡುವ ಗಂಧವೆ ನಿ
ನ್ನಡಿಗೇರಿಸುವ ಗಂಧ ಕಡು ಮುದ್ರೆ ಭೂಷಣ
ಉಡುವ ಪೀತಾಂಬರ ಉಡುಗರಿ ಇತ್ತವು
ಪಡೆದ ಜ್ಞಾನದಿ ನಿನ್ನಡಿಗೇರಿಸುವ ಪೂವೊ

ತಡಿಯದೆ ಜಠರಾಗ್ನಿ ಬಿಡದೆತ್ತುವ ಧೂಪಾ
ರ್ತೋಡನೊಡನೀಪರಿ ವಿಜಯ ವಿಠ್ಠಲರೇಯ
ನ್ನೊಡಿಯನೆ ಒಡಂಬಡು ಬಡವನ ಪೂಜೆ ೬

## ತ್ರಿವಿಡಿ ತಾಳ

ಭಕುತಿ ಎಂದೆಂಬೋದೇಕಾರುತಿ ಪ್ರತಿದಿನ
ಭುಕುತಿ ಹಾಕುವ ಕವಳ ನೈವೇದ್ಯ ಕಾ
ಣಿಕೆ ಚತುರ ವಿಂಶತಿ ನಾಮಗಳಯ್ಯಾ
ಸುಖವೆಂಬೋದೆ ಕರ್ಪುರ ತಾಂಬುಲ ಕಾ
ಳಿಕ ನಾಶವೆಂಬೋದೆ ಕರ್ಪುರದಾರುತಿ
ಮುಕುತಾರ್ಥ ತತ್ವರೂ ವಾಲಗದವರು ಗ
ಮಕದಲ್ಲಿ ತಿರುಗುವದು ನಿತ್ಯ ಪ್ರದಕ್ಷಿಣೆ
ಸುಖಸಾಂದ್ರ ವಿಜಯ ವಿಠ್ಠಲ ಶ್ರೀನಿ ಕೇತನ
ಸಕಲ ಗುಣ ಪೂರ್ಣ ಗುರುವಿನ ಗುರುವೆ ೭

## ಅಟ್ಟತಾಳ

ಪವಡಿಸುವುದು ನಿನ್ನಯ ನಮಸ್ಕಾರವು
ಅವಸರಕೆ ಪೋಗುವ ನಡೆ ನರ್ತನೆ
ನವ ನೂತನವಾದ ಉತ್ತಮಗುಣ ರಭಸವೆಲ್ಲ
ನಿನಗೆ ವಾಲ್ಗೈಸುವ ವಾದ್ಯವೋ
ಅವನೀಶ ವಿಜಯ ವಿಠಲ ನಿಮಗವಂದ್ಯ
ಭವದೂರ ಭವಸುರರರ್ಚಿತ ವಿಗ್ರಹರಂಗಾ ೮

## ಆದಿತಾಳ

ಕುರುಕ್ಷೇತ್ರ ಕಾಶಿ ಗಯಾ
ವರ ಪ್ರಯಾಗ ಗಂಗಾ
ನರ ನಾರಾಯಣ ನಿಧಿ
ಪುರುಷೋತ್ತಮ ದ್ವಾರಕಾ
ವರ ಗಿರಿ ಕಂಚಿ ನಿಲ
ವರಹ ಶ್ರಿ ಮದಾನಂತ
ಅರಿನಾಶ ಜನಾರ್ದನ
ಸಿರಿರಂಗ ರಜತಪೀಠ ಪುರಿವಾಸ ಸುರಧೀಶ
ಗುರು ಸುಖ ತೀರ್ಥರಿಂದ
ನಿರುತ ಪೂಜೆಯಗೊಂಬ
ಪರಮ ಕರುಣಾಸಿಂಧು ಎನ್ನನು
ಧರಿಸ ಬೇಕೀ ಪರಿಯಲ್ಲಿ
ಭರದಿಂದ ಒಲಿದು ನೋಡು
ವಿಜಯ ವಿಠ್ಠಲರೇಯ
ಅರಿಯದ ಮನಜ ಸಂ
ದರುಶನ ಬರಲಾಗಿ ೯

## ಜತೆ

ಆವಾವ ಕ್ಷೇತ್ರಕ್ಕೆ ಕರದೊಯ್ದು ಎನ್ನಿಂದ
ಈ ವಿಧಾರ್ಚನೆಗೊಳ್ಳೊ ವಿಜಯ ವಿಠ್ಠಲ ಮೂರ್ತಿ ೧೦

## ೯೪

## ಧ್ರುವತಾಳ

ಹೃದಯ ವ್ಯಾಪ್ತಿ ಪ್ರಾದೇಶವೆಂದೆಂಬೊ ಮೂರುತಿ
ಪದುಮ ಕರ್ಣಿಕೆ ಮೂಲದಲ್ಲಿ ಮೂಲೇಶ
ಇದೆ ಅಂಗುಟಾಗ್ರ ಪರಿಮಿತವೆನ್ನಿರೋ
ಪದುಮ ಕರ್ಣಿಕಾಗ್ರದಲಿ ಅಂಗುಟಾದನಿತು
ಇದೆ ಪ್ರಾಜ್ಞ ಮೂರುತಿ ಎಂದು ಕೊಂಡಾಡಿರೋ
ಸದ ಮಲ ವಾಗಿ ಸಂತತ ಒಪ್ಪುತಿಹವೊ ಸ
ನ್ನಿಧಿಯಾಗಿ ಜ್ಞಾನಿಗಳ ಪೊರೆವುತಿದೆ ಕೋ
ಪದುಮ ಸಂಭವವಿಡಿದು ತೃಣಜೀವ ಪರಿಯಂತ
ತದು ತದು ಶಾರೀರ ಪರಿಮಿತ ಗಣಿತ
ಅಧಿಕಾರ ತನದಿಂದ ನೋಳ್ಪದು ಭಿನ್ನ ಕಾಣೋ
ಇದೆ ಮೂರುವರ್ಣಾ ಶುಕ್ಲ ರಕ್ತ ನೀಲ
ಇದೆ ಶ್ರವಣ ಮನನ ಧ್ಯಾನ ಜಾಗ್ರತ ಸ್ವಪ್ನ ಸುಪ್ತ
ಇದರಂತೆ ಗುಣಿಸುವುದು ಒಂದೊಂದು ಭಾಗ
ವಿಧಿಮಾತುರ ಕೇವಲ ಅಸಂಪ್ರಜ್ಞವು
ಳಿದ ಋಜುಗಳಿಗೆ ಸ್ಪಷ್ಟತ್ವದಲಿ ಭೇದ
ತ್ರಿದಶ ಗಣಕೆ ನೋಡು ತಾರತಮ್ಯದಿಂದ
ಒದಗಿ ಸಾಧನ ಪ್ರಾರಬ್ಧ ದೇಹ
ಮುದದಿಂದ ಮರ್ತ್ಯರಿಗೆ ಕಾಲಾನುಸಾರ ಪ್ರಾಪ್ತಿ
ಇದೆ ಸರ್ವಜೀವರಿಗೆ ಅನುಕೂಲವು
ಇದರ ತರುವಾಯ ಅನಂತ ರೂಪಗಳು

ಹೃದಯೇಂದ್ರಿಯಗಳು ಸರ್ವ ದೇಹದಲ್ಲಿ
ನಿಧಿಯಾಗಿಪ್ಪವು ಎಣಿಕೆ ಮಾಡಲುಂಟೆ
ಅಧಿಕಾರದಂತೆ ಹರಿ ಕಾಣಿಸಿಕೊಂಬ
ಉದಯಾರ್ಕ ಸನ್ನಿಭ ವಿಜಯ ವಿಠಲರೇಯ
ಪದೋ ಪದಿಗೆ ತನ್ನನು ಕೊಂಡಾಡೆ ಒಲಿವ ೧

## ಮಟ್ಟತಾಳ

ಅಂತ್ಯ ಬಾಹ್ಯ ಉಭಯ ತ್ರಿವಿಧ ದರ್ಶಿಗಳೆನ್ನು
ಸಂತರು ಇದರೊಳಗೆ ಅಲ್ಲ ಮಹತ್ತಾಗಿ
ಸಂತತ ಕಾಂಬುವರು ತಮ್ಮ ಸ್ವಯೋಗ್ಯತದಿ
ಚಿಂತಿಸಿ ಮೂರ್ತಿಯ ಒಂದೊಂದು ಪ್ರಕಾರ
ಎಂತೆಂತು ನೋಡುತ್ತ ಪೂರ್ಣ ಭಕುತಿತನಕ
ಸಂತು ಜನರ ಸ್ಪರ್ಧಿ ದುಃಖ ಪ್ರಾರಬ್ಧಾ
ಹಂತ ಜನಾವೇಶ ಮಿಕ್ಕಾದ ದೋಷ
ನಿಂತ ಕಾಲಕೆ ತಮ ತಮ್ಮಂತರಂಗದಲ್ಲಿ
ಕಾಂತಿ ವಿಶೇಷದಲಿ ಹರಿಯ ಕಾಂಬುವರಯ್ಯಾ
ಅಂತರಾತುಮ ಹರಿ ವಿಜಯ ವಿಠಲರೇಯ
ಇಂತಿಂತು ನಡಿಸಿ ಮುಕ್ತಿ ಕೊಡುವ ಬಿಡದೆ ೨

## ತ್ರಿವಿಡಿ ತಾಳ

ಪುರುಷಸೂತ್ರ ಪ್ರಕೃತಿ ಶ್ರದ್ಧ ಜೀವಕಾಲ
ಹರ ಷಣ್ಮಹಿಷೇರು ವಾರುಣ್ಯಾದಿ
ಸುರಪಸ್ಮರ ಅಹಂಕಾರ ಅನಿರುದ್ಧಾದಿ ನಾಲ್ಕು
ಎರಡು ಜನ ಪ್ರವಹ ಸೂರ್ಯಾದ್ಯರು

ವರುಣ ನಾರದ ಭೃಗು ಪಾವಕ ಪ್ರಸೂತಿ
ಮರೀಚ್ಯಾದಿ ಸಪ್ತ ಗಾಧೇಯವನು
ಮಿತ್ರ ನೈರುತ್ಯ ಗುರುಪತ್ನಿ ಪ್ರಾವಹಿ ವಿ
ಸ್ತರಿಸುವೆ ವೈದ್ಯ ವಿಷ್ವಕ್ಸೇನ
ಮರುತಾದಿತ್ಯರು ರುದ್ರ ವಿಶ್ವದೇವರು ಸಪ್ತ
ಪರಿವಸುಗಳು ದ್ಯಾವಾ ಪೃಥುವಿ ಋಭರು
ಸರಿ ಇಲ್ಲೆಗೆ ಕೇಳಿ ಮುನ್ನೂರು ಮೂರು ಸಾ
ವಿರ ದೇವತಿಗಳನ್ನು ಗುಣಿಸಿರಯ್ಯಾ
ಮರಳೆ ಪಾವಕಾದ್ಯರು ಬಲ್ಯಾದಿಗಳು ಸಪ್ತ
ಅರಿವದು ಮುಂದೆ ಮನುಗಳು ಹನ್ನೊಂದು
ಅರಸು ಜನರು ನೂರು ಗಂಧರ್ವರೆಂಟು ಮಂದಿ
ಸರಸ್ವತಿ ಪ್ರಾಕೃತ ವಾಕ್ಯಾದೊಡತಿ
ತರುವಾಯ ದಶರುದ್ರ ರಾಕಾ ಶ್ರೀ ಪ್ರಾಚಿನಿ (?)
ತರುಣೀರುಷೆ ಭಾರ್ಯರ ಸಹಿತ
ಸುರನದಿ ಪರ್ಜನ್ಯ ಸೂರ್ಯ ಚಂದ್ರಮ ಭಾ
ಸ್ಕರ ಅನಿರುದ್ಧನ್ನ ಸತಿಯ ಪೇಳಿ
ಇರದೆ ಪಾವಕರೈವತ ಪರ್ಜನ್ಯಾದ್ಯರ
ನಾರಿಯರು ಕಾಲಾಭಿಮಾನಿ ಜಯಾದ್ಯರೆನ್ನಿ
ಸುರಧೇನು ಗುಹ್ಯಕ ಯಮಭಟರ ಯಕ್ಷಾದಿ
ಸುರದೂತನರಾಣಿ ಬಧ ಉಷಶ ನಿ ಇಲ್ಲಿಗೆ
ವಿರಚಿಸು ಪಾವಕ ವಿಡಿದು ಎಣಿಕೆ ಮಾಡೆ
ಎರಡೊಂಭತ್ತು ಸಾವಿರ ಏಳುನೂರು
ಸರಿಯೆನ್ನಿ ಇತ್ತ ಕೆಲವು ದೇವತಿಗಳ ಹೆಂ
ಡರು ಬುಧ ಶನಿ ಪತ್ನಿಯರು ತೀರ್ಥರು

ವರ ಪುಷ್ಕರ ಮತ್ತೆ ಕಿಂಚಿತು ದೇವತಿಗಳು
ನಿರುತ ಈ ಬಗೆ ತಿಳಿ ಇಲ್ಲಿಗೆ ತ್ರಿಂಶತಿ
ಎರಡೊಂದು ಸಾವಿರ ಕಡಿಮೆ ನವಕೋಟಿಯು
ಅರಿವದು ಮುಂದೆ ಅನಾಮಸುರರು
ಎರಡು ಹನ್ನೆರಡುಕೋಟಿ ಜನರೆನ್ನಿರೋ
ಸ್ಮರಿಸು ಇಲ್ಲಿಗೆ ತ್ರಿ ೦ಶತಿ ತ್ರಿಕೋಟಿಯು
ಪರಮ ಪುರುಷ ರಂಗ ವಿಜಯ ವಿಠಲರೇಯ
ತರತಮ್ಯ ಸಮದಿಂದ ಸರ್ವರನ್ನ ಪಾಲಿಸುವಾ ೩

## ಅಟ್ಟತಾಳ

ಅನಲನ ಮಕ್ಕಳು ಅಜಾನಜದೇವರು
ಮುನಿಗಳು ಚಿರ ಪಿತೃ ಗಂಧರ್ವ ಅಪ್ಸರ
ಗಣ ಸಿದ್ಧ ಸಾಧ್ಯರು ಯಕ್ಷ ರಕ್ಷರು ವಿದ್ಯಾ
ಮನುಜ ಗಂಧರ್ವರು ಋಷಿ ಕ್ಷಿತಿ ಪಾಲರು
ಮನುಜೋತ್ತಮರು ತೃಣಾಂತ ಪರಿಯಂತ
ತನುವು ತನುವಿನಲ್ಲಿ ಮೂರು ಮೂರ್ತಿಗಳನ್ನು
ಮನದಲ್ಲಿ ತಿಳಿದು ಪೂಜಿಸುವರು ಯೋಗ್ಯತ
ಪ್ರಣತರ ಪರಿಪಾಲಾ ವಿಜಯ ವಿಠಲರೇಯ
ಘನವಾಗಿ ನಮ್ಮನು ಪೊರೆವನು ಬಿಡದೆ ೪

## ಆದಿತಾಳ

ಲೇಶಾಕಾಶದಲ್ಲಿ ವಾಸವಾಗಿಪ ಸ
ರ್ವೇಶ ವಾಸುದೇವ ವಿಶಿಷ್ಟ ಗಣದೊಡನೆ
ದಾಸರಿಗೆ ಸರ್ವ ಭಷಣ ಯುಕ್ತನಾಗಿ
ಕೋಶದೊಳಗೆ ಸ್ವ ಪ್ರಕಾಶವಂತನಾಗಿ
ಕೀ ಸಲದಲ್ಲಿ ಪೊಳೆವ

ಕೇಶವ ದಯಾ ನಿಧಿ ವಿಜಯ ವಿಠಲರೇಯ
ಲೇಸು ಕೊಡುವ ಒಲಿದು ಈ ಪರಿ ತಿಳಿದವನೆ ೫

## ಜತೆ

ಕಮಲಕರ್ಣಿಕೆ ಮಧ್ಯ ಕಮನೀಯ ಭಕುತಿಯಲಿ
ಕಮಲಕರ ವಿಜಯ ವಿಠಲನ್ನ ನೋಡಿರೊ ೬

# ಅನುಬಂಧಗಳು

೧. ಕಠಿಣಶಬ್ದಗಳ ಅರ್ಥ

೨. ಟಿಪ್ಪಣಿಗಳು

೩. ಸಹಾಯಕ ಸಾಹಿತ್ಯ

೪. ಸುಳಾದಿಗಳ ಅಕಾರಾದಿ ಸೂಚಿ

# ಅನುಬಂಧ–೧

## ಕಠಿಣ ಶಬ್ದಗಳ ಅರ್ಥ

**ಅ**

ಅಂಕುರ – ಹುಟ್ಟು

ಅಂದಣ – ಪಲ್ಲಕ್ಕಿ

ಅಂಬುಜಾಕ್ಷ – ವಿಷ್ಣು ಕಮಲದಂತೆ ಕಣ್ಣುಳ್ಳವನು

ಅಕ್ಷಯ – ಕೊನೆಯಾಗದಿರುವುದು

ಅಗಣಿತ – ಲೆಕ್ಕ ಮಾಡಲು ಸಾಧ್ಯವಾಗದಿರುವುದು

ಅಘ – ಪಾಪ

ಅಡಿಗಡಿಗೆ – ಮತ್ತೆ ಮತ್ತೆ

ಅಧಟ – ಪರಾಕ್ರಮಿ

ಅಧೋಮುಖ – ಕೆಳ ಮುಖ

ಅನಿತು – ಅಷ್ಟು

ಅನಿಮಿಷ ನದಿ – ದೇವನದಿ – ಗಂಗೆ

ಅನುಗಾಲ – ಯಾವಾಗಲೂ

ಅಭಿದಾನ – ಹೆಸರು

ಅರಿ – ಚಕ್ರ

ಅರ್ಕ – ಸೂರ್ಯ

ಅಲವ

ಬೋಧರು – ಮಧ್ವಾಚಾರ್ಯರು

ಅವ್ಯಕ್ತ – ಕಾಣದಿರುವುದು

ಅಸು – ಪ್ರಾಣ

ಅಹರ್ನಿಶಿ – ಹಗಲು ರಾತ್ರಿ

ಅಹಿ – ಹಾವು

ಅಹಿಪತಿ – ಶೇಷ

**ಆ**

ಆಗಮ – ಮುಂದೆ ಬರಲಿರುವ ಪಾಪ ಕರ್ಮ ಫಲ, ಬರುವುದು

ಆರಾತಿ – ಶತ್ರು

ಆವಿರ್ಭಾವ – ಹುಟ್ಟುವುದು

**ಇ**

ಇಂದು – ಚಂದ್ರ

ಇಂದುವಾರ – ಸೋಮವಾರ

ಇಂಬು – ಗುರಿ

ಇಮ್ಮನ - ಎರಡುಮನಸ್ಸಿನ
ಈಯೆ - ಕೊಡಲು
ಈರೈದು - ಹತ್ತು

ಉ

ಉತ್ತಮಾಂಗ - ತಲೆ
ಉದರ - ಹೊಟ್ಟೆ
ಉದಧಿ - ಸಮುದ್ರ
ಉದ್ಭವ - ಹುಟ್ಟು
ಉಪಸ್ಕರ - ಅಡಿಗೆಗೆ ಬೇಕಾದ ಉಪ್ಪು ವೆಣಸು ಇತ್ಯಾದಿ ಸಾಮಗ್ರಿ
ಉರ - ಎದೆ

ಋ

ಋಜುಗಣಸ್ಥರು - ಮುಂದಿನ ಕಲ್ಪದಲ್ಲಿ ವಾಯು ಪಟ್ಟವನ್ನು ಸ್ವೀಕರಿಸಲು ಅರ್ಹರಾದ ಜೀವರು

ಎ

ಎಣೆ - ಸಮಾನ
ಎರಗು - ನಮಸ್ಕರಿಸು

ಏ

ಏಸು - ಎಷ್ಟು

ಒ

ಒಂದೇಳು ಭುಜ - ಎಂಟು ಭುಜ

ಓ

ಓಗರ - ಆಹಾರ ಊಟ
ಓದನ ಯಾಗ - ಅನ್ನದಾನವೆಂಬ ಯಾಗ

ಕ

ಕಂತು ಜನಕ - ಮನ್ಮಥನ ತಂದೆ; ವಿಷ್ಣು
ಕಚ - ಕೂದಲು
ಕಡು - ಅಧಿಕ
ಕದಪು - ಕೆನ್ನೆ
ಕದಳಿ - ಬಾಳೆ
ಕಳಶ ಸಂಭವ - ದ್ರೋಣಾಚಾರ್ಯ
ಕಾನು - ಕಾಡು
ಕಾಯ - ದೇಹ
ಕುಂದಣಹಾರ - ವಜ್ರದ ಹಾರ
ಕುಕ್ಷಿ - ಹೊಟ್ಟೆ
ಕೃತಿಕಾಂತ - ಅನಿರುದ್ಧ ರೂಪಿ ಪರಮಾತ್ಮ
ಕ್ಷಿತಿ - ಭೂಮಿ
ಕ್ಷುಧಾ - ಹಸಿವು

ಖ

ಖಗ - ಪಕ್ಷಿ
ಖತಿ - ಕೋಪ
ಖದ್ಯೋತ - ಮಿಂಚು ಹುಳ
ಖುಲ್ಲ - ಕೆಟ್ಟವ ; ರಾಕ್ಷಸ

## ಗ

ಗಂಗೆಯ ಸೂನು – ಭೀಷ್ಮ
ಗಜಪುರ – ಹಸ್ತಿನಾವತಿ
ಗಾತುರ – ದೇಹ
ಗುರುಸುತ – ಅಶ್ವತ್ಥಾಮ
ಗ್ರಾಸ – ಆಹಾರ

## ಘ

ಘಸಣೆ – ತೊಂದರೆ

## ಚ

ಚಕ್ಷು – ಕಣ್ಣು
ಚತುರಾಸ್ಯ – ನಾಲ್ಕು ಮುಖಗಳನ್ನುಳ್ಳವನು ಬ್ರಹ್ಮ
ಚರಮದೇಹ – ಕೊನೆಯ ಜನ್ಮ
ಚರಿಯ – ಕಾರ್ಯ
ಚಾಪ – ಬಿಲ್ಲು
ಚಾರು – ಸುಂದರ
ಚಿತ್ತ – ಮನಸ್ಸು
ಚೂತ – ಮಾವು
ಚೈದ್ಯ – ಚೇದಿದೇಶದ ರಾಜ–ಶಿಶುಪಾಲ
ಚೋರ – ಕಳ್ಳ

## ಜ

ಜಂಘೆ – ತೊಡೆ
ಜಂಬು – ನೇರಿಳೆ
ಜಂಬೂಕ – ನರಿ
ಜಡಜಸಂಭವ – ನೀರಿನಲ್ಲಿ ಹುಟ್ಟಿದ ಕಮಲದಲ್ಲಿ ಜನಿಸಿದವನು – ಬ್ರಹ್ಮ
ಜಲಚರ – ನೀರಿನಲ್ಲಿ ಸಂಚರಿಸಬಲ್ಲ ಪ್ರಾಣಿ
ಜಲವಾಹಕ – ನೀರನ್ನು ಬಾವಿ/ನದಿ/ಕೆರೆಯಿಂದ ತಂದು ಹಾಕುವವನು
ಜಾನು – ಮಂಡಿ
ಜಾರ – ವ್ಯಭಿಚಾರಿ
ಜಿಹ್ವೆ – ನಾಲಿಗೆ
ಜೀವಾಚ್ಛಾದಿಕ – ಜೀವದ ಮೇಲಿರುವ ಒಂದು ಆವರಣ

## ಡ

ಡಿಂಬ – ದೇಹ

## ತ

ತಪಿಸು – ಒದ್ದಾಡು
ತರಣಿ – ಸೂರ್ಯ
ತಾಪತ್ರಯ – ಆದಿದ್ಯೈವಿಕ : ಆಧ್ಯಾತ್ಮಿಕ, ಆದಿಭೌತಿಕ ಎಂಬ ಮೂರು ಬಗೆಯಾದ ತೊಂದರೆಗಳು
ತುತಿಪೆ – ಸ್ತೋತ್ರ ಮಾಡುವೆ
ತೃಣ – ಹುಲ್ಲು

ತೊಂಬಲು - ಎಂಜಲು
ತ್ರಾಹಿ - ಕಾಪಾಡು
ತ್ರಿದಶ - ದೇವತೆ

**ದ**

ದನುಜ - ರಾಕ್ಷಸ
ದಣು - ಆಯಾಸ
ದರ - ಶಂಖ
ದಾಮ - ಹಗ್ಗ

**ಧ**

ಧವಳ - ಬಿಳಿ
ಧೌತ ಪಾಪ - ಪಾಪನಾಶ

**ನ**

ನಂದನ - ಮಗ
ನಖ - ಉಗುರು
ನವನೀತ - ಬೆಣ್ಣೆ
ನಾಕ - ಸ್ವರ್ಗ
ನಿರಯ - ನರಕ
ನುತಿಸು - ಹೊಗಳು

**ಪ**

ಪಗೆದಲ್ಲಣ - ಶತ್ರುಗಳನ್ನು ನಡುಗಿಸುವವನು
ಪತಾಕೆ - ಬಾವುಟ
ಪತ್ರಶಾಯಿ - ಆಲದ ಎಲೆಯ ಮೇಲೆ ಮಲಗಿದವನು - ವಿಷ್ಣು ಪ್ರಳಯೋದಕದಲ್ಲಿ ವಿಷ್ಣುವು ನೀರಿನ ಮೇಲೆ ತೇಲುವ ಆಲದೆಲೆಯ ಮೇಲೆ ಮಲಗಿರುವನೆಂದು ಹೇಳುತ್ತಾರೆ.
ಪಥ - ದಾರಿ
ಪರಮಾಚ್ಛಾದಿಕ- ಜೀವದ ಮೇಲೆ ಇರುವ ಒಂದು ಆವರಣ
ಪರಮೇಷ್ಠಿ - ಬ್ರಹ್ಮ
ಪರಾಶರನ ಕುಮಾರ - ವೇದವ್ಯಾಸ
ಪರ್ಜನ್ಯ - ಮಳೆ
ಪರಿಚಾರಕ - ಸೇವಕ
ಪರಿಭ್ರಮಣ - ಸುತ್ತುವುದು
ಪರಿಯಂಕ - ಮಂಚ; ವಿಷ್ಣುವಿನ ಮಂಚ - ಶೇಷ
ಪಲ್ಲವ - ಚಿಗುರು
ಪಾಕಶಾಸನ - ಇಂದ್ರ
ಪಾರಾಶರ - ವೇದ ವ್ಯಾಸ; ಪರಾಶರ ಮಹರ್ಷಿಯ ಮಗ.

ಪಾವಕ – ಅಗ್ನಿ

ಪಾಷಾಣ – ಕಲ್ಲು; ವಿಷ

ಪಿಂಡಾಂಡ – ದೇಹ

ಪುನರಪಿ – ಮತ್ತೆ ಮತ್ತೆ

ಪುರುಹೂತ – ಇಂದ್ರ

ಪುಸಿ – ಸುಳ್ಳು

ಪೋತಕ – ಮಗು

ಪ್ರತಿಕೂಲ – ತೊಂದರೆ

ಪ್ರಭಾತ – ಬೆಳಗಿನ ಸಮಯ

ಪ್ರಮೋದ – ಸಂತೋಷ

ಪ್ರವಾಳ – ಹವಳ

## ಫ

ಫಲ್ಗುಣ – ಅರ್ಜುನ

ಫಾಲ – ಹಣೆ

## ಬ

ಬನ್ನ – ರೋಗ

ಬವರ – ಯುದ್ಧ

ಬಾಕುಳಿಗ – ಅತ್ಯಾಸೆಯುಳ್ಳವನು

ಬಿಡಾಲ – ಬೆಕ್ಕು

## ಭ

ಭಂಗ – ನಾಶ

ಭಾಗವತರು – ಭಗವಂತನ ಭಕ್ತರು

ಭಾಸುರ – ಹೊಳೆಯುವ

ಭುಜಗೇಶ – ಶೇಷ

ಭುವನ – ಲೋಕ

ಭೇಷಜ – ಔಷಧಿ

## ಮ

ಮಕರ – ಮೊಸಳೆ

ಮತ್ಸ್ಯೇಶ – ವಿರಾಟ ರಾಜ; ಮತ್ಸ್ಯ ದೇಶದ ಒಡೆಯ

ಮದಡ – ದಡ್ಡ

ಮನ್ಯು – ದುಃಖ

ಮಸ್ತಕ – ತಲೆ

ಮಾನಿಗಳು – ಇಂದ್ರಿಯಾಭಿಮಾನಿ ದೇವತೆಗಳು

ಮಾಪತಿ – ಲಕ್ಮೀಪತಿ; ವಿಷ್ಣು

ನಿರ್ದೋಷ

ಮಾರವೈರಿ – ಮನ್ಮಥನ ಶತ್ರು; ಶಿವ

ಮಾಷಭಕ್ಷ್ಯ – ಉದ್ದಿನಿಂದ ತಯಾರಿಸಿದ ಭಕ್ಷ್ಯ

ಮೀನಾಂಕನಯ್ಯ –ಮೀನನ್ನು ಬಾವುಟದಲ್ಲಿ ಹೊಂದಿರುವ ಮನ್ಮಥನ ತಂದೆ; ವಿಷ್ಣು

ಮುನ್ನಿನ – ಮೊದಲಿನ

ಮುಸಲಧರ – ಗದಾಧರ ; ವಿಷ್ಣು

ಮುಕುತಿ – ಮುಕ್ತಿ

ಮೇಣು – ಅಥವಾ; ಮತ್ತು

ಮೇದಿನಿ – ಭೂಮಿ

ಮೇಧ – ಯಾಗ

## ರ

ರಣ – ಯುದ್ಧ

ರಥಾಂಗ – ರಥದ ಅಂಗ; ಚಕ್ರವಾಕ ಪಕ್ಷಿ

ರಶ್ಮಿ – ಕಿರಣ

ರಸನ – ನಾಲಗೆ

ರಾಜೀವ ಪೀಠ – ಕಮಲವನ್ನು ಪೀಠವನ್ನಾಗಿಸಿ ಮಾಡಿ ಕೊಂಡವನು; ಬ್ರಹ್ಮ

ಹೊಲ್ಲ – ಹೀನ, ನಿಂದ್ಯ

ಹೋಕೆ – ಯುಕ್ತಿ, ಮೋಸ, ಕಪಟ

ರಾಧಾನಂದನ – ರಾಧೆಯಮಗ ; ಕರ್ಣ

ರಾಮಠ – ಗೊಜ್ಜು (?)

## ಲ

ಲಿಂಗದೇಹ – ಜೀವಕ್ಕೆ ಅಂಟಿ ಕೊಂಡಿರುವ ನಾಲ್ಕು ದೇಹಗಳಲ್ಲಿ ಒಂದು ಈ ದೇಹವು ಸಾತ್ವಿಕ ಜೀವರಿಗೆ ವಿರಜಾ ನದಿಯಲ್ಲಿ ಸ್ನಾನ ಮಾಡಿದಾಗ ಹೋಗುತ್ತದೆಂದು ಶಾಸ್ತ್ರೋಕ್ತವಾಗಿದೆ.

ಲೋಗ – ಸಾಮಾನ್ಯ ಮನುಷ್ಯ

## ವ

ವರಣ – ವರ್ಣ : ಅಕ್ಷರ

ವಲ್ಲಭ – ಗಂಡ; ಒಡೆಯ

ವಾಜಿ – ಕುದುರೆ

ವಾಣಿನಲ್ಲ – ಸರಸ್ವತಿಯ ಪತಿ ; ಬ್ರಹ್ಮ

ವಾನರ – ಕೋತಿ

ವಾಪಿ – ಬಾವಿ

ವಾಮಭಾಗ – ಎಡಭಾಗ

ವಾರಿ – ನೀರು

ವಾರಿಜಕಲ್ಪ – ಬ್ರಹ್ಮಕಲ್ಪ

ವಿಧಿ – ಬ್ರಹ್ಮ

ವಿರಿಂಚಿ – ಬ್ರಹ್ಮ

ವೃಂದ – ಗುಂಪು

ವೇಣು – ಕೊಳಲು

ವ್ಯಾಕುಲ – ಚಿಂತೆ

ವ್ಯಾಹತಿ - ತೊಂದರೆ

ವ್ರಾತ - ಗುಂಪು

**ಶ**

ಶರಾಸನ - ಬಿಲ್ಲು

ಶರ್ವ - ಈಶ್ವರ

ಶಾಕ - ತರಕಾರಿ

ಶಾತಕುಂಭೋದರ - ಹಿರಣ್ಯಗರ್ಭ ; ಬ್ರಹ್ಮ

ಶಿಂಶುಮಾರ - ಮೊಸಳೆ

ಶಿಖ - ಜುಟ್ಟು

ಶೀರ್ಷ - ತಲೆ

ಶುನಕ - ನಾಯಿ

ಷಡುರಸ - ಆರುರಸಗಳು; ಸಿಹಿ, ಕಹಿ, ಉಪ್ಪು, ಹುಳಿ ಖಾರ ಮತ್ತು ಒಗರು ರುಚಿ

ಸಂಚಿತಕರ್ಮ - ಹಿಂದೆ ಮಾಡಿದ ಕರ್ಮ

ಸಪುತಾರ್ಚಿ - ಅಗ್ನಿ

ಸಪ್ತಾವರಣ - ಏಳು ಆವರಣಗಳು; ಅವ್ಯಕ್ತ; ಮಹದಹಂಕಾರ ಮತ್ತು ಪಂಚ ಭೂತಗಳು

ಸಮಾಧಿ - ಲೋಕವನ್ನು ಸಂಪೂರ್ಣವಾಗಿ ಮರೆತು ಧ್ಯಾನಸ್ಥ ನಾಗಿರುವುದು

ಸಮ್ಮೋದ - ಅಪಾರ ಸಂತೋಷ

ಸಯವಾಗಿ - ಸಹಾಯವಾಗಿ

ಸರಳತಲ್ಪ - ಬಾಣಗಳಿಂದ ಮಾಡಿದ ಹಾಸಿಗೆ

ಸರಿತ - ನೀರು

ಸಲಿಲ - ನೀರು

ಸವೆಯದ ಪದವಿ - ಸುಖ ಕಡಿಮೆ ಯಾಗದ ಸ್ಥಾನ

ಸಿಂಧು - ಸಮುದ್ರ

ಸುತ್ರಾಮ - ಇಂದ್ರ

ಸುರರಾಯ - ಇಂದ್ರ

ಸುಪ್ತಿಪ್ರೇರಕ - ನಿದ್ರೆಯಲ್ಲಿಯೂ ಪ್ರೇರಣೆಯನ್ನು ಮಾಡುವವನು ವಿಷ್ಣು

ಸುಮನಸ - ದೇವತೆ

ಸೊಲ್ಲು - ಮಾತು ; ಶಬ್ದ

ಸೋನೆ - ಮಳೆ

ಸೋದರಿ - ಲಕ್ಷ್ಮಿ

ಸ್ತವನ - ಸ್ತೋತ್ರ

ಸ್ಮರ - ಮನ್ಮಥ

ಸ್ಯಂದನ - ರಥ

ಸ್ವಾಹಾವಲ್ಲಭ - ಅಗ್ನಿ

ಉದ್ಭವಳು - ದ್ರೌಪದಿ (ಅಗ್ನಿ ಪುತ್ರಿ )

**ಹ**

ಹರಿಗೋಲು - ದೋಣಿ

ಹರಿಗ್ರೀವ - ನರಸಿಂಹ

ಹರಿಣಾಂಶ - ಚಂದ್ರ

ಹಲಾಯುಧ - ಬಲರಾಮ

ಹಾಟಕ ಗರ್ಭ - ಹಿರಣ್ಯಗರ್ಭ ; ಬ್ರಹ್ಮ

ಹಾಸಮೊಗ -ಸಂತೋಷದ ಮುಖ

ಹೀರಾ - ವಜ್ರ

ಹೃಷ - ಇಂದ್ರಿಯ

# ಅನುಬಂಧ-೨

## ಪೂರ್ವ ಕಥೆಗಳು ಮತ್ತು ಲಘು ಟಿಪ್ಪಣಿಗಳು

೧

ಒಮ್ಮೆ ವಿಜಯ ದಾಸರು ಪಂಢರಪುರಕ್ಕೆ ಹೋದಾಗ, ವಿಠಲನು ಸಾಮಾನ್ಯ ಮನುಷ್ಯನ ವೇಷವನ್ನು ಧರಿಸಿ ದಾಸರಿಗೆ ಕಾಣಿಸಿಕೊಂಡನೆಂದೂ ಆದರೆ ದಾಸರು ಆತನನ್ನು ವಿಠಲನೆಂದು ಗುರುತಿಸಲಾರದೆ, ಆತ ಅಂತರ್ಧಾನನಾದ ಮೇಲೆ ಭಗವಂತ ನನ್ನು ಗುರುತಿಸಲಾಗಲಿಲ್ಲವೆಂದು ಪಶ್ಚಾತ್ತಾಪ ಪಟ್ಟಿರುವ ವಿಚಾರ ಈ ಸುಳಾದಿಯಲ್ಲಿದೆ. ಭಗವಂತನು ಯಾವರೂಪ ದಲ್ಲಿಯೇ ಬಾಹ್ಯದಲ್ಲಿ ದರ್ಶನ ಕೊಟ್ಟರೂ ಅದು ಬಿಂಬಾ ಪರೋಕ್ಷ ವಾದಂತಲ್ಲ ವೆಂಬುದನ್ನು ಇಲ್ಲಿ ಸ್ಪಷ್ಟ ಪಡಿಸಲಾಗಿದೆ. ಕಣ್ಮುಚ್ಚಿ ಧ್ಯಾನಿಸಿದಾಗ ಜೀವಾಂತರ್ಗತ ವಾದ ಭಗವನ್ಮೂರ್ತಿಯನ್ನು ಪೂರ್ಣ ರೂಪದಲ್ಲಿ ಬೆಳಕಿನಲ್ಲಿ ಕಾಣುವುದೇ ಬಿಂಬ ದರ್ಶನ.

೨

ವಿಜಯ ದಾಸರು ಈ ಸುಳಾದಿಯಲ್ಲಿ ಮಹಾಪ್ರಳಯವಾದ ನಂತರ ಸೃಷ್ಟಿಯ ಆರಂಭದಲ್ಲಿ ಬ್ರಹ್ಮನ ಉದಯದ ಸ್ವರೂಪವನ್ನು ವಿವರಿಸಿದ್ದಾರೆ.

೩

ಕಾಲ ಅನಂತವಾದುದಾದರೂ ಬ್ರಹ್ಮಾದಿ ದೇವತೆಗಳ ಆಯುಷ್ಯದ ನಿಗದಿಯ ಲೆಕ್ಕಾಚಾರವನ್ನು ಈ ಸುಳಾದಿಯಲ್ಲಿ ಕೊಡಲಾಗಿದೆ. ಚತುರ್ಯುಗಗಳ ಕಾಲಮಾನ ವಿವರ, ಮನುಗಳ ಕಾಲ ವಿವರವೂ ಇದರೊಳಗೆ ಸೇರಿದ್ದು ಈ ಸುಳಾದಿಯನ್ನು ಕಾಲಕೋಷ್ಟಕ ಸುಳಾದಿ ಎನ್ನ ಬಹುದಾಗಿದೆ.

೪

ಇದನ್ನು ಹಂಸಮಂತ್ರ ಸುಳಾದಿ ಎನ್ನು ವುದುಂಟು. ಮಂತ್ರಗಳ ಜಪವನ್ನು ಮಾಡುವುದರಿಂದ ಆತ್ಮಕ್ಕೆ ವಿಶೇಷ ಶಕ್ತಿಯುಂಟಾಗಿ ಅಪರೋಕ್ಷಕ್ಕೆ ದಾರಿ ಯಾಗುವುದೆಂದು ಶಾಸ್ತ್ರಗಳು ಹೇಳುತ್ತಿವೆ. ಮಂತ್ರಗಳ ಜಪಕ್ಕೆ ಆಸನ ಶುದ್ಧಿ, ದೇಹ ಶುದ್ಧಿ, ಮನಸ್ಸಿನ ಶುದ್ಧಿ ಅತ್ಯಗತ್ಯವೆಂಬುದನ್ನು ದಾಸರು ಇಲ್ಲಿ ಒತ್ತಿ ಹೇಳಿದ್ದಾರೆ.

೫

ಭಗವಂತನನ್ನು ಪೂಜಾ ಸಾಮಗ್ರಿಗಳನ್ನು ಜೋಡಿಸಿ ಕೊಂಡು ಮಾಡುವ ಪೂಜೆಗಿಂತ ಪ್ರಪಂಚದಲ್ಲಿ ಸುರಿಯುವ ಮಳೆ ಎಲ್ಲವೂ ಭಗವಂತನಿಗೆ ಅಭಿಷೇಕವೆಂದೂ, ಸೂರ್ಯ ಚಂದ್ರರೇ ದೀಪಗಳೆಂದೂ, ನಕ್ಷತ್ರಗಳೇ ಆಭರಣಗಳೆಂದು ಭಾವಿಸಿ ಅನುಸಂಧಾನ ಕ್ರಮದ ಪೂಜೆಯೇ ಪರಮ ಪುಣ್ಯದಾಯಕವೆಂದುದಾಸರು ಹೇಳಿದ್ದಾರೆ.

೬

ಕಲಿಯು ಎಲ್ಲರಿಂದಲೂ ಪಾಪ ಕೆಲಸಗಳನ್ನು ಮಾಡಿಸುವ ಪರಮ ಶಕ್ತಿಯನ್ನು ಹೊಂದಿರುವನೆಂದು ಶಾಸ್ತ್ರಗಳು ಹೇಳುತ್ತಿವೆ ಕಲಿಯ ಈ ಪ್ರೇರಕ ಶಕ್ತಿಯ ಪ್ರಭಾವ ಗರುಡ ಶೇಷ ರುದ್ರಾದಿ ದೇವತೆಗಳ ಮೇಲೂ ಉಂಟೆಂಬ ಸಂಗತಿಯ ವಿವರವನ್ನು ಈ ಸುಳಾದಿಯಲ್ಲಿ ಕೊಡಲಾಗಿದೆ. ಜೀವದ ಮೇಲಿರುವ ಲಿಂಗದೇಹದೊಳಗೆ ತತ್ವಾಭಿಮಾನಿ ದೇವತೆಗಳ ಪ್ರವೇಶವಿಲ್ಲ ವೆಂಬ ಸಂಗತಿಯನ್ನು ದಾಖಲಿಸಿರುವುದು ಈ ಸುಳಾದಿಯ ವಿಶೇಷಾಂಶವಾಗಿದೆ.

೭

ಈ ಪ್ರಪಂಚದಲ್ಲಿ ಜೀವರಾಶಿಗಳು ಅನಂತಾನಂತ ಸಂಖ್ಯೆಯಲ್ಲಿವೆ ಎಂಬುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಹೀಗಿದ್ದರೂ ಭರ್ಗವಂತನೂ ಈ ಎಲ್ಲ ಚೇತನಾತ್ಮಕ ವಸ್ತುಗಳ ಒಂದೊಂದು ಭಾಗಗಳ ಲ್ಲಿಯೂ ಒಂದೊಂದು ರೂಪದಿಂದ ಶ್ರೀ ಹರಿಯು ಇರುವನೆಂಬ ತತ್ವವನ್ನು ಈ ಸುಳಾದಿಯಲ್ಲಿ ನಿರೂಪಿಸಲಾಗಿದೆ. ಬಿಂಬಾಪರೋಕ್ಷವಾದ ಜೀವಿಗಳಿಗೆ ಭಗವಂತನ ಈ ವ್ಯಾಪ್ತಿಯನ್ನು ತಮ್ಮ ಯೋಗ್ಯತಾನು ಸಾರ ಕಾಣಲು ಸಾಧ್ಯವೆಂಬುದನ್ನು ದಾಸರು ಈ ಸುಳಾದಿಯಲ್ಲಿ ವಿವರಿಸಿದ್ದಾರೆ ಭಗವಂತ ಅಣುರೂಪಿ ಎಂಬುದರ ಸಮರ್ಥನೆ ಇಲ್ಲಿದೆ.

**ಚತುರ ವಿಂಶತಿ ತತ್ವ** : ಭೂಮಿ, ನೀರು, ಬೆಂಕಿ, ವಾಯು, ಆಕಾಶಗಳೆಂಬ ಪಂಚ ಭೂತಗಳು ; ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಪಂಚ ತನ್ಮಾತ್ರಗಳು ; ವಾಕ್, ಪಾಣಿ, ಪಾದ, ಪಾಯು ಮತ್ತು ಉಪಸ್ಥಗಳೆಂಬ ಕರ್ಮೇಂದ್ರಿಯಗಳು ; ಕಣ್ಣು, ಕಿವಿ, ನಾಲಿಗೆ, ಮೂಗು, ಚರ್ಮಗಳೆಂಬ ಪಂಚೇಂದ್ರಿಯಗಳು ; ಚಿತ್ತ, ಬುದ್ಧಿ, ಮನಸ್ಸು, ಅಹಂಕಾರಗಳು ಎಂಬ ಇಪ್ಪತ್ತನಾಲ್ಕು ತತ್ವಗಳು.

೮

ಶ್ರೀಹರಿಯ ಸ್ವರೂಪವನ್ನು ವಿಜಯ ದಾಸರು ಈ ಸುಳಾದಿಯಲ್ಲಿ ವಿವರಿಸುತ್ತಿದ್ದಾರೆ. ಶ್ರೀ ಹರಿಯು ಸಹಸ್ರ ಕಣ್ಣು, ಸಹಸ್ರ ಬಾಹುಗಳನ್ನು ಹೊಂದಿ ವಿರಾಡ್ರೂ ಪವನ್ನು ಹೊಂದಿರುವನೆಂಬುದನ್ನು ದಾಸರು ಇಲ್ಲಿ ವರ್ಣಿಸಿದ್ದಾರೆ. ಸಹಸ್ರ ಶೀರ್ಷಾ ಎಂದು ಆರಂಭವಾಗುವ ವೇದ ಮಂತ್ರದ ಸಾಲುಗಳ ಭಾಷಾಂತರವೇ ಇದಾಗಿದೆ ಎಂಬುದನ್ನು ಗುರುತಿಸಬಹುದಾಗಿದೆ.

೯

ಭಗವಂತನ ಆರಾಧನೆಯಲ್ಲಿ ನೈವೇದ್ಯ ಹಾಗೂ ಆಹಾರ ಸ್ವೀಕಾರ ಸಂದರ್ಭದಲ್ಲಿ ಮಾಡಬೇಕಾದ ಉಪಾಸನಾ ಕ್ರಮವನ್ನು ಈ ಸುಳಾದಿಯಲ್ಲಿ ತಿಳಿಸಲಾಗಿದೆ. ಪ್ರತಿಯೊಂದು ಪದಾರ್ಥಕ್ಕೂ ಅಭಿಮಾನಿ ದೇವತೆಗಳಿದ್ದು ಅಲ್ಲಿ ಭಗವಂತನ ರೂಪವೊಂದುಂಟೆಂಬುದರ ವಿವರ ಇಲ್ಲಿದೆ. ಭೋಜ್ಯ ಪದಾರ್ಥಗಳನ್ನು ತಯಾರಿಸುವ ಪಾತ್ರೆಗಳಲ್ಲಿರುವ ಭಗವದ್ರೂಪವನ್ನು ಇಲ್ಲಿ ತಿಳಿಸಲಾಗಿದೆ.

೧೦

ಜ್ಞಾನವೆಂಬುದು ಒಂದು ಜನ್ಮದಲ್ಲಿ ಪೂರ್ಣವಾಗಿ ಕೈಗೂಡುವಂತ ಹುದಲ್ಲ. ಜನ್ಮ ಜನ್ಮಾಂತರಗಳಲ್ಲಿ ಹಂತಹಂತವಾಗಿ ಜ್ಞಾನ ಭಕ್ತಿ ವೈರಾಗ್ಯಗಳು ಬೆಳೆಯಬೇಕೆಂಬುದನ್ನು ದಾಸರು ತಿಳಿಸಿ ತಮ್ಮ ದೋಷಗಳನ್ನು ತಿದ್ದ ಬೇಕೆಂದು ಭಗವಂತನಲ್ಲಿ ಪ್ರಾರ್ಥಿಸ ಲಾಗಿದೆ.

೧೧

ಸಾತ್ವಿಕ ಚೇತನರಿಗೆ ಭಗವದ್ಭಕ್ತಿ ಮರದೊಳಗೆ ಬೆಂಕಿಯು ಕಾಣಿಸಿ ಕೊಳ್ಳದೆ ಇರುವಂತೆ ಇರುವುದಾಗಿಯೂ, ಯಾವ ವ್ಯಕ್ತಿಗೆ ನರಕಾದಿ ದುಃಖಗಳನ್ನು ಹೊಂದಬಾರದೆಂಬ ದೃಷ್ಟಿ ಇರುವುದೋ ಅಂತಹ ವ್ಯಕ್ತಿ ಪ್ರತಿನಿತ್ಯ ಭಗವದಾರಾಧನೆಯನ್ನು ಮಾಡಬೇಕೆಂಬ ಸಂದೇಶ ಈ ಸುಳಾದಿಯಲ್ಲಿದೆ.

## ೧೨

**ಇದೊಂದು ಅಪ್ರಕಟಿತ ಸುಳಾದಿ:** ಮೈಸೂರು ವಿಶ್ವ ವಿದ್ಯಾನಿಯದ ಕನ್ನಡ ಅಧ್ಯಯನ ಸಂಸ್ಥೆಯ ಹರಿದಾಸ ಸಾಹಿತ್ಯ ಶಾಖೆಯಿಂದ ಈ ಸುಳಾದಿಯನ್ನು ಸಂಗ್ರಹಿಸಲಾಗಿದೆ. ಗೌರವ, ಅಧಿಕಾರ ಗಳನ್ನು ಚೆನ್ನಾಗಿ ಪಡೆದ ರಾಜನ ಪಾದರಕ್ಷೆಯನ್ನು ಜೋಪಾನಮಾಡುವಂತೆ ಭಕ್ತರು ಭಗವಂತನ ಕೈಂಕರ್ಯ ಮಾಡುವುದಾಗಿ ದಾಸರು ಈ ಸುಳಾದಿಯಲ್ಲಿ ವಿವರಿಸಿದ್ದಾರೆ.

## ೧೩

ಭಗವಂತನ ಅರ್ಚನೆಯ ಬಗೆಯನ್ನು ಈ ಸುಳಾದಿಯಲ್ಲಿ ವಿವರಿಸಲಾಗಿದೆ. ಜ್ಞಾನ ಪೂರ್ವಕವಾಗಿ ಭಗವದರ್ಚನೆ ಮಾಡುವುದು ಸಾಮಾನ್ಯರಿಗೆ ಸಾಧ್ಯ ವಲ್ಲವೆಂಬುದನ್ನು ಈ ಸುಳಾದಿಯಿಂದ ಅರಿವಾಗುತ್ತದೆ. ಭಗವಂತನ ಅನಂತಾನಂತ ರೂಪಗಳನ್ನು ವಸ್ತು ಗಳಲ್ಲಿ ಗುರುತಿಸಿ – ಧ್ಯಾನಿಸಲು ಅಪಾರ ಬೌದ್ಧಿಕ ಶಕ್ತಿ – ನೆನಪಿನ ಶಕ್ತಿ ಅಗತ್ಯವೆಂಬುದು ಈ ಸುಳಾದಿಯಿಂದ ವಿದಿತವಾಗುತ್ತದೆ.

**ಪಂಚ ವಿಧರೊಳು ಒಬ್ಬರೆನಿಸಿ** : ಸಾಲೋಕ್ಯ, ಸಾರೂಪ್ಯ, ಸಾಮೀಪ್ಯ, ಸಾಯುಜ್ಯ ಹಾಗೂ ಸಾರ್ಷ್ಣ್ಯ ಎಂದು ಐದು ವಿಧವಾದ ಮೋಕ್ಷ ಪ್ರಕಾಉಂಟು. ಈ ಪಂಚವಿಧರಲ್ಲಿ ಒಬ್ಬ ನನ್ನಾಗಿಸು ಎಂದರೆ ಮೋಕ್ಷ ವನ್ನು ಪಡೆಯುವ ಹಾಗೆ ಮಾಡು ಎಂದು ತಾತ್ಪರ್ಯ.

## ೧೪

ಭಗವಂತನ ಸಾಕ್ಷಾತ್ಕಾರಕ್ಕೆ ಭಕ್ತಿಯೇ ಮುಖ್ಯವೆಂಬುದನ್ನು ವಿಜಯದಾಸರು ಈ ಸುಳಾದಿಯಲ್ಲಿ ಸ್ಪಷ್ಟ ಪಡಿಸಿದ್ದಾರೆ. ನಾನಾ ಬಗೆಯ ವ್ರತಾದಿ ಕರ್ಮಾಚರಣೆಗಳಿಂದ – ದೇಹ ದಂಡನೆ ಯಿಂದ ಪುಣ್ಯ ಲಾಭವಿದೆಯಾದರೂ, ಇದರಿಂದಲೇ ಬಿಂಬಾಪ ರೋಕ್ಷ ವಾಗುವುದಿಲ್ಲವೆಂದು ದಾಸರು ಈ ಸುಳಾದಿಯಲಿ ಸ್ಪಷ್ಟಪಡಿಸಿದ್ದಾರೆ. ಕರ್ಮಾ ಚರಣೆಗಳಿಗಿಂತ ಭಕ್ತಿಯ ಆಚರಣೆಯೇ ಮೇಲಾದುದೆಂದು ದಾಸರು ಈ ಸುಳಾದಿಯಲ್ಲಿ ಸ್ಪಷ್ಟಪಡಿಸಿದ್ದಾರೆ. ಕರ್ಮಾಚರಣೆ ಗೈಯುವಾಗಲೂ ಜ್ಞಾನ ಭಕ್ತಿಗಳ ಮಿಲನವಾಗಬೇಕೆಂಬುದು ಇದರ ಸಾರವಾಗಿದೆ.

೨೧

ಋಜುಗಣಸ್ಥರು ಎಂಬುದು ಒಂದು ಗುಂಪಿನ ಜೀವ ಈ ಜೀವರಾಶಿಗೆ ಸೇರಿದವರು ವಾಯು ದೇವರ ಪಟ್ಟಕ್ಕೆ ಬರುವ ಅಧಿಕಾರ, ಯೋಗ್ಯತೆಗಳನ್ನು ಪಡೆದಿರುತ್ತಾರೆ ಸೋದೆಯ ವಾದಿರಾಜರನ್ನು (ಕ್ರಿ.ಶ. ೧೬ನೆಯ ಶತಮಾನ) ಋಜುಗಣಸ್ಥರೆಂದು ಭಾವಿಸುವರು. ಈ ಋಜುಗಣಸ್ಥರ ಕಕ್ಷ ಸಾರತಮ್ಯ ಹಾಗೂ ಗುಣ ತಾರತಮ್ಯ ವಿಚಾರಗಳನ್ನು ಈ ಸುಳಾದಿಯಲ್ಲಿ ತಿಳಿಸಲಾಗಿದೆ.

೨೨

ಪಂಚಭೂತಗಳು ಜಡವೆನಿಸಿದರೂ ಅವುಗಳ ಕಾರ್ಯ ಎಷ್ಟು ಮಹತ್ವ ವಾದುದೆಂಬುದನ್ನು ಮನವರಿಕೆ ಮಾಡಿ ಕೊಡುವ ಸುಳಾದಿ ಇದಾಗಿದೆ. ಈ ಪಂಚ ಭೂತಗಳ ಅಭಿಮಾನಿ ದೇವತೆಗಳ ನಿಯಂತ್ರಣ ದಲ್ಲಿರುವುದೆಂಬುದನ್ನು ದಾಸರು ತಿಳಿಸಿ ಅವುಗಳ ಶಕ್ತಿಯ ಸ್ವರೂಪದ ಚಿತ್ರಣ ಇಲ್ಲಿದೆ.

೨೩

ಮಾನವನ ದೇಹದಲ್ಲಿ ಎಡ ಭಾಗದಲ್ಲಿ ಮೂವತ್ತಾರು ಸಾವಿರ ಬಲಭಾಗದಲ್ಲಿ ಮೂವತ್ತಾರು ಸಾವಿರ ನಾಡಿಗಳಿದ್ದು ಈ ನಾಡಿಗಳ ಭಗವದ್ರೂ ಪಾಗಳನ್ನು ತಿಳಿದು ಭಗವದುಪಾಸನೆ ಮಾಡಬೇಕೆಂಬ ವಿಚಾರವನ್ನು ವಿಜಯ ದಾಸರು ಈ ಸುಳಾದಿಯಲ್ಲಿ ತಿಳಿಸಿದ್ದಾರೆ. ಹರಿಕಥಾಮೃತಸಾರದ ನಾಡೀ ಪ್ರಕಾರಣ ಸಂಧಿ ಯೊಡನೆ ಈ ಸುಳಾದಿಯನ್ನು ಓದಿ ಕೊಳ್ಳುವುದು ಸೂಕ್ತ ವೆನಿಸುತ್ತದೆ.

೨೪

ಸಾಧನೆಯ ಹಾದಿಯಲ್ಲಿ ಧ್ಯಾನ ಬಹಳ ಮುಖ್ಯವಾದುದು. ಭಗವಂತನ ನಿರಂತರ ಧ್ಯಾನದಿಂದ ಮನಸ್ಸು ಶಾಂತಿಯನ್ನನು ಭವಿಸುವುದರೊಡನೆ ಭಗವಂತನ ವಿಶೇಷ ಕೃಪೆಗೆ ಸುಲಭವಾಗಿ ಒಳಗಾಗಬಹುದೆಂಬ ವಿಚಾರವನ್ನು ದಾಸರು ಈ ಸುಳಾದಿಯಲ್ಲಿ ವಿವರಿಸಿದ್ದಾರೆ.

## ೨೫

ವಿಜಯ ದಾಸರ ಸುಳಾದಿಗಳಲ್ಲಿ ಅತ್ಯಂತ ಮಹತ್ವಪೂರ್ಣವಾದ ಸುಳಾದಿ ಇದಾಗಿದೆ. ಇದನ್ನು ಕಂಕಣಾಕಾರ ಸುಳಾದಿ ಚಕ್ರಾಬ್ಜ ಮಂಡಲ ಸುಳಾದಿ ಎಂದು ಕರೆಯುತ್ತಾರೆ. ಭಗವಂತನ ಆರಾಧನೆಯನ್ನು ಮಾಡುವವರನೇಕರು ಪ್ರತಿನಿತ್ಯ ಚಕ್ರಾಬ್ಜ ಮಂಡಲದ ಮುದ್ರೆ ಇರುವ ತಟ್ಟೆಗಳಲ್ಲಿ ಸಾಲಿಗ್ರಾಮಾದಿಗಳನ್ನಿಟ್ಟು ಇಂದಿಗೂ ಪೂಜಿಸುವ ಸಂಪ್ರದಾಯವಿದೆ. ಈ ಚಕ್ರಾಬ್ಜ ಮಂಡಲದ ಸಂಪೂರ್ಣ ವಿವರವನ್ನು ಈ ಸುಳಾದಿಯಲ್ಲಿ ಕೊಡಲಾಗಿದೆ. [ಹೆಚ್ಚಿನ ವಿವರಗಳಿಗೆ ಡಾ॥ ಕೆ. ಗೋಕುಲನಾಥ ಅವರ ಶ್ರೀ ವಿಜಯ ದಾಸರು : ಜೀವನ ಮತ್ತು ಕೃತಿಗಳ ಸಮೀಕ್ಷೆ ಎಂಬ ಪುಸ್ತಕ ವನ್ನು ನೋಡಿ] ಪಾಂಚರಾತ್ರಾಗಮದಲ್ಲಿ ಚಕ್ರಾಬ್ಧ ಮಂಡಲದ ವಿಶೇಷ ವಿವರವಿದೆ.

## ೨೬

ಬ್ರಹ್ಮನ ಇಪ್ಪತ್ತೊಂದನೆಯ ವರ್ಷದಲ್ಲಿ ಶ್ರೀ ಹರಿಯು ಅನಿರುದ್ಧ ರೂಪಿಯಾಗಿ ಮಾಡಿದ ಸೃಷ್ಟಿಯ ವಿವರಗಳನ್ನು ಈ ಸುಳಾದಿಯಲ್ಲಿ ನೀಡಲಾಗಿದೆ. ಈ ಸುಳಾದಿ ದೀರ್ಘವಾಗಿದ್ದರೂ ಪೂರ್ಣ ರೂಪದಲ್ಲಿ ದೊರೆತಿಲ್ಲ. ಸತ್ವ, ರಜೋ ಮತ್ತು ತಮ ಗುಣಗಳ ಮಿಶ್ರಣದ ಬಗೆಯ ವಿವರ ಇಲ್ಲಿದೆ.

## ೨೭

ಬೆಳಿಗಿನಿಂದ ರಾತ್ರಿಯವರೆಗೆ ನಾವು ಮಾಡುವ ಪ್ರತಿಯೊಂದು ಕಾರ್ಯದಲ್ಲೂ ಯಾವ ಯಾವ ಭಗವದ್ರೂಪಗಳನ್ನು ನೆನೆಯ ಬೇಕೆಂಬುದರ ವಿವರಗಳನ್ನು ದಾಸರು ಈ ಸುಳಾದಿಯಲ್ಲಿ ನೀಡಿದ್ದಾರೆ. ಶಾಸ್ತ್ರ ಗ್ರಂಥಗಳಲ್ಲಿ ಎಲ್ಲೆಲ್ಲೋ ಹರಡಿರುವ ಈ ವಿಚಾರಗಳನ್ನು ಒಂದೆಡೆ ಸೇರಿಸಿ ಕೊಟ್ಟಿರುವುದು ತುಂಬ ಉಪಯುಕ್ತವಾದುದಾಗಿದೆ.

## ೨೮

ಗುಣ, ಕಾಲ, ಪ್ರಕೃತಿ, ವೇದ, ಜೀವ, ಲಕ್ಷ್ಮೀ ಮತ್ತು ನಾರಾಯಣ ಇವರನ್ನೂ ನಿತ್ಯವಸ್ತುಗಳು ಎನ್ನುತ್ತಾರೆ, ಏಕೆಂದರೆ ಇದು ಯಾರಿಂದಲೂ ಸೃಷ್ಟಿಯಾದುದಲ್ಲ; ಸಂಪೂರ್ಣವಾಗಿ ಎಂದಿಗೂ ನಾಶವಾಗುವುದಿಲ್ಲ. ಪ್ರಳಯವಾದಾಗಲೂ ಇವು ಎಲ್ಲೋ ಹೇಗೋ ಇದ್ದೇ ಇರುತ್ತವೆಂಬುದನ್ನು ದಾಸರು ಈ ಸುಳಾದಿಯಲ್ಲಿ ವಿವರಿಸಿದ್ದಾರೆ. ಸೃಷ್ಟಿಯು

ಯಾವ ರೀತಿ ಆರಂಭಗೊಂಡು ಮುಂದು ವರಿಯಿತೆಂಬ ಪುರಾಣೋಕ್ತ ಅಂಶಗಳನ್ನು ದಾಸರು ಇಲ್ಲಿ ವಿವರಿಸಿದ್ದಾರೆ.

೨೯

ಸೃಷ್ಟಿ ಸ್ವರೂಪದ ಬಗ್ಗೆ ವಿವರಿಸುವ ಮತ್ತೊಂದು ಸುಳಾದಿ ಇದಾಗಿದೆ. ಸೃಷ್ಟಿ ವಿಚಾರಗಳ ವಿವರ ತಿಳಿದಾಗ ಈ ಅಗಾಧ ಕಾರ್ಯ ವನ್ನು ಭಗವಂತ ಏಕೆ ಮಾಡುತ್ತಾನೆ? ಇದರಿಂದ ಅವನಿಗುಂಟಾಗುವ ಆಯಾಸವೆಷ್ಟು ? ಎಂಬ ಪ್ರಶ್ನೆ ಬರ ಬಹುದಾಗಿದೆ. ಜೀದರಾಶಿಗಳಿಗೆ ಸಾಧನೆ ಮಾಡಿಸಲು ಈ ಸೃಷ್ಟಿ ಕಾರ್ಯವನ್ನು ಶ್ರೀ ಹರಿ ಮಾಡುವನೆಂದೂ ಈ ಕಾರ್ಯ ಎಷ್ಟೇ ಘನ ವಾಗಿದ್ದರೂ ಭಗವಂತನಿಗೆ ಅದು ಆಟವಾಡಿದಂತೆ ತುಂಬ ಸುಲಭ ಕಾರ್ಯವೆಂದೂ ದಾಸರು ಹೇಳಿದ್ದಾರೆ.

೩೦

ಪಂಚಭೂತಾತ್ಮಕವಾದ ಬ್ರಹ್ಮಾಂಡದ ಬಹಿರಾವರಣದ ಸೃಷ್ಟಿಯ ಬಗೆಯನ್ನು ಈ ಸುಳಾದಿಯಲ್ಲಿ ವಿವರಿಸಲಾಗಿದೆ. ಬ್ರಹ್ಮನ ಮೂವತ್ತೈದನೆಯ ವರ್ಷದಿಂದ ನಲವತ್ತೈದನೆಯ ವರ್ಷ ವರೆಗೆ ಈ ಸೃಷ್ಟಿ ಕಾರ್ಯ ಮುಂದುವರಿಯುವುದಂತೆ.

೩೧

ಭಗವಂತನ ಪೂಜೆಯನ್ನು ಗುಪ್ತವಾಗಿ ಮಾಡಬೇಕೇ ವಿನಾ ಲೋಕದಲ್ಲಿ ಅದು ಒಂದು ಕೀರ್ತಿಗೆ ಕಾರಣ ವಾಗುವಂತಹ ಕ್ರಿಯೆ ಯಾಗ ಬಾರದೆಂದು ದಾಸರು ಈ ಸುಳಾದಿಯಲ್ಲಿ ಸೂಚಿಸಿದ್ದಾರೆ. ಆತ್ಮ ಸಾಧನೆಯ ಬಗ್ಗೆ ಒಳ್ಳೆಯ ಕಿವಿ ಮಾತನ್ನು ಈ ಸುಳಾದಿ ಹೇಳುತ್ತದೆ.

೩೨

ಗುರುವಿನ ಮಹತ್ವವನ್ನು ವಿವರಿಸುವ ಸುಳಾದಿ ಇದು. ಪುರಾಣಗಳಲ್ಲಿ ರುವ ಹಲವು ಪ್ರಸಂಗಗಳನ್ನು ದಾಸರು ದೃಷ್ಟಾಂತ ಕೊಟ್ಟು ನೀಚಾರುಭಕ್ತಿಯು ಹೇಗೆ ಹರಿ ಕರುಣೆಗೆ ಕೀಲಿಕೈ ಎಂಬುದನ್ನು ಇಲ್ಲಿ ವಿವರಿಸಲಾಗಿದೆ.

೩೩

ಪಾಂಚ ಭೌತಿಕ ದೇಹದಲ್ಲಿರುವ ಪಂಚಕೋಶಗಳ ವಿವರಣೆ ಯೊಂದಿಗೆ ಜಾಗ್ರತ್,ಸ್ವಪ್ನ ,ಸುಷುಪ್ತಿ, ಮೂರ್ಛಾದಿ ಕಾಲಗಳಲ್ಲಿ ಭಗವಂತನ ಕ್ರಿಯಾ ವಿಶೇಷಗಳ ವಿವರಣೆಯನ್ನು ಈ ಸುಳಾದಿಯಲ್ಲಿ ನೀಡಲಾಗಿದೆ.

೩೪

ಭಗಂವಂತನನ್ನು ಸರ್ವ ಶಬ್ದ ವಾಚ್ಯ ಎನ್ನುತ್ತಾರೆ. ಸರ್ವ ಶಬ್ದ ವಾಚ್ಯನೆನಿಸಿ ಕೊಳ್ಳುವುದರೊಡನೆ ಅವನು ಸರ್ವಾಕ್ಷರ ವಾಚ್ಯನೂ ಆಗಿರುವನೆಂಬುದನ್ನು ಚಕ್ರಾಬ್ಜ ಮಂಡಲ ಸುಳಾದಿಯಿಂದ ತಿಳಿದಿದ್ದೇವೆ. ಸ್ವರ, ವ್ಯಂಜನ ಹಾಗೂ ಸ್ವರಸಹಿತ ವ್ಯಂಜನಾಕ್ಷರದ ಪ್ರತಿಯೊಂದು ಗುಣಿತಾಕ್ಷರ ದಲ್ಲಿಯೂ ಬೇರೆ ಬೇರೆ ಭಗವದ್ರೂಪ ಉಂಟೆಂಬುದನ್ನು ದಾಸರು ವಿವರಿಸಿ ಈ ರೂಪಗಳ ಧ್ಯಾನ ಮಾಡಬೇಕೆಂದು ಹೇಳಿದ್ದಾರೆ.

೩೫

ಬಿಂಬಮೂರ್ತಿಯ ಧ್ಯಾನದ ಬಗೆಯನ್ನು ಈ ಸುಳಾದಿಯಲ್ಲಿ ವಿವರಿಸಲಾಗಿದೆ. ಬಿಂಬ ರೂಪದ ಧ್ಯಾನ ಚಿಂತನೆಯೊಡನೆ ಬಿಂಬರೂಪಿಯ ಸುತ್ತಲಿರುವ ಪರಿವಾರ ದೇವತೆಗಳ ಚಿಂತನೆ ಗೈಯ ಬೇಕೆಂದು ದಾಸರು ಸೂಚಿಸಿದ್ದಾರೆ. ಧ್ಯಾನದ ಬಗೆಯ ವಿವರವಿಲ್ಲಿದೆ.

೩೬

ಪ್ರಾರಬ್ಧ ಕರ್ಮ ವಶದಿಂದ ಜನ್ಮಗಳುಂಟಾಗಿ ಜೀವಿಯು ಮಾನವನಾಗಿ ಹುಟ್ಟಿದಾಗ ಮಾಡುವ ಸತ್ಕರ್ಮ, ದುಷ್ಕರ್ಮಾಚರಣೆಗಳನ್ನನುಸರಿಸಿ ಸಾತ್ವಿಕರಿಗೆ ಬಿಂಬಾಪರೋಕ್ಷವಾಗುವ ತನಕ ಬೇರೆ ಜನ್ಮಗಳುಂಟಾಗುತ್ತಿರುವುದಾಗಿಯೂ ಆದ್ದರಿಂದ ಭವಾವಳಿಯನ್ನು ತಪ್ಪಿಸಿ ಕೊಳ್ಳಲು ಧ್ಯಾನ ಪರ ವಶರಾಗಬೇಕೆಂದು ದಾಸರು ಈ ಸುಳಾದಿಯಲ್ಲಿ ಸೂಚಿಸಿದ್ದಾರೆ.

೩೭

ಜೀವದ ಸ್ವರೂಪ, ಬ್ರಹ್ಮಾಂಡದ ಗಾತ್ರ, ನಾಡೀ ಪ್ರಕರಣ, ಆರೋಹಣ ಹಾಗೂ ಅವರೋಹಣ ತಾರತಮ್ಯಾನುಸಾರ ಸಕಲ ದೇವತಾ ರಾಧನೆ, ಹೃದಯ ಕಮಲದಲ್ಲಿರುವ ಭಗವಂತನ ಧ್ಯಾನ, ಇತ್ಯಾದಿ ವಿಚಾರಗಳನ್ನು ವಿಸ್ತಾರವಾಗಿ ವಿವರಿಸುವ ಹದಿನಾರು ನುಡಿಗಳುಳ್ಳ ಸುಳಾದಿ ಇದಾಗಿದೆ.

## ೩೮

ಅನುಸಂಧಾನ ಬೋಧೆ ಗೈಯುವುದು ಈ ಸುಳಾದಿಯ ಉದ್ದೇಶವಾಗಿದೆ. ಸಕಲ ಚೇತನ ಅಚೇತನ ವಸ್ತುಗಳೆಲ್ಲವನ್ನು ಹರಿಯ ಪ್ರತಿಮೆಯೆಂದು ಭಾವಿಸಿ ನೀಚಾಧಿ ಷ್ಠಾನದಲ್ಲಿ ಹರಿಯನ್ನು ಪೂಜಿಸುವ ಸಾಹಸಕ್ಕೆ ಕೈಹಾಕದೆ, ಉತ್ತಮಾಧಿಷ್ಠಾನದಲ್ಲಿ ಪೂಜಿಸುವ ಕೈಂಕರ್ಯವನ್ನು ಸದಾ ಕಾಲ ಕೈಗೊಳ್ಳುವವರು ಬಿಂಬಾಪರೋಕ್ಷವನ್ನು ನಿಧಾನವಾಗಿ ಸಾಧಿಸ ಬಹುದೆಂಬ ಭರವಸೆ ಈ ಸುಳಾದಿಯಲ್ಲಿದೆ.

## ೩೯

ಭಗವಂತನ ಕೃಪೆಯನ್ನು ಪಡೆಯುವ ಪ್ರತಿಜ್ಞೆ ಮಾಡಿ ಸತತವಾಗಿ ಭಕ್ತಿಯನ್ನು ಮಾಡಿದಾಗ ಮಾತ್ರ ಸಿದ್ಧಿ ದೊರಕುವುದೆಂಬುದನ್ನು ದಾಸರು ಈ ಸುಳಾದಿಯಲ್ಲಿ ವಿವರಿಸಿದ್ದಾರೆ. ಗೋಪಾಲಕರು ಕೃಷ್ಣನೊಡನೆ ತೋರಿದ ಸಖ ; ಪ್ರತಿಜ್ಞಾ ಬದ್ಧರಾಗಿ ಭೀಷ್ಮರು ಪರಶುರಾಮ ನೊಡನೆ ಯುದ್ಧ ಮಾಡಿದ ಪ್ರಸಂಗ, ವಿಭೀಷಣನು ರಾಮನಲ್ಲಿ ತೋರಿದ ಭಕ್ತಿ ಇತ್ಯಾದಿ ಪ್ರಸಂಗಗಳನ್ನು ದಾಸರು ಉದಹರಿಸಿ ಈ ಬಗೆಯ ಭಕ್ತಿ ಗೈಯಬೇಕೆಂದು ಹೇಳಿದ್ದಾರೆ.

## ೪೦

ಕೇಶವಾದಿ ಇಪ್ಪತ್ತನಾಲ್ಕು ನಾಮಗಳ ಪುನಶ್ಚರಣೆಯಿಂದ ಬದುಕಿನಲ್ಲಿ ಬೇಕಾದುದನ್ನು ಸಾಧಿಸ ಬಹುದೆಂದು ದಾಸರು ಈ ಸುಳಾದಿಯಲ್ಲಿ ಹೇಳಿದ್ದಾರೆ.

## ೪೧

ವಿಜಯದಾಸರು ಬಾಲ್ಯದಿಂದ ಬಡತನವನ್ನನುಭವಿಸಿದವರು; ಹರಿದಾಸರಾಗಿ ಜ್ಞಾನಭಕ್ತಿ ವೈರಾಗ್ಯಗಳನ್ನು ಕೈಗೂಡಿಸಿ ಕೊಂಡ ಮೇಲೆ ಅವರು ಜನರಿಂದಲೂ, ಭಗವಂತನಿಂದಲೂ ಮನ್ನಣೆ ಯನ್ನು ಪಡೆದರು. ಅವರು ಕಾಲಕ್ರಮೇಣ ಶ್ರೀಮಂತ ಜೀವನವನ್ನು ನಡೆಸುವಂತಾಯಿತು. ಇದರಿಂದ ದಾಸರ ಹೃದಯ ತುಂಬಿ ಬಂದಿತು. ಅವರು ಧನ್ಯತಾ ಭಾವವನ್ನು ಈ ಸುಳಾದಿಯಲ್ಲಿ ವ್ಯಕ್ತ ಪಡಿಸಿದ್ದಾರೆ.

೪೨

ಸಂಪಾದಿಸಿದ ಐಶ್ವರ್ಯವೆಲ್ಲವನ್ನು ನಾವೇ ಅನುಭವಿಸಲು ಸಾಧ್ಯವಿಲ್ಲವೆಂಬ ತತ್ವದ ವಿವರಣೆ ಇಲ್ಲಿದೆ. ಅವರವರು ಸಂಪಾದಿಸಿದ ಪುಣ್ಯ ಪಾಪಗಳಿಗನುಸಾರವಾಗಿ ಬದುಕಿನಲ್ಲಿ ಸುಖ ದುಃಖಗಳು ಪ್ರಾಪ್ತವಾಗುವುದೆಂಬುದನ್ನು ಇಲ್ಲಿ ಸ್ಪಷ್ಟ ಪಡಿಸಲಾಗಿದೆ. ಬದುಕಿನಲ್ಲಿ ಬರುವ ಎಲ್ಲ ದುಃಖಗಳನ್ನು ನಿರ್ಲಿಪ್ತವಾಗಿ ಸ್ವೀಕರಿಸುವ ನಿಲುವನ್ನು ತಾಳಿದವರಿಗೆ ದುಃಖಾತಿ ಶಯವಾಗದೆಂಬ ಸಂದೇಶ ಇದರೊಳಗೆ ಅಂತರ್ಗತವಾಗಿದೆ.

೪೩

ಭಗವಂತನ ಮಹಿಮೆ ಎಂಬುದು ಸಮುದ್ರದಲ್ಲಿರುವ ತರಂಗದಂತೆ ಒಂದಾದ ಮೇಲೊಂದು ಬರುತ್ತಿರುತ್ತದೆ. ಅದಕ್ಕೆ ಕೊನೆಯೇ ಇಲ್ಲ; ಆದ್ದರಿಂದ ಭಗವಂತನನ್ನು ಅನಂತ ಕಲ್ಯಾಣ ಗುಣ ಪರಿಪೂರ್ಣನೆಂದು ಕರೆಯುವರೆಂಬ ತತ್ವ ಪ್ರತಿ ಪಾದನೆ ಇಲ್ಲಿದೆ. ಭಗವಂತನನ್ನು ಪ್ರಸನ್ನೀ ಕರಿಸಿ ಕೊಳ್ಳಲು ಯತ್ನಿಸದ ಮಾನವನ ಜನ್ಮ ನಿರರ್ಥಕವೆಂದು ದಾಸರು ಇಲ್ಲಿ ಹೇಳಿದ್ದಾರೆ.

೪೪

ಹರಿದಾಸರು ಬೋಧಿಸಿರುವ ತತ್ವ ಶಾಸ್ತ್ರದಲ್ಲಿ ಕೇವಲ ಹರಿಯಾರಾಧನೆಗೆ ಮಾತ್ರ ಪ್ರಾಮುಖ್ಯ ನೀಡಿಲ್ಲ. ಕಕ್ಷಹಾಗೂ ಗುಣತಾರತಮ್ಯವನ್ನನುಸರಿಸಿ ಸಕಲ ದೇವತೆಗಳನ್ನು ಆರಾಧಿಸಬೇಕೆಂದೂ ಭಗವಂತನ ಗುಣೋಪಾಸನೆಯನ್ನು ಧ್ಯಾನಪೂರ್ವಕವಾಗಿ ಮಾಡಬೇಕೆಂದೂ ದಾಸರು ಹೇಳಿದ್ದಾರೆ. ಸಕಲ ಕಕ್ಷ ದೇವತೆಗಳ ವಿವರಗಳನ್ನು ಇಲ್ಲಿ ಕೊಡಲಾಗಿದೆ.

೪೫

ಭಗವಂತನ ಗುಣ ವಿಶೇಷಗಳಲ್ಲಿ ಸ್ವಗತ ಭೇದವಿವರ್ಜಿತ ನಾಗಿರುವುದು ಒಂದಾಗಿದೆ. ಭಗವಂತನು ಎಲ್ಲ ಅಂಗಾಂಗಗಳನ್ನು ಪಡೆದಿರುವನಲ್ಲದೆ, ಸಾಕಾರ, ಸ್ವರೂಪಿಯಾ, ಸಮರ್ಥನೂ ಆಗಿರುವನು. ಅವನದು ಅಪ್ರಾ ಕೃತವಾದ ದೇಹ, ಅವನ ದೇಹದ ಅಂಗಗಳು ನಿರ್ದಿಷ್ಟ ಕಾರ್ಯಗಳನ್ನು ಮಾಡುವ ನೀಮಿತಕ್ಕೊಳಗಾಗಿಲ್ಲ. ಅವನ ಪ್ರತಿಯೊಂದು ಇಂದ್ರಿಯವೂ ತನ್ನ ಕೆಲಸದೊಡನೆ ಇತರ ಎಲ್ಲ ಇಂದ್ರಿಯಗಳ ಕೆಲಸಗಳನ್ನು ಮಾಡ ಬಲ್ಲುದೆಂಬುದನ್ನು ದಾಸರು ಈ ಸುಳಾದಿಯಲ್ಲಿ ವಿವರಿಸಿದ್ದಾರೆ.

## ೪೬

ಭಗವಂತನ ಉಪಾಸನೆಯ ಬಗೆಯನ್ನು ವಿಜಯ ದಾಸರು ಈ ಸುಳಾದಿಯಲ್ಲಿ ತಿಳಿಸಿದ್ದಾರೆ. ಚಕ್ರ, ಶಂಖ, ಗದಾ ಪದ್ಮಗಳನ್ನು ಧರಿಸಿ, ಬಾಡದಿರುವ ವನಮಾಲೆಯನ್ನು ಧರಿಸಿ, ಸರ್ವಾಭರಣ ಭೂಷಿತನಾಗಿ ಹದಿನಾರು ವರ್ಷದ ಪ್ರಾಯುದವನಾಗಿ, ನಗುಮೊಗದವನಾಗಿರುವ ಪರಮಾತ್ಮನನ್ನು ಧ್ಯಾನಿಸಬೇಕೆಂದು ದಾಸರು ಈ ಸುಳಾದಿಯಲ್ಲಿ ಹೇಳಿದ್ದಾರೆ.

## ೪೭

ಪಂಚಕೋಶ ಹಾಗೂ ತದಭಿಮಾನಿ ತತ್ತ್ವೇಶರು ಹಾಗೂ ಭಗವಂತನ ವಿಶೇಷ ರೂಪಗಳ ವಿವರಣೆ ಈ ಸುಳಾದಿಯಲ್ಲಿದೆ. ಅನ್ನಮಯ ಕೋಶ, ಪ್ರಾಣಮಯ ಕೋಶ, ಮನೋಮಯ ಕೋಶ ವಿಜ್ಞಾನ ಮಯ ಕೋಶ ಮತ್ತು ಆನಂದ ಮಯವೆಂಬ ಐದು ಕೋಶಗಳಿದ್ದು ಇವುಗಳಿಗೆ ಕ್ರಮವಾಗಿ ಪ್ರಾಣ, ಅಪಾನ, ವ್ಯಾನ ಸಮಾನ ಮತ್ತು ಉದಾನ ವಾಯುವು ತತ್ವಾಭಿಮಾನಿ ದೇವತೆ ಯಾಗಿದ್ದು ಅನಿರುದ್ಧ, ಪ್ರದ್ಯುಮ್ನ, ಸಂಕರುಷಣ, ವಾಸುದೇವ ಮತ್ತು ನಾರಾಯಣ ರೂಪಿಯಾದ ವಿಷ್ಣುವೂ, ಶಾಂತಿ, ಕೃತಿ, ಜಯಾ, ಮಾಯಾ ಮತ್ತೂ ಲಕ್ಷ್ಮಿ ರೂಪಗಳಿಂದ ಲಕ್ಷ್ಮಿಯೂ ಈ ಕೋಶಗಳಲ್ಲಿರುವರೆಂದು ತಿಳಿಯಪಡಿಸಲಾಗಿದೆ.

## ೪೮

ಭಗವಂತನಿಗೆ ಸಕಲ ಚೇತನಾಚೇತನ ವಸ್ತುಗಳು ಅಧೀನವೆಂದೂ ಅಂತಹ ಪರಾತ್ಪರ ಶಕ್ತಿಯನ್ನು ಕೇವಲ ಭಕ್ತಿಯಿಂದ ಒಲಿಸಿಕೊಳ್ಳಲು ಸಮಯುವನ್ನು ಪಯೋಗಿಸಿ ಕೊಳ್ಳಬೇಕೆಂದೂ ಬಿಂಬೋಪಾಸನೆಯಿಂದ ಇದು ಸಾಧ್ಯವೆಂಬ ತತ್ವವನ್ನು ಈ ಸುಳಾದಿಯಲ್ಲಿ ವಿವರಿಸಲಾಗಿದೆ. ಭಗವಂತನ ಗುಣ ಪ್ರಶಂಸೆಯೂ ವಿಸ್ತಾರವಾಗಿ ಮೂಡಿಬಂದಿದೆ.

**ಸಾಂಶರು:** ಏಕಕಾಲದಲ್ಲಿ ಅನೇಕ ರೂಪಗಳನ್ನು ಪಡೆದು ವಿವಿಧ ಸ್ಥಾನಗಳಲ್ಲಿ ಇರಬಲ್ಲವರು.

**ಪಂಚಕೋಶ** : ಅನ್ನಮಯ; ಪ್ರಾಣಮಯ ಮನೋಮಯ; ವಿಜ್ಞಾನ ಮಯ ಹಾಗೂ ಆನಂದ ಮಯಗಳೆಂಬ ಕೋಶಗಳು,

೪೯

ಈ ಪ್ರಪಂಚವೆಲ್ಲವೂ ಪ್ರಳಯಕ್ಕೊಳಗಾಗಿ ಅಲ್ಲೆಲ್ಲ ಅಂಧಕಾರ ಕವಿದು ಸೂರ್ಯನೇ ಇಲ್ಲದ ಸ್ಥಿತಿ ಉಂಟಾಗಿರುವಾಗ ಶ್ರೀ ಹರಿಯೊಬ್ಬನೇ ಮಗುವಾಗಿ ಆಲದೆಲೆಯ ಮೇಲೆ ತೇಲುತ್ತಾ ನಿರಾಯಾಸನೂ ನಿರಾತಂಕನೂ ಆಗಿರುವನೆಂಬ ಸಂಗತಿಯನ್ನು ದಾಸರು ಈ ಸುಳಾದಿಯಲ್ಲಿ ತಿಳಿಸಿದ್ದಾರೆ. ಭಗವಂತನ ವಿರಾಡ್ರೂಪವನ್ನು, ಭಗವಂತನ ಒಂದೊಂದು ಅವಯವವೂ ಬ್ರಹ್ಮಾಂಡವನ್ನೇ ಆಕ್ರಮಿಸಿ ಕೊಳ್ಳಬಲ್ಲುದೆಂಬುದನ್ನು ದಾಸರು ಇಲ್ಲಿ ಚಿತ್ರಿಸಿದ್ದಾರೆ.

**ಬಿಂಬ ಪ್ರತಿಬಿಂಬ ಭಾವ :** ಪ್ರತಿಯೊಬ್ಬ ಜೀವಿಗೂ ತಮ್ಮ ಮೇಲಿನ ಕಕ್ಷದ ಮೋಕ್ಷ ಯೋಗ್ಯ ಜೀವಿಗಳು ಬಿಂಬರೆನಿಸಿ ಕೊಳ್ಳುತ್ತಾರೆ. ಜೀವಾಂತರ್ಗತವಾದ ಪರಮಾತ್ಮ ನಾದ ಶ್ರೀ ಹರಿಯ ಒಂದು ವಿಶಿಷ್ಟ ರೂಪವೇ ಬಿಂಬ ರೂಪವೆನಿಸಿಕೊಳ್ಳುತ್ತದೆ. ಗರುಗಳು (ಮೇಲಿನ ಕಕ್ಷದೇವತೆಯ) ಶಿಷ್ಯನ ಬಿಂಬ ರೂಪವನ್ನು ತಿಳಿಸು ವರೆಂದು ಶಾಸ್ತ್ರ ವಚನವಿದೆ. ಬಿಂಬರೂಪ ಹೇಗೆ ಚಲಿಸುವುದೋ ಹಾಗೆಯೇ ಪ್ರತಿಬಿಂಬ ಎಂದರೆ ಜೀವನ ಕ್ರಿಯೆಗಳುನಿಗದಿತ ವಾಗುತ್ತದೆ

೫೦

ಲಯ ಕಾಲವು ಬ್ರಹ್ಮ ಮಾನದಲ್ಲಿ ನೂರು ವರುಷವೆಂದು ಹೇಳುತ್ತಾರೆ. ಈ ಅವಧಿಯಲ್ಲಿ ಪರಮಾತ್ಮನು ಮುಕ್ತರ ಜೊತೆ ಕ್ರೀಡಿಸುತ್ತಾ ಸದಾನಂದನಾಗಿರುವನೆಂದೂ, ಅನಂತರ ಸೂಕ್ಷ್ಮ ಸೃಷ್ಟಿಯನ್ನಾ ರಂಭಿಸುವನೆಂದು ಈ ಸುಳಾದಿಯಲ್ಲಿ ಸೃಷ್ಟಿ ವಿಚಾರವನ್ನು ದಾಸರು ವಿವರಿಸಿದ್ದಾರೆ.

೫೧

ಭಗವಂತನಿಗೆ ಸರ್ವ ಸಮರ್ಪಣೆ ಮಾಡುವುದೇ ಭಕ್ತಿಯ ಪರಮ ಸೋಪಾನವೆನ್ನ ಬಹುದು. ದಾಸರು ತಮ್ಮ ಬದುಕಿನ ಸುಖಗಳೆಲ್ಲ ವೂ ಭಗ ವಂತನ ಕೃಪೆಯ ರೂಪದಲ್ಲಿ ದತ್ತವಾಗಿದೆ ಎಂದು ಭಾವಿಸಿ ಶ್ರೀ ಹರಿಗೆ ಅರ್ಪಿಸಿರುವುದನ್ನು ಇಲ್ಲಿ ಕಾಣಬಹುದು.

೫೨

ತೇನ ವಿನಾ ತೃಣಮಪಿ ನ ಚಲತಿ ಎಂಬ ಉಪ ನಿಷತ್ತಿನ ವಾಕ್ಯವನ್ನೇ ವಿಸ್ತಾರಗೊಳಿಸಿ ಬರೆದಿರುವ ಸುಳಾದಿ ಇದಾಗಿದೆ. ಜೀವನಿಗೆ ಪಾಪ ಪುಣ್ಯ ಕರ್ಮಗಳನ್ನು ಮಾಡುವ ಸ್ವಾತಂತ್ರ್ಯ ಲವಲೇಶವೂ ಇಲ್ಲವೆಂದು ದಾಸರು ಸ್ಪಷ್ಟ ಪಡಿಸಿದ್ದಾರೆ, ಬಿಂಬ ಪ್ರತಿ ಬಿಂಬ ಭಾವದ ವಿವರವೂ

ಇದರಲ್ಲಿ ಅಡಕ ಹೊಂದಿದೆ. ಬಿಂಬ ಚಲಿಸಿದರೆ ಪ್ರತಿಬಿಂಬವೂ ಚಲಿಸುವುದೆಂಬುದು ಕನ್ನಡಿ ಮುಂದೆ ನಿಂತವರಿಗೆಲ್ಲರಿಗೂ ತಿಳಿದ ವಿಷಯವಾಗಿದೆ. ಇದರಂತೆ ಬಿಂಬರೂಪ ಭಗವಂತನು ಏನನ್ನು ಮಾಡುವನೋ ಅದರಂತೆ ಜೀವಿಯು ಪ್ರವರ್ತಿಸುವನೆಂಬ ತತ್ವ ಪ್ರತಿ ಪಾದನೆ ಇಲ್ಲಿ ವಿಸ್ತಾರವಾಗಿ ವಲಾಡಿ ಬಂದಿದೆ.

೫೨

ಸೃಷ್ಟಿಯ ವಿವರವನ್ನು ನೀಡುವ ಸುಳಾದಿ ಇದಾಗಿದೆ. ಅಂಭೃಣಿ ನಾಮಕಳಾದ ಲಕ್ಷ್ಮಿಯು ಸೃಷ್ಟಿ ಮಾಡಬೇಕೆಂದು ಪ್ರಾರ್ಥಿಸಿದ ಮೇಲೆ ವಿಷ್ಣುವು ಹೇಗೆ ಸೃಷ್ಟಿಯನ್ನಾರಂಭಿಸುವನೆಂಬ ವಿಚಾರವನ್ನು ಇಲ್ಲಿ ವಿವರಿಸಲಾಗಿದೆ. ದೇವತೆಗಳಲ್ಲಿ ಯಾರ್‍ಯಾರು ಯಾರ್‍ಯಾರರಿಂದ ಜನಿಸಿದರೆಂಬ ವಿಚಾರವನ್ನು ಇದರಲ್ಲಿ ವಿವರಿಸಲಾಗಿದೆ.

೫೪

ಭಗವಂತನಿಗೂ ಭಕ್ತನಿಗೂ ಇರುವ ವ್ಯತ್ಯಾಸಗಳ ಪಟ್ಟಿಯನ್ನು ವಿಜಯದಾಸರು ಇಲ್ಲಿ ಪ್ರಕಟಿಸಿದ್ದಾರೆ. ಹರಿಯು ಸರ್ವೋತ್ತಮನೂ, ಸಕಲ ಗುಣ ಪರಿಪೂರ್ಣನೂ, ನಿತ್ಯತೃಪ್ತನೂ, ಜನನ ಮರಣ ವಿದೂರನೂ, ಸಿರಿವಂತನೂ, ಸಕಲ ಚರಾ ಚರಗಳಲ್ಲಿ ವ್ಯಾಪ್ತನೂ ಆಗಿರುವನಾದರೆ ಜೀವಿಯು ದಾಸನೂ, ಗುಣ ವಿಹೀನನೂ, ಅತೃಪ್ತನೂ, ಜನನ ಮರಣಗಳ ದುಃಖವನ್ನು ಮತ್ತೆ ಮತ್ತೆ ಅನುಭವಿಸುವವನೂ, ದರಿದ್ರನೂ ಆಗಿರುವನೆಂಬುದನ್ನು ದಾಸರು ಇಲ್ಲಿ ಸ್ಪಷ್ಟ ಪಡಿಸಿದ್ದಾರೆ.

**ಷಡುರಸ:** ಸಿಹಿ, ಕಹಿ, ಒಗರು, ಉಪ್ಪು, ಖಾರ, ಹುಳಿ ರುಚಿ.

೫೫

ಭಗವಂತನನ್ನು ಕಾಲನಿಯಾಮಕ ಎಂದು ಕರೆಯಲಾಗಿದೆ. ಜೀವಿಗಳೆ ಲ್ಲರೂ ಕಾಲ ಬದ್ಧರಾದರೂ ಭಗವಂತನು ಮಾತ್ರ ಕಾಲಾತೀತನೆನಿಸಿಕೊಂಡಿದ್ದಾನೆ. ಶ್ರೀ ಹರಿಯು ಕಾಲಪ್ರ ವರ್ತಕ, ತ್ರಿ ಕಾಲಜ್ಞ ನೆನಿಸಿಕೊಂಡಿದ್ದಾನೆ. ಇಂತಹವನನ್ನು ಪ್ರತಿ ನಿತ್ಯ ಯಾವ ಯಾವ ಕಾಲಗಳಲ್ಲಿ ಯಾವ ಯಾವ ಶ್ರೀ ಹರಿಯ ರೂಪವನ್ನು ಸ್ಮರಿಸ ಬೇಕೆಂಬುದನ್ನು ವಿಜಯದಾಸರು ಈ ಸುಳಾದಿಯಲ್ಲಿ ವಿವರಿಸಿದ್ದಾರೆ.

೫೬

ಎಲ್ಲ ಧರ್ಮಗಳೂ ಭಗವಂತನನ್ನು ತಾಯಿ ಎಂದೇ ಕರೆದಿವೆ. ಏಕೆಂದರೆ ಭಗವಂತನು ಭಕ್ತರನ್ನು ವಾತ್ಸಲ್ಯದಿಂದ ಕಾಣುವನಂತೆ. ಇಂತಹ ಭಗವಂತನನ್ನು ನಂಬದೆ ಜನ ಬದುಕನ್ನು ಹಾಳು ಮಾಡಿ ಕೊಳ್ಳಬಹುದೇ ವಿನಾ ನಂಬಿ ಎಂದೂ ಹಾಳಾಗಲಾರರು. ದಾಸರು ಭಗವಂತನ ಈ ವಾತ್ಸಲ್ಯವನ್ನು ಪ್ರಶಂಸೆ ಮಾಡಿ ಆತನನ್ನು ನಂಬಿದ ತಮಗೆ ಬದುಕಿನಲ್ಲಿ ಏನು ಬಂದರೂ ಧೈರ್ಯದಿಂದ ಎದುರಿಸುವ ಪ್ರತಿಜ್ಞೆಯನ್ನು ಇಲ್ಲಿ ಪ್ರಕಟಿಸಿದ್ದಾರೆ

೫೭

ಪ್ರದಾನ ಮಂತ್ರ ಎಂದರೆ ಓಂ ಕಾರ ವೆಂಬ ಮಂತ್ರದಾ ಅ ಉಮ; ಎಂಬ ಮೂರು ಅಕ್ಷರಗಳು ಸೇರಿ ಆಗಿರುವ ಈ ಮಂತ್ರಕ್ಕೆ ಅಪಾರ ಪ್ರಾಧಾನ್ಯವನ್ನು ಆಧ್ಯಾತ್ಮಿಕ ವಲಯದಲ್ಲಿ ನೀಡಲಾಗಿದೆ. ಓಂ ಕಾರವನ್ನು ಇತರ ಮಂತ್ರಗಳ ಆದಿ ಮತ್ತು ಅಂತ್ಯದಲ್ಲಿ ಸೇರಿಸಿ ಕವಚರೂಪದಲ್ಲಿ ಉಚ್ಚರಿಸುವುದು ತುಂಬ ಪುಣ್ಯಕರವೆನ್ನುತ್ತಾರೆ. ಅಲ್ಲದೆ ಈ ಸುಳಾದಿ ಯಲ್ಲಿ ಐವತ್ತೊಂದು ಅಕ್ಷರಗಳ ವಿಚಾರವನ್ನು ವಿವರಿಸಲಾಗಿದೆ.

೫೮

ಬ್ರಹ್ಮನಿಗೆ ಹತ್ತು ವರ್ಷವಾಗುವ ಹೊತ್ತಿಗೆ ವಿಷ್ಣುವು ಮಾಡುವ ಸೃಷ್ಟಿ ವ್ಯಾಪಾರಕ್ಕೆ ಸೂಕ್ಷ್ಮ ಸೃಷ್ಟಿ ಎನ್ನುತ್ತಾರೆ. ಪ್ರಳಯಕಾಲದಲ್ಲಿ ವಿಷ್ಣುವು ತನ್ನ ಉದರದಲ್ಲಿ ಮುಕ್ತರನ್ನು ಹಾಗೂ ಅಮುಕ್ತರನ್ನು ಇಟ್ಟುಕೊಂಡಿರುವುದಾಗಿ ಇಲ್ಲಿ ಹೇಳಲಾಗಿದೆ. ಆತ್ಮ ಸೃಷ್ಟಿ, ಮಿಶ್ರಸೃಷ್ಟಿಯ ವಿಚಾರಗಳನ್ನು ಇಲ್ಲಿ ವಿವರಿಸಲಾಗಿದೆ.

೫೯

ಇದೊಂದು ಸ್ತೋತ್ರ ಪ್ರಧಾನ ಸುಳಾದಿಯಾಗಿದೆ. ಹೃದಯವೆಂಬ ಆಕಾಶದಲ್ಲಿ ಜೀವಾಂತರ್ಗತವಾದ ಬಿಂಬ ಮೂರ್ತಿಯ ದರ್ಶನಕ್ಕಾಗಿ ಭಗವಂತನನ್ನು ಬೇಡುವ ಸನ್ನಿವೇಶ ಇದರಲ್ಲಿದೆ. ಭಗವಂತನನ್ನು ಅತ್ಯಂತ ಸರಳವಾಗಿ ಎಂದರೆ ಕೇವಲ ನೀರು ಮತ್ತು ತುಳಸಿಯಿಂದ ಅರ್ಚಿಸಿದರೂ ಅವನೊಲುಮೆಯುಂಟಾಗುವುದೆಂದು ದಾಸರು ಹೇಳಿದ್ದಾರೆ.

೬೦

ಈ ಸುಳಾದಿಯು ಬಿಂಬೋಪಾಸನೆಗೆ ಸಂಬಂಧ ಪಟ್ಟ ಸುಳಾದಿಯಾಗಿದೆ ಬಿಂಬ ದರ್ಶನಕ್ಕಾಗಿ ಯೋಗಾಭ್ಯಾಸದ ಅಗತ್ಯವನ್ನು ದಾಸರು ಒತ್ತಿ ಹೇಳಿದ್ದಾರೆ. ನಾಡಿಗತ ಭಗವದ್ರೂಪಗಳನ್ನು ಕಾಣಲು ನಿರಂತರ ಚಿಂತನೆ, ಧ್ಯಾನ, ಉಪಾಸನೆಗಳು ಅಗತ್ಯ ವೆನ್ನಲಾಗಿದೆ.

೬೧

ಭಗವಂತನ ಸಾಕ್ಷಾತ್ಕಾರಕ್ಕೆ ಜ್ಞಾನ, ಭಕ್ತಿ, ವೈರಾಗ್ಯಗಳೊಡನೆ ಪ್ರತಿನಿತ್ಯ ಸಾಧ್ಯವದಷ್ಟು ಸಮಂಯ ಧ್ಯಾನ ಪರವಶನಾಗಬೇಕೆಂಬುದನ್ನು ವಿಜಯದಾಸರು ಇಲ್ಲಿ ಒತ್ತಿ ಹೇಳಿದ್ದಾರೆ. ಸ್ನಾನ, ಮೌನ, ಧ್ಯಾನ, ದಾನಗಳೆಲ್ಲವೂ ಧ್ಯಾನದಲ್ಲಿ ಅಡಕವಾಗಿದೆ ಎಂಬ ದಾಸರ ವಾಣಿಯಲ್ಲಿ ಧ್ಯಾನಕ್ಕೆ ನೀಡಿರುವ ಮಹತ್ವ ಪ್ರತಿಬಿಂಬಿತವಾಗಿದೆ. ದೇಹದಂಡನೆಯು ಕರ್ಮಾಚರಣೆಗಳಿಗಿಂತ ಧ್ಯಾನಾನು ಸಂಧಾನವೇ ಶ್ರೇಷ್ಠವೆಂದು ದಾಸರು ಹೇಳಿದಾರೆ.

೬೨

ಭಗವಂತನ ಧ್ಯಾನವನ್ನು ಭಕ್ತಿ ಪೂರ್ವಕವಾಗಿ ಮಾಡ ಬೇಕೆಂದು ಈ ಸುಳಾದಿಯಲ್ಲಿ ದಾಸರು ಒತ್ತಿ ಹೇಳಿದ್ದಾರೆ ಭಗವಂತನ ಕಾರ್ಯವೈಖರಿಗಳನ್ನು ಅವನ ನಾನಾ ರೂಪ–ಅವತಾರಗಳ ಪ್ರಸಂಗಗಳ ಮೂಲಕ ತಿಳಿದು ಆ ರೂಪಗಳನ್ನು ಸತತವಾಗಿ ಧ್ಯಾನಿಸಬೇಕೆಂದು ದಾಸರಾಯರು ತಿಳಿಸಿರುವರು.

೬೩

ಭಗವಂತನನ್ನು ನಂಬಿದವರಿಗೆ ಯಾವ ಭಯವೂ ಇಲ್ಲವೆಂಬುದನ್ನು ದಾಸರು ಈ ಸುಳಾದಿಯಲ್ಲಿ ಒತ್ತಿ ಹೇಳಿದ್ದಾರೆ ತಾಯಿ, ತಂದೆ, ಅಣ್ಣ, ಮಾವನೇ ಮೊದಲಾದವರು ರಕ್ಷಿಸದಿದ್ದ ಸಂದರ್ಭದಲ್ಲಿ ಭಗವಂತನು ಅಂತಹ ಭಕ್ತರ ಭಕ್ತಿಗೆ ಮೆಚ್ಚಿ ಬದುಕಿನಲ್ಲಿ ಒದಗಿದ ಎಲ್ಲ ಸಂಕಟಗಳನ್ನು ಪರಿಹರಿಸಿದ ಬಗೆಯನ್ನು ದಾಸರು ಸೋದಾಹರಣವಾಗಿ ವಿವರಿಸಿ ನಂಬಿ ಕೆಟ್ಟ ವರಿಲ್ಲ, ಎಂಬ ಪುರಂದರದಾಸೋಕ್ತಿಯನ್ನು ಇಲ್ಲಿ ಸಮರ್ಥಿಸಿದ್ದಾರೆ.

೬೪

ಇತರ ಹರಿದಾಸರು ತಮ್ಮ ಅನೇಕ ಕೀರ್ತನೆಗಳಲ್ಲಿ ಮಹಾಭಾರತದ ಹಲವಾರು ಪ್ರಸಂಗಗಳನ್ನು ಸೂಚಿಸಿರುವರಾದರೆ ವಿಜಯ ದಾಸರು ಭಾರತ ಕಥೆಯ ಸಾರವನ್ನು ಈ ಸುಳಾದಿಯಲ್ಲಿ ತುಂಬ ಚೆನ್ನಾಗಿ ನಿರೂಪಿಸಿದ್ದಾರೆ. ಆದಿ ಪರ್ವದಿಂದ ಯುದ್ಧ ಪರ್ವದ ಕರ್ಣಪರ್ವದ ವರೆಗಿರುವ ಕಥಾ ಸಾರವನ್ನು ಇದು ಒಳಗೊಂಡಿರುವುದು. ದಾಸರ ಸಂಗ್ರಹ ಕಲಾ ಚಾತುರ್ಯ ವನ್ನು ಇಲ್ಲಿ ಗುರುತಿಸಬಹುದಾಗಿದೆ.

**ಪಾಶುಪತಾಸ್ತ್ರ** : ಇಂದ್ರ ಕೀಲದಲ್ಲಿ ಅರ್ಜುನನು ಶಿವನನ್ನು ಕುರಿತು ತಪಸ್ಸು ಮಾಡಿದನು. ಶಿವನು ಕಿರಾತನ ವೇಷವನ್ನು ಹಾಕಿ ಕೊಂಡು ಬಂದು ಅರ್ಜುನನ್ನು ರೇಗಿಸಿ ಅವನೊಡನೆ ಯುದ್ಧ ಮಾಡಿ ಅರ್ಜುನನ ಶೌರ್ಯವನ್ನು ಮೆಚ್ಚಿ ಪಾಶು ಪತಾಸ್ತ್ರವನ್ನು ಕೊಡುವನು.

**ಸರಳ ತಲ್ಪದ ಮೇಲೆ ಮುತ್ಯಾ ಮಲಗಿಕೊಳಲು** : ಭೀಷ್ಮಾಚಾರ್ಯರು ಕುರು ಕ್ಷೇತ್ರದಲ್ಲಿ ಹತ್ತು ದಿನಗಳ ಕಾಲ ದುರ್ಯೋಧನನ ಪರವಾಗಿ ಯುದ್ಧ ಮಾಡಿದರು. ಅನಂತರ ಶಿಖಂಡಿಯು ಎದುರಾದುದರಿಂದ ಆಕೆಯೊಡನೆ ಯುದ್ಧ ಮಾಡುವುದಿಲ್ಲವೆಂಬ ಪ್ರತಿಜ್ಞಾನುಸಾರ ಯುದ್ಧದಿಂದ ನಿವೃತ್ತರಾದರು, ಕೃಷ್ಣನ ಹಾಗೂ ಧರ್ಮಾತ್ಮರಾದ ಪಾಂಡವರ ವಿರುದ್ಧ ಯುದ್ಧ ಮಾಡಿದ ನಿಮಿತ್ತ ಪ್ರಾಯಶ್ಚಿತ್ತ ಮಾಡಿಕೊಳ್ಳಲು ಬಾಣಗಳಿಂದ ಮಂಚವನ್ನು ಮಾಡಿಸಿಕೊಂಡು ಅದರ ಮೇಲೆ ಮಲಗಿ ಭಗವಂತನ ಧ್ಯಾನದಲ್ಲಿ ನಿರತರಾದರು.

೬೫

ಭಗವಂತನೆಂಬ ಭೂತ ಸೋಕಿದೆ ಎಂದು ಹೇಳಿ ದಾಸರು ಈ ಸುಳಾದಿಯಲ್ಲಿ ಭೂತ ಪ್ರತಿಮೆಯನ್ನು ಅಭಿವ್ಯಕ್ತಿಗೆ ತುಂಬ ಚೆನ್ನಾಗಿ ಬಳಸಿ ಕೊಂಡಿದ್ದಾರೆ. ಇದು ಒಂದು ಬಗೆಯ ನಿಂದಾಸ್ತುತಿ ಆಗಿದೆ ಎನ್ನಬಹುದು. ಭಗವಂತನನ್ನು ಭೂತ ಎಂದು ಬೈದು, ಅವನ ವಿರಡ್ರೂಪದ ವರ್ಣನೆಯನ್ನು ಇಲ್ಲಿ ಸೂಚ್ಯವಾಗಿ ಹೇಳಲಾಗಿದೆ.

೬೬

ಪಾಂಚಭೌತಿಕವಾದ ದೇಹದ ಸೃಷ್ಟಿಯ ಬಗ್ಗೆ ದಾಸರು ಈ ಸುಳಾದಿಯಲ್ಲಿ ವಿವರಿಸಿದ್ಧಾರೆ. ಈ ಸ್ಥೂಲದೇಹದಲ್ಲಿ ಸೂಕ್ಷ್ಮರೂಪದಲ್ಲಿ ದೇವತೆಗಳೂ, ದೈತ್ಯರೂ ಇದ್ದು ಒಳ್ಳೆಯ ಹಾಗೂ ಕೆಟ್ಟ ಕಾರ್ಯಗಳಿಗೆ ಪ್ರೇರಣೆ ಮಾಡುವ ರೆಂಬ ತತ್ವವನ್ನು ದಾಸರು ಇಲ್ಲಿ ಪ್ರತಿಪಾದಿಸಿದ್ದಾರೆ.

೬೭

ಭಗವಂತನು ನಮ್ಮ ದೇಹೇಂದ್ರಿಯ ಗಳಲ್ಲಿದ್ದರೂ ಅವನ ಇರುವಿಕೆಯನ್ನು ಅರಿಯದೆ ಕಾಲ ವ್ಯರ್ಥ ಹೋದುದಕ್ಕಾಗಿ ದಾಸರು ಪರಿತಪಿಸಿರುವದನ್ನು ಈ ಸುಳಾದಿಯಲ್ಲಿ ಗುರುತಿಸಬಹುದಾಗಿದೆ. ಅಂತರಂಗದಲ್ಲಿರುವ ಬಿಂಬ ಮೂರ್ತಿಯ ಪೂಜೆಯನ್ನು ಮನಸ್ಸಿನಿಂದಲೇ ಮಾಡಿ ಪುಣ್ಯ ಭಾಗಿಗಳಾಗ ಬೇಕೆಂಬ ಸಂದೇಶ ಇಲ್ಲಿ ಸೂಚ್ಯವಾಗಿ ಮೂಡಿ ಬಂದಿದೆ.

೬೮

ಹೃದಯಾಬ್ಜ ಮಂಡಲದಲ್ಲಿರುವ ಭಗವಂತನ ವೈಭವೋಪೇತವಾದ ರೂಪ ಅಲಂಕಾರಗಳ ವರ್ಣನೆಯನ್ನು ಒಳಗೊಂಡಿರುವ ಈ ಸುಳಾದಿಯಲ್ಲಿ ಉಪಾಸನಾ ವಿಧಾನದ ಬಗ್ಗೆ ನಿರ್ದಿಷ್ಟ ಸೂಚನೆ ಇದೆ. ಧ್ಯಾನೋಪಾಸನೆಯ ವಿವರ ಈ ಸುಳಾದಿಯ ಹೂರಣವಾಗಿದೆ.

೬೯

ಭಗವಂತನನ್ನು ನಂಬಿದ ಬಹು ಜನ ಲೌಕಿಕ ಕಷ್ಟ ನಷ್ಟಗಳ ಪರಿಹಾರಕ್ಕಾಗಿ ಭಗವಂತನ ಅರ್ಚನೆ ಮಾಡುವರು. ಈ ಬಗೆಯ ಕಾಮ್ಯ ಕರ್ಮಗಳಿಂದ ಇಹ ಲೋಕದಲ್ಲಿ ಸುಖ ಪ್ರಾಪ್ತಿಯಾಗಬಹುದಾದರೂ ಭಗವಂತನ ಸಾಕ್ಷಾತ್ಕಾರಕ್ಕೆ ಅರ್ಚನಾದಿ ಪುಣ್ಯ ಕರ್ಮಗಳು ಸಹಾಯಕಾರಿಯಾಗುವುದಿಲ್ಲ. ಆದ್ದರಿಂದ ನಿಷ್ಕಾಮ ಕರ್ಮಗಳನ್ನಾಚರಿಸಬೇಕೆಂದು ದಾಸರು ಕರೆ ಕೊಟ್ಟಿದ್ದಾರೆ. ನಿಷ್ಕಾಮಕರ್ಮ ವೆಂದರೆ ಭಗವಂತನಲ್ಲಿ ಯಾವ ಬೇಡಿಕೆಗಳನ್ನು ಇಡದೆ ಅವನ ಸಾಕ್ಷಾತ್ಕಾರಕ್ಕಾಗಿ ಬೇಡಿಕೆಯನ್ನು ಸಲ್ಲಿಸುವುದು.

೭೦

ಜ್ಞಾನ, ಭಕ್ತಿ, ವೈರಾಗ್ಯಗಳು ಸಾಧನೆಗೆ ಮೂರು ಮೆಟ್ಟಿಲುಗಳೆನ್ನ ಬಹುದಾದರೂ ಇವು ಒಂದಕ್ಕೊಂದು ಪೂರಕವಾಗಿ ಸಾಗಬೇಕಾಗುತ್ತದೆ. ಭಗವಂತನ ವಿಶೇಷ ಸನ್ನಿಧಾನವುಳ್ಳ ವಸ್ತುಗಳನ್ನು ಗುರುತಿಸಿ ಗೌರವಿಸುವ, ವಂದಿಸುವ, ತೃಪ್ತಿ ಪಡಿಸುವ ಕಾರ್ಯವೂ ಸಾಧನೆ ಎನಿಸುತ್ತದೆ. ಚಲ ಪ್ರತಿಮೆ, ಅಚಲ ಪ್ರತಿಮಾದಿಗಳ ವಿಚಾರಗಳನ್ನರಿತು ಸಾಧನೆಯ ಹೆದ್ದಾರಿಯಲ್ಲಿ ನಡೆಯಬೇಕೆಂಬ ಕರೆ ಈ ಸುಳಾದಿಯಲ್ಲಿದೆ.

೭೧

ಭಗವಂತನು ಭಕ್ತರ ಭಕ್ತಿಯನ್ನು ಪರೀಕ್ಷೆಗೊಳಪಡಿಸದೆ ಎಂದಿಗೂ ತನ್ನ ದರ್ಶನವನ್ನು ನೀಡುವುದಿಲ್ಲವೆಂದು ತಿಳಿದ ವಿಜಯ ದಾಸರು ಆ ಪರೀಕ್ಷೆಗೆ ಸಿದ್ಧವೆಂಬ ಘೋಷಣೆಯನು ಈ ಸುಳಾದಿಯಲ್ಲಿ ವ್ಯಕ್ತ ಪಡಿಸಿದ್ದಾರೆ. ಜ್ಞಾನ ಭಕ್ತಿ ವೈರಾಗ್ಯಗಳು ದೃಢವಾಗಿದೆ ಎಂಬ ಆತ್ಮ ವಿಶ್ವಾಸವಿದ್ದುದರಿಂದ ಭಗವಂತನು ಎಂತಹ ಪರೀಕ್ಷೆಯನ್ನಾದರೂ ತಮಗೊಡ್ಡಬಹುದೆಂಬ ಸವಾಲು ಇಲ್ಲಿದೆ.

**ಇಷ್ಟಪುಣ್ಯ** : ಬಿಂಬಾಪರೋಕ್ಷಕ್ಕೆ ಅಗತ್ಯವಾದ ಪುಣ್ಯವನ್ನು ಇಷ್ಟ ಪುಣ್ಯವೆನ್ನುತ್ತಾರೆ. ಬಿಂಬಾಪರೋಕ್ಷಕ್ಕೆ ಅಗತ್ಯವಾದ ಪುಣ್ಯವನ್ನು ಮೀರಿದ ಪ್ರಮಾಣದಲ್ಲಿ ಪುಣ್ಯವನ್ನು ಸಂಪಾದಿಸಿದರೆ ಅದು ಅನಿಷ್ಟ ಪುಣ್ಯ ವೆನಿಸಿಕೊಳ್ಳುತ್ತದೆ.

**ಗುಜ್ಜಿಗೊಲಿದ ರಂಗ** : ಕೃಷ್ಣಾವತಾರದಲ್ಲಿ ಹರಿಯು ಕಂಸನ ನಾಶಕ್ಕಾಗಿ ಹೊರಟಾಗ ಕುಬುಜಿಯ ಗೂನುತನವನ್ನು ಪರಿಹರಿಸಿದ ಕಥೆಯನ್ನು ಈ ಮಾತಿನಲ್ಲಿ ಸೂಚಿಸಲಾಗಿದೆ.

೭೨

ಮಧ್ವಾಚಾರ್ಯರು ಪ್ರತಿಪಾದಿಸಿದ ಸಿದ್ಧಾಂತದಲ್ಲಿ ಪಂಚಭೇದಗಳು ಬಹಳ ಮುಖ್ಯವಾದ ತತ್ವವೆನಿಸಿ ಕೊಂಡಿದೆ. ಜೀವ – ಜೀವ, ಜೀವ – ಜಡ; ಜೀವ – ಪರಮಾತ್ಮ ; ಜಡ – ಪರಮಾತ್ಮ ಜಡ–ಜಡಗಳಿಗೆ ಯಾವಾಗಲೂ ಭೇದ ವೆಂಬುದೇ ಈ ಪಂಚಭೇದ ಗಳಾಗಿವೆ, ಈ ಭೇದವು ಮುಕ್ತ ಲೋಕದಲ್ಲಿಯೂ ಮುಂದುವರಿಯುವುದೆಂಬುದನ್ನು ದಾಸರು ಈ ಸುಳಾದಿಯಲ್ಲಿ ಸ್ಪಷ್ಟಪಡಿಸಿದ್ದಾರೆ. ಜಗತ್ತು ಸತ್ಯ ಆದರೆ ಅನಿತ್ಯ ವಾದುದು ಇತ್ಯಾದಿ ತತ್ವ ಪ್ರತಿಪಾದನೆ ಇಲ್ಲಿದೆ.

ಮೂಲಾಲವತಾರಾಭಿನ್ನ ಶ್ರೀ ಹರಿಯು ಯಾವುದೇ ಅವತಾರವನ್ನೆತ್ತಿದರೂ ಅವನ ಮೂಲರೂ ಪದಲ್ಲಿರುವ ಶಕ್ತಿ ಸಾಮ್ಮರ್ಥ್ಯಗಳಲ್ಲಿ ಲವಲೇಶವೂ ಕಡಿಮೆಯಾಗದೆಂಬ ತತ್ವದ ಸೂಚನೆ ಇಲ್ಲಿದೆ.

೭೩

ಹದಿನಾರು ನುಡಿಗಳಿರುವ ಅತ್ಯಂತ ವಿಸ್ತಾರವಾದ ಸುಳಾದಿ ಇದು ಬ್ರಹ್ಮಾದಿ ದೇವತೆಗಳನ್ನು ಯಾವ ಯಾವ ಕಾಲದಲ್ಲಿ ಹೇಗೆ ಸೃಷ್ಟಿ ಮಾಡಿದನೆಂಬ ವಿಚಾರವನ್ನು ಈ ಸುಳಾದಿಯಲ್ಲಿ ವಿಸ್ತಾರವಾಗಿ ತಿಳಿಸಲಾಗಿದೆ.

೭೪

ದೇಹದಲ್ಲಿರುವ ನಾಡಿಗಳು, ನಾಡಿಗತ ಭಗವಂತನ ರೂಪಗಳ ವಿಸ್ತಾರವಾದ ವರ್ಣನೆ ಈ ಸುಳಾದಿಯಲ್ಲಿದೆ. ದೇಹದ ಯಾವ ಯಾವ ಭಾಗಗಳಲ್ಲಿ ಎಷ್ಟೆಷ್ಟು ಕಮಲ ದಳಗಳಲ್ಲಿ ಶ್ರೀಹರಿಯು ಶೋಭಿತನಾಗಿರುವನೆಂಬುದನ್ನು ಇಲ್ಲಿ ವಿವರಿಸಲಾಗಿದೆ. ಈ ನಾಡಿ ಮತ್ತು ಕಮಲಗತ ಭಗವದ್ರೂಪಗಳನ್ನು ನೆನೆದು ಉಪಾಸನೆ ಮಾಡಬೇಕೆಂದು ದಾಸರು ಸೂಚಿಸಿದ್ದಾರೆ.

೭೫

ಹನ್ನೆರಡು ನುಡಿಗಳುಳ್ಳ ವಿಸ್ತಾರವಾದ ಈ ಸುಳಾದಿಯಲ್ಲಿ ಮೇರು ಪರ್ವತ, ಭೂಮಂಡಲ, ಸಪ್ತ ಸಮುದ್ರಗಳೇ ಮೊದಲಾದವುಗಳ ಗಾತ್ರ, ವಿಸ್ತಾರಾದಿಗಳನ್ನು ವಿವರಿಸಲಾಗಿದೆ. ಜೊತೆಗೆ ನಾನಾ ಖಂಡಗಳ ಸೃಷ್ಟಿಯೊಡನೆ ಆರು ಖಂಡಗಳನ್ನು ರಾಜ್ಯಭಾರ ಮಾಡಿದ ರಾಜರುಗಳ ವಿವರಗಳನ್ನು ನೀಡಲಾಗಿದೆ ಇವೆಲ್ಲವೂ. ಪುರಾಣೋಕ್ತ ವಿಚಾರಗಳೆಂಬುದನ್ನು ನೆನಪಿನಲ್ಲಿಡಬೇಕು.

೭೬

ಭಗವಂತನು ಭಕ್ತನು ಕೊಡುವ ಒಂದು ಗಿಂಡಿಯ ನೀರಿನಿಂದ ಸಂತೋಷಪಟ್ಟು ಭಕ್ತನನ್ನು ಹರಸುವನೆಂದೂ, ಆದ್ದರಿಂದ ಭಕ್ತಿಯಿಂದ ಮಾಡುವ ಯಾವುದೇ ಸತ್ಕರ್ಮವಾದರೂ ಸಾರ್ಥಕವಾಗುವುದೆಂದು ದಾಸರು ಈ ಸುಳಾದಿಯಲ್ಲಿ ಹೇಳಿದ್ದಾರೆ. ನೀರು ಸಕಲ ಕಶ್ಮಲಗಳನ್ನು ನಾಶಪಡಿಸಿ ಪುಣ್ಯ ಪ್ರದವಾಗಬಲ್ಲುದೆಂದು ದಾಸರು ಹೇಳಿದ್ದಾರೆ.

## ೭೭

ವಿಜಯ ದಾಸರು ಬರೆದಿರುವ ಈ ಸುಳಾದಿಯೊಂದು ನಿಂದಾ ಸ್ತುತಿಯಾಗಿದೆ. ಭಗವಂತನ ವಿರಾಟ್ ಶಕ್ತಿಯನ್ನು ದಾಸರು ಗುರುತಿಸಿ ದೇವರನ್ನು ಭೂತ ಎಂದಿದ್ದಾರೆ. ಭಕುತರೇ ಭಗವಂತನಿಗಿಂತ ಯಾವಾಗಲೂ (ರಥೋತ್ಸವಾದಿಗಳಲ್ಲಿ) ಮುಂದಿರುವರೆಂಬುದನ್ನು ಗುರುತಿಸಿ ಭಕ್ತರೇ ಭಗವಂತ ನಿಗಿಂತ ಶ್ರೇಷ್ಠರಲ್ಲವೆ ? ಎಂಬ ದಾಸರ ಪ್ರಶ್ನೆಯಲ್ಲಿ ನಿಂದಾಸ್ತುತಿ ಅಡಕಗೊಂಡಿದೆ.

## ೭೮

ಭಗವಂತನು ಅನಂತಾನಂತ ರೂಪಗಳಿಂದ ಭಕ್ತರನ್ನು ರಕ್ಷಿಸುವನೆಂಬ ಭರವಸೆಯನ್ನು ಈ ಸುಳಾದಿಯಲ್ಲಿ ಕೊಡಲಾಗಿದೆ. ಅಗಣಿತ ಸಾಮರ್ಥ್ಯ ವಿರುವ ದೇವತೆಗಳೇ ಶ್ರೀ ಹರಿಯನ್ನು ಆಶ್ರಯಿಸಿ ಬೇಡುವರೆಂದ ಮೇಲೆ ಸಾಮಾನ್ಯ ಜನರು ಭಗವಂತನಲ್ಲಿ ಬೇಡುಕೆಗಳನ್ನು ಮಂಡಿಸುವರೆಂಬುದು ಆಶ್ಚರ್ಯವಲ್ಲವೆಂಬುದನ್ನು ದಾಸರು ಇಲ್ಲಿ ಸೂಚಿಸಿದ್ದಾರೆ.

## ೭೯

ಬ್ರಹ್ಮಾಂಡದ ಒಟ್ಟು ವಿಸ್ತಾರ ಐವತ್ತು ಕೋಟಿ ಯೋಜನ ವಿಸ್ತೀರ್ಣವೆಂದು ಒಂದು ಗಣಿತವಿದ್ದು ಶ್ರೀ ಹರಿಯು ವಿರಾಡ್‌ಪವನ್ನು ಧರಿಸಿದಾಗ ಅವನ ದೇಹದ ಗಾತ್ರವು ಇದಕ್ಕಿಂತ ಹೆಚ್ಚು ವಿಸ್ತೀರ್ಣವನ್ನು ಹೊಂದಿದ್ದು ಒಂದೊಂದು ಲೋಕವನ್ನು ಶ್ರೀಹರಿಯು ತನ್ನ ಒಂದೊಂದು ಅಂಗದಲ್ಲಿ ಧರಿಸಿರುವನೆಂಬುದರ ವಿವರವನ್ನು ಈ ಸುಳಾದಿಯಲ್ಲಿ ನೀಡಲಾಗಿದೆ. ದಾಸರು ಇಪ್ಪತ್ತು ನುಡಿಗಳಲ್ಲಿ ಈ ಐವತ್ತು ಕೋಟಿ ಯೋಜನ ವಿಸ್ತೀರ್ಣವುಳ್ಳ ಬ್ರಹ್ಮಾಂಡದ ವಿವರಗಳನ್ನು ನೀಡಿದ್ದಾರೆ.

## ೮೦

ಇಹ ಲೋಕದಲ್ಲಿ ಶಾಂತ ಜೀವನಕ್ಕೂ ಪರಲೋಕದ ಸಾಧನೆಗೂ ತುಂಬ ಸಹಾಯಕಾರಿಯಾದ ತತ್ವವೆಂದರೆ ವೈರಾಗ್ಯ : ಇರುವುದನ್ನು ನಿರಾಕರಿಸುವುದು ವೈರಾಗ್ಯವಲ್ಲ; ಇಲ್ಲದಿರುವುದನ್ನು ಬಯಸದಿರುವುದು ವೈರಾಗ್ಯ. ಜೀವನದಲ್ಲಿ ಬರುವ ಎಲ್ಲ ಬಗೆಯ ಸುಖ – ದುಃಖಗಳನ್ನು ಸಂತೋಷದಿಂದ ಸ್ವೀಕರಿಸುವುದು ವೈರಾಗ್ಯ.

## ೮೧

ಕಾಲದ ವಿವರಗಳನ್ನು ದಾಸರು ಈ ಸುಳಾದಿಯಲ್ಲಿ ಕೊಟ್ಟಿದ್ದಾರೆ. ಇದರ ಪ್ರಕಾರ ಬ್ರಹ್ಮನಿಗೆ ಒಂದು ದಿವಸವಾಗುವುದರಲ್ಲಿ ಕೃತ. ತ್ರೇತಾ, ದ್ವಾಪರ ಮತ್ತು ಕಾಲಿಯುಗಗಳು ಬಂದು ನೂರುಬಾರಿ ತಿರುಗಿರುತ್ತದೆ. ಚತುರ್ಯುಗಗಳು ಒಂದು ಬಾರಿ ತಿರುಗಲು ನಲವತ್ತೂರು ಲಕ್ಷದ ಇಪ್ಪತ್ತು ಸಾವಿರ ವರ್ಷಗಳು ಬೇಕಾಗುತ್ತದೆ. ಬ್ರಹ್ಮದೇವರಿಗೆ ಒಂದು ದಿನ ವಾಗುವಷ್ಟರಲ್ಲಿ ಹದಿನಾಲ್ಕು ಮನುಗಳು ಒಂದು ಬಾರಿ ಆಳ್ವಿಕೆಯನ್ನು ಮಾಡಿರುತ್ತಾರೆ. ಹದಿನಾಲ್ಕು ಮನುಗಳು ಒಮ್ಮೆ ಆಳ್ವಿಕೆ ನಡೆಸಲು ನಾಲ್ಕು ನೂರಾ ಮೂವತ್ತೆರಡು ಕೋಟಿ ವರ್ಷಗಳು ಅಗತ್ಯವೆಂದು ಇಲ್ಲಿ ತಿಳಿಸಲಾಗಿದೆ.

## ೮೨

ಭಗವಂತನ ಸನ್ನಿಧಾನವನ್ನು ಜೀವ ಮತ್ತು ಜಡಗಳೆರಡರಲ್ಲೂ ಗುರುತಿಸ ಬಹುದಾಗಿದೆ. ಸಾಲಿಗ್ರಾಮ, ಸ್ವಯಂವ್ಯಕ್ತ ವಿಷ್ಣು ಪ್ರತಿಮೆಗಳೆನಿಸಿಕೊಂಡಿರುವ ತಿರುಪತಿ, ಉಡುಪಿ, ಫಂಡರಪುರಾದಿಗಳಲ್ಲಿರುವ ಭಗವನ್ಮೂರ್ತಿಗಳಲ್ಲಿ ವಿಶೇಷ ವಿಭೂತಿಯುಂಟೆಂದು ಹೇಳಲಾಗಿದೆ. ಭಗವಂತನಲ್ಲಿ ವಿಶೇಷ ಭಕ್ತಿ ಮಾಡುವ ಭಕ್ತರಲ್ಲಿ ಭಗವಂತನ ವಿಶೇಷ ಸನ್ನಿಧಾನ ಉಂಟೆಂದೂ ಅಂತಹವರನ್ನು ಗೌರವಿಸುವ, ಪೂಜಿಸುವ, ಅವರಿಗೆ ದಾನ ಮಾಡುವ ಕಾರ್ಯಗಳು ವಿಶೇಷ ಪುಣ್ಯವನ್ನುಂಟು ಮಾಡುವುದೆಂಬ ತತ್ವವನ್ನು ಈ ಸುಳಾದಿಯಲ್ಲಿ ವಿವರಿಸಲಾಗಿದೆ.

## ೮೩

ಭಗವಂತನನ್ನು ಸತ್ಯ. ಎಂದು ಕರೆಯುವ ವಾಡಿಕೆ ಇದೆ. ಏಕೆಂದರೆ ಅವನು ಯಾವಾಗಲೂ ಸತ್ಯವಾಗಿ ನಡೆದು ಕೊಳ್ಳುವವನು ಸಗುಣನೂ, ಸಾಕಾರನೂ ಆದ ಈ ಸತ್ಯನಾಮಕ ಪರಮಾತ್ಮನನ್ನು ಓಂಕಾರ ಸಹಿತವಾಗಿ ಭಜಿಸುವುದರಿಂದ ಪರಮ ಪುಣ್ಯವೆಂದೂ, ಸೃಷ್ಟಿ ಸ್ಥಿತಿ ಲಯ ಗಳಿಗೆ ಕಾರಣನಾದ ಶ್ರೀಹರಿಯ ಉಪಾಸನೆಯನ್ನು ಮಾಡಬೇಕೆಂದು ದಾಸರು ಇಲ್ಲಿ ಹೇಳಿದ್ದಾರೆ.

## ೮೪

ಜೀವದ ಗಾತ್ರ ಸ್ವರೂಪ, ದೇಹದ ನಾನಾ ಭಾಗಗಳಲ್ಲಿರುವ ಭಗವಂತನ ರೂಪಗಳ ವಿಸ್ತಾರವಾದ ವಿವರಣಾ ಪಟ್ಟಿ ಈ ಸುಳಾದಿಯಲ್ಲಿದೆ. ಜೊತೆಗೆ ದೇಹಗತ ನಾಡಿಗಳ ವಿವರಗಳನ್ನು ಈ ಸುಳಾದಿಯಲ್ಲಿ ಕೊಡಲಾಗಿದೆ.

## ೮೫

ಭಗವಂತನಿಗೆ ನಾವು ಭುಂಜಿಸುವ ಎಲ್ಲ ಪದಾರ್ಥಗಳನ್ನು ಭುಂಜಿಸುವ ಮುನ್ನ ನೈವೇದ್ಯಮಾಡಿ ಸಮರ್ಪಿಸಬೇಕಾದ ಕ್ರಮವನ್ನು ದಾಸರು ಈ ಸುಳಾದಿಯಲ್ಲಿ ವಿವರಿಸಿದ್ದಾರೆ. ಭುಂಜಿಸ ಬಹುದಾದ ನಾನಾ ಪದಾರ್ಥಗಳಲ್ಲಿರುವ ಅಭಿಮಾನಿ ದೇವತೆಗಳ ಹೆಸರನ್ನು ಹಾಗೂ ಭಗವದ್ರೂಪಗಳನ್ನು ಈ ಸುಳಾದಿಯಲ್ಲಿ ವಿವರಿಸಲಾಗಿದೆ.

## ೮೬

ಭಗವಂತನ ಧ್ಯಾನ ಮಾಡುವ ಬಗೆಯನ್ನು ಈ ಸುಳಾದಿಯಲ್ಲಿ ವಿವರಿಸಲಾಗಿದೆ. ಮೊದಲು ಭಕ್ತನಾದವನು ತನಗಿಷ್ಟವಾದ ಪ್ರತಿಮೆಯೊಂದನ್ನು ಎದುರಿನಲ್ಲಿಟ್ಟು ಕೊಂಡು ಪೂಜಿಸಿ ಕಣ್ಮುಚ್ಚಿ ದಾಗಲೂ ಅದೇ ಮೂರ್ತಿಯು ಮನಸ್ಸಿಗೆ ಕಾಣುವಂತೆ ಮತ್ತೆ ಮತ್ತೆ ನೆನೆಪಿಸಿಕೊಂಡು ಭಗವಂತನ ಗುಣಾವಳಿಗಳ ಚಿಂತನೆಯನ್ನು ಮನಸ್ಸಿನಲ್ಲಿ ಮಾಡುವುದು ಒಂದು ಬಗೆಯ ಧ್ಯಾನವೆನಿಸುತ್ತದೆ. ಈ ಧ್ಯಾನದಿಂದ ಭಗವಂತನ ಕೃಪೆಯೊದಗಿದರೆ ಜೀವಾಂತರ್ಗತವಾದ ಬಿಂಬ ಮೂರ್ತಿಯ ಸ್ವರೂಪ ತಿಳಿದು ಬಿಂಬ ಮೂರ್ತಿ ಧ್ಯಾನಕ್ಕೆ ದಾರಿಯಾಗುವುದು.

## ೮೭

ಈ ಸುಳಾದಿಯು ಭಗವದುಪಾಸನೆಯ ಬಗೆಯನ್ನು ವಿವರಿಸುತ್ತಿದೆ. ದಾಸರು ಇಲ್ಲಿ ಸಾಮೋಪಾಸನೆಯ ಬಗೆಯನ್ನು ಹೇಳಿದ್ದಾರೆ. ಬದುಕಿನಲ್ಲಿ ಸಹಜವಾಗಿ ಉಂಟಾಗುವ ಸಕಲ ಸುಖಗಳೂ ಭಗವಂತನಿಂದ ದತ್ತವಾದುದೆಂದು ಭಾವಿಸಿ ಸುಖ ದುಃಖಗಳಿಗೆ ನಿರ್ಲಿಪ್ತವಾಗಿರುವುದೇ ಸಾಮೋಪಾಸನೆ ಎನಿಸುತ್ತದೆ. ಬಿಂಬ ಮೂರ್ತಿಯ ಪೂಜೆ, ಧ್ಯಾನಾದಿಗಳಿಂದ ಇದು ಭೂಷಿತವಾಗುವುದು ಶ್ರೇಷ್ಠವೆನ್ನಬಹುದು.

## ೫೮೯

ಶ್ವೇತದ್ವೀಪ, ವೈಕುಂಠ, ಅನಂತಾಸನಗಳೆಂಬುದು ವಿಷ್ಣುವಿನ ವಿಶೇಷ ಸ್ಥಾನಗಳಾಗಿವೆ. ಇದರಲ್ಲಿ ಶ್ವೇತ ದ್ವೀಪದ ವಿಸ್ತಾರದ ಸ್ವರೂಪವನ್ನು ದಾಸರು ಈ ಸುಳಾದಿಯಲ್ಲಿ ವಿವರಿಸುತ್ತಿದ್ದಾರೆ. ಶ್ವೇತದ್ವೀಪದಲ್ಲಿ ಶ್ರೀಹರಿಯು ವಿರಡ್ರೂಪಿಯಾಗಿ ಮಲಗಿರುವನೆಂದೂ ಅವನ ದೇಹದ ಒಂದೊಂದು ಅಂಗಗಳು ಹಲವುಗಾವುದ ವಿಸ್ತೀರ್ಣ ಉಳ್ಳದೆಂದು ಇಲ್ಲಿ ವಿವರಿಸಲಾಗಿದೆ.

## ೫೯೦

ದೇಹಗತ ನಾಡಿಗಳ ವಿವರಗಳನ್ನು ಈ ಸುಳಾದಿಯಲ್ಲಿ ಕೊಡಲಾಗಿದೆ. ಮಾನವನ ದೇಹದಲ್ಲಿ ಎಪ್ಪತ್ತೆರಡು ಸಾವಿರ ನಾಡಿಗಳಿದ್ದು ಈ ನಾಡಿಗಳಲ್ಲಿ ನದಿಗಳ ಸನ್ನಿಧಾನ ಉಂಟೆಂಬ ವಿಚಾರವನ್ನು ದಾಸರು ಹೇಳಿದ್ದಾರೆ.

## ೫೯೧

ಭಗವಂತನನ್ನು ನಾನಾ ಬಗೆಯಾಗಿ ಅರ್ಚಿಸುವ ಬಗೆಯನ್ನು ಇಲ್ಲಿ ಸ್ಥೂಲವಾಗಿ ತಿಳಿಸಲಾಗಿದೆ. ನಮಗಿರುವಷ್ಟು ಶಕ್ತಿಯಲ್ಲಿ ಭಗವಂತನ ಪೂಜೆಯನ್ನು ಕಿಂಚಿತ್ತು ಮಾಡಿದರೂ ಶ್ರೀ ಹರಿಯು ಕರುಣಾ ಸಾಗರನಾಗಿರುವುದರಿಂದ ಪೂಜೆಯಲ್ಲಿ ದೋಷಗಳನ್ನು ಹುಡುಕದೆ ದಯೆ ತೋರುವನೆಂದು ದಾಸರು ಈ ಸುಳಾದಿಯಲ್ಲಿ ಹೇಳಿದ್ದಾರೆ.

## ೫೯೨

ಬ್ರಹ್ಮ ದೇವರ ಐವತ್ತೊಂದನೆಯ ವರ್ಷದಲ್ಲಿ ನಡೆಯುವ ಸೃಷ್ಟಿಗೆ ಪದ್ಮ ಕಲ್ಪ ಸೃಷ್ಟಿ ಎನ್ನುತ್ತಾರೆ. ಈ ಸೃಷ್ಟಿಯ ಸ್ವರೂಪವನ್ನು ದಾಸರು ಇಲ್ಲಿ ವಿವರಿಸಿದ್ದಾರೆ. ಈ ಸೃಷ್ಟಿಕಾರ್ಯವನ್ನು ಶ್ರೀ ಹರಿಯೇ ನಿರ್ವಹಿಸಿ ಕೊಂಡಿರುವನೆಂಬ ವಿಚಾರ ಗಮನಾರ್ಹವಾದುದು.

ಹೃದಯ ಕಮಲದಲ್ಲಿ ಶ್ರೀ ಹರಿಯ ದರ್ಶನವನ್ನು ಪಡೆಯಲು ಬಾಹ್ಯ ಹಾಗೂ ಅಂತರ ಪೂಜೆಯನ್ನು ನಿಯತವಾಗಿ ಮಾಡುವುದರೊಡನೆ ಶ್ರೀ ಹರಿಯ ವಿಭೂತಿಯುಳ್ಳ ಉಡುಪಿ, ತಿರುಪತಿ, ಪಂಢರಪುರ, ಕಂಚಿ, ದ್ವಾರಕೆಯೇ ಮೊದಲದ ತೀರ್ಥ ಕ್ಷೇತ್ರ ಸಂದರ್ಶನ ತೀರಾ ಅತ್ಯಗತ್ಯವೆಂಬುದನ್ನು ದಾಸರು ಈ ಸುಳಾದಿಯಲ್ಲಿ ವಿವರಿಸಿದ್ದಾರೆ. ಅಂತಹ ಪೂಜೆಯಲ್ಲಿ ಅನುಸಂಧಾನ ತುಂಬ ಮುಖ್ಯವೆಂಬುದನ್ನು ದಾಸರು ಒತ್ತಿ ಹೇಳಿದ್ದಾರೆ.

೯೭

ದೇವತಾ ತಾರತಮ್ಯವನ್ನು ಸರಿಯಾಗಿ ತಿಳಿದು ಆರೋಹಣ ಹಾಗೂ ಅವರೋಹಣ ತಾರತಮ್ಯವನ್ನನುಸರಿಸಿ ಭಜನೆ, ಪೂಜೆ ಧ್ಯಾನಾದಿಗಳನ್ನು ಮಾಡುವುದರಿಂದ ಬಿಂಬ ದರ್ಶನಕ್ಕೆ ಸುಲಭವಾಗಿ ದಾರಿಯಾಗುವುದೆಂಬ ತತ್ತ್ವವನ್ನು ದಾಸರು ಈ ಸುಳಾದಿಯಲ್ಲಿ ವಿವರಿಸಿದ್ದಾರೆ. ಶ್ರವಣ. ಮನನ, ಧ್ಯಾನ, ಪೂಜೆ, ದಾನ ಗಳೆಲ್ಲವೂ ಸಾಧನೆಗೆ ಒಂದಕ್ಕೊಂದು ಪೂರಕವಾಗಿ ಮುಂದು ವರಿಯ ಬೇಕೆಂಬ ಸೂಚನೆ ಇಲ್ಲಿದೆ.

ಕನ್ನಡ ಸಾಹಿತ್ಯದ ಇತಿಹಾಸದಲ್ಲಿ
ಹರಿದಾಸ ಸಾಹಿತ್ಯ ಒಂದು ಪ್ರಮುಖ ಮಜಲು
ಹರಿದಾಸರು ರಚಿಸಿರುವ ವಿಪುಲ ಕೀರ್ತನೆಗಳು
ಕರ್ನಾಟಕ ಸಾಂಸ್ಕೃತಿಕ ತವನಿಧಿಗಳಾಗಿವೆ
ದಾಸಸಾಹಿತ್ಯದಲ್ಲಿ ಕಂಡುಬರುವ
ಭಾಷಿಕ ಹಾಗೂ ಸಾಹಿತ್ಯಕ ಸೊಬಗು,
ಆಧ್ಯಾತ್ಮಿಕ ಬೆಡಗು, ಸಂಗೀತದ ಮೆರುಗು ಅನನ್ಯ.
ದಾಸ ಸಾಹಿತ್ಯವು ಜ್ಞಾನ, ಮನೋಲ್ಲಾಸ
ಮತ್ತು ಜೀವ ಸಂಸ್ಕಾರಗಳ ತ್ರಿವೇಣಿ ಸಂಗಮ.
ಇಂಥ ದಾಸಸಾಹಿತ್ಯವನ್ನು
ಸಮಗ್ರವಾಗಿ ಸಂಗ್ರಹಿಸಿ, ಸಂಪಾದಿಸಿ,
ಬಹುಮಾಧ್ಯಮದಲ್ಲಿ ಹಾಗೂ ಸುಲಭ ಬೆಲೆಯಲ್ಲಿ
ಕನ್ನಡ ಜನತೆಗೆ ನೀಡುವ ಮಹತ್ವದ ಆಶಯವೇ
**ಸಮಗ್ರ ದಾಸ ಸಾಹಿತ್ಯ ಯೋಜನೆ**



**ಕರ್ನಾಟಕ ಸರ್ಕಾರ**
**ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ**
**ಕನ್ನಡ ಭವನ ಜೆ.ಸಿ. ರಸ್ತೆ**
**ಬೆಂಗಳೂರು**